# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 186 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪ್ರಿಯಾಂಕ್ ಎಂ ಖರ್ಗೆ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>2018-19 ನೇ ಸಾಲಿನಲ್ಲಿ ಪ್ರಗತಿ ಕಾಲೋನಿ ಯೋಜನೆಯಡಿಯಲ್ಲಿ ಚಿತ್ತಾಪೂರ ತಾಲ್ಲೂಕಿನ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಮಂಜೂರಾಗಿರುವ ಅನುದಾನದಲ್ಲಿ ಬಿಡುಗಡೆಯಾಗದೆ ಬಾಕಿ ಇರುವ ಅನುದಾನವು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td rowspan="2">2018-19ನೇ ಸಾಲಿನಲ್ಲಿ ಪ್ರಗತಿ ಕಾಲೋನಿ ಯೋಜನೆಯಡಿ ಚಿತ್ತಾಪುರ ತಾಲ್ಲೂಕು/ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ರೂ.5490.17 ಲಕ್ಷಗಳಿಗೆ ಮಂಜೂರಾತಿ ನೀಡಿ ರೂ.3767.96 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದ್ದು, ರೂ.1722.21 ಲಕ್ಷಗಳನ್ನು ಬಿಡುಗಡೆ ಮಾಡುವುದು ಬಾಕಿ ಇರುತ್ತದೆ.<br><br>ಈ ಸಂಬಂಧವಾಗಿ, ಸದರಿ ಯೋಜನೆಯಡಿ 2018-19ನೇ ಸಾಲಿನಿಂದ ಇದುವರೆವಿಗೂ ಸರ್ಕಾರದಿಂದ ಹೊರಡಿಸಲಾಗಿರುವ ಮಂಜೂರಾತಿ ಆದೇಶಗಳ ಒಟ್ಟು ಮೊತ್ತ ರೂ.1422.04 ಕೋಟಿಗಳಿಗೆ ಅನುಗುಣವಾಗಿ, ರೂ.755.55 ಕೋಟಿಗಳನ್ನು ಸಂಬಂಧಪಟ್ಟ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿದ್ದು, ರೂ.666.49 ಕೋಟಿಗಳನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುವುದು ಬಾಕಿ ಇರುತ್ತದೆ.<br><br>2018-19ನೇ ಸಾಲಿನಲ್ಲಿ ಪರಿಶಿಷ್ಟ ಪಂಗಡದ ಪ್ರಗತಿ ಕಾಲೋನಿ ಯೋಜನೆಯಡಿಯಲ್ಲಿ ಕಲಬುರ್ಗಿ ಜಿಲ್ಲೆಯ ಚಿತ್ತಾಪೂರ ತಾಲ್ಲೂಕಿನ ವಿವಿಧ ಗ್ರಾಮಗಳ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಈ ಕೆಳಕಂಡಂತೆ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಲಾಗಿದೆ.<br><br>(ರೂ.ಲಕ್ಷಗಳಲ್ಲಿ)<br><table><tr><th>ವರ್ಷ</th><th>ಮಂಜೂರಾತಿ ನೀಡಿದ ಅನುದಾನ</th><th>ಬಿಡುಗಡೆ ಮಾಡಿದ ಅನುದಾನ</th><th>ಬಾಕಿ ಬಿಡುಗಡೆ ಮಾಡಬೇಕಾದ ಅನುದಾನ</th></tr><tr><td>2018-19</td><td>559.50</td><td>378.75</td><td>180.75</td></tr></table></td></tr>
<tr><td>ಆ)</td><td>ಇದ್ದಲ್ಲಿ ಬಿಡುಗಡೆಯಾಗಿರುವ ಅನುದಾನ ಎಷ್ಟು ಹಾಗೂ ಬಾಕಿ ಇರುವ ಅನುದಾನವೆಷ್ಟು; (ಅಂಕಿ ಅಂಶಗಳವಾರು ಮಾಹಿತಿ ನೀಡುವುದು)</td></tr>
</table>

| ಇ) | ಬಾಕಿ ಇರುವುದಕ್ಕೆ ಕಾರಣವೇನು ಹಾಗೂ ಯಾವ ಕಾಲಮಿತಿಯಲ್ಲಿ ಅನುದಾನವನ್ನು ಬಿಡುಗಡೆ ಮಾಡಲಾಗುವುದು? | 2022-23ನೇ ಸಾಲಿನಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ಪ್ರಗತಿ ಕಾಲೋನಿ ಯೋಜನೆಯ ಅನುಷ್ಠಾನಕ್ಕಾಗಿ ರೂ.40.00 ಕೋಟಿಗಳನ್ನು ಒದಗಿಸಲಾಗಿದ್ದು, ಈ ಪೈಕಿ ಮೂರು ಕಂತುಗಳಲ್ಲಿ ಬಿಡುಗಡೆ ಮಾಡಿರುವ ರೂ.30.00 ಕೋಟಿಗಳನ್ನು ವೆಚ್ಚ ಮಾಡಲಾಗಿರುತ್ತದೆ. ನಾಲ್ಕನೇ ಕಂತಿನಲ್ಲಿ ಬಿಡುಗಡೆ ಮಾಡಿರುವ ರೂ.10.00 ಕೋಟಿಗಳನ್ನು, ಆದ್ಯತೆ ಮೇರೆಗೆ ವೆಚ್ಚ ಮಾಡಲು ಕ್ರಮವಹಿಸಲಾಗುತ್ತಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಸಕಇ 44 ಎಸ್‌ಎಲ್‌ಪಿ 2023, ದಿನಾಂಕ:09-02-2023ರಲ್ಲಿ ಪರಿಶಿಷ್ಟ ಜಾತಿಯವರಿಗೆ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ರೂ.8500.00 ಲಕ್ಷಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಅನುದಾನದ ಪೈಕಿ ಪ್ರಗತಿ ಕಾಲೋನಿ ಯೋಜನೆಗೆ ಹಂಚಿಕೆ ಮಾಡುವ ಅನುದಾನ ಹಾಗೂ ಜಿಲ್ಲೆಗಳಿಂದ ಸ್ವೀಕೃತವಾಗಿರುವ ಬಾಕಿ ಅನುದಾನ ಬಿಡುಗಡೆ ಪ್ರಸ್ತಾವನೆಗಳನ್ನು ಆಧರಿಸಿ, ಬಾಕಿ ಅನುದಾನ ಬಿಡುಗಡೆ ಮಾಡಲು ನಿಯಮಾನುಸಾರ ಅಗತ್ಯ ಕ್ರಮವಹಿಸಲಾಗುವುದು |
|---|---|---|

**ಸಕಇ 60 ಎಸ್‌ಎಲ್ ಪಿ 2023**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

(15ನೇ ವಿಧಾನಸಭೆ 15ನೇ ಅಧಿವೇಶನ)

**ಮಾನ್ಯ ಸದಸ್ಯರ ಹೆಸರು : ಶ್ರೀ ಪ್ರಿಯಾಂಕ್ ಎಂ.ಖರ್ಗೆ (ಚಿತ್ತಾಪುರ)**

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 188**

**ಉತ್ತರಿಸಬೇಕಾದ ಸಚಿವರು : ಕೃಷಿ ಸಚಿವರು**

**ಉತ್ತರಿಸಬೇಕಾದ ದಿನಾಂಕ : 15-02-2023**

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಅಧಿಸೂಚನೆ ಸಂಖ್ಯೆ: AO/RSP/H-K Region Local Cadre posts/Dir.Recruit/2019-20, ದಿನಾಂಕ: 30-12-2019ರಲ್ಲಿ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳನ್ನು ತುಂಬಲು ಅಧಿಸೂಚನೆಯನ್ನು ಹೊರಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಸದರಿ ನೇಮಕಾತಿ ಪ್ರಕ್ರಿಯೆ ಯಾವ ಹಂತದಲ್ಲಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದಲ್ಲಿಅನುಚ್ಛೇದ 371ಜೆ ರನ್ವಯ ಕಲ್ಯಾಣ ಕರ್ನಾಟಕ ವೃಂದದಲ್ಲಿ ನೇರ ನೇಮಕಾತಿಯಡಿ ಖಾಲಿ ಇರುವ ಗ್ರೂಪ್ ಸಿ-34 ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಸಂಖ್ಯೆ: AO/RSP/H-K Region Local Cadre posts/Dir.Recruit/2019-20, ದಿನಾಂಕ: 30-12-2019 ರಂದು ನೇಮಕಾತಿ ಅಧಿಸೂಚನೆಯನ್ನು ಹೊರಡಿಸಲಾಗಿರುತ್ತದೆ. ಈ ನೇಮಕಾತಿ ಪ್ರಕ್ರಿಯೆಯು ಜಾರಿಯಲ್ಲಿರುವಾಗ ಸರ್ಕಾರದ ಆರ್ಥಿಕ ಇಲಾಖೆಯವರ ದಿನಾಂಕ06-07-2020ರ ಸುತ್ತೋಲೆಯಲ್ಲಿ ರಾಜ್ಯದಲ್ಲಿ ಕೋವಿಡ್-19ನಿಂದ ಉಂಟಾದ ಪರಿಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಕಲ್ಯಾಣ ಕರ್ನಾಟಕ ವೃಂದದ ಹುದ್ದೆಗಳು ಮತ್ತು ಬ್ಯಾಕ್‌ಲಾಗ್ ಹುದ್ದೆಗಳೂ ಸೇರಿದಂತೆ ಎಲ್ಲಾ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡುವುದನ್ನು ಮುಂದಿನ ಆದೇಶದವರೆಗೆ ತಡೆಹಿಡಿಯಲಾಗಿರುತ್ತದೆ.<br><br>ಮುಂದುವರೆದು, ಸರ್ಕಾರದ ಸುತ್ತೋಲೆ ಸಂಖ್ಯೆ ಆಇ 02 ಬಿಇಎಂ 2021, ದಿನಾಂಕ:24-11-2022 ರಲ್ಲಿ ಕಲ್ಯಾಣ ಕರ್ನಾಟಕ ವೃಂದದಲ್ಲಿ ಈಗಾಗಲೇ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದಿಂದ |

| | | |
|---|---|---|
| | | ಸಹಮತಿ ನೀಡಿರುವ ಪ್ರಕ್ರರಣಗಳನ್ನು ಮುಂದುವರೆಸಿ, ನೇಮಕಾತಿ ಆದೇಶ ನೀಡಲು ಕ್ರಮವಹಿಸುವಂತೆ ಹಾಗೂ ನೇರ ನೇಮಕಾತಿಯಡಿ ಭರ್ತಿಯಾಗುವ ಹುದ್ದೆಗಳಿಗೆ ಆಯವ್ಯಯದಲ್ಲಿ ಸೂಕ್ತ ಅನುದಾನವನ್ನು ಕಲ್ಪಿಸಿಕೊಳ್ಳುವ ಸಲುವಾಗಿ ನೇಮಕಾತಿ ಆದೇಶ ಹೊರಡಿಸುವ ಮುನ್ನ ಸರ್ಕಾರದ ಅನುಮತಿಯನ್ನು ಪಡೆಯುವಂತೆ ಸೂಚಿಸಲಾಗಿರುತ್ತದೆ.<br><br>ಅದರಂತೆ, ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರಿನಲ್ಲಿ ಕಲ್ಯಾಣ ಕರ್ನಾಟಕ ಹುದ್ದೆಗಳ ನೇರನೇಮಕಾತಿ ಅಧಿಸೂಚನೆಗೆ ಸಂಬಂಧಿಸಿದಂತೆ, ನೇಮಕಾತಿ ಪ್ರಕ್ರಿಯೆಯನ್ನು ಮುಂದುವರಿಸಿ, ಅರ್ಹ ಅಭ್ಯರ್ಥಿಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯನ್ನು ದಿನಾಂಕ:26-06-2022ರಂದು ನಡೆಸಲಾಗಿದ್ದು, ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾದ ಅಭ್ಯರ್ಥಿಗಳು ಗಳಿಸಿರುವ ಅಂಕಗಳ ಪಟ್ಟಿಯನ್ನು ಪ್ರಕಟಿಸಲಾಗಿರುತ್ತದೆ. ಅಲ್ಲದೇ, ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಅಂಕ ಹಾಗೂ ಪ್ರಕಟಿಸಿರುವ ಹುದ್ದೆಗಳ ಮೀಸಲಾತಿಯನ್ವಯ 1:5ರಂತೆ ಅರ್ಹ ಅಭ್ಯರ್ಥಿಗಳ ಮೂಲ ದಾಖಲಾತಿಗಳನ್ನು ದಿನಾಂಕ: 18-08-2022ರಂದು ಪರಿಶೀಲಿಸಲು ದಿನಾಂಕವನ್ನು ನಿಗಧಿಪಡಿಸಲಾಗಿತ್ತು. ಆಡಳಿತಾತ್ಮಕ ಕಾರಣದಿಂದ ದಿನಾಂಕ 18-08-2022ರಂದು ನಿಗದಿಪಡಿಸಿದ್ದ ಮೂಲ ದಾಖಲೆಗಳ ಪರಿಶೀಲನೆ ಪ್ರಕ್ರಿಯೆಯನ್ನು ಮುಂದೂಡಲಾಗಿರುತ್ತದೆ. ಮುಂದುವರೆದು, ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆ ಬಾಕಿ ಇದ್ದು, ನೇಮಕಾತಿ ಆದೇಶ ಹೊರಡಿಸುವ ಮುನ್ನ ಭರ್ತಿಯಾಗುವ ಗ್ರೂಪ್-ಸಿ 34 ಹುದ್ದೆಗಳಿಗೆ ಆಯವ್ಯಯದಲ್ಲಿ ಸೂಕ್ತ ಅನುದಾನವನ್ನು ಕಲ್ಪಿಸಿಕೊಡುವಂತೆ ಆರ್ಥಿಕ ಇಲಾಖೆಯನ್ನು ಕೋರಲಾಗಿರುತ್ತದೆ. ಸದರಿ ಇಲಾಖೆಯಿಂದ ಸಹಮತಿಯನ್ನು ನಿರೀಕ್ಷಿಸಲಾಗುತ್ತಿದೆ. |

ಇ-ಸಂಖ್ಯೆ: AGRI/4/AUB/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

DF .066254

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 189

ಸದಸ್ಯರ ಹೆಸರು : ಶ್ರೀ ಪ್ರಿಯಾಂಕ್ ಎಂ. ಖರ್ಗೆ

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | 2020ರಿಂದ ಇಲ್ಲಿಯವರೆಗೆ ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮದಿಂದ ಎಷ್ಟು ನೂತನ ಬಸ್‌ಗಳನ್ನು ಖರೀದಿ ಮಾಡಲಾಗಿದೆ: (ವರ್ಷವಾರು ಮಾಹಿತಿ ನೀಡುವುದು ) | ಕೋವಿಡ್-19ರ ಹಿನ್ನೆಲೆಯಲ್ಲಿ ನಿಗಮದ ಬಸ್ಸುಗಳ ಸಹಜ ಕಾರ್ಯಾಚರಣೆಗೊಳ್ಳದೇ ಇರುವುದರಿಂದ ನಿಗಮವು ಆರ್ಥಿಕ ಸಂಕಷ್ಟದಲ್ಲಿದ್ದು, 2020ನೇ ಸಾಲಿನಿಂದ ಈ ವರೆಗೆ ಯಾವುದೇ ಹೊಸ ಬಸ್‌ಗಳನ್ನು ಖರೀದಿಸಿರುವುದಿಲ್ಲ. 2022-23ನೇ ಸಾಲಿನಲ್ಲಿ 650 ಹೊಸ ಬಸ್ಸುಗಳನ್ನು ಖರೀದಿಸಲು ಉದ್ದೇಶಿಸಿ, ಟೆಂಡರ್ ಪ್ರಕ್ರಿಯೆ ಮುಕ್ತಾಯವಾಗಿದ್ದು, ಬಸ್‌ಗಳ ಖರೀದಿ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |
| ಆ. | ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮದಲ್ಲಿ ಎಷ್ಟು ಹುದ್ದೆಗಳು ಖಾಲಿ ಇವೆ; (ಮಾಹಿತಿ ನೀಡುವುದು) | ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮದಲ್ಲಿ ಡಿಸೆಂಬರ್-22ರ ಅಂತ್ಯಕ್ಕೆ 2854 ವಿವಿಧ ಹುದ್ದೆಗಳು ಖಾಲಿ ಇರುತ್ತವೆ. |
| ಇ. | 2020ರಿಂದ ಇಲ್ಲಿಯವರೆಗೆ ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮದಲ್ಲಿ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲಾಗಿದೆ? (ವರ್ಷವಾರು ಮಾಹಿತಿ ನೀಡುವುದು) | 2020ರಿಂದ ಇಲ್ಲಿಯವರೆಗೆ ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮದಲ್ಲಿ ನೇರ ನೇಮಕಾತಿ ಮಾಡಿಕೊಂಡಿರುವುದಿಲ್ಲ. 1619 ಹುದ್ದೆಗಳಿಗೆ ನೇಮಕಾತಿಗಾಗಿ ದಾಖಲಾತಿ ಪರಿಶೀಲನಾ ಪ್ರಕ್ರಿಯೆಯನ್ನು ದಿನಾಂಕ:05.12.2022 ರಿಂದ ಆರಂಭಿಸಲಾಗಿರುತ್ತದೆ. ಅನುಕಂಪದ ಆಧಾರದ ಮೇಲೆ ಈ ಕೆಳಕಂಡಂತೆ ವಿವಿಧ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲಾಗಿದೆ. |

| ವರ್ಷ | ಹುದ್ದೆಗಳ ಸಂಖ್ಯೆ |
|---|---|
| 2020ನೇ ವರ್ಷ | 10 |
| | |



Generated from eOffice by B SREERAMULU, TD-MIN(BS), TRANSPORT MINISTER, Trans on 15/02/2023 11:24 AM

| | | | | |
|---|---|---|---|---|
| | | 2021ನೇ ವರ್ಷ | 125 | |
| | | 2022ನೇ ವರ್ಷ | 132 | |
| | | ಒಟ್ಟು | **267** | |

ಖ್ಯೆ: ಟಿಡಿ 09 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 190 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಗೂಳಿಹಟ್ಟಿ ಡಿ ಶೇಖರ್ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನಲ್ಲಿ ಹೊಸದುರ್ಗ ಪಟ್ಟಣದ ಹತ್ತಿರ ಶಿವನೇಕಟ್ಟೆ ಸರ್ವೆ ನಂ.34 ರಲ್ಲಿನ ಆಶ್ರಯ ಬಡಾವಣೆಯಲ್ಲಿನ ರಸ್ತೆ, ಚರಂಡಿಗೆ ಎಸ್.ಸಿ.ಪಿ ಯಿಂದ ಮಂಜೂರಾದ, ಟೆಂಡರ್ ಆಗಿ ಕಾಮಗಾರಿಯಾದ ಅನುದಾನವೆಷ್ಟು; ಯಾವ ಇಲಾಖೆಯಿಂದ ಎಷ್ಟು ಮೊತ್ತಕ್ಕೆ ಟೆಂಡರ್ ಆಗಿದೆ; ಎಷ್ಟು ಪ್ರಮಾಣದ ಕೆಲಸ ಮುಗಿದಿದೆ; ಗುತ್ತಿಗೆದಾರರಿಗೆ ಪಾವತಿಯಾದ ಹಣ ಎಷ್ಟು; ಇನ್ನೂ ಎಷ್ಟು ಹಣ ಪಾವತಿಯಾಗಬೇಕು; ಯಾವಾಗ ಪಾವತಿಸಲಾಗುವುದು; (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಕಇ 389 ಎಸ್‌ಎಲ್‌ಪಿ 2020 ದಿನಾಂಕ:12-02-2021 ರಲ್ಲಿ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ರೂ.200.00 ಲಕ್ಷಗಳಿಗೆ ಮಂಜೂರಾತಿ ನೀಡಲಾಗಿರುತ್ತದೆ. ಅದರನ್ವಯ, ದಿನಾಂಕ:22-02-2021 ಮತ್ತು 05-02-2022ರಲ್ಲಿ ಎರಡು ಕಂತುಗಳಲ್ಲಿ ರೂ.92.50 ಲಕ್ಷಗಳನ್ನು ಜಿಲ್ಲೆಗೆ ಬಿಡುಗಡೆ ಮಾಡಲಾಗಿರುತ್ತದೆ.<br><br>ಮೇಲ್ಕಂಡಂತೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ರವರ ಆದೇಶದ ದಿನಾಂಕ:03-08-2021ರಲ್ಲಿ ಹೊಸದುರ್ಗ ತಾಲ್ಲೂಕಿನಲ್ಲಿ ಹೊಸದುರ್ಗ ಪಟ್ಟಣದ ಹತ್ತಿರ ಶಿವನೇಕಟ್ಟೆ ಸರ್ವೆ ನಂ.34 ರಲ್ಲಿನ ಆಶ್ರಯ ಬಡಾವಣೆಯಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಸಂಬಂಧವಾಗಿ ಈ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲು ರೂ.150.00 ಲಕ್ಷಗಳಿಗೆ ಮಂಜೂರಾತಿ ನೀಡಿ, ಮೊದಲ ಕಂತಿನಲ್ಲಿ ರೂ.42.50 ಲಕ್ಷಗಳನ್ನು ನಿರ್ಮಾಣ ಏಜೆನ್ಸಿಗೆ ಬಿಡುಗಡೆ ಮಾಡಲಾಗಿರುತ್ತದೆ. ವಿವರಗಳು ಅನುಬಂಧದಲ್ಲಿ ನೀಡಿದೆ. |
| ಆ) | ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ ಎಸ್.ಸಿ.ಪಿ ಯೋಜನೆಯಲ್ಲಿ ಮೂಲಭೂತ ಸೌಕರ್ಯದಡಿಯಲ್ಲಿ ಯಲ್ಲಾಭೋವಿಹಟ್ಟಿಯಲ್ಲಿ ಯಾವ ವರ್ಷ ಎಷ್ಟು ಹಣ ಅನುದಾನದಲ್ಲಿ ಎಸ್.ಸಿ.ಪಿ.ಯಲ್ಲಿ ರಸ್ತೆ ಚರಂಡಿಗೆ ಅನುಮೋದನೆ ನೀಡಲಾಗಿತ್ತು; ಯಾವ ಇಲಾಖೆಯಿಂದ ಕಾಮಗಾರಿ ಪಾರಂಭಿಸಲಾಗಿತ್ತು; ಎಷ್ಟು ಹಣ ಬಿಡುಗಡೆಯಾಗಿದೆ; ಇನ್ನೂ ಎಷ್ಟು ಹಣ ಬಿಡುಗಡೆಯಾಗಬೇಕು; ಯಾವಾಗ ಬಿಡುಗಡೆ ಮಾಡಲಾಗುವುದು; ವಿಳಂಬಕ್ಕೆ ಕಾರಣವೇನು? (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಕಇ 374 ಎಸ್‌ಎಲ್‌ಪಿ 2021 ದಿನಾಂಕ: 16-03-2022ರಲ್ಲಿ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ರೂ.1300.00 ಲಕ್ಷಗಳಿಗೆ ಮಂಜೂರಾತಿ ನೀಡಿ ಆದೇಶಿಸಲಾಗಿರುತ್ತದೆ. ಅದರನ್ವಯ, ದಿನಾಂಕ: 18-03-2022ರಲ್ಲಿ ಮೊದಲನೇ ಕಂತಿನಲ್ಲಿ ರೂ.325.00 ಲಕ್ಷಗಳನ್ನು ಜಿಲ್ಲೆಗೆ ಬಿಡುಗಡೆ ಮಾಡಲಾಗಿರುತ್ತದೆ. |

| | | |
|---|---|---|
| | | ಮೇಲ್ಕಂಡಂತೆ ಮಂಜೂರಾತಿ ನೀಡಿ ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ಜಿಲ್ಲಾಧಿಕಾರಿಗಳು ಚಿತ್ರದುರ್ಗ ಜಿಲ್ಲೆ ರವರ ಆದೇಶ ದಿನಾಂಕ:16-08-2022 ರಲ್ಲಿ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕು ವ್ಯಾಪ್ತಿಯಲ್ಲಿನ ಯಲ್ಲಾಭೋವಿಹಟ್ಟಿಯಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಸಂಬಂಧವಾಗಿ ಈ ಕೆಳಕಂಡ ಕಾಮಗಾರಿಯನ್ನು ಕೈಗೊಳ್ಳಲು ರೂ.50.00 ಲಕ್ಷಗಳಿಗೆ ಮಂಜೂರಾತಿ ನೀಡಿ, ಮೊದಲ ಕಂತಿನಲ್ಲಿ ರೂ.12.50 ಲಕ್ಷಗಳನ್ನು ನಿರ್ಮಾಣ ಏಜೆನ್ಸಿಗೆ ಬಿಡುಗಡೆ ಮಾಡಲಾಗಿರುತ್ತದೆ. ವಿವರಗಳು ಅನುಬಂಧದಲ್ಲಿ ನೀಡಿದೆ.<br><br>ಪ್ರಗತಿ ಕಾಲೋನಿ ಯೋಜನೆಯಡಿ 2018-19ನೇ ಸಾಲಿನಿಂದ ಇದುವರೆವಿಗೂ ಸರ್ಕಾರದಿಂದ ಹೊರಡಿಸಲಾಗಿರುವ ಮಂಜೂರಾತಿ ಆದೇಶಗಳ ಒಟ್ಟು ಮೊತ್ತ ರೂ.1422.04 ಕೋಟಿಗಳಿಗೆ ಅನುಗುಣವಾಗಿ, ರೂ.755.55 ಕೋಟಿಗಳನ್ನು ಸಂಬಂಧಪಟ್ಟ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿದ್ದು, ರೂ.666.49 ಕೋಟಿಗಳನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುವುದು ಬಾಕಿ ಇರುತ್ತದೆ.<br><br>ಮೇಲ್ಕಂಡಂತೆ ಮಂಜೂರಾತಿ ನೀಡಿ, ಬಿಡುಗಡೆ ಮಾಡಿದ ಮೊತ್ತಕ್ಕೆ ಅನುಗುಣವಾಗಿ ಕಾಮಗಾರಿಗಳನ್ನು ನಿರ್ವಹಿಸಿದ ನಂತರ ಬಾಕಿ ಅನುದಾನ ಬಿಡುಗಡೆ ಕೋರಿ ಸ್ಥಳ ಮಹಜರು ವರದಿ, ಹಣಬಳಕೆ ಪ್ರಮಾಣ ಪತ್ರ ಹಾಗೂ ಅಗತ್ಯ ದಾಖಲಾತಿಗಳೊಂದಿಗೆ ರೂ.185.04 ಕೋಟಿಗಳ ಬಾಕಿ ಅನುದಾನ ಬಿಡುಗಡೆ ಕೋರಿ ಜಿಲ್ಲೆಗಳಿಂದ ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ.<br><br>ಸರ್ಕಾರದ ಆದೇಶ ಸಂಖ್ಯೆ: ಸಕಇ 44 ಎಸ್‌ಎಲ್‌ಪಿ 2023, ದಿನಾಂಕ:09-02-2023ರಲ್ಲಿ ಪರಿಶಿಷ್ಟ ಜಾತಿಯವರಿಗೆ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ರೂ.8500.00 ಲಕ್ಷಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಅನುದಾನದ ಪೈಕಿ ಪ್ರಗತಿ ಕಾಲೋನಿ ಯೋಜನೆಗೆ ಹಂಚಿಕೆ ಮಾಡುವ ಅನುದಾನ ಹಾಗೂ ಜಿಲ್ಲೆಗಳಿಂದ ಸ್ವೀಕೃತವಾಗಿರುವ ಬಾಕಿ ಅನುದಾನ ಬಿಡುಗಡೆ ಪ್ರಸ್ತಾವನೆಗಳನ್ನು ಆಧರಿಸಿ, ಬಾಕಿ ಅನುದಾನ ಬಿಡುಗಡೆ ಮಾಡಲು ನಿಯಮಾನುಸಾರ ಅಗತ್ಯ ಕ್ರಮವಹಿಸಲಾಗುವುದು. |

**ಸಕಇ 61 ಎಸ್‌ಎಲ್ ಪಿ 2023**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಗೂಳಿಹಟ್ಟಿ ಡಿ ಶೇಖರ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 190 ಕ್ಕೆ ಅನುಬಂಧ

| ಕಾಮಗಾರಿಯ ವಿವರ | ಮಂಜೂರಾದ ಮೊತ್ತ | ಎಲ್-1 ಟೆಂಡರ್ ಮೊತ್ತ | ನಿರ್ಮಾಣ ಏಜೆನ್ಸಿಗೆ ಬಿಡುಗಡೆ ಮಾಡಿದ ಮೊತ್ತ | ಎಲ್-1 ಟೆಂಡರ್ ಮೊತ್ತಕ್ಕೆ ಅನುಗುಣವಾಗಿ ಬಿಡುಗಡೆ ಮಾಡಲು ಬಾಕಿ ಇರುವ ಮೊತ್ತ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| construction of approach road and layout formation for sc colony in hosadurga town | 100.00 | 99.33 | 27.50 | 71.83 | ಪೂರ್ಣಗೊಂಡಿದೆ |
| construction of playground and other development works for sc colony n hosadurga town | 50.00 | 46.05 | 15.00 | 31.05 | ಪೂರ್ಣಗೊಂಡಿದೆ |
| | **150.00** | **145.38** | **42.50** | **102.88** | |

| ಕಾಮಗಾರಿಯ ವಿವರ | ಮಂಜೂರಾದ ಮೊತ್ತ | ಎಲ್-1 ಟೆಂಡರ್ ಮೊತ್ತ | ನಿರ್ಮಾಣ ಏಜೆನ್ಸಿಗೆ ಬಿಡುಗಡೆ ಮಾಡಿದ ಮೊತ್ತ | ಎಲ್-1 ಟೆಂಡರ್ ಮೊತ್ತಕ್ಕೆ ಅನುಗುಣವಾಗಿ ಬಿಡುಗಡೆ ಮಾಡಲು ಬಾಕಿ ಇರುವ ಮೊತ್ತ | ಕಾಮಗಾರಿಯ ಪ್ರಸ್ತುತ ಹಂತ |
|---|---|---|---|---|---|
| ಯಾಲ್ಲಾಭೋವಿಹಟ್ಟಿಯಲ್ಲಿ ಸಿ.ಸಿ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿ | 50.00 | 50.00 | 12.50 | 37.50 | ಪ್ರಗತಿಯಲ್ಲಿರುತ್ತದೆ |
| **ಒಟ್ಟು** | **50.00** | **50.00** | **12.50** | **37.50** | |

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 191
ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ. ಶೇಖರ್
ಉತ್ತರಿಸುವ ದಿನಾಂಕ : 15-02-2023
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ವಾಲ್ಮೀಕಿ ಅಭಿವೃದ್ಧಿ ನಿಗಮದ ಮೂಲಕ ಮೋಟಾರ್ ಪಂಪ್ ಟೆಂಡರ್‌ನಲ್ಲಿ ಅಕ್ರಮವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ವತಿಯಿಂದ 2018-19 ನೇ ಸಾಲಿನಲ್ಲಿ ಕೊರೆಯಲಾದ ಕೊಳವೆಬಾವಿಗಳಿಗೆ ಪಂಪ್‌ಸೆಟ್ ಹಾಗೂ ಇತರೆ ಸಾಮಾಗ್ರಿಗಳನ್ನು ಸರಬರಾಜು ಮಾಡಿ, ಅಳವಡಿಸಿ, ವಿದ್ಯುದ್ದೀಕರಣಗೊಳಿಸಲು ಇ-ಪ್ರೋಕ್ಯೂರ್ಮೆಂಟ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಲಾಗಿರುತ್ತದೆ.<br><br>ಸದರಿ ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳು ಇ-ಪ್ರೋಕ್ಯೂರ್‌ಮೆಂಟ್‌ನಲ್ಲಿ ನಮೂದಿಸಿದ ಸ್ವಯಂ ರಚಿಸಲಾದ (Auto Generated) ಪಟ್ಟಿಯಾಗಿದ್ದು, ಇದರನ್ವಯ ಇ-ಪ್ರೋಕ್ಯೂರ್‌ಮೆಂಟ್‌ನಲ್ಲೇ ಎಲ್-೧ ಎಲ್-೧, ಎಲ್ -೨ ಮತ್ತು ಎಲ್-೩ ಗುತ್ತಿಗೆದಾರರನ್ನು ಪ್ರಚರ ಪಡಿಸಲಾಗುತ್ತದೆ. ಇದೇ ಮಾನದಂಡವನ್ನು ಯಥಾವತ್ತಾಗಿ ಅಳವಡಿಸಿಕೊಂಡು ಎಲ್-೧ ಗುತ್ತಿಗೆದಾರರನ್ನು ನೇಮಕಮಾಡಲಾಗಿರುತ್ತದೆ.<br><br>ನಿಗಮದಿಂದ ಕೊರೆಯುವ ಕೊಳವೆಬಾವಿಗಳ ಆಳಕ್ಕೆ ತಕ್ಕಂತೆ ಪಂಪು ಮೋಟಾರಿನ ಹೆಚ್.ಪಿ ಯನ್ನು ನಿಗದಿಪಡಿಸಲಾಗುತ್ತದೆ. ಅದರಂತೆ ಫಲಾನುಭವಿಯ ಒಪ್ಪಿಗೆ ಪಡೆದು ಪಂಪು ಮೋಟಾರನ್ನು ವಿತರಿಸಲು ಕ್ರಮ ಕೈಗೊಳ್ಳಲಾಗುತ್ತದೆ.<br><br>ಸದರಿ ಟೆಂಡರ್‌ನ್ನು ಇ-ಪ್ರೋಕ್ಯೂರ್‌ಮೆಂಟ್ ಮೂಲಕ ಆಹ್ವಾನಿಸಿದ್ದು, ಇ-ಪ್ರೋಕ್ಯೂರ್‌ಮೆಂಟ್‌ನಲ್ಲಿ ನಮೂದಿಸಿರುವ ಎಲ್-೧ ಗುತ್ತಿಗೆದಾರರಿಗೆ ನೇಮಕ ಮಾಡಿರುವುರಿಂದ ಈ ಟೆಂಡರ್‌ನಲ್ಲಿ ಯಾವುದೇ ಅಕ್ರಮ ನಡೆದಿರುವುದಿಲ್ಲ.<br><br>ಹೊಸದುರ್ಗ ತಾಲ್ಲೂಕಿನಲ್ಲಿ ಕೊರೆಯಲಾಗಿರುವ ಕೊಳವೆಬಾವಿಗಳಿಗೆ ಪಂಪ್‌ಸೆಟ್ ಸರಬರಾಜು ಮಾಡಲು ಎಲ್-೧ ಗುತ್ತಿಗೆದಾರರಿಗೆ ಜಿಲ್ಲಾ ಕಛೇರಿಯಿಂದ ಕ್ಲಿಯರೆನ್ಸ್ ನೀಡಲಾಗಿದ್ದು, ಸರಬರಾಜು ಮಾಡುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ) | ಮೋಟಾರ್-ಪಂಪ್ ಟೆಂಡರ್‌ನಲ್ಲಿ ನ್ಯಾಯಾಲಯದ ಆದೇಶವನ್ನು ಉಲ್ಲಂಘನೆ ಮಾಡಿ ಮೋಟಾರ್ ಪಂಪ್ ಸಪ್ಲೈ ಮಾಡಲು ಕಡಿಮೆ ದರ ನಮೂದಿಸಿದವರಿಗೆ ನೀಡದೇ, ಹೆಚ್ಚಿನ ದರ ನಿಗದಿಪಡಿಸಿದವರಿಗೆ ಟೆಂಡರ್ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಇ) | 6ಹೆಚ್‌ಪಿ ಮೋಟಾರ್‌ಗಳ ಸಂಖ್ಯೆ ಎಷ್ಟು; ಹಾಗೂ 10ಹೆಚ್ ಪಿ ಮೋಟಾರ್‌ಗಳ ಸಂಖ್ಯೆ ಎಷ್ಟು; | |
| ಈ) | ಈ ಟೆಂಡರ್ ನೀಡಿಕೆಯಲ್ಲಿ ಕೋಟ್ಯಾಂತರ ರೂ.ಗಳ ಅಕ್ರಮವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಉ) | ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮ ಏನು; | |
| ಊ) | ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನಲ್ಲಿ ಮೋಟಾರ್ ಪಂಪ್‌ನ್ನು ಇನ್ನು ವಿತರಿಸದಿರಲು ಕಾರಣವೇನು? | |

ಸಕಇ 06 ಎಸ್‌ಟಿಸಿ 2023

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 192
ಸದಸ್ಯರ ಹೆಸರು : ಶ್ರೀ ಗೂಳಿಹಟ್ಟಿ ಡಿ ಶೇಖರ್
ಉತ್ತರಿಸುವ ದಿನಾಂಕ : 15.02.2023.
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಭೋವಿ ನಿಗಮ ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗೆ ಸರ್ಕಾರದಿಂದ ಬಂದ ಅನುದಾನ ಎಷ್ಟು; ಖರ್ಚಾದ ಅನುದಾನ ಎಷ್ಟು; ಯಾವ ಯಾವ ಜಿಲ್ಲೆಗಳಿಗೆ ಎಷ್ಟು ಹಣ ಬಿಡುಗಡೆಯಾಗಿದೆ; ಯಾವ ಉದ್ದೇಶಕ್ಕೆ ಎಷ್ಟು ಹಣ ಖರ್ಚಾಗಿದೆ ; ಬಾಕಿ ಉಳಿದ ಅನುದಾನ ಎಷ್ಟು; | **ಅನುಬಂಧ-1 ರಲ್ಲಿ ನೀಡಿದೆ.** |
| ಆ) | ರಾಜ್ಯದಲ್ಲಿ ಭೋವಿ ನಿಗಮ ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗೆ ಸಾಂಸ್ಥಿಕ ಕೋಟಾ (ವಿವೇಚನಾ) ಅಡಿಯಲ್ಲಿ ಸಮಾಜ ಕಲ್ಯಾಣ ಸಚಿವರ 15% ವಿವೇಚನಾ ಕೋಟಾದಡಿಯಲ್ಲಿ ಇದುವರೆಗೆ ಯಾವ ಯಾವ ಜಿಲ್ಲೆಗಳಿಗೆ ಎಷ್ಟು ಅನುದಾನ ಫಲಾನುಭವಿಗಳಿಗೆ ಬಿಡುಗಡೆಯಾಗಿದೆ; ಜಿಲ್ಲೆಗಳಿಗೆ ಬಿಡುಗಡೆಯಾದ (ಫಲಾನುಭವಿಗಳಿಗೆ) ಹಣದ ವಿವರ ತಿಳಿಸುವುದು; (ಫಲಾನುಭವಿಗಳ ಜಿಲ್ಲಾವಾರು ಪಟ್ಟಿ ನೀಡುವುದು) | ಈ ಹಿಂದಿನ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅಧಿಕಾರ ದುರುಪಯೋಗ ಮಾಡಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುವ ಹಿನ್ನೆಲೆಯಲ್ಲಿ ಹಾಗೂ ಭ್ರಷ್ಟಚಾರ ನಿಗ್ರಹ ದಳದಿಂದ ತನಿಖೆ ಕೈಗೊಂಡಿದ್ದು, ಪ್ರಸ್ತುತ ಮಾನ್ಯ ಲೋಕಾಯುಕ್ತಕ್ಕೆ ಪ್ರಕರಣ ವರ್ಗಾವಣೆಯಾಗಿರುವುದರಿಂದ ತನಿಖೆ ನಡೆಯುತ್ತಿದೆ.<br>ಕೋರಿರುವ ಮಾಹಿತಿಗೆ ಸಂಬಂಧಿಸಿದಂತೆ ಕೇಂದ್ರ ಕಛೇರಿಯಲ್ಲಿ ಹಣಕಾಸು ಸಂಬಂಧಿಸಿದಂತೆ, ಯೋಜನೆಗಳಿಗೆ ಸಂಬಂಧಿಸಿದಂತೆ ಪ್ರಮುಖ ಕಡತಗಳು/ದಾಖಲಾತಿಗಳು ಲಭ್ಯವಿರುವುದಿಲ್ಲ ಹಾಗೂ ಹಿಂದಿನ ಅಧಿಕಾರಿಗಳು ಹಸ್ತಾಂತರಿಸಿರುವುದಿಲ್ಲ. ಹಾಗಾಗಿ ಜಿಲ್ಲಾ ಕಛೇರಿಗಳಿಂದ ಮಾಹಿತಿಯನ್ನು ಕ್ರೋಢೀಕರಿಸಿ ನೀಡುವಂತೆ ಸರ್ಕಾರದಿಂದ ಸೂಚನೆ ನೀಡಲಾಗಿದ್ದು, ಮಾಹಿತಿ ಬಂದ ನಂತರ ಕ್ರಮವಹಿಸಲಾಗುವುದು. |
| ಇ) | ರಾಜ್ಯದಲ್ಲಿ ಭೋವಿ ನಿಗಮ ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗೆ ಆಡಳಿತ ಮಂಡಳಿಯ 5% ಸಾಂಸ್ಥಿಕ ಕೋಟಾದಡಿಯಲ್ಲಿ ಫಲಾನುಭವಿಗಳಿಗೆ ಎಷ್ಟೆಷ್ಟು ಹಣ ಮಂಜೂರಾಗಿ ಬಿಡುಗಡೆಯಾಗಿದೆ; ಯಾವ ಯಾವ ಉದ್ದೇಶಕ್ಕೆ ಎಷ್ಟೆಷ್ಟು ಹಣ ಬಿಡುಗಡೆಯಾಗಿದೆ; ಭೋವಿ ನಿಗಮ ಪ್ರಾರಂಭವಾದಾಗಿನಿಂದ ಇಲ್ಲಿಯವರೆಗೆ ಸಮಾಜ ಕಲ್ಯಾಣ ಸಚಿವರ ಆಡಳಿತದ ಅವಧಿಯಲ್ಲಿ ವಾರ್ಷಿಕವಾರು ನಿಗಮದಲ್ಲಿ ಬಿಡುಗಡೆಯಾದ ಅನುದಾನ, ಖರ್ಚಾದ ಅನುದಾನ, ಫಲಾನುಭವಿಗಳಿಗೆ ಬಿಡುಗಡೆಯಾದ ಅನುದಾನ, ಸರ್ಕಾರದಿಂದ ನಿಗಮಕ್ಕೆ ವರ್ಷವಾರು ಬಿಡುಗಡೆ ಅನುದಾನ ಮತ್ತು ಖರ್ಚಾದ ಅನುದಾನದ ವಿವರ ನೀಡುವುದು; ಸಚಿವರ ಹೆಸರು ಅವರುಗಳ ಅವಧಿಯಲ್ಲಿ ಖರ್ಚಾದ ವಿವರ (ಸಾಂಸ್ಥಿಕ ಕೋಟಾ ಮತ್ತು ಇತರೆ ಅನುದಾನ) | ಈ ಹಿಂದಿನ ಅಧಿಕಾರಿಗಳು ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅಧಿಕಾರ ದುರುಪಯೋಗ ಮಾಡಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುವ ಹಿನ್ನೆಲೆಯಲ್ಲಿ ಹಾಗೂ ಭ್ರಷ್ಟಚಾರ ನಿಗ್ರಹ ದಳದಿಂದ ತನಿಖೆ ಕೈಗೊಂಡಿದ್ದು, ಪ್ರಸ್ತುತ ಮಾನ್ಯ ಲೋಕಾಯುಕ್ತಕ್ಕೆ ಪ್ರಕರಣ ವರ್ಗಾವಣೆಯಾಗಿರುವುದರಿಂದ ತನಿಖೆ ನಡೆಯುತ್ತಿದೆ.<br>ಕೋರಿರುವ ಮಾಹಿತಿಗೆ ಸಂಬಂಧಿಸಿದಂತೆ ಕೇಂದ್ರ ಕಛೇರಿಯಲ್ಲಿ ಹಣಕಾಸು ಸಂಬಂಧಿಸಿದಂತೆ, ಯೋಜನೆಗಳಿಗೆ ಸಂಬಂಧಿಸಿದಂತೆ ಪ್ರಮುಖ ಕಡತಗಳು/ದಾಖಲಾತಿಗಳು ಲಭ್ಯವಿರುವುದಿಲ್ಲ ಹಾಗೂ ಹಿಂದಿನ ಅಧಿಕಾರಿಗಳು ಹಸ್ತಾಂತರಿಸಿರುವುದಿಲ್ಲ. ಹಾಗಾಗಿ ಜಿಲ್ಲಾ ಕಛೇರಿಗಳಿಂದ ಮಾಹಿತಿಯನ್ನು ಕ್ರೋಢೀಕರಿಸಿ ನೀಡುವಂತೆ ಸರ್ಕಾರದಿಂದ ಸೂಚನೆ ನೀಡಲಾಗಿದ್ದು, ಮಾಹಿತಿ ಬಂದ ನಂತರ ಕ್ರಮವಹಿಸಲಾಗುವುದು. |

| ಈ) | ಭೋವಿ ನಿಗಮದ ಪ್ರಾರಂಭವಾದಾಗಿನಿಂದ ಇಲ್ಲಿಯವರೆಗೆ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಚಿಕ್ಕಬಳ್ಳಾಪುರ, ರಾಯಚೂರು, ಯಾದಗಿರಿ, ಗುಲ್ಬರ್ಗಾ, ವಿಜಯಪುರ, ಚಿತ್ರದುರ್ಗ, ಶಿವಮೊಗ್ಗ, ಕೋಲಾರ, ಬಾಗಲಕೋಟೆ ಮತ್ತು ಕೊಪ್ಪಳ ಜಿಲ್ಲೆಗಳಿಗೆ ಸಾಂಸ್ಥಿಕ ಕೋಟಾದಡಿಯಲ್ಲಿ ಸಮಾಜ ಕಲ್ಯಾಣ ಸಚಿವರ 15% ನಲ್ಲಿ ಹಾಗೂ ಆಡಳತ ಮಂಡಳ ಶೇ.5% ನಲ್ಲಿ ಫಲಾನುಭವಿಗಳಿಗೆ ಎಷ್ಟು ಹಣ ಬಿಡುಗಡೆಯಾಗಿದೆ? | ಅನುಬಂಧ-2ರಲ್ಲಿ ನೀಡಿದೆ. |
|---|---|---|

ಸಂಖ್ಯೆ: ಸಕಇ 51 ಎಸ್‌ಡಿಸಿ 2023

(ಕೋಟಾ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

ಅನುಬಂಧ-01

ಕರ್ನಾಟಕ ಭೋವಿ ಅಭಿವೃದ್ಧಿ ನಿಗಮ ಸ್ಥಾಪನೆಯಾದಾಗಿನಿಂದ ಇಲ್ಲಿಯವರೆಗಿನ ಸರಕಾರದಿಂದ ಬಿಡುಗಡೆಯಾದ ಅನುದಾನ ಮತ್ತು ಖರ್ಚಿನ ವಿವರ (ದಿ-09-02-2023 ರ ವರೆಗೆ)

(ರೂ.ಲಕ್ಷಗಳಲ್ಲಿ)

| ಕ್ರಮಸಂಖ್ಯೆ | ವರ್ಷ | ಪ್ರಾರಂಭಿಕ ಶಿಲ್ಕು | ಸರಕಾರದಿಂದ ಬಿಡುಗಡೆ ಯಾದ ಅನುದಾನ | ಷೇರು ಬಂಡವಾಳ | ಇತರ ಸ್ವೀಕೃತಿ | ಒಟ್ಟುಸ್ವೀಕೃತಿ | ಒಟ್ಟು | ವೆಚ್ಚ | ಅಂತಿಮ ಶಿಲ್ಕು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 (4+5+6) | 8 (3+7) | 9 | 10 (8+9) |
| 1 | 2015-16 | - | 3,000.00 | 500.00 | - | 3,500.00 | 3,500.00 | - | 3,500.00 |
| 2 | 2016-17 | 3,500.00 | 2,000.00 | 500.00 | - | 2,500.00 | 6,000.00 | 1,250.00 | 4,750.00 |
| 3 | 2017-18 | 4,750.00 | 2,000.00 | 500.00 | - | 2,500.00 | 7,250.00 | 2,380.82 | 4,869.18 |
| 4 | 2018-19 | 4,869.18 | 10,263.75 | 380.00 | - | 10,643.75 | 15,512.93 | 2,209.67 | 13,303.26 |
| 5 | 2019-20 | 13,303.26 | 4,421.25 | 375.00 | 971.26 | 5,767.51 | 19,070.77 | 4,491.30 | 14,579.47 |
| 6 | 2020-21 | 14,579.47 | 3,715.00 | 500.00 | 858.76 | 5,073.76 | 19,653.23 | 8,248.91 | 11,404.32 |
| 7 | 2021-22 | 11,404.32 | 3,000.00 | 1,000.00 | 586.40 | 4,586.40 | 15,990.72 | 7,626.38 | 8,364.34 |
| 8 | 2022-23 | 8,364.34 | 9,159.31 | 125.00 | 448.60 | 9,732.91 | 18,097.25 | 6,559.00 | 11,538.25 |
| | ಒಟ್ಟು | | 37,559.31 | 3,880.00 | 2,865.02 | 44,304.33 | 44,304.33 | 32,766.08 | 11,538.25 |

ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಭೋವಿ ಅಭಿವೃದ್ಧಿ ನಿಗಮ
ಬೆಂಗಳೂರು-560 001

## ಅನುಬಂಧ-2

2015-16ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದಲ್ಲಿ ಭೋವಿ ಜನಾಂಗದ ಸಮಗ್ರ ಅಭಿವೃದ್ಧಿಗಾಗಿ ಕರ್ನಾಟಕ ಭೋವಿ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲು ಘೋಷಿಸಲಾಗಿದೆ. ರಾಜ್ಯ ಅನುಸೂಚಿತ ಜಾತಿಗಳು/ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನ ದಿನಾಂಕ: 26.05.2015ರಲ್ಲಿ ನಡೆದ ಸಭೆಯಲ್ಲಿ ನೀಡಿದ ಅನುಮೋದನೆಯಂತೆ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಕಇ 40 ಎಸ್‌ಎಲ್‌ಪಿ 2011 ದಿನಾಂಕ: 29.02.2016 ರಂದು ಕರ್ನಾಟಕದಲ್ಲಿ ವಾಸಿಸುತ್ತಿರುವ ಭೋವಿ ಜನಾಂಗದ ಜನರ ಅಭಿವೃದ್ಧಿಯನ್ನು ಗಮನದಲ್ಲಿರಿಸಿಕೊಂಡು ಕರ್ನಾಟಕ ಭೋವಿ ಅಭಿವೃದ್ಧಿ ನಿಗಮವನ್ನು ಸ್ಥಾಪಿಸಲಾಗಿದೆ.

2015-16 ನೇ ಸಾಲಿನಿಂದ 2019-20ನೇ ಸಾಲಿನ ವರೆಗೆ ನಿಗಮದಲ್ಲಿ ವಿವಿಧ ಅಭಿವೃದ್ಧಿ ಯೋಜನೆಯ ಅನುಷ್ಠಾನದಲ್ಲಿ ಯಾವುದೇ ವ್ಯತ್ಯಯಗಳು ಕಂಡುಬಾರದಿರುವುದು ಲೆಕ್ಕ ಪರಿಶೋಧಕರ ವರದಿಯಿಂದ ತಿಳಿದುಬಂದಿರುತ್ತದೆ.

2021-22ನೇ ಸಾಲಿನಲ್ಲಿ ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನವನ್ನು ನಿಯಮಬಾಹಿರವಾಗಿ ಖರ್ಚು ಮಾಡಿರುವ ಹಾಗೂ ಹಣ ದುರುಪಯೋಗವಾಗಿರುವ ಕುರಿತಂತೆ ದೂರುಗಳು ಸ್ವೀಕೃತವಾದ ಹಿನ್ನೆಲೆಯಲ್ಲಿ ಭ್ರಷ್ಟಚಾರ ನಿಗ್ರಹ ದಳದಿಂದ ತನಿಖೆ ನಡೆದಿದ್ದು, ಪ್ರಸ್ತುತ ಮಾನ್ಯ ಲೋಕಾಯುಕ್ತಕ್ಕೆ ಪ್ರಕರಣಗಳು ವರ್ಗಾವಣೆ ಆಗಿರುತ್ತವೆ.

ಹಾಗೂ ಈ ಸಂಬಂಧ ನಿಗಮದಲ್ಲಿ ಈ ಹಿಂದಿನ ಅಧಿಕಾರಿಗಳು ನಿರ್ವಹಿಸಲಾದ ಯೋಜನಾ ಕಡತಗಳು, ಹಣಕಾಸು ಸಂಬಂಧಿಸಿದಂತೆ ನಗದು ಪುಸ್ತಕ, ಚೆಕ್ ರಿಜಿಸ್ಟರ್ ಮತ್ತು ಅರ್ಥಿಕ ವ್ಯವಹಾರಕ್ಕೆ ಸಂಬಂಧಪಟ್ಟ ಸಾಕಷ್ಟು ಕಡತಗಳು/ದಾಖಲಾತಿಗಳು ಲಭ್ಯವಾಗಿಲ್ಲದ ಕಾರಣ, ಮಹಾಲಕ್ಷ್ಮೀಪುರಂ ಪೋಲೀಸ್ ಠಾಣೆಯಲ್ಲಿ ಮೊಕದ್ದಮೆ (ಎಫ್.ಐ.ಆರ್) ಸಂ: 0235/2022 ದಿನಾಂಕ: 05.12.2022 ರಂದು ದಾಖಲಿಸಲಾಗಿದೆ.

ಮುಂದುವರೆದು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ, ರಾಯಚೂರು, ಯಾದಗಿರಿ, ಕಲಬುರಗಿ, ವಿಜಯಪುರ, ಚಿತ್ರದುರ್ಗ, ಶಿವಮೊಗ್ಗ, ಕೋಲಾರ, ಬಾಗಲಕೋಟೆ ಮತ್ತು ಕೊಪ್ಪಳ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಬ್ಯಾಂಕ್ ಖಾತೆಗಳನ್ನು ಪರಿಶೀಲಿಸಲಾಗಿ, ಆಂತರಿಕ ಲೆಕ್ಕ ಪರಿಶೋಧನೆಯ ವರದಿಯಲ್ಲಿ ಸಾಂಸ್ಥಿಕ ಕೋಟಾದಡಿ ಕಲಬುರ್ಗಿ ಜಿಲ್ಲೆಗೆ ಸುಮಾರು ರೂ.11.80 ಕೋಟಿಗಳು ಅನಧಿಕೃತವಾಗಿ ಬಿಡುಗಡೆಯಾಗಿರುವುದು ಹಾಗೂ ವಿಜಯಪುರ ಜಿಲ್ಲೆಗೆ ರೂ.6.80 ಕೋಟಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ರೂ.10.95 ಕೋಟಿ ಹಾಗೂ ಬೆಂಗಳೂರು ನಗರ ಜಿಲ್ಲೆಗೆ ರೂ.27.00 ಕೋಟಿ ಹಣ ಬಿಡುಗಡೆಯಾಗಿರುತ್ತದೆ.

2021-22 ಮತ್ತು 2022-23ನೇ ಸಾಲಿನ ಮೊದಲನೇ ತ್ರೈಮಾಸಿಕದಲ್ಲಿ ಆಡಳಿತಾತ್ಮಕ ವೆಚ್ಚವೂ ಸೇರಿದಂತೆ ಒಟ್ಟು ರೂ. 98.31 ಕೋಟಿಗಳಷ್ಟು ಖರ್ಚಾಗಿರುತ್ತದೆ. ಈ ಪೈಕಿ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾದ ಎಲ್ಲಾ ಮೊತ್ತವು ಸಾಂಸ್ಥಿಕ ಕೋಟಾದಡಿ ಬಿಡುಗಡೆ ಮಾಡಲಾಗಿದ್ದು, ಸರ್ಕಾರದ ಮಾರ್ಗಸೂಚಿಗಳನ್ನು ಉಲ್ಲಂಘಿಸಿ ಹಣ ದುರುಪಯೋಗವಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

ಒಟ್ಟಾರೆ ನಿಗಮದಲ್ಲಿ ಲಭ್ಯವಿರುವ ಬ್ಯಾಂಕ್ ದಾಖಲಾತಿಗಳ ಪ್ರಕಾರ ಹಾಗೂ ಆಂತರಿಕ ಲೆಕ್ಕ ಪರಿಶೋಧಕರು ನೀಡಿರುವ ವರದಿಯಲ್ಲಿ ಸಾಂಸ್ಥಿಕ ಕೋಟಾದಡಿ ಅನುದಾನ ದುರುಪಯೋಗವಾಗಿರುವುದು ಮೇಲ್ನೋಟಕ್ಕೆ ಕಂಡುಬಂದಿದ್ದು ಫಲಾನುಭವಿಗಳ ವಿವರವನ್ನು ಒದಗಿಸಲು ಕೇಂದ್ರ ಕಛೇರಿಯಲ್ಲಿ ಸಂಬಂಧಿತ ಕಡತಗಳು ಲಭ್ಯವಿಲ್ಲದೇ ಇರುವ ಪ್ರಯುಕ್ತ, ಜಿಲ್ಲಾ ಕಛೇರಿಗಳಿಂದ ಪೂರ್ಣ ಮಾಹಿತಿಗಳನ್ನು ಸಂಗ್ರಹಿಸಿ, ಕ್ರೋಢೀಕರಿಸಿ ಒದಗಿಸಲು 15 ದಿನಗಳ ಕಾಲಾವಕಾಶ ನೀಡಲು ಕೋರಿದೆ.

ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಭೋವಿ ಅಭಿವೃದ್ಧಿ ನಿಗಮ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 193 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಾಜೇಗೌಡ ಟಿ.ಡಿ. (ಶೃಂಗೇರಿ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೊಂದಾಯಿತ ಫಲಾನುಭವಿಗಳಿಗೆ ವೈದ್ಯಕೀಯ ಸೇವೆ ಹಾಗೂ ವೈದ್ಯಕೀಯ ಧನಸಹಾಯವನ್ನು ಪಡೆದುಕೊಳ್ಳಲು ಈ ಹಿಂದೆ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದಿದ್ದ ಕೊಪ್ಪ, ಎನ್.ಆರ್.ಪುರ ಹಾಗೂ ಶೃಂಗೇರಿ ತಾಲ್ಲೂಕಿನಲ್ಲಿರುವ ಖಾಸಗಿ ಆಸ್ಪತ್ರೆಗಳಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಆದರೆ ಪ್ರಸ್ತುತ 2020 ಫೆಬ್ರವರಿ ಮಾಹೆಯಲ್ಲಿ ಇದನ್ನು ಕೈಬಿಡಲಾಗಿದ್ದು, ಇದರಿಂದ ಕಾರ್ಮಿಕ ಫಲಾನುಭವಿಗಳು ವೈದ್ಯಕೀಯ ಸೇವೆಯಿಂದ ವಂಚಿತರಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;(ವಿವರ ನೀಡುವುದು) | ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ನೊಂದಾಯಿತ ಫಲಾನುಭವಿಗಳಿಗೆ ವೈದ್ಯಕೀಯ ಸಹಾಯಧನ ಮತ್ತು ಪ್ರಮುಖ ವೈದ್ಯಕೀಯ ಸಹಾಯಧನವನ್ನು ಪಡೆದು ಕೊಳ್ಳಲು ಸರ್ಕಾರದಿಂದ ಮಾನ್ಯತೆ ಪಡೆದ ಆಸ್ಪತ್ರೆಗಳ ಪಟ್ಟಿಯನ್ನು ಪರಿಗಣಿಸಿ, Empanel ಮಾಡುವ ಅಧಿಕಾರ ಮಂಡಳಿಗೆ ಇರುವುದಿಲ್ಲ.<br><br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಇವರಿಂದ ಧೃಡಿಕರಿಸಿ, Empanel ಆದ ಖಾಸಗಿ ಆಸ್ಪತ್ರೆಗಳ ಪಟ್ಟಿಯನುಸಾರ ವೈದ್ಯಕೀಯ ಸಹಾಯಧನವನ್ನು ಪಡೆಯಲು ಅವಕಾಶವಿರುತ್ತದೆ. ಆದರಂತೆ, ಸದರಿ ಅಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆದು ಸಹಾಯಧನ ಕೋರಿದ ಫಲಾನುಭವಿಗಳ ಬಿಲ್‌ಗಳನ್ನು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಲ್ಲಿ ಪರಿಗಣಿಸಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಕೊಪ್ಪ, ಎನ್. ಆರ್. ಪುರ ಹಾಗೂ ಶೃಂಗೇರಿ ತಾಲ್ಲೂಕಿನಲ್ಲಿರುವ ಖಾಸಗಿ ಆಸ್ಪತ್ರೆಗಳಿಗೆ ವೈದ್ಯಕೀಯ ಸೌಲಭ್ಯಗಳನ್ನು ನೀಡಲು ಸರ್ಕಾರದಿಂದ Empanel (ದಾಖಲು) ಮಾಡಲಾಗುತ್ತದೆ? (ವಿವರ ನೀಡುವುದು) | |

ಕಾಇ 83 ಎಲ್‌ಇಟಿ 2023

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 194

ಸದಸ್ಯರ ಹೆಸರು : ಶ್ರೀ ರಾಜೇಗೌಡ ಟಿ ಡಿ (ಶೃಂಗೇರಿ)

ಉತ್ತರಿಸಬೇಕಾದ ಸಚಿವರು : ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸಬೇಕಾದ ದಿನಾಂಕ : 15 02-2022

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ ತಾಲ್ಲೂಕಿನ ಕೊಪ್ಪದಲ್ಲಿ ಕಾರ್ಮಿಕರೇ ಮಾಲೀಕರಾಗಿರುವ ಒಂದು ವಿಶಿಷ್ಟ ಸಂಸ್ಥೆ ಹಾಗೂ ಮಲೆನಾಡಿಗರ ಬಾಳಿನ ರಥವಾಗಿದ್ದ, ಸಹಕಾರ ತತ್ವದಡಿ ಸ್ಥಾಪಿತವಾಗಿದ್ದ ಸಹಕಾರ ಸಾರಿಗೆ (ಟಿ.ಸಿ.ಎಸ್) ಸಂಸ್ಥೆ ಸ್ಥಗಿತಗೊಂಡಿದ್ದು, ಸದರಿ ಸಂಸ್ಥೆಯ ತೆರಿಗೆ ಮನ್ನಾ ಮಾಡುವ ಸಂಬಂಧ ಆರ್ಥಿಕ ಇಲಾಖೆಯ ಸಹಮತಿ ಬೇಕಾಗಿದೆಯೆಂದು ಕಳೆದ ಅಧಿವೇಶನದಲ್ಲಿ ಉತ್ತರಿಸಿದ್ದು, ಪ್ರಸ್ತಾವನೆಗೆ ಸಹಮತಿ ನೀಡಲು ಸರ್ಕಾರ ಬದ್ಧವಿದೆಯೇ; (ವಿವರ ನೀಡುವುದು) | ಸಾರಿಗೆ ಇಲಾಖೆಯಿಂದ, ಸಹಕಾರ ಸಾರಿಗೆ ಸಂಸ್ಥೆ, ಕೊಪ್ಪ, ಇವರ ಒಡೆತನಕ್ಕೆ ಒಳಪಟ್ಟಿರುವ ಮಜಲು ವಾಹನಗಳಿಗೆ ನಿಗದಿತ ಮಾರ್ಗಗಳಲ್ಲಿ ಸಂಚರಿಸಲು 5 ವರ್ಷಗಳ ಅವಧಿಗೆ 65 ಮಜಲು ವಾಹನ ರಹದಾರಿಯನ್ನು ನೀಡಲಾಗಿರುತ್ತದೆ. ಆ ರಹದಾರಿಗಳಲ್ಲಿ ಆಚರಣೆಗೊಳ್ಳುವ ಮಜಲು ವಾಹನಗಳಿಗೆ ಪ್ರತಿ ವಾಹನಕ್ಕೆ ಪ್ರತಿ ಆಸನಕ್ಕೆ ತ್ರೈಮಾಸಿಕ ಒಂದಕ್ಕೆ ತೆರಿಗೆ ಮತ್ತು ಸೆಸ್ ಸೇರಿದಂತೆ ರೂ.999/ ರಂತೆ ತೆರಿಗೆಯನ್ನು ಸಂಸ್ಥೆಯವರು ಪಾವತಿಸಬೇಕಾಗಿರುತ್ತದೆ. |
| ಆ | ಇಲ್ಲದಿದ್ದಲ್ಲಿ, 16-02-2020 ರಿಂದ ಇಲ್ಲಿಯವರೆಗೂ ಬಸ್‌ಗಳು ನಿಂತಲ್ಲೇ ನಿಂತಿದ್ದು, ಕನಿಷ್ಠ ಈ ಅವಧಿಯ ತೆರಿಗೆ ಮನ್ನಾ ಮಾಡಲು ಸರ್ಕಾರ ಬದ್ಧವಿದೆಯೇ; (ವಿವರ ನೀಡುವುದು) | ಅಲ್ಲದೆ, ಕರ್ನಾಟಕ ರಾಜ್ಯ ಅಧೀನ ಸಾರಿಗೆ ಸಂಸ್ಥೆಗಳನ್ನು ಹೊರತುಪಡಿಸಿ ಖಾಸಗಿ ಸಂಸ್ಥೆಗಳಿಗೆ ಅಥವಾ ಮಾಲೀಕರುಗಳಿಗೆ ಸರ್ಕಾರದಿಂದ ಯಾವುದೇ ರೀತಿಯ ರಿಯಾಯಿತಿಯನ್ನಾಗಲೀ ಸಹಾಯ ಧನವನ್ನಾಗಲೀ ನೀಡುವ ಅವಕಾಶವಿರುವುದಿಲ್ಲ. |
| ಇ | ಹಾಗಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಸಂಸ್ಥೆಯ ಬಸ್‌ಗಳು ಸಂಚರಿಸದೇ ಇದ್ದ ಅವಧಿಯ ತೆರಿಗೆ ಮನ್ನಾ ಮಾಡಲು ಸರ್ಕಾರದಿಂದ ಅನುಮೋದನವನ್ನು ಒದಗಿಸಲಾಗುತ್ತದೆ? (ವಿವರ ನೀಡುವುದು) | ಸಹಕಾರಿ ಸಾರಿಗೆ ಸಂಘ ನಿ ಕೊಪ್ಪ, ಚಿಕ್ಕಮಗಳೂರು ಜಿಲ್ಲೆ ಈ ಸಂಸ್ಥೆಗೆ ಸಹಾಯ ಧನ ಮತ್ತು ಇತರ ಸೌಲಭ್ಯಗಳನ್ನು ಒದಗಿಸುವಂತೆ ಕೋರಿರುವ ಪ್ರಸ್ತಾವನೆಯನ್ನು ಪುರಸ್ಕರಿಸಲು ಸಾಧ್ಯವಿಲ್ಲವೆಂದು ಸಹಕಾರ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ಅಭಿಪ್ರಾಯಿಸಿರುತ್ತವೆ.<br><br>ಕಳೆದ ಅಧಿವೇಶನದಲ್ಲಿಯೂ ಸಹ ನಿಯಮ 73ರಡಿ ಉತ್ತರಿಸುವಾಗ ಪ್ರಸ್ತಾಪಿತ ಪ್ರಸ್ತಾವನೆಯನ್ನು ಪುರಸ್ಕರಿಸಲು ಸಾಧ್ಯವಿಲ್ಲವೆಂದು ಮಾಹಿತಿ ನೀಡಲಾಗಿದೆ. |

(ಬಿ. ಶ್ರೀರಾಮುಲು)

ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 195

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ.ರಾಜೇಗೌಡ ಟಿ.ಡಿ (ಶೃಂಗೇರಿ)

ಉತ್ತರಿಸುವ ಸಚಿವರು : ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

ಉತ್ತರಿಸುವ ದಿನಾಂಕ : 15.02.2023

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ಅಡಿಕೆಗೆ ತಗಲಿರುವ ಎಲೆ ಚುಕ್ಕಿ ರೋಗ ನಿವಾರಣೆಗೆ ಸೂಕ್ತ ಔಷಧ ಕಂಡು ಹಿಡಿದಿರುವುದರಿಂದ ಇಲ್ಲಿನ ಪ್ರಮುಖ ಬೆಳೆ ಸಂಪೂರ್ಣ ನಾಶವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೆಳದಿ ಶಿವಪ್ಪ ನಾಯಕ ಕೃಷಿ ಮತ್ತು ತೋಟಗಾರಿಕೆ ವಿಜ್ಞಾನಗಳ ವಿಶ್ವವಿದ್ಯಾಲಯ ಶಿವಮೊಗ್ಗ ವತಿಯಿಂದ ಅಡಿಕೆಗೆ ತಗಲುವ ಎಲೆ ಚುಕ್ಕೆ ರೋಗದ ಪ್ರಾರಂಭಿಕ ಹಂತದಲ್ಲಿ ಮುಂಜಾಗ್ರತ ಕ್ರಮವಾಗಿ 2.5 ಗ್ರಾಂ ಮ್ಯಾಂಕೋಜೆಬ್ / 2.5 ಗ್ರಾಂ ಸಾಫ್ (ಮ್ಯಾಂಕೋಜೆಬ್ 63%+ ಕಾರ್ಬೈನ್ ಡೈಜೀಮ್ 12%) / 2 ಮಿ.ಲೀ ಹೆಕ್ಸಕೊನಜೋಲ್ 5% / 1 ಮಿ.ಲೀ. ಪ್ರೊಪಿಕೊನಜೋಲ್ 25% ಇ.ಸಿ. ಪ್ರತಿ ಲೀಟರ್ ನೀರಿನಲ್ಲಿ ಅಂಟು ದ್ರಾವಣದ ಜೊತೆಗೆ ಬೆರೆಸಿ ಸಿಂಪಡಿಸಬೇಕಾಗಿ ಶಿಫಾರಸ್ಸು ಮಾಡಿದ್ದು, ಇವುಗಳ ಸಿಂಪರಣೆಯಿಂದ ಬೆಳೆ ಹಾನಿಯಾಗುತ್ತಿರುವುದು ಕಂಡು ಬಂದಿರುವುದಿಲ್ಲ. |
| ಆ) | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಹಳದಿ ಎಲೆ ಹಾಗೂ ಎಲೆ ಚುಕ್ಕೆ ರೋಗದಿಂದ ಫಸಲು ನಾಶವಾಗಿ ಸಾಲಭಾದೆ ತಾಳಲಾರದೇ ಆತ್ಮಹತ್ಯೆ ಮಾಡಿಕೊಂಡ ರೈತರ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ನೀಡುವುದು) | ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ಹಳದಿ ಎಲೆ ಹಾಗೂ ಎಲೆ ಚುಕ್ಕೆ ರೋಗದಿಂದ ಫಸಲು ನಾಶವಾಗಿ ಸಾಲಭಾದೆ ತಾಳಲಾರದೇ ಆತ್ಮಹತ್ಯೆ ಮಾಡಿಕೆಂಡ ರೈತರ ಸಂಖ್ಯೆ ಈ ಕೆಳಗಿನಂತಿವೆ.<br>ಕೊಪ್ಪ ತಾಲ್ಲೂಕಿನಲ್ಲಿ 4 ಸಂಖ್ಯೆ ರೈತರು ಹಾಗೂ ಶೃಂಗೇರಿ ತಾಲ್ಲೂಕಿನಲ್ಲಿ 1 ಸಂಖ್ಯೆ ರೈತರ ಆತ್ಮಹತ್ಯೆ ಪ್ರಕರಣಗಳು ಕಂಡುಬಂದಿದ್ದು, ಈ ಕುರಿತು ಜಿಲ್ಲಾಡಳಿತದ ಪರಿಶೀಲನಾ ಹಂತದಲ್ಲಿರುತ್ತದೆ. |
| ಇ) | ಈ ರೈತರ ಕುಟುಂಬಗಳಿಗೆ ಸರ್ಕಾರ ವಿತರಣೆ ಮಾಡಿರುವ ಪರಿಹಾರದ ಮೊತ್ತವೆಷ್ಟು; (ಪ್ರತಿ ರೈತರ ಸಂಪೂರ್ಣ ವಿವರ ನೀಡುವುದು) | |
| ಈ) | ಆರ್ಥಿಕ ಸಂಕಷ್ಟದಿಂದ ಜರ್ಜರಿತರಾಗಿರುವ ಅಡಿಕೆ ಬೆಳೆಯುವ ರೈತರಿಗೆ ಪರಿಹಾರಾತ್ಮಕ ಕ್ರಮವಾಗಿ ಬ್ಯಾಂಕ್‌ಗಳಲ್ಲಿ ಹಾಗೂ ಸಹಕಾರ ಸಂಘಗಳಲ್ಲಿ ಮಾಡಿರುವ ಸಾಲವನ್ನು ಸಂಪೂರ್ಣ ಮನ್ನಾ ಮಾಡುವ ಅಥವಾ ಬಡ್ಡಿ ಮನ್ನಾ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವಾಗ ಅನುಷ್ಠಾನಗೊಳಿಸಲಾಗುತ್ತದೆ; (ವಿವರ ನೀಡುವುದು) | ಸಹಕಾರ ಸಂಘಗಳಲ್ಲಿ ರೈತರು ಪಡೆದಿರುವ ಸಾಲವನ್ನು ಮನ್ನಾ ಮಾಡುವ ಯಾವುದೇ ಪ್ರಸ್ತಾವನೆ ಸಹಕಾರ ಇಲಾಖೆಯ ಮುಂದೆ ಇರುವುದಿಲ್ಲ. |

| ಉ) | ಯಾವ ಕಾಲಮಿತಿಯೊಳಗೆ ಸೂಕ್ತ ಔಷಧ ಕಂಡುಹಿಡಿದು, ರೈತರ ಹಿತ ಕಾಪಾಡಲು ಸರ್ಕಾರದಿಂದ ಕ್ರಮ ಕೈಗೊಳ್ಳುವುದು? | ಅಡಿಕೆ ಎಲೆ ಚುಕ್ಕೆ ರೋಗ / ಅಡಿಕೆ ಹಳದಿ ಎಲೆ ರೋಗಗಳಿಗೆ ಶಾಶ್ವತ ಪರಿಹಾರಕ್ಕೆ ರೋಗಾಣು ಪತ್ತೆಹಚ್ಚಲು CPCRI, ಕಾಸರಗೋಡು ಹಾಗೂ UAHS, ಶಿವಮೊಗ್ಗ ಸಂಸ್ಥೆಗಳು ಸಂಶೋಧನೆ ಕೈಗೊಳ್ಳಲು ಯೋಜಿಸಲಾಗುತ್ತಿದೆ.<br>ರೈತರ ಹಿತ ಕಾಪಡಲು ಅಡಿಕೆ ಬೆಳೆಗೆ ಪರ್ಯಾಯವಾಗಿ ಇತರೆ ವಾಣಿಜ್ಯ ತೋಟಗಾರಿಕೆ ಬೆಳೆಗಳನ್ನು ಪ್ರೋತ್ಸಾಹಿಸಲು ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ. |
|---|---|---|

No. HORTI 54 HGM 2023

(ಮುನಿರತ್ನ)

ತೋಟಗಾರಿಕೆ ಹಾಗೂ ಯೋಜನೆ,

ಕಾರ್ಯಕ್ರಮ ಸಂಯೋಜನೆ ಮತ್ತು

ಸಾಂಖ್ಯಿಕ ಸಚಿವರು

DFA/1065413

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 301

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ವಿಜಯಪುರ ಜಿಲ್ಲೆಯ ನಿಡಗುಂದಿ ತಾಲ್ಲೂಕಿನ ಆಲಮಟ್ಟಿ ಹತ್ತಿರ ಅರಳದಿನ್ನಿ ಗ್ರಾಮದ ಸರ್ವೆ ನಂಬರ್‌ಗಳಲ್ಲಿ ಲೋಕೋಪಯೋಗಿ ಇಲಾಖೆಗೆ ಸಂಬಂಧಿಸಿದ್ದ 1 ಎಕರೆ 29 ಗುಂಟೆ ಜಾಗದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಯೋಜಿಸಲಾಗಿದೆಯೇ; | ವಿಜಯಪುರ ಜಿಲ್ಲೆಯ ನಿಡಗುಂದಿ ತಾಲ್ಲೂಕಿನ ಆಲಮಟ್ಟಿ ಹತ್ತಿರ ಅರಳದಿನ್ನಿ ಗ್ರಾಮದ ಜಾಗದಲ್ಲಿ ಬಸ್ ನಿಲ್ದಾಣ ನಿರ್ಮಿಸಲು ಯೋಜಿಸಲಾಗಿದೆ. |
| ಆ. | ಹಾಗಿದ್ದಲ್ಲಿ, ಸದರಿ ಜಾಗದಲ್ಲಿ ಬಸ್ ನಿಲ್ದಾಣ ನಿರ್ಮಿಸುವ ಸಲುವಾಗಿ ಅನುದಾನ ಮಂಜೂರು ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಕೋವಿಡ್-19ರ ಸಾಂಕ್ರಾಮಿಕ ರೋಗ ಹರಡುವಿಕೆಯಿಂದ ಬಸ್‌ಗಳ ಸಂಚಾರ ಕಡಿಮೆಯಾಗಿದ್ದು, ನಿಗಮವು ಆರ್ಥಿಕ ಸಂಕಷ್ಟದಲ್ಲಿರುತ್ತದೆ. ಪ್ರಸ್ತುತ ಒದಗಿಸಿರುವ ಅನುದಾನದಲ್ಲಿ ಮುಂದುವರೆದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ಮುಂಬರುವ ದಿನಗಳಲ್ಲಿ ಅನುದಾನದ ಲಭ್ಯತೆ ಹಾಗೂ ಆದ್ಯತೆಯನುಸಾರ ಬಸ್ ನಿಲ್ದಾಣ ನಿರ್ಮಾಣ ಕಾಮಗಾರಿಯನ್ನು ಕ್ರಿಯಾ ಯೋಜನೆಯಲ್ಲಿ ಅಳವಡಿಸಲು ಕ್ರಮ ವಹಿಸಲಾಗುವುದು. |
| ಇ. | ಬಸ್ ನಿಲ್ದಾಣವನ್ನು ಯಾವ ಕಾಲ ಮಿತಿಯೊಳಗೆ ನಿರ್ಮಿಸಲಾಗುವುದು? | |

ಸಂಖ್ಯೆ: ಟಿಡಿ 10 ಟಿಸಿಕ್ಯೂ 2023

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು



Generated from eOffice by B SREERAMULU, TD-MIN(BS), TRANSPORT MINISTER, Trans on 14/02/2023 06:11 PM

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 302 |
| 2. ಸದಸ್ಯರ ಹೆಸರು | : | ಶ್ರೀ ಶಿವಾನಂದ ಎಸ್. ಪಾಟೀಲ್ |
| 3. ಉತ್ತರಿಸುವ ದಿನಾಂಕ | : | 15.02.2023 |
| 4. ಉತ್ತರಿಸುವ ಸಚಿವರು | : | ಸಹಕಾರ ಸಚಿವರು |

**(ಕೃಷಿ ಇಲಾಖೆಯಿಂದ ವರ್ಗಾವಣೆಯಾದ ಪ್ರಶ್ನೆ)**

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2022-23ನೇ ಸಾಲಿಗೆ ಕೃಷಿ ಇಲಾಖೆಯಿಂದ ಕನಿಷ್ಠ ಬೆಂಬಲ ಬೆಲೆ ನೀಡಿ ಯಾವ ಯಾವ ಬೆಳೆಗಳನ್ನು ಖರೀದಿಸಲು ಸರ್ಕಾರ ನಿರ್ಧರಿಸಿದೆ; | 2022-23ನೇ ಸಾಲಿನಲ್ಲಿ ಪ್ರಸ್ತುತ ಈ ಕೆಳಕಾಣಿಸಿದ ಬೆಳೆಗಳನ್ನು ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಖರೀದಿಸಲಾಗುತ್ತಿದೆ.<br>1. ಹೆಸರುಕಾಳು<br>2. ಉದ್ದು<br>3. ಸೋಯಾಬೀನ್<br>4. ಭತ್ತ<br>5. ರಾಗಿ<br>6. ಬಿಳಿಜೋಳ<br>7. ಉಂಡೆ ಕೊಬ್ಬರಿ<br>8. ಕಡಲೆಕಾಳು |
| ಆ) | ಯಾವ ಯಾವ ಬೆಳೆಗಳಿಗೆ ಪ್ರತಿ ಕ್ವಿಂಟಾಲ್‌ಗೆ ಎಷ್ಟು ಕನಿಷ್ಠ ಬೆಂಬಲ ಬೆಲೆಯನ್ನು ನಿಗದಿಪಡಿಸಲಾಗಿದೆ; | 2022-23ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ವಿವಿಧ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳಿಗೆ ಘೋಷಿಸಿರುವ ಬೆಂಬಲ ಬೆಲೆಯ ವಿವರವನ್ನು **ಅನುಬಂಧ-1** ರಲ್ಲಿ ಒದಗಿಸಲಾಗಿದೆ. |
| ಇ) | ಹಾಗಿದ್ದಲ್ಲಿ, ಖರೀದಿ ಕೇಂದ್ರಗಳನ್ನು ಆರಂಭಿಸಲಾಗಿದೆಯೇ;<br>ಆರಂಭಿಸದಿರಲು ಕಾರಣಗಳೇನು; | 2022-23ನೇ ಸಾಲಿನಲ್ಲಿ ಬೆಂಬಲ ಬೆಲೆ ಯೋಜನೆಯಡಿ ಇದುವರೆಗೆ ಹೆಸರುಕಾಳು, ಉದ್ದು, ಸೋಯಾಬಿನ್, ಉಂಡೆ ಕೊಬ್ಬರಿ ಮತ್ತು ಕಡಲೆಕಾಳು ಬೆಳೆಗಳನ್ನು ಸಹಕಾರ ಇಲಾಖೆಯ ವತಿಯಿಂದ ಹಾಗೂ ಭತ್ತ, ರಾಗಿ ಮತ್ತು ಬಿಳಿಜೋಳಗಳನ್ನು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ವತಿಯಿಂದ ಖರೀದಿಸಲು ಖರೀದಿ ಕೇಂದ್ರಗಳನ್ನು ಆರಂಭಿಸಲಾಗಿದೆ. ಉಳಿದ ಕೃಷಿ ಉತ್ಪನ್ನಗಳಿಗೆ ಬೇಡಿಕೆ ಆಧರಿಸಿ ಖರೀದಿ ಮಾಡುವ ಬಗ್ಗೆ ನಿರ್ಧರಿಸಲಾಗುವುದು. |
| ಈ) | ಖರೀದಿ ಕೇಂದ್ರಗಳನ್ನು ಆರಂಭಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | |

ಸಂಖ್ಯೆ: ಸಿಒ 28 ಎಂಆರ್‌ಇ 2023

(ಎಸ್.ಟಿ. ಸೋಮಶೇಖರ್)
ಸಹಕಾರ ಸಚಿವರು

## ಅನುಬಂಧ-1

**2022-23ನೇ ಸಾಲಿನ ಮುಂಗಾರು/ಹಿಂಗಾರು ಹಂಗಾಮಿನಲ್ಲಿ ಕೇಂದ್ರ ಸರ್ಕಾರವು ವಿವಿಧ ಕೃಷಿ ಮತ್ತು ತೋಟಗಾರಿಕಾ ಉತ್ಪನ್ನಗಳಿಗೆ ಘೋಷಿಸಿರುವ ಬೆಂಬಲ ಬೆಲೆ ವಿವರ**

| ಕ್ರ.ಸಂ | ಎಫ್.ಎ.ಕ್ಯೂ ಗುಣಮಟ್ಟದ ಉತ್ಪನ್ನಗಳು | ಪ್ರಭೇದ | ಕನಿಷ್ಠ ಬೆಂಬಲ ಬೆಲೆ ಪ್ರತಿ ಕ್ವಿಂಟಾಲ್‌ಗೆ (ರೂಗಳಲ್ಲಿ) |
|---|---|---|---|
| 1 | ಭತ್ತ | ಸಾಮಾನ್ಯ | 2,040 |
| | | ಗ್ರೇಡ್-ಎ | 2,060 |
| 2 | ಜೋಳ | ಹೈಬ್ರಿಡ್ | 2,970 |
| | | ಮಾಲ್ದಂಡಿ | 2,990 |
| 3 | ಸಜ್ಜೆ | | 2,350 |
| 4 | ರಾಗಿ | | 3,578 |
| 5 | ಮೆಕ್ಕೆಜೋಳ | | 1,962 |
| 6 | ತೊಗರಿ | | 6,600 |
| 7 | ಹೆಸರು | | 7,755 |
| 8 | ಕಡಲೆ | | 5,335 |
| 9 | ಉದ್ದು | | 6,600 |
| 10 | ಶೇಂಗಾ (ಸಿಪ್ಪೆ ಸಹಿತ) | | 5,850 |
| 11 | ಸೂರ್ಯಕಾಂತಿ | | 6,400 |
| 12 | ಸೋಯಾಬೀನ್ (ಹಳದಿ) | | 4,300 |
| 13 | ಎಳ್ಳು | | 7,830 |
| 14 | ಹುಚ್ಚೆಳ್ಳು | | 7,287 |
| 15 | ಹತ್ತಿ | ಮೀಡಿಯಂ ಸ್ಟೇಪಲ್ | 6,080 |
| 16 | | ಲಾಂಗ್ ಸ್ಟೇಪಲ್ | 6,380 |
| 17 | ಕೊಬ್ಬರಿ | ಮಿಲ್ಲಿಂಗ್ | 10,590 |
| | | ಉಂಡೆ | 11,000 |
| | ಕೊಬ್ಬರಿ (ಜನವರಿ-2023 ರಿಂದ) | ಮಿಲ್ಲಿಂಗ್ | 10,860 |
| | | ಉಂಡೆ | 11,750 |

ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ
ಬೆಂಗಳೂರು.

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 304

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬಸ್ ಘಟಕಗಳ ಸಂಖ್ಯೆ ಎಷ್ಟು; (ಪಟ್ಟಿ ಒದಗಿಸುವುದು) | ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಬಸ್ ಘಟಕಗಳ ಮಾಹಿತಿ ಈ ಕೆಳಕಂಡಂತಿದೆ.<br>ಕ.ರಾ.ರ.ಸಾ.ನಿಗಮ - 82<br>ಬೆಂ.ಮ.ಸಾ.ಸಂಸ್ಥೆ - 48<br>ವಾ.ಕ.ರ.ಸಾ.ಸಂಸ್ಥೆ - 55<br>ಕ.ಕ.ರ.ಸಾ.ನಿಗಮ - 52<br>ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ: |
| ಆ. | 2018-19ನೇ ಸಾಲಿನ ಆಯವ್ಯಯದ ಕಂಡಿಕೆ 423 ರಲ್ಲಿ ಮಂಡಿಸಿರುವಂತೆ ಎಷ್ಟು ಘಟಕಗಳನ್ನು ಸ್ಥಾಪಿಸಲಾಗಿದೆ; (ಪಟ್ಟಿ ಒದಗಿಸುವುದು) | 2018-19ನೇ ಸಾಲಿನ ಆಯವ್ಯಯದ ಕಂಡಿಕೆ 423ರನ್ವಯ ಸ್ಥಾಪಿಸಲಾದ ಘಟಕಗಳ ವಿವರ ಈ ಕೆಳಕಂಡಂತಿದೆ: |

| ಕ್ರ ಸಂ | ನಿಗಮ/ ಸಂಸ್ಥೆ | ಘಟಕಗಳು |
|---|---|---|
| 1 | ಕ.ರಾ.ರ.ಸಾ.ನಿಗಮ | ಶಿಡ್ಲಘಟ್ಟ |
| 2 | ಬೆಂ.ಮ.ಸಾ.ಸಂಸ್ಥೆ | ಮಂಡೂರು |
| | | ಬಿಡದಿ |
| | | ದೇವನಹಳ್ಳಿ |
| | | ನಾಗದಾಸನಹಳ್ಳಿ |
| | | ಸಾದರಮಂಗಲ |
| 3 | ವಾ.ಕ.ರ.ಸಾ.ಸಂಸ್ಥೆ | ಹುಕ್ಕೇರಿ |
| | | ಕಲಘಟಗಿ |
| 4 | ಕ.ಕ.ರ.ಸಾ.ನಿಗಮ | ರಾಯಚೂರು-1 |
| | | ಮಾನವಿ |
| | | ಹೊಸಪೇಟೆ |



Generated from eOffice by B SREERAMULU TD-MIN(BS), TRANSPORT MINISTER Trans on 15/02/2023 12 15 PM

| ಇ. | 2018-19ನೇ ಸಾಲಿನ ಆಯವ್ಯಯದಂತೆ ಇನ್ನೂ ಎಷ್ಟು ಬಸ್ ಘಟಕಗಳನ್ನು ಸ್ಥಾಪಿಸಬೇಕಾಗಿದೆ; | 2018-19ನೇ ಸಾಲಿನ ಆಯವ್ಯಯದಂತೆ ಯಾವುದೇ ಬಸ್ ಘಟಕಗಳನ್ನು ಸ್ಥಾಪಿಸಲು ಬಾಕಿ ಇರುವುದಿಲ್ಲ. |
|---|---|---|
| ಈ. | ಹೊಸ ಬಸ್ ಘಟಕಗಳನ್ನು ಸ್ಥಾಪಿಸಲು ಕೋರಿ ಸರ್ಕಾರದ ಮುಂದೆ ಪ್ರಸ್ತಾವನೆಗಳು ಬಂದಿವೆಯೇ; | ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಹಾಗೂ ಕ.ಕ.ರ.ಸಾ.ನಿಗಮಗಳಲ್ಲಿ ಹೊಸ ಬಸ್ ಘಟಕಗಳನ್ನು ಸ್ಥಾಪಿಸುವ ಪ್ರಸ್ತಾವನೆ ಇದ್ದು, ಸೂಕ್ತ ನಿವೇಶನ ಹಾಗೂ ಅನುದಾನ ಲಭ್ಯತೆಯನ್ನು ಆಧರಿಸಿ ಸಾರಿಗೆ ಅವಶ್ಯಕತೆಗೆ ಅನುಗುಣವಾಗಿ ಬಸ್ ಘಟಕ ಸ್ಥಾಪನೆ ಬಗ್ಗೆ ಸಾಧಕ-ಬಾಧಕಗಳ ಅಧ್ಯಯನದ ವರದಿ ಆಧರಿಸಿ ಪರಿಶೀಲಿಸಲಾಗುವುದು. |
| ಉ. | ಹಾಗಿದ್ದಲ್ಲಿ, ಹೊಸ ಬಸ್ ಘಟಕಗಳನ್ನು ಸ್ಥಾಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಊ. | ವಿಜಯಪುರ ಜಿಲ್ಲೆಯ ನಿಡಗುಂದಿ ಅಥವಾ ಕೋಲಾರದಲ್ಲಿ ಬಸ್ ಘಟಕ ಸ್ಥಾಪಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ವಿಜಯಪುರ ಜಿಲ್ಲೆಯ ನಿಡಗುಂದಿ ಅಥವಾ ಕೋಲಾರದಲ್ಲಿ ಬಸ್ ಘಟಕ ಸ್ಥಾಪಿಸಲು ಆರ್ಥಿಕ ಲಭ್ಯತೆಯನ್ನು ಆಧರಿಸಿ, ಸಾರಿಗೆ ಅವಶ್ಯಕತೆಗೆ ಅನುಗುಣವಾಗಿ ಬಸ್ ಘಟಕ ಸ್ಥಾಪನೆ ಬಗ್ಗೆ ಬಗ್ಗೆ ಸಾಧಕ-ಬಾಧಕಗಳ ಅಧ್ಯಯನದ ವರದಿ ಆಧರಿಸಿ ಪರಿಶೀಲಿಸಲಾಗುವುದು. |

ಸಂಖ್ಯೆ: ಟಿಡಿ 11 ಟಿಸಿಕ್ಯೂ 2022

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 305
ಉತ್ತರಿಸಬೇಕಾದ ದಿನಾಂಕ : 15.02.2023
ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಸವನಬಾಗೇವಾಡಿ ಮತ್ತು ನಿಡಗುಂದಿ ತಾಲ್ಲೂಕುಗಳಿಗೆ ಹೊಸದಾಗಿ ತಾಲ್ಲೂಕು ಕ್ರೀಡಾಂಗಣ ನಿರ್ಮಿಸಲು ಯೋಜಿಸಲಾಗಿದೆಯೇ? | ಹೌದು. |
| ಆ) | ಹಾಗಿದ್ದಲ್ಲಿ, ಸದರಿ ತಾಲ್ಲೂಕುಗಳಲ್ಲಿ ಹೊಸದಾಗಿ ಕ್ರೀಡಾಂಗಣ ನಿರ್ಮಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಬಸವನಬಾಗೇವಾಡಿ ಮತ್ತು ನಿಡಗುಂದಿ ತಾಲ್ಲೂಕುಗಳಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಡಿ ತಾಲ್ಲೂಕು ಕ್ರೀಡಾಂಗಣಗಳನ್ನು ನಿರ್ಮಿಸುವ ಯೋಜನೆಗೆ ಮೆ: ಐಡೆಕ್ ಸಂಸ್ಥೆಯನ್ನು ವಹಿವಾಟು ಸಲಹೆಗಾರರಾಗಿ ದಿನಾಂಕ: 19-05-2022 ರಂದು ನೇಮಕ ಮಾಡಿಕೊಂಡು ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ.<br><br>ಸದರಿ ಸಂಸ್ಥೆಯವರು ಸ್ಥಳ ಅಧ್ಯಯನ ಕೈಗೊಂಡು, ಕರಡು ಆರ್ಥಿಕ ಕಾರ್ಯ ಸಾಧ್ಯತಾ ವರದಿಯನ್ನು ತಯಾರಿಸಿ ಸಲ್ಲಿಸಿದ್ದು, ಪ್ರಸ್ತುತ ಪರಿಶೀಲನೆಯಲ್ಲಿದೆ. |
| ಇ) | ಇದಕ್ಕಾಗಿ ಅನುದಾನ ಮಂಜೂರು ಮಾಡಲು ಕೈಗೊಂಡಿರುವ ಕ್ರಮಗಳೇನು; | ಲಭ್ಯ ವಾರ್ಷಿಕ ಅನುದಾನದಲ್ಲಿ ಕ್ರೀಡಾಂಗಣಗಳಿಲ್ಲದ ಸ್ಥಳಗಳಲ್ಲಿ ಹೊರಾಂಗಣ ತಾಲ್ಲೂಕು ಕ್ರೀಡಾಂಗಣಗಳ ನಿರ್ಮಾಣ ಹಾಗೂ ಅಪೂರ್ಣ ಕಾಮಗಾರಿಗಳನ್ನು ಪೂರ್ಣಗೊಳಿಸಲು ಆದ್ಯತೆ ನೀಡಲಾಗುತ್ತಿದೆ. ಅನುದಾನದ ಲಭ್ಯತೆ ಆಧರಿಸಿ, ತಾಲ್ಲೂಕು ಮಟ್ಟದ ಕ್ರೀಡಾಂಗಣಗಳನ್ನು ನಿರ್ಮಿಸುವ ಬಗ್ಗೆ ಹಂತ-ಹಂತವಾಗಿ ಪರಿಗಣಿಸಲಾಗುವುದು. |
| ಈ) | ಯಾವ ಕಾಲಮಿತಿಯಲ್ಲಿ ತಾಲ್ಲೂಕು ಕ್ರೀಡಾಂಗಣಗಳನ್ನು ನಿರ್ಮಿಸಲಾಗುವುದು? | ಮೇಲಿನ ಉತ್ತರದಿಂದಾಗಿ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್‌ಡಿ-ಇಬಿಬಿ/07/2023

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 306
ಉತ್ತರಿಸಬೇಕಾದ ದಿನಾಂಕ : 15.02.2023
ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. (ದೇವನಹಳ್ಳಿ)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ 2021-22 ನೇ ಸಾಲಿನ ಆಯವ್ಯಯದಲ್ಲಿ ಅಂತರ್ ರಾಷ್ಟ್ರೀಯ ಮಟ್ಟದ ಕ್ರೀಡಾ ಮೂಲ ಸೌಲಭ್ಯ ಸೃಜನೆ ಬಗ್ಗೆ ಘೋಷಣೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | 2021-22 ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-277 ರಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು "ದೇವನಹಳ್ಳಿಯಲ್ಲಿ ಫುಟ್ಬಾಲ್, ಹಾಕಿ ಶೂಟಿಂಗ್, ಈಜು ಮತ್ತು ಟೆನ್ನಿಸ್ ಕ್ರೀಡೆಗಳಿಗೆ ಸಂಬಂಧಿಸಿದಂತೆ ಅಂತರ್ ರಾಷ್ಟ್ರೀಯ ಮಟ್ಟದ ಕ್ರೀಡಾ ಮೂಲಸೌಕರ್ಯಗಳನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಕಲ್ಪಿಸಲಾಗುವುದು" ಎಂದು ಘೋಷಿಸಿರುತ್ತಾರೆ. |
| ಆ) | ಬಂದಿದ್ದಲ್ಲಿ, ಸರ್ಕಾರ ಸಲಹಾ ಸೇವೆಯನ್ನು ಪಡೆಯಲು ಮೂಲ ಸೌಕರ್ಯ ಅಭಿವೃದ್ಧಿ ನಿಗಮ (ಕರ್ನಾಟಕ ನಿಯಮಿತ) (ಐಡೆಕ್) ಸಂಸ್ಥೆ ವಹಿವಾಟು ಸಲಹೆಗಾರರನ್ನು ನೇಮಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? (ಮಾಹಿತಿ ನೀಡುವುದು) | ಬಂದಿದೆ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕು ಕ್ರೀಡಾಂಗಣವನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸುವ ಯೋಜನೆಗೆ ಸಂಬಂಧಿಸಿದಂತೆ ಸಲಹಾ ಸೇವೆಯನ್ನು ಪಡೆಯಲು ವಹಿವಾಟು ಸಲಹೆಗಾರರಾಗಿ (Transaction Advisor) ಮೂಲ ಸೌಕರ್ಯ ಅಭಿವೃದ್ಧಿ ನಿಗಮ ಕರ್ನಾಟಕ ನಿಯಮಿತ (ಐಡೆಕ್) ಸಂಸ್ಥೆಯನ್ನು ದಿನಾಂಕ: 02-08-2021 ರಂದು ನೇಮಕ ಮಾಡಿಕೊಳ್ಳಲಾಗಿರುತ್ತದೆ. |
| ಇ) | ಬಂದಿದ್ದಲ್ಲಿ, ಸದರಿ ಸಂಸ್ಥೆಯವರು ಅದ್ಯಯನ ಮಾಡಿ ದೇವನಹಳ್ಳಿ ಕ್ರೀಡಾಂಗಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಲು ಕಾರ್ಯಸಾಧ್ಯವಿಲ್ಲವೆಂದು ವರದಿ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | ಬಂದಿದೆ .<br>ಐಡೆಕ್ ಸಂಸ್ಥೆಯು ಕಾರ್ಯಸಾಧ್ಯತೆ ಅಧ್ಯಯನ ಕೈಗೊಂಡು ,ದೇವನಹಳ್ಳಿ ಕ್ರೀಡಾಂಗಣವನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಲು ಸರ್ಕಾರದಿಂದ Viability Gap Funding ಅಗತ್ಯವೆಂದು ವರದಿ ನೀಡಿರುತ್ತದೆ. |

| ಈ) | ಬಂದಿದ್ದಲ್ಲಿ, ಈ ಸಂಸ್ಥೆ ಯಾವ ಮಾನದಂಡದಡಿ ಅಧ್ಯಯನ ಮಾಡಿ ವರದಿ ನೀಡಿದೆ; ಅಂತಹ ತಾಂತ್ರಿಕ ವೈಜ್ಞಾನಿಕ ತೊಂದರೆಗಳೇನು; ಈ ಬಗ್ಗೆ ಸರ್ಕಾರದ ನಿಲುವೇನು? (ದಾಖಲೆ ಹಾಗೂ ಸಂಸ್ಥೆ ನೀಡಿರುವ ವರದಿಯೊಂದಿಗೆ ಪೂರ್ಣ ಮಾಹಿತಿ ನೀಡುವುದು) | ಐಡೆಕ್ ಸಂಸ್ಥೆಯು ದೇವನಹಳ್ಳಿ ಕ್ರೀಡಾಂಗಣವನ್ನು ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸುವ ಸಂಬಂಧ ಖಾಸಗಿ ಸಂಸ್ಥೆಯ ಸಹಭಾಗಿತ್ವ ಪಡೆಯುವ ಹಾಗೂ ಕಾರ್ಯಸಾಧ್ಯತೆಯ ಕುರಿತು ಅಧ್ಯಯನ ಮಾಡಿ ವರದಿ ನೀಡಿರುತ್ತಾರೆ.<br><br>ಸಾರ್ವಜನಿಕ-ಖಾಸಗಿ ಸಹಭಾಗಿತ್ವದಲ್ಲಿ ದೇವನಹಳ್ಳಿ ಕ್ರೀಡಾಂಗಣದ ಅಭಿವೃದ್ಧಿಯು ವಾಣಿಜ್ಯ ಕಾರ್ಯ ಸಾಧ್ಯವಾಗಲು (Commercially Viable) ಕೆಳಕಾಣಿಸಿದ ಮಿತಿಗಳನ್ನು ಗುರುತಿಸಲಾಗಿದೆ.<br><br>• ಕ್ರೀಡಾಂಗಣದ ನಿವೇಶನಕ್ಕೆ ರಾಜ್ಯ ಹೆದ್ದಾರಿ ಎಸ್..ಹೆಚ್.97 ಗೆ ಸೂಕ್ತ ಸಂಪರ್ಕ ವ್ಯವಸ್ಥೆ ಇಲ್ಲದಿರುವುದು.<br>• ಉದ್ದೇಶಿತ ಕ್ರೀಡಾಂಗಣದ ಸುತ್ತಲೂ ಹೆಚ್ಚಿನ ಪ್ರಮಾಣದ ಜನವಸತಿ ಇಲ್ಲದಿರುವುದು.<br>• ನೀರಿನ ಕೊರತೆ ಇರುವುದು.<br>• ಸುತ್ತಮುತ್ತಲಿನ ಪ್ರದೇಶದ ಕಡಿಮೆ ವೆಚ್ಚ ಭರಣ ಸಾಮರ್ಥ್ಯ (Low spending capacity of primary catchment area)<br>• ಪಡುಕೋಣೆ-ದ್ರಾವಿಡ್ ಸೆಂಟರ್ ಫಾರ್ ಎಕ್ಸೆಲೆನ್ಸ್ ಹಾಗೂ ಆರ್.ಎಫ್.ಸಿ. ರೆಸಿಡೆನ್ಶಿಯಲ್ ಅಕಾಡೆಮಿಯಂತಹ ಉನ್ನತ ಕಾರ್ಯಕ್ಷಮತೆಯ ಅಕಾಡೆಮಿಗಳು ಇದೇ ಪ್ರದೇಶದಲ್ಲಿ ಅಸ್ತಿತ್ವದಲ್ಲಿರುವುದು.<br>• ಹತ್ತಿರದಲ್ಲಿರುವ ವಿವಿಧ ವಸತಿ ಅಪಾರ್ಟಮೆಂಟ್ ಸಂಕೀರ್ಣಗಳು ತರಬೇತಿಯೊಂದಿಗೆ ಸ್ವಂತ ಕ್ರೀಡಾ ಸೌಲಭ್ಯಗಳನ್ನು ಹೊಂದಿರುವುದು.<br>• ನಿರೀಕ್ಷೆಗಿಂತ ಕಡಿಮೆ ಬಳಕೆದಾರರ ಸಂಭವ.<br>• ಕ್ರೀಡಾ ಚಟುವಟಿಕೆಗಳ ಮೇಲೆ ಕೋವಿಡ್‌ನಿಂದಾದ ವ್ಯತಿರಿಕ್ತ ಪರಿಣಾಮಗಳು.<br><br>ಈ ಹಿನ್ನೆಲೆಯಲ್ಲಿ ಕೆಳಕಾಣಿಸಿದ ಸಂದರ್ಭದಲ್ಲಿ ಮಾತ್ರ ಸಾರ್ವಜನಿಕ-ಖಾಸಗಿ ಅಭಿವೃದ್ಧಿ ಮಾದರಿಯನ್ನು ಪರಿಗಣಿಸಬಹುದಾಗಿದೆ ಎಂದು ಸಲಹಾ ಸಂಸ್ಥೆ ತಿಳಿಸಿದೆ .<br><br>• Viability Gap Funding ಅಡಿಯಲ್ಲಿ ಸರ್ಕಾರವು ಶೇ 20 ರಷ್ಟು ಅನುದಾನವನ್ನು ನೀಡುವುದು.<br>• ಖಾಸಗಿ ಸಹಭಾಗಿ ಸಂಸ್ಥೆಯು ಪ್ರತಿಷ್ಠಿತ ಕ್ರೀಡಾ ಅಕಾಡೆಮಿಗಳು/ವ್ಯಕ್ತಿಗಳೊಂದಿಗೆ ಒಪ್ಪಂದ ಮಾಡಿಕೊಂಡು ಕ್ರೀಡಾಪಟುಗಳ |

| | | |
|---|---|---|
| | | ತರಬೇತಿಯನ್ನು ಹೆಚ್ಚಿಸುವುದು .<br>• ಖಾಸಗಿ ಸಹಭಾಗಿ ಸಂಸ್ಥೆಯು ಯೋಜನಾ ವೆಚ್ಚವನ್ನು (Block Cost Estimate) ಕಡಿಮೆ ಮಾಡಲು ಮಾರುಕಟ್ಟೆ ಸಾಮರ್ಥ್ಯವನ್ನು ಹೊಂದಿರುವುದು.<br>• ಖಾಸಗಿ ಸಹಭಾಗಿ ಸಂಸ್ಥೆಯು ಇತರೆ ಕ್ರೀಡಾ ಅಕಾಡೆಮಿಗಳಿಗೆ ಹೋಲಿಸಿದರೆ ಹೆಚ್ಚಿನ ಬಳಕೆದಾರ ಶುಲ್ಕವನ್ನು ವಿಧಿಸುವ ಸಾಮರ್ಥ್ಯವನ್ನು ಹೊಂದಿರುವುದು.<br><br>ದೇವನಹಳ್ಳಿ ಕ್ರೀಡಾಂಗಣವನ್ನು ಅಭಿವೃದ್ಧಿಪಡಿಸುವ ಬಗ್ಗೆ ಅನುದಾನದ ಲಭ್ಯತೆ ಆಧರಿಸಿ, ಪರಿಗಣಿಸಲಾಗುವುದು. |

ವೈಎಸ್‌ಡಿ-ಇಬಿಬಿ/ 08/2023

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ
ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 307 |
| ಮಾನ್ಯ ಸದಸ್ಯರ ಹೆಸರು | ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್. (ದೇವನಹಳ್ಳಿ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದೇವನಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಹಿಂದುಳಿದ ವರ್ಗದ ಜನಸಂಖ್ಯೆ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; (ಮಾಹಿತಿ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ದೇವನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಭವನಗಳ ನಿರ್ಮಾಣಕ್ಕಾಗಿ ಬಿಡುಗಡೆಯಾದ ಮತ್ತು ವಿನಿಯೋಗಿಸಿರುವ ಅನುದಾನದ ಮಾಹಿತಿ ಈ ಕೆಳಕಂಡಂತಿದೆ. |
| ಆ) | ಬಂದಿದ್ದಲ್ಲಿ, ಕಳೆದ 03 ವರ್ಷಗಳಲ್ಲಿ ಹಿಂದುಳಿದ ವರ್ಗದ ಜನರು ವಾಸಿಸುವ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯ ಕಲ್ಪಿಸಲು ಹಾಗೂ ಭವನಗಳ ನಿರ್ಮಾಣ ಕ್ಕಾಗಿ ಅನುದಾನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು) | (ರೂ. ಲಕ್ಷಗಳಲ್ಲಿ) (see table below) |
| ಇ) | ಬಂದಿದ್ದಲ್ಲಿ, ಕಳೆದ 03 ವರ್ಷಗಳಲ್ಲಿ ಸರ್ಕಾರ ಈ ಜನರ ಅಭಿವೃದ್ಧಿಗಾಗಿ ಮೀಸಲಿರಿಸಿದ ಅನುದಾನವೆಷ್ಟು? (ವಿಧಾನ ಸಭಾ ಕ್ಷೇತ್ರವಾರು, ವರ್ಷವಾರು ಲೆಕ್ಕ ಶೀರ್ಷಿಕೆವಾರು ಪೂರ್ಣ ಮಾಹಿತಿ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ, ಹಿಂದುಳಿದ ವರ್ಗದವರ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಅಭಿವೃದ್ಧಿಗಾಗಿ ಅನುಷ್ಠಾನ ಗೊಳಿಸುತ್ತಿರುವ ವಿವಿಧ ಯೋಜನೆ/ ಕಾರ್ಯಕ್ರಮಗಳಿಗೆ ಕಳೆದ ಮೂರು ವರ್ಷಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಿಗೆ ಬಿಡುಗಡೆಯಾದ ಮತ್ತು ವಿನಿಯೋಗಿಸಿದ ಅನುದಾನದ ಮಾಹಿತಿಯನ್ನು ಅನುಬಂಧದಲ್ಲಿ ನೀಡಲಾಗಿದೆ. |

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಆರ್ಥಿಕ ವರ್ಷ | ಬಿಡುಗಡೆಯಾದ ಅನುದಾನ | ವಿನಿಯೋಗಿಸಿದ ಅನುದಾನ |
|---|---|---|---|
| 1 | 2019-20 | 100.00 | 100.00 |
| 2 | 2020-21 | 100.00 | 100.00 |
| 3 | 2021-22 | 75.00 | 75.00 |
| | ಒಟ್ಟು | **275.00** | **275.00** |

**ಸಂಖ್ಯೆ:ಹಿಂವಕ 86 ಬಿಎಂಎಸ್ 2023**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ನಿಸರ್ಗ ನಾರಾಯಣಸ್ವಾಮಿ ಎಲ್.ಎನ್. (ದೇವನಹಳ್ಳಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:307ಕ್ಕೆ ಅನುಬಂಧ-1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ವಿವಿಧ ಯೋಜನೆ/ ಕಾರ್ಯಕ್ರಮಗಳಿಗೆ ಕಳೆದ ಮೂರು ವರ್ಷಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಧಾನಸಭಾ ಕ್ಷೇತ್ರಗಳಿಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಮತ್ತು ವಿನಿಯೋಗಿಸಿದ ಅನುದಾನದ ಮಾಹಿತಿ

(ರೂ.ಲಕ್ಷಗಳಲ್ಲಿ)

| ಕ್ರ ಸಂ. | ಕಾರ್ಯಕ್ರಮದ ಹೆಸರು | ಹೊಸಕೋಟೆ | | | | | | ದೇವನಹಳ್ಳಿ | | | | | | ದೊಡ್ಡಬಳ್ಳಾಪುರ | | | | | | ನೆಲಮಂಗಲ | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | 2019-20 | | 2020-21 | | 2021-22 | | 2019-20 | | 2020-21 | | 2021-22 | | 2019-20 | | 2020-21 | | 2021-22 | | 2019-20 | | 2020-21 | | 2021-22 | |
| | | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು | ಬಿಡುಗಡೆ | ಖರ್ಚು |
| | ರಾಜ್ಯವಲಯ | | | | | | | | | | | | | | | | | | | | | | | | |
| 1 | ಅಲೆಮಾರಿ / ಅರೆ ಅಲೆಮಾರಿ ಜನಾಂಗದವರ ಅಭಿವೃದ್ಧಿ ಕಾರ್ಯಕ್ರಮಗಳು 2225-03-102-0-12 | 60.10 | 28.34 | 23.11 | 22.43 | 11.45 | 10.84 | 79.26 | 76.65 | 311.45 | 316.06 | 5.51 | 5.11 | 89.66 | 87.36 | 35.24 | 33.88 | 21.12 | 19.88 | 131.32 | 128.90 | 16.86 | 16.54 | 7.62 | 7.24 |
| 2 | ದೇವರಾಜ ಅರಸು ಭವನ ನಿರ್ಮಾಣ (ತಾಲ್ಲೂಕು ಕಛೇರಿ)-4225-03-283-0-01 | 69.90 | 69.90 | 0.00 | 0.00 | 0.00 | 0.00 | 100.00 | 100.00 | 100.00 | 100.00 | 75.00 | 75.00 | 0.00 | 0.00 | 0.00 | 0.00 | 0.00 | 0.00 | 69.90 | 69.90 | 0.00 | 0.00 | 0.00 | 0.00 |
| 3 | ವಿವಿಧ ಸಮುದಾಯಗಳ ಅಭಿವೃದ್ಧಿ 2225-03-001-0-05 | 10.00 | 10.00 | 0.00 | 0.00 | 15.00 | 15.00 | 0.00 | 0.00 | 0.00 | 0.00 | 0.00 | 0.00 | 10.00 | 10.00 | 0.00 | 0.00 | 27.50 | 27.50 | 0.00 | 0.00 | 5.00 | 5.00 | 37.50 | 37.50 |
| 4 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಮೆಟ್ರಿಕ್ ನಂತರ ವಿದ್ಯಾರ್ಥಿ ವೇತನ (ಕೇಂ.ಪು.ಯೋ) 2225-03-277-2-51 | 11.82 | 8.59 | 0.00 | 0.00 | 0.00 | 0.00 | 15.38 | 15.37 | 0.00 | 0.00 | 0.00 | 0.00 | 17.99 | 14.25 | 0.00 | 0.00 | 0.00 | 0.00 | 9.51 | 7.66 | 0.00 | 0.00 | 0.00 | 0.00 |
| 5 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ (ಕೇಂ.ಪು.ಯೋ) 2225-03-277-2-52 | 26.08 | 26.05 | 6.10 | 5.83 | 18.28 | 18.28 | 21.64 | 21.44 | 4.51 | 4.31 | 14.76 | 14.76 | 61.35 | 61.12 | 11.81 | 11.26 | 33.31 | 33.31 | 34.92 | 34.92 | 8.09 | 7.55 | 27.04 | 27.04 |
| 6 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿ ನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ 2225-03-277-2-53 | 59.89 | 59.89 | 29.89 | 29.89 | 3.07 | 3.05 | 125.36 | 125.36 | 57.34 | 57.34 | 6.63 | 6.63 | 21.66 | 21.66 | 11.27 | 11.26 | 1.50 | 1.50 | 23.14 | 23.14 | 6.99 | 6.96 | 1.00 | 1.00 |
| 7 | ಆಹಾರ ಮತ್ತು ವಸತಿ ಸಹಾಯ - ವಿದ್ಯಾಸಿರಿ 2225-03-283-0-03 | 2.85 | 2.85 | 0.00 | 0.00 | 0.00 | 0.00 | 5.94 | 5.94 | 0.00 | 0.00 | 0.00 | 0.00 | 23.94 | 23.94 | 0.00 | 0.00 | 0.00 | 0.00 | 0.45 | 0.45 | 0.00 | 0.00 | 0.00 | 0.00 |
| 8 | ತಾಲ್ಲೂಕಿನಲ್ಲಿರುವ ಹಿಂದುಳಿದ ವರ್ಗಗಳ ಕಲ್ಯಾಣ ಕಛೇರಿಗಳು-2225-03-277-3-11 | 9.43 | 9.43 | 4.92 | 4.91 | 10.78 | 9.32 | 9.43 | 9.43 | 4.92 | 4.92 | 8.14 | 8.11 | 9.43 | 9.43 | 4.92 | 4.92 | 7.65 | 7.47 | 9.43 | 9.43 | 4.92 | 4.92 | 9.69 | 9.60 |
| 9 | ತರಬೇತಿ, ಅರಿವು ಮತ್ತು ಪ್ರೋತ್ಸಾಹ-ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಕಾರ್ಯಕ್ರಮ 2225-03-277-2-37 | 1.68 | 1.68 | 0.00 | 0.00 | 0.00 | 0.00 | 24.76 | 24.72 | 5.90 | 5.89 | 15.29 | 15.29 | 2.60 | 2.56 | 0.00 | 0.00 | 0.00 | 0.00 | 2.15 | 2.08 | 0.00 | 0.00 | 0.00 | 0.00 |
| 10 | ಹಾಸ್ಟೆಲ್ ಗಳ ಕಟ್ಟಡಗಳ ನಿರ್ಮಾಣ 4225-03-277-2-06 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 97.50 | 97.50 | 0.00 | 0.00 | 0.00 | 0.00 | 100.00 | 100.00 | 99.90 | 99.90 | 0.00 | 0.00 |
| | ಒಟ್ಟು (ಅ) | 251.75 | 216.73 | 64.02 | 63.06 | 58.58 | 56.49 | 381.77 | 378.91 | 484.12 | 488.52 | 125.33 | 124.90 | 334.13 | 327.82 | 63.24 | 61.32 | 91.08 | 89.66 | 380.82 | 376.48 | 141.76 | 140.87 | 82.85 | 82.38 |
| | ಜಿಲ್ಲಾ ವಲಯ | | | | | | | | | | | | | | | | | | | | | | | | |
| 1 | ಕಾರ್ಯ ನಿರ್ವಾಹಕ ಸಿಬ್ಬಂದಿ 2225-00-103-0-39 | 0.00 | 0.00 | 0.00 | 0.00 | 0.00 | 0.00 | 35.00 | 34.00 | 42.93 | 42.91 | 47.03 | 46.98 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 2 | ಹಿಂದುಳಿದ ವರ್ಗಗಳ ತಾಲ್ಲೂಕು ವಿಸ್ತರಣಾ ಕಛೇರಿಗಳು -2225-00-103-0-74 | 3.34 | 3.18 | 5.00 | 4.92 | 10.25 | 8.87 | 7.00 | 6.24 | 4.50 | 4.42 | 6.11 | 6.11 | 6.00 | 5.48 | 7.38 | 7.26 | 5.65 | 5.24 | 9.00 | 8.88 | 9.00 | 8.94 | 5.01 | 4.64 |
| 3 | ಹಿಂದುಳಿದ ವರ್ಗ ವಿದ್ಯಾರ್ಥಿ ನಿಲಯಗಳ ನಿರ್ವಹಣೆ 2225-00-103-0-26 | 179.54 | 165.32 | 202.50 | 198.56 | 164.11 | 164.05 | 196.95 | 192.45 | 189.49 | 186.12 | 420.78 | 410.28 | 195.60 | 190.30 | 193.45 | 191.28 | 288.59 | 261.26 | 107.50 | 101.38 | 123.86 | 120.06 | 107.00 | 101.21 |
| 4 | ಆಶ್ರಮಶಾಲೆಗಳು -2225-00-103-0-41 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 5 | ಅನಾಥಾಲಯಗಳಿಗೆ ಸಹಾಯಧನ 2225-00-103-0-73 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 10.37 | 0.00 | 10.37 | 0.00 | 10.37 | 0.00 |
| 6 | ಹೊಲಿಗೆ ತರಬೇತಿ ಕೇಂದ್ರಗಳು 2225-00-103-0-78 | 6.27 | 6.08 | 2.82 | 2.82 | 2.82 | 2.82 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 7 | ಇತರ ಹಿಂದುಳಿದ ವರ್ಗಗಳಿಗೆ ಇತರ ರಿಯಾಯ್ತಿಗಳು 2225-00-103-0-28 | 3.71 | 3.71 | 66.81 | 66.81 | 57.72 | 57.72 | 16.71 | 16.71 | 160.48 | 160.48 | 150.68 | 150.68 | 13.90 | 13.90 | 132.62 | 132.62 | 114.61 | 114.61 | 5.51 | 5.51 | 40.82 | 40.82 | 77.74 | 77.74 |
| 8 | ಹೊಲಿಗೆ ತರಬೇತಿ ಕೇಂದ್ರಗಳ ನಿರ್ವಹಣೆ 2225-00-103-0-53 | 0.00 | 0.00 | 4.15 | 4.15 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 9 | ವಕೀಲರಿಗೆ ಪ್ರೋತ್ಸಾಹಧನ 2225-00-103-0-58 | 0.00 | 0.00 | 0.00 | 0.00 | 0.00 | 0.00 | 19.20 | 17.16 | 19.20 | 15.72 | 19.20 | 18.52 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 10 | ದೇವರಾಜ ಅರಸುರವರ ಹುಟ್ಟು ಹಬ್ಬದ ದಿನಾಚರಣೆ ಮತ್ತು 15 ಅಂಶಗಳ ಕಾರ್ಯಕ್ರಮದ ಮೇಲೆ ವಿಚಾರಗೋಷ್ಠಿ 2225-00-103-0-56 | 0.00 | 0.00 | 0.00 | 0.00 | 0.00 | 0.00 | 1.00 | 1.00 | 1.00 | 1.00 | 1.00 | 1.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 11 | ಕಟ್ಟಡಗಳ ನಿರ್ವಹಣೆ - 2225-00-103-0-40 | 6.46 | 6.46 | 7.00 | 7.00 | 0.00 | 0.00 | 13.67 | 13.67 | 21.23 | 21.23 | 0.00 | 0.00 | 9.30 | 9.30 | 2.98 | 2.98 | 37.23 | 37.23 | 7.80 | 7.80 | 6.02 | 6.02 | 0.00 | 0.00 |
| 12 | ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ಸುಧಾರಣೆ 2225-00-103-0-72 | 7.50 | 7.50 | 0.00 | 0.00 | 0.00 | 0.00 | 7.50 | 7.50 | 0.00 | 0.00 | 0.00 | 0.00 | 7.50 | 7.40 | 0.00 | 0.00 | 0.00 | 0.00 | 7.50 | 7.50 | 0.00 | 0.00 | 0.00 | 0.00 |
| 13 | ವಿದ್ಯಾರ್ಥಿ ನಿಲಯಗಳಲ್ಲಿರುವವರಿಗೆ ಪ್ರೋತ್ಸಾಹಕ 2225-00-103-0-79 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 14 | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ-2225-00-103-0-66 | 35.45 | 20.21 | 0.00 | 0.00 | 0.00 | 0.00 | 35.48 | 30.15 | 0.00 | 0.00 | 0.00 | 0.00 | 35.48 | 35.39 | 0.00 | 0.00 | 0.00 | 0.00 | 35.45 | 35.43 | 0.00 | 0.00 | 0.00 | 0.00 |
| | ಒಟ್ಟು (ಆ) | 242.27 | 212.46 | 288.28 | 284.26 | 234.90 | 233.46 | 332.51 | 318.88 | 438.83 | 431.88 | 644.80 | 633.57 | 267.78 | 261.77 | 336.43 | 334.14 | 446.08 | 418.34 | 183.13 | 166.50 | 190.07 | 175.84 | 200.12 | 183.59 |
| | ಒಟ್ಟು (ಅ) +(ಆ) | 494.02 | 429.19 | 352.30 | 347.32 | 293.48 | 289.95 | 714.28 | 697.79 | 922.95 | 920.40 | 770.13 | 758.47 | 601.91 | 589.59 | 399.67 | 395.46 | 537.16 | 508.00 | 563.95 | 542.98 | 331.83 | 316.71 | 282.97 | 265.97 |

## ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ. ನಿಸರ್ಗ ನಾರಾಯಣಸ್ವಾಮಿ ಎಲ್. ಎನ್, (ದೇವನಹಳ್ಳಿ) ರವರ ಪ್ರಶ್ನೆ ಸಂಖ್ಯೆ: 307ಕ್ಕೆ ಉತ್ತರಿಸುವ ಕುರಿತು

# ಅನುಬಂಧ-1

| ಕ್ರ ಸಂ. | ವಿಧಾನಸಭಾ ಕ್ಷೇತ್ರಗಳ ಹೆಸರು | ಅಲೆಮಾರಿ/ಅರೆ ಅಲೆಮಾರಿ ಜನಾಂಗದವರ ಅಭಿವೃದ್ಧಿ ಕಾರ್ಯಕ್ರಮಗಳು 2225-03-102-0-12 | | | | | | ದೇವರಾಜ ಅರಸು ಭವನ ನಿರ್ಮಾಣ 4225-03-283-0-01 | | | | | |
|---|---|---|---|---|---|---|---|---|---|---|---|---|---|
| | | 2019-20 | | 2020-21 | | 2021-22 | | 2019-20 | | 2020-21 | | 2021-22 | |
| | | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ |
| 1 | ಹೊಸಕೋಟೆ | 60.10 | 28.34 | 23.11 | 22.43 | 11.45 | 10.84 | 69.90 | 69.90 | 0.00 | 0.00 | 0.00 | 0.00 |
| 2 | ದೇವನಹಳ್ಳಿ | 79.26 | 76.65 | 311.45 | 316.06 | 5.51 | 5.11 | 100.00 | 100.00 | 100.00 | 100.00 | 75.00 | 75.00 |
| 3 | ದೊಡ್ಡಬ | 89.66 | 87.36 | 35.24 | 33.88 | 21.12 | 19.88 | 0.00 | 0.00 | 0.00 | 0.00 | 0.00 | 0.00 |
| 4 | ನೆಲಮಂಗ | 131.32 | 128.90 | 16.86 | 16.54 | 7.62 | 7.24 | 69.90 | 69.90 | 0.00 | 0.00 | 0.00 | 0.00 |

| ಕ್ರ ಸಂ. | ವಿಧಾನಸಭಾ ಕ್ಷೇತ್ರಗಳ ಹೆಸರು | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ 2225-03-277-2-52 | | | | | | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿ ನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ 2225-03-277-2-53 | | | | | |
|---|---|---|---|---|---|---|---|---|---|---|---|---|---|
| | | 2019-20 | | 2020-21 | | 2021-22 | | 2019-20 | | 2020-21 | | 2021-22 | |
| | | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ |
| 1 | ಹೊಸಕೋಟೆ | 26.08 | 26.05 | 6.10 | 5.83 | 18.28 | 18.28 | 59.89 | 59.89 | 29.89 | 29.89 | 3.07 | 3.05 |
| 2 | ದೇವನಹಳ್ಳಿ | 21.64 | 21.44 | 4.51 | 4.31 | 14.76 | 14.76 | 125.36 | 125.36 | 57.34 | 57.34 | 6.63 | 6.63 |
| 3 | ದೊಡ್ಡಬ | 61.35 | 61.12 | 11.81 | 11.26 | 33.31 | 33.31 | 21.66 | 21.66 | 11.27 | 11.26 | 1.50 | 1.50 |
| 4 | ನೆಲಮಂಗ | 34.92 | 34.92 | 8.09 | 7.55 | 27.04 | 27.04 | 23.14 | 23.14 | 6.99 | 6.96 | 1.00 | 1.00 |

| ಕ್ರ ಸಂ. | ವಿಧಾನಸಭಾ ಕ್ಷೇತ್ರಗಳ ಹೆಸರು | ಜಿಲ್ಲಾ ಕಛೇರಿ 2225-00-103-0-39 | | | | | | ಹಿಂದುಳಿದ ವರ್ಗಗಳ ತಾಲ್ಲೂಕು ವಿಸ್ತರಣಾ ಕಛೇರಿಗಳು 2225-00-103-0-74 | | | | | |
|---|---|---|---|---|---|---|---|---|---|---|---|---|---|
| | | 2019-20 | | 2020-21 | | 2021-22 | | 2019-20 | | 2020-21 | | 2021-22 | |
| | | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ | ಬಿಡುಗಡೆ | ವೆಚ್ಚ |
| 1 | ಹೊಸಕೋಟೆ | 0.00 | 0.00 | 0.00 | 0.00 | 0.00 | 0.00 | 3.34 | 3.18 | 5.00 | 4.92 | 10.25 | 8.87 |
| 2 | ದೇವನಹಳ್ಳಿ | 35.00 | 34.00 | 42.93 | 42.91 | 47.03 | 46.98 | 7.00 | 6.24 | 4.50 | 4.42 | 6.11 | 6.11 |
| 3 | ದೊಡ್ಡಬ | 0.00 | 0.00 | 0.00 | 0.00 | 0.00 | 0.00 | 6.00 | 5.48 | 7.38 | 7.26 | 5.65 | 5.24 |
| 4 | ನೆಲಮಂಗ | 0.00 | 0.00 | 0.00 | 0.00 | 0.00 | 0.00 | 9.00 | 8.88 | 9.00 | 8.94 | 5.01 | 4.64 |

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 336 |
| ಸದಸ್ಯರ ಹೆಸರು : | ಶ್ರೀ ಉಮಾನಾಥ್ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ : | 15.02.2023 |
| ಉತ್ತರಿಸುವ ಸಚಿವರು : | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅರಿವು ಶೈಕ್ಷಣಿಕ ಸಾಲ ಯೋಜನೆಯ ಮೂಲಕ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಫಲಾನುಭವಿ ವಿದ್ಯಾರ್ಥಿಗಳಿಗೆ ಯೋಜನಾ ಸೌಲಭ್ಯಗಳನ್ನು ಒದಗಿಸಿಕೊಡಲಾಗಿದೆ; (ಜಿಲ್ಲಾವಾರು ಸಂಖ್ಯಾ ವಿವರಗಳನ್ನು ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವ್ಯಾಪ್ತಿಯ ನಿಗಮಗಳಾದ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ, ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ, ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ, ಕರ್ನಾಟಕ ಉಪ್ಪಾರ ಸಮುದಾಯಗಳ ಅಭಿವೃದ್ಧಿ ನಿಗಮ, ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮಗಳಲ್ಲಿ ಕಳೆದ ಎರಡು ವರ್ಷಗಳಲ್ಲಿ ಅರಿವು ಶೈಕ್ಷಣಿಕ ಸಾಲ ಯೋಜನೆಯ ಮೂಲಕ ಒಟ್ಟು 7367 ಫಲಾನುಭವಿ ವಿದ್ಯಾರ್ಥಿಗಳಿಗೆ ಯೋಜನಾ ಸೌಲಭ್ಯ ಒದಗಿಸಿದ್ದು, ಫಲಾನುಭವಿ ವಿದ್ಯಾರ್ಥಿಗಳ ಜಿಲ್ಲಾವಾರು ವಿವರವನ್ನು **ಅನುಬಂಧದ**ಲ್ಲಿ ನೀಡಲಾಗಿದೆ. |
| ಆ) | ಅರಿವು ಶೈಕ್ಷಣಿಕ ಸಾಲ ಯೋಜನೆಯ ಅನುಷ್ಠಾನದಲ್ಲಿ ವಿದ್ಯಾರ್ಥಿಗಳಿಗೆ ಸಕಾಲಿಕವಾಗಿ ಹಣ ಮಂಜೂರು ಮಾಡಲು ಸರ್ಕಾರದ ಕ್ರಮಗಳು ಯಾವುವು; | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವ್ಯಾಪ್ತಿಯ ನಿಗಮಗಳಿಂದ ಅರಿವು ಶೈಕ್ಷಣಿಕ ಸಾಲ ಯೋಜನೆಯ ಅನುಷ್ಠಾನದಲ್ಲಿ ವಿದ್ಯಾರ್ಥಿಗಳಿಗೆ ಡಿಬಿಟಿ (ನೇರ ನಗದು ವರ್ಗಾವಣೆ) ಮುಖಾಂತರ ಸಾಲ ಒದಗಿಸಲಾಗುತ್ತದೆ. |
| ಇ) | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಆರ್ಥಿಕ ನೆರವಿನ ಪ್ರೋತ್ಸಾಹ ನೀಡಿಕೆಯ ಇತರ ಯೋಜನಾ ಸೌಲಭ್ಯಗಳು ಯಾವುವು; | ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಆರ್ಥಿಕ ನೆರವಿನ ಪ್ರೋತ್ಸಾಹ ನೀಡಿಕೆಯ ಸೌಲಭ್ಯಗಳಾದ ಅರಿವು ಶೈಕ್ಷಣಿಕ ಸಾಲ ಯೋಜನೆಯ ಜೊತೆಗೆ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಸಾಲ ಯೋಜನೆಯನ್ನು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಹಾಗೂ ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮಗಳಿಂದ ಮಾತ್ರ ಅನುಷ್ಠಾನಗೊಳಿಸಲಾಗುತ್ತಿದೆ. |
| ಈ) | ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡಲಾಗಿದೆ? | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವ್ಯಾಪ್ತಿಯ ನಿಗಮಗಳಲ್ಲಿ ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಅರಿವು ಶೈಕ್ಷಣಿ ಸಾಲ ಯೋಜನೆಯ ಮೂಲಕ ಒಟ್ಟು 7367 ಫಲಾನುಭವಿ ವಿದ್ಯಾರ್ಥಿಗಳಿಗೆ ಯೋಜನಾ ಸೌಲಭ್ಯ ಒದಗಿಸಿದ್ದು, ಜಿಲ್ಲಾವಾರು ವಿವರವನ್ನು **ಅನುಬಂಧದ**ಲ್ಲಿ ನೀಡಲಾಗಿದೆ. |

ಸಂಖ್ಯೆ:ಹಿಂವಕ 73 ಬಿಂಎಂಎಸ್ 2023

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

ಅನುಬಂಧ -

**ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ), ಬೆಂಗಳೂರು.**

**ಅನುಬಂಧ-1**

**ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:336ಕ್ಕೆ ನಿಗಮದ ಉತ್ತರ.**

ಅರಿವು ಶೈಕ್ಷಣಿಕ ಸಾಲ ಯೋಜನೆಯ ಮೂಲಕ ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಸಾಲ ಮಂಜೂರಾದ ವಿದ್ಯಾರ್ಥಿಗಳ ಸಂಖ್ಯೆ

| ಕ್ರ. ಸಂ | ಜಿಲ್ಲೆಗಳ ಹೆಸರು | ವಿದ್ಯಾರ್ಥಿಗಳ ಸಂಖ್ಯೆ | |
|---|---|---|---|
| | | 2020-21 | 2021-22 |
| 1. | ಬೆಂಗಳೂರು ಉತ್ತರ | 154 | 127 |
| 2. | ಬೆಂಗಳೂರು ದಕ್ಷಿಣ | 198 | 127 |
| 3. | ಬೆಂಗಳೂರು ಗ್ರಾಮಾಂತರ | 84 | 114 |
| 4. | ರಾಮನಗರ | 26 | 20 |
| 5. | ಶಿವಮೊಗ್ಗ | 118 | 116 |
| 6. | ತುಮಕೂರು | 135 | 123 |
| 7. | ಚಿತ್ರದುರ್ಗ | 100 | 80 |
| 8. | ಕೋಲಾರ | 58 | 48 |
| 9. | ಚಿಕ್ಕಬಳ್ಳಾಪುರ | 87 | 87 |
| 10. | ದಾವಣಗೆರೆ | 48 | 57 |
| 11. | ಮೈಸೂರು | 230 | 110 |
| 12. | ಮಂಡ್ಯ | 79 | 55 |
| 13. | ಚಾಮರಾಜನಗರ | 80 | 40 |
| 14. | ಉಡುಪಿ | 472 | 236 |
| 15. | ಹಾಸನ | 82 | 36 |
| 16. | ಚಿಕ್ಕಮಗಳೂರು | 101 | 52 |
| 17. | ದಕ್ಷಿಣ ಕನ್ನಡ | 448 | 215 |
| 18. | ಕೊಡಗು | 48 | 21 |
| 19. | ಬೆಳಗಾವಿ | 342 | 179 |
| 20. | ಹಾವೇರಿ | 91 | 70 |
| 21. | ಗದಗ | 100 | 60 |
| 22. | ವಿಜಯಪುರ | 140 | 75 |
| 23. | ಬಾಗಲಕೋಟೆ | 221 | 133 |
| 24. | ಧಾರವಾಡ | 138 | 78 |
| 25. | ಉತ್ತರ ಕನ್ನಡ | 132 | 76 |
| 26. | ಕಲಬುರಗಿ | 55 | 52 |
| 27. | ಬಳ್ಳಾರಿ | 138 | 118 |
| 28. | ಬೀದರ್ | 59 | 27 |
| 29. | ರಾಯಚೂರು | 100 | 82 |
| 30. | ಕೊಪ್ಪಳ | 82 | 76 |
| 31. | ಯಾದಗಿರಿ | 42 | 26 |
| | ಒಟ್ಟು | **4188** | **2716** |

**ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ (ನಿ), ಬೆಂಗಳೂರು.**

**ಅನುಬಂಧ-**

**ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:336ಕ್ಕೆ ನಿಗಮದ ಉತ್ತರ.**

ಅರಿವು ಶೈಕ್ಷಣಿಕ ಸಾಲ ಯೋಜನೆಯ ಮೂಲಕ ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಸಾಲ ಮಂಜೂರಾದ ವಿದ್ಯಾರ್ಥಿಗಳ ಸಂಖ್ಯೆ

| ಕ್ರ. ಸಂ | ಜಿಲ್ಲೆಗಳ ಹೆಸರು | ವಿದ್ಯಾರ್ಥಿಗಳ ಸಂಖ್ಯೆ | |
|---|---|---|---|
| | | 2020-21 | 2021-22 |
| 1. | ಬೆಂಗಳೂರು ಉತ್ತರ | 2 | 2 |
| 2. | ಬೆಂಗಳೂರು ದಕ್ಷಿಣ | 6 | 4 |
| 3. | ಬೆಂಗಳೂರು ಗ್ರಾಮಾಂತರ | 0 | 0 |
| 4. | ರಾಮನಗರ | 0 | 0 |
| 5. | ಶಿವಮೊಗ್ಗ | 0 | 0 |
| 6. | ತುಮಕೂರು | 3 | 3 |
| 7. | ಚಿತ್ರದುರ್ಗ | 1 | 1 |
| 8. | ಕೋಲಾರ | 0 | 0 |
| 9. | ಚಿಕ್ಕಬಳ್ಳಾಪುರ | 2 | 2 |
| 10. | ದಾವಣಗೆರೆ | 0 | 0 |
| 11. | ಮೈಸೂರು | 3 | 3 |
| 12. | ಮಂಡ್ಯ | 2 | 1 |
| 13. | ಚಾಮರಾಜನಗರ | 1 | 1 |
| 14. | ಉಡುಪಿ | 3 | 3 |
| 15. | ಹಾಸನ | 0 | 0 |
| 16. | ಚಿಕ್ಕಮಗಳೂರು | 1 | 1 |
| 17. | ದಕ್ಷಿಣ ಕನ್ನಡ | 2 | 2 |
| 18. | ಕೊಡಗು | 0 | 1 |
| 19. | ಬೆಳಗಾವಿ | 1 | 1 |
| 20. | ಹಾವೇರಿ | 0 | 0 |
| 21. | ಗದಗ | 0 | 0 |
| 22. | ವಿಜಯಪುರ | 0 | 0 |
| 23. | ಬಾಗಲಕೋಟೆ | 2 | 2 |
| 24. | ಧಾರವಾಡ | 0 | 0 |
| 25. | ಉತ್ತರ ಕನ್ನಡ | 0 | 0 |
| 26. | ಕಲಬುರಗಿ | 0 | 0 |
| 27. | ಬಳ್ಳಾರಿ | 1 | 1 |
| 28. | ಬೀದರ್ | 0 | 0 |
| 29. | ರಾಯಚೂರು | 0 | 0 |
| 30. | ಕೊಪ್ಪಳ | 0 | 0 |
| 31. | ಯಾದಗಿರಿ | 0 | 0 |
| | **ಒಟ್ಟು** | **30** | **28** |

**ಕರ್ನಾಟಕ ಅಲೆಮಾರಿ ಮತ್ತು ಅರೆಅಲೆಮಾರಿ ಅಭಿವೃದ್ಧಿ ನಿಗಮ (ನಿ), ಬೆಂಗಳೂರು.**

**ಅನುಬಂಧ-**

**ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:336ಕ್ಕೆ ನಿಗಮದ ಉತ್ತರ.**

ಅರಿವು ಶೈಕ್ಷಣಿಕ ಸಾಲ ಯೋಜನೆಯ ಮೂಲಕ ಕಳೆದ ಎರಡು ಆರ್ಥಿಕ ವರ್ಷಗಳಲ್ಲಿ ಸಾಲ ಮಂಜೂರಾದ ವಿದ್ಯಾರ್ಥಿಗಳ ಸಂಖ್ಯೆ

| ಕ್ರ. ಸಂ | ಜಿಲ್ಲೆಗಳ ಹೆಸರು | ವಿದ್ಯಾರ್ಥಿಗಳ ಸಂಖ್ಯೆ | |
|---|---|---|---|
| | | 2020-21 | 2021-22 |
| 1. | ಬೆಂಗಳೂರು ಉತ್ತರ | 1 | 1 |
| 2. | ಬೆಂಗಳೂರು ದಕ್ಷಿಣ | 3 | 2 |
| 3. | ಬೆಂಗಳೂರು ಗ್ರಾಮಾಂತರ | 1 | 1 |
| 4. | ರಾಮನಗರ | 0 | 1 |
| 5. | ಶಿವಮೊಗ್ಗ | 1 | 1 |
| 6. | ತುಮಕೂರು | 4 | 2 |
| 7. | ಚಿತ್ರದುರ್ಗ | 2 | 3 |
| 8. | ಕೋಲಾರ | 1 | 1 |
| 9. | ಚಿಕ್ಕಬಳ್ಳಾಪುರ | 7 | 8 |
| 10. | ದಾವಣಗೆರೆ | 0 | 0 |
| 11. | ಮೈಸೂರು | 2 | 1 |
| 12. | ಮಂಡ್ಯ | 0 | 0 |
| 13. | ಚಾಮರಾಜನಗರ | 1 | 1 |
| 14. | ಉಡುಪಿ | 0 | 1 |
| 15. | ಹಾಸನ | 0 | 0 |
| 16. | ಚಿಕ್ಕಮಗಳೂರು | 1 | 1 |
| 17. | ದಕ್ಷಿಣ ಕನ್ನಡ | 1 | 1 |
| 18. | ಕೊಡಗು | 1 | 0 |
| 19. | ಬೆಳಗಾವಿ | 0 | 0 |
| 20. | ಹಾವೇರಿ | 0 | 0 |
| 21. | ಗದಗ | 0 | 0 |
| 22. | ವಿಜಯಪುರ | 0 | 0 |
| 23. | ಬಾಗಲಕೋಟೆ | 0 | 0 |
| 24. | ಧಾರವಾಡ | 3 | 3 |
| 25. | ಉತ್ತರ ಕನ್ನಡ | 0 | 0 |
| 26. | ಕಲಬುರಗಿ | 0 | 0 |
| 27. | ಬಳ್ಳಾರಿ | 2 | 2 |
| 28. | ಬೀದರ್ | 0 | 0 |
| 29. | ರಾಯಚೂರು | 0 | 0 |
| 30. | ಕೊಪ್ಪಳ | 1 | 1 |
| 31. | ಯಾದಗಿರಿ | 1 | 1 |
| | ಒಟ್ಟು | **33** | **32** |

ವ್ಯವಸ್ಥಾಪಕ ನಿರ್ದೇಶಕರು.

## ಅನುಬಂಧ–

## ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ

(ರೂ.ಲಕ್ಷಗಳಲ್ಲಿ)

| ಕ್ರಸಂ | ಜಿಲ್ಲೆಯ ಹೆಸರು | ಜನಸಂಖ್ಯೆ (1984) | 2019–20ನೇ ಸಾಲಿನ ಅರಿವು ಶೈಕ್ಷಣಿಕ ಸಾಲ | | 2020–21ನೇ ಸಾಲಿನ ಅರಿವು ಶೈಕ್ಷಣಿಕ ಸಾಲ | |
|---|---|---|---|---|---|---|
| | | | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| 1 | ಬೆಂಗಳೂರು ಉತ್ತರ | 1466 | | | 1 | 0.58 |
| 2 | ಬೆಗಳೂರು ದಕ್ಷಿಣ | | 1 | 0.77 | 1 | 0.58 |
| 3 | ಬೆಂಗಳೂರು ಗ್ರಾಮಾಂತರ | 1466 | 0 | – | 1 | 0.58 |
| 4 | ರಾಮನಗರ | 1466 | 0 | – | 1 | 0.58 |
| 5 | ಶಿವಮೊಗ್ಗ | 23492 | 5 | 3.47 | 2 | 1.16 |
| 6 | ತುಮಕೂರು | 33387 | 5 | 3.64 | 3 | 1.74 |
| 7 | ಚಿತ್ರದುರ್ಗ | 16859 | 1 | 0.85 | 1 | 0.58 |
| 8 | ಕೋಲಾರ | 2016 | 0 | – | 1 | 0.58 |
| 9 | ಚಿಕ್ಕಬಳ್ಳಾಪುರ | 2016 | 0 | – | 1 | 0.58 |
| 10 | ದಾವಣಗೆರೆ | 16859 | 10 | 9.96 | 2 | 1.16 |
| 11 | ಮೈಸೂರು | 61448 | 2 | 1.78 | 4 | 2.32 |
| 12 | ಮಂಡ್ಯ | 10842 | 3 | 2.29 | 2 | 1.16 |
| 13 | ಚಾಮರಾನಗರ | 61448 | 13 | 12.89 | 4 | 2.32 |
| 14 | ಉಡುಪಿ | 2029 | 0 | – | 0 | – |
| 15 | ಹಾಸನ | 17180 | 1 | 0.34 | 3 | 1.74 |
| 16 | ಚಿಕ್ಕಮಗಳೂರು | 25789 | 2 | 1.31 | 3 | 1.74 |
| 17 | ದಕ್ಷಿಣ ಕನ್ನಡ | 2028 | 1 | 0.96 | 0 | – |
| 18 | ಕೊಡಗು | 838 | 0 | – | 0 | – |
| 19 | ಬೆಳಗಾವಿ | 67990 | 5 | 2.29 | 5 | 2.90 |
| 20 | ಹಾವೇರಿ | 4813 | 1 | 0.28 | 1 | 0.58 |
| 21 | ಗದಗ | 4812 | 1 | 1.00 | 1 | 0.58 |
| 22 | ವಿಜಯಪುರ | 8947 | 1 | 0.58 | 1 | 0.58 |
| 23 | ಬಾಗಲಕೋಟೆ | 8947 | 0 | – | 1 | 0.58 |
| 24 | ಧಾರವಾಡ | 4812 | 1 | 0.65 | 1 | 0.58 |
| 25 | ಉತ್ತರ ಕನ್ನಡ | 4135 | 0 | – | 1 | 0.58 |
| 26 | ಕಲ್ಬುರ್ಗಿ | 7925 | 1 | 1.00 | 1 | 0.58 |
| 27 | ಬಳ್ಳಾರಿ | 22747 | 3 | 2.31 | 2 | 1.16 |
| 28 | ಬೀದರ್ | 5194 | 1 | 1.00 | 1 | 0.58 |
| 29 | ರಾಯಚೂರು | 22047 | 6 | 4.43 | 2 | 1.16 |
| 30 | ಕೊಪ್ಪಳ | 22046 | 2 | 2.00 | 2 | 1.16 |
| 31 | ಯಾದಗಿರಿ | 7924 | 4 | 4.00 | 1 | 0.58 |
| | **ಒಟ್ಟು** | **472968** | **70** | **57.80** | **50** | **29.00** |

ವ್ಯವಸ್ಥಾಪಕ ನಿರ್ದೇಶಕರು (ಪ್ರಭಾರ)

ವಿಶ್ವಕರ್ಮ ಅಭಿವೃದ್ಧಿ ನಿಗಮ

ಮಾನ್ಯ ವಿಧಾನ ಸಭೆಯ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:336ಕ್ಕೆ ಉತ್ತರ ಒದಗಿಸುವ ಕುರಿತು.

ಅರಿವು ಶೈಕ್ಷಣಿಕ ಸಾಲ(ನವೀನ)ಯೋಜನೆಯ ಮೂಲಕ ಕಳೆದ ಎರಡು ವರ್ಷಗಳಲ್ಲಿ ಎಷ್ಟು ಫಲಾನುಭವಿ ವಿದ್ಯಾರ್ಥಿಗಳಿಗೆ ಯೋಜನಾ ಸೌಲಭ್ಯಗಳನ್ನು ಒದಗಿಸಿ ಕೊಡಲಾಗಿದೆ(ಜಿಲ್ಲಾವಾರು ಸಂಖ್ಯಾ ವಿವರಗಳನ್ನು ನೀಡುವುದು)

| ಕ್ರ.ಸಂ | ಜಿಲ್ಲೆಗಳ ಹೆಸರು | 2020-21 | |
|---|---|---|---|
| | | ಭೌತಿಕ ಗುರಿ | ಭೌತಿಕ ಸಾಧನೆ |
| 1 | ಬೆಂಗಳೂರು ಉತ್ತರ ನಗರ | 1 | 1 |
| 2 | ಬೆಂಗಳೂರು ದಕ್ಷಿಣ ನಗರ | 1 | 1 |
| 3 | ಬೆಂಗಳೂರು ಗ್ರಾಮಾಂತರ | 1 | 1 |
| 4 | ರಾಮನಗರ | 1 | 1 |
| 5 | ಶಿವಮೊಗ್ಗ | 1 | 1 |
| 6 | ತುಮಕೂರು | 1 | 1 |
| 7 | ಚಿತ್ರದುರ್ಗ | 1 | 1 |
| 8 | ಕೋಲಾರ | 1 | 1 |
| 9 | ಚಿಕ್ಕಬಳ್ಳಾಪುರ | 1 | 1 |
| 10 | ದಾವಣಗೆರೆ | 1 | 0 |
| 11 | ಮೈಸೂರು | 1 | 1 |
| 12 | ಮಂಡ್ಯ | 1 | 1 |
| 13 | ಚಾಮರಾಜನಗರ | 1 | 1 |
| 14 | ಉಡುಪಿ | 1 | 1 |
| 15 | ಹಾಸನ | 1 | 1 |
| 16 | ಚಿಕ್ಕಮಗಳೂರು | 1 | 0 |
| 17 | ದಕ್ಷಿಣ ಕನ್ನಡ | 1 | 1 |
| 18 | ಕೊಡಗು | 1 | 1 |
| 19 | ಬೆಳಗಾವಿ | 1 | 1 |
| 20 | ಹಾವೇರಿ | 1 | 1 |
| 21 | ಗದಗ | 1 | 1 |
| 22 | ಬಿಜಾಪುರ | 1 | 1 |
| 23 | ಬಾಗಲಕೋಟೆ | 1 | 1 |
| 24 | ಧಾರವಾಡ | 1 | 1 |
| 25 | ಉತ್ತರ ಕನ್ನಡ | 1 | 1 |
| 26 | ಗುಲ್ಬರ್ಗ | 1 | 0 |
| 27 | ಯಾದಗಿರಿ | 1 | 0 |
| 28 | ಬಳ್ಳಾರಿ | 1 | 1 |
| 29 | ಬೀದರ್ | 1 | 0 |
| 30 | ರಾಯಚೂರು | 1 | 1 |
| 31 | ಕೊಪ್ಪಳ | 1 | 1 |
| | ಒಟ್ಟು | 31 | 26 |

ಸರ್ಕಾರದ ಆದೇಶದನ್ವಯ 2021-22ನೇ ಸಾಲಿನಲ್ಲಿ ಅರಿವು ಶೈಕ್ಷಣಿಕ (ನವೀನ)ಯೋಜನೆಯನ್ನು ಸುವಿಧಾ ತಂತ್ರಾಂಶದ ಮೂಲಕವೇ ಅನುಷ್ಠಾನಗೊಳಿಸಲು ಆದೇಶಿಸಿದ ಹಿನ್ನಲೆಯಲ್ಲಿ, ಸದರಿ ತಂತ್ರಾಂಶದ ತಾಂತ್ರಿಕ ದೋಷದಿಂದಾಗಿ ಈ ಯೋಜನೆ ಅನುಷ್ಠಾನಗೊಂಡಿರುವುದಿಲ್ಲ.

ವ್ಯವಸ್ಥಾಪಕ ನಿರ್ದೇಶಕರು

ಅನುಬಂಧ-

## ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿ., ಬೆಂಗಳೂರು

## ಅರಿವು ಶೈಕ್ಷಣಿಕ ಸಾಲ ಯೋಜನೆಯಡಿ ಯೋಜನಾ ಸೌಲಭ್ಯ ಒದಗಿಸಿದ ಜಿಲ್ಲಾವಾರು ವಿವರ

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆಯ ಹೆಸರು | 2019-20 | 2020-21 | 2021-22 (ನವೀಕರಣ) |
|---|---|---|---|---|
| 1 | ಬೆಂಗಳೂರು ಉತ್ತರ | 2 | – | 5 |
| 2 | ಬೆಂಗಳೂರು ದಕ್ಷಿಣ | 2 | 1 | 5 |
| 3 | ಬೆಂಗಳೂರು ಗ್ರಾ॥ | – | – | 1 |
| 4 | ರಾಮನಗರ | 1 | – | 2 |
| 5 | ಶಿವಮೊಗ್ಗ | 5 | 1 | 6 |
| 6 | ತುಮಕೂರು | 1 | 2 | 2 |
| 7 | ಚಿತ್ರದುರ್ಗ | 2 | 1 | 5 |
| 8 | ಕೋಲಾರ | 3 | – | 3 |
| 9 | ಚಿಕ್ಕಬಳ್ಳಾಪುರ | 1 | – | 1 |
| 10 | ದಾವಣಗೆರೆ | 2 | – | 4 |
| 11 | ಮೈಸೂರು | 2 | 1 | 3 |
| 12 | ಮಂಡ್ಯ | 4 | 1 | 5 |
| 13 | ಚಾಮರಾಜನಗರ | – | – | 0 |
| 14 | ಉಡುಪಿ | 28 | 5 | 58 |
| 15 | ಹಾಸನ | – | – | 0 |
| 16 | ಚಿಕ್ಕಮಗಳೂರು | 1 | – | 5 |
| 17 | ದಕ್ಷಿಣ ಕನ್ನಡ | 8 | 4 | 15 |
| 18 | ಕೊಡಗು | – | – | 0 |
| 19 | ಬೆಳಗಾವಿ | – | – | 2 |
| 20 | ಹಾವೇರಿ | 4 | 1 | 2 |
| 21 | ಗದಗ | – | 1 | 1 |
| 22 | ವಿಜಯಪುರ | – | – | 0 |
| 23 | ಬಾಗಲಕೋಟೆ | 1 | 2 | 3 |
| 24 | ಧಾರವಾಡ | 2 | – | 1 |
| 25 | ಉತ್ತರ ಕನ್ನಡ | 2 | 3 | 5 |
| 26 | ಕಲಬುರಗಿ | 7 | – | 11 |
| 27 | ಬಳ್ಳಾರಿ | 2 | – | 1 |
| 28 | ವಿಜಯನಗರ | – | – | 0 |
| 29 | ಬೀದರ್ | 2 | – | 3 |
| 30 | ರಾಯಚೂರು | 3 | – | 5 |
| 31 | ಕೊಪ್ಪಳ | 2 | 1 | 5 |
| 32 | ಯಾದಗಿರಿ | 8 | 1 | 5 |
| | ಒಟ್ಟು | 95 | 25 | 164 |

2021-22ನೇ ಸಾಲಿನಲ್ಲಿ ಅರಿವು ಶೈಕ್ಷಣಿಕ ಸಾಲದ ನವೀಕರಣಕ್ಕಾಗಿ 164 ವಿದ್ಯಾರ್ಥಿಗಳಿಗೆ ಒಟ್ಟಾರೆ ರೂ.123.08 ಲಕ್ಷಗಳನ್ನು ಡಿ.ಬಿ.ಟಿ ಮೂಲಕ ಪಾವತಿಸಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು (ಪ್ರ)

09/02/23

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 337 |
| ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗಗಳು ಸಲ್ಲಿಸಿರುವ ವರದಿಗಳು ಮತ್ತು ಮಧ್ಯಂತರ ವರದಿಗಳನ್ನು ಅನುಮೋದಿಸಿ ಜಾರಿಗೊಳಿಸುವ ಕುರಿತು ಸರ್ಕಾರದ ಮುಂದಿರುವ ಪ್ರಸ್ತಾವನೆಗಳೇನು; | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಿಂದ ಸರ್ಕಾರಕ್ಕೆ ಸಲ್ಲಿಸಿರುವ ವರದಿಗಳಲ್ಲಿ ಈ ಕೆಳಕಂಡ 04 ವರದಿಗಳನ್ನು ಈಗಾಗಲೇ ಅಂಗೀಕರಿಸಿ ಅನುಷ್ಠಾನಗೊಳಿಸಲಾಗಿದೆ.<br>1. ಶ್ರೀ ಎಲ್.ಜಿ. ಹಾವನೂರು ವರದಿ.<br>2. ಶ್ರೀ ಟಿ. ವೆಂಕಟಸ್ವಾಮಿ ವರದಿ.<br>3. ಜಸ್ಟೀಸ್ ಓ ಚಿನ್ನಪ್ಪ ರೆಡ್ಡಿ ವರದಿ.<br>4. ಪ್ರೊ. ರವಿವರ್ಮಾ ಕುಮಾರ್ ವರದಿ. |
| ಆ) | ವರದಿಗಳಲ್ಲಿ ನಮೂದಿಸಿರುವ ಅರ್ಹ ಅತೀ ಸಣ್ಣ ಮತ್ತು ಸಣ್ಣ ಸಮುದಾಯಗಳು ಸರ್ಕಾರದ 2ಎ ಸೌಲಭ್ಯಗಳಿಂದ ವಂಚಿತ ರಾಗುತ್ತಿದ್ದು, ಅವರು ಶೈಕ್ಷಣಿಕ ಹಾಗೂ ಉದ್ಯೋಗ ಕ್ಷೇತ್ರಗಳಲ್ಲಿ ತಮ್ಮ ಸಾಂವಿಧಾನಿಕ ಹಕ್ಕನ್ನು ಪಡೆಯಲು ಅನರ್ಹರಾಗುತ್ತಿರುವುದನ್ನು ತಪ್ಪಿಸಲು ಸರ್ಕಾರದ ಕ್ರಮಗಳೇನು; | ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದಿಂದ ಸರ್ಕಾರಕ್ಕೆ ಸಲ್ಲಿಸಿರುವ ವರದಿಗಳಲ್ಲಿ ಈ ಕೆಳಕಂಡ 04 ವರದಿಗಳು ಸರ್ಕಾರದಲ್ಲಿವೆ.<br>1. ಶ್ರೀ ಸಿದ್ದಗಂಗಯ್ಯರವರ ಮಧ್ಯಂತರ ವರದಿ-2005.<br>2. ಡಾ.ಸಿ.ಎಸ್. ದ್ವಾರಕನಾಥ್ ವಿಶೇಷ ವರದಿ-2010.<br>3. ಶ್ರೀ ಎನ್. ಶಂಕ್ರಪ್ಪ ಇವರ ಪ್ರಥಮ ವರದಿ-2012 ಮತ್ತು ದ್ವಿತೀಯ ವರದಿ-2013.<br>4. ಶ್ರೀ ಹೆಚ್. ಕಾಂತರಾಜ ಇವರ ಬಹಿರಂಗ ವಿಚಾರಣೆ-2018 ವರದಿ.<br>ಮೇಲ್ಕಂಡ ವರದಿಗಳಲ್ಲಿ ಕೆಲವು ಸಮುದಾಯಗಳನ್ನು 2ಎ ಪಟ್ಟಿಗೆ ಹಾಗೂ ಇನ್ನಿತರೆ ಪ್ರವರ್ಗಗಳಿಗೆ ಸೇರಿಸಲು ಮಾಡಿರುವ ಶಿಫಾರಸ್ಸುಗಳು ಸರ್ಕಾರದ ಪರಿಶೀಲನೆಯಲ್ಲಿರುತ್ತವೆ. |
| ಇ) | ಶ್ರೀ ಸಿದ್ದಗಂಗಯ್ಯರವರ ನೇತೃತ್ವದ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗದ ಮಧ್ಯಂತರ ವರದಿ-2005ರಲ್ಲಿ ಸೇರ್ಪಡೆಗೆ ಶಿಫಾರಸ್ಸು ಮಾಡಿರುವ ತೀರಾ ಹಿಂದುಳಿದಿರುವ ಮತ್ತು ಅತಿ ಕಡಿಮೆ ಸಂಖ್ಯೆ ಯಲ್ಲಿರುವ ಸಮುದಾಯಗಳಿಗೆ ಸಾಂವಿಧಾನಿಕ ಹಕ್ಕುಗಳನ್ನು ಪಡೆಯಲು ಸರ್ಕಾರ ಕೈಗೊಂಡಿರುವ ತುರ್ತು ಕ್ರಮಗಳೇನು? | |

ಸಂಖ್ಯೆ: ಹಿಂವಕ 68 ಬಿಸಿಎ 2023

(ಕೋಟಾ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 338 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರ ಕಾರ್ಮಿಕ ವಲಯಕ್ಕೆ ಪ್ರಶಂಸನೀಯ ರೀತ್ಯಾ ಯೋಜನಾ ಸೌಲಭ್ಯಗಳನ್ನು ದೊರಕಿಸಿಕೊಟ್ಟರೂ ಯೋಜನಾನುಷ್ಠಾನದಲ್ಲಿನ ಕುಂದುಕೊರತೆಗಳಿಂದಾಗಿ ಅರ್ಹ ಬಡ ಫಲಾನುಭವಿಗಳಿಗೆ ಸಕಾಲಿಕವಾಗಿ ಸರಳರೀತ್ಯ ತಲುಪುತ್ತಿಲ್ಲ ಎಂಬ ದೂರುಗಳ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; | ಕಾರ್ಮಿಕ ಸಮುದಾಯಕ್ಕೆ ಸರ್ಕಾರವು ಒದಗಿಸುತ್ತಿರುವ ಸೌಲಭ್ಯಗಳು ಸಕಾಲದಲ್ಲಿ ಅರ್ಹ ಕಾರ್ಮಿಕರಿಗೆ ಸಿಗುತ್ತಿಲ್ಲವೆಂಬ ಕುರಿತಾದ ದೂರುಗಳಿಗೆ ಸಂಬಂಧಿಸಿದಂತೆ ಇಲಾಖೆಯು ಕೈಗೊಂಡಿರುವ ಕ್ರಮಗಳ ಕುರಿತಾಗಿ ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ರೂಪಿಸಿ ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಿಗೆ ಸಂಬಂಧಿಸಿದ ಮಾಹಿತಿ ಈ ಕೆಳಕಂಡಂತಿದೆ.<br><br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳನ್ನು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳು, 2006 ರಲ್ಲಿ ನಿಗದಿಪಡಿಸಿರುವ ಅರ್ಹತಾ ಮಾನದಂಡಗಳು ಹಾಗೂ ಷರತ್ತುಗಳ ಅನ್ವಯ ನೀಡಲಾಗುತ್ತಿದೆ. ಈ ಯೋಜನೆಗಳನ್ನು ಸಂಪೂರ್ಣವಾಗಿ ಸೇವಾ ಸಿಂಧು ತಂತ್ರಾಂಶದ ಮೂಲಕ ನೀಡಲಾಗುತ್ತಿದ್ದು, ಮಂಡಳಿಯ ಯೋಜನೆಗಳ ಸದುಪಯೋಗ ಮತ್ತು ಪ್ರಯೋಜನವನ್ನು ಕಾರ್ಮಿಕರು ಯಾವುದೇ ತೊಂದರೆ ಇಲ್ಲದೇ ಪಡೆಯುತ್ತಿದ್ದಾರೆ. ಮಂಡಳಿ ಪ್ರಾರಂಭವಾದಾಗಿನಿಂದ ಇಲ್ಲಿಯವರೆಗೆ ನೋಂದಣಿಯಾದ ಆರ್ಹ ಫಲಾನುಭವಿಗಳು ರೂ.5048.57 ಕೋಟಿಗಳಷ್ಟು ಮೊತ್ತವನ್ನು ವಿವಿಧ ಧನ ಸಹಾಯದ ಸೌಲಭ್ಯಗಳಡಿ ಪಡೆದಿರುತ್ತಾರೆ. |

| | | |
|---|---|---|
| | | 2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ, ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಅಪಘಾತ ಪರಿಹಾರ ಯೋಜನೆಯಡಿ ಮಾತ್ರ ಖಾಸಗಿ ವಾಣಿಜ್ಯ ಸಾರಿಗೆ ವಾಹನ ಚಾಲಕರು ನಿರ್ವಾಹಕರು ಮತ್ತು ಕ್ಲೀನರ್‌ಗಳಿಗೆ ಅಪಘಾತ ಪರಿಹಾರ ಮತ್ತು ಅವರ ಮಕ್ಕಳಿಗೆ ಶೈಕ್ಷಣಿಕ ಸಹಾಯಧನ ಸೌಲಭ್ಯಗಳನ್ನು ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳನ್ವಯ ಒದಗಿಸಲಾಗುತ್ತಿದೆ.<br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಅನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ. ಉಳಿದ ಯೋಜನೆಗಳ ಧನ ಸಹಾಯಕ್ಕಾಗಿ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳ ಮೂಲಕ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಸಲ್ಲಿಸಬೇಕಾಗುತ್ತದೆ. ಧನ ಸಹಾಯವನ್ನು ಫಲಾನುಭವಿಗಳ ಉಳಿತಾಯ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್. ಮೂಲಕ ಜಮಾ ಮಾಡಲಾಗುವುದು.<br>ಕಾರ್ಮಿಕ ಸಹಾಯವಾಣಿ 24X7 ಕಾರ್ಯನಿರ್ವಹಿಸುತ್ತಿದೆ (ಸಹಾಯವಾಣಿ ಸಂಖ್ಯೆ:155214). |
| ಆ) | ಸರ್ಕಾರದ ಯೋಜನಾ ನೆರವುಗಳನ್ನು ಆನ್‌ಲೈನ್ ಮತ್ತು ಕಾರ್ಯಾಲಯಗಳ ಮೂಲಕ ನೀಡುವ ಕುರಿತು ಸರಳ ವಿಧಾನಗಳೇನು; | ಕಾರ್ಮಿಕ ಇಲಾಖೆ ಹಾಗೂ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ರೂಪಿಸಿ ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳ ನೆರವನ್ನು ಆನ್‌ಲೈನ್ ಮತ್ತು ಕಛೇರಿಗಳ ಮೂಲಕ ಒದಗಿಸುವ ಸಂಬಂಧ ಅನುಸರಿಸುತ್ತಿರುವ ವಿಧಾನಗಳ ಕುರಿತಾದ ಮಾಹಿತಿ ಈ ಕೆಳಕಂಡಂತಿದೆ.<br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯ ಎಲ್ಲಾ ಯೋಜನೆಗಳನ್ನು ಇ–ಆಡಳಿತ ಇಲಾಖೆ ಸೇವಾ ಸಿಂಧು ತಂತ್ರಾಂಶದ ಮೂಲಕ ಅನುಷ್ಠಾನ ಮಾಡಲಾಗುತ್ತಿದ್ದು, ನಿಯಮಗಳಲ್ಲಿ ನಿಗದಿಪಡಿಸಿರುವ |

| | | |
|---|---|---|
| | | ಅವಶ್ಯಕ ದಾಖಲೆಗಳನ್ನು ಆನ್‌ಲೈನ್ ಮೂಲಕವೇ ಸಲ್ಲಿಸಿ, ಫಲಾನುಭವಿಗಳು ಅತ್ಯಂತ ಸರಳವಾಗಿ ಸೌಲಭ್ಯಗಳನ್ನು ಪಡೆದುಕೊಳ್ಳಬಹುದು.<br><br>2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಈ ಮಂಡಳಿಯ ಸೌಲಭ್ಯಗಳನ್ನು ವಿತರಿಸಲು ಈ ಕೆಳಕಂಡ ಸರಳ ವಿಧಾನಗಳನ್ನು ಅನುಸರಿಸಲಾಗುತ್ತಿದೆ.<br>(1) ಅಪಘಾತ ಪರಿಹಾರ ಸೌಲಭ್ಯ:-ಫಲಾನುಭವಿಗಳು/ ಅವಲಂಬಿತರು ಕ್ಲೇಮ್ ಅರ್ಜಿಯ ಜೊತೆಗೆ ಸಲ್ಲಿಸಬೇಕಾದ ದಾಖಲೆಗಳು–<br>**(ಅ) ಮರಣ ಪ್ರಕರಣಗಳಲ್ಲಿ–**<br>❖ ಮರಣ ಪ್ರಮಾಣ ಪತ್ರ,<br>❖ ಮರಣೋತ್ತರ ಪರೀಕ್ಷಾ ವರದಿ,<br>❖ ಪ್ರಥಮ ವರ್ತಮಾನ ವರದಿ(FIR) ಮತ್ತು<br>❖ ಊರ್ಜಿತ ಚಾಲನಾ ಪರವಾನಗಿ<br>❖ ನಾಮನಿರ್ದೇಶಿತರ ಆಧಾರ್ ಸಂಖ್ಯೆ<br>❖ ಬ್ಯಾಂಕ್ ಖಾತೆಯ ವಿವರ<br>**(ಆ) ಆಸ್ಪತ್ರೆ ವೆಚ್ಚ ಹಿಂಪಡೆಯಲು–**<br>❖ ಪ್ರಥಮ ವರ್ತಮಾನ ವರದಿ(FIR) ಮತ್ತು<br>❖ ವೈದ್ಯಕೀಯ ಪ್ರಮಾಣ ಪತ್ರ<br>❖ ಬಿಲ್‌ಗಳ ಮೂಲ ಪ್ರತಿ<br>❖ ಅರ್ಜಿದಾರರ ಆಧಾರ್ ಸಂಖ್ಯೆ<br>❖ ಬ್ಯಾಂಕ್ ಖಾತೆಯ ವಿವರ<br><br>ಸ್ವೀಕರಿಸಿದ ಕ್ಲೇಮ್ ಅರ್ಜಿಯ ದಾಖಲೆಗಳನ್ನು ಸ್ಥಳೀಯ ಕಾರ್ಮಿಕ ಇಲಾಖಾ ಅಧಿಕಾರಿಗಳಿಂದ ಪರಿಶೀಲನೆ ನಡೆಸಿ, ಅವರು ಸಲ್ಲಿಸಿರುವ ವರದಿಯ ಆಧಾರದ ಮೇಲೆ ಅರ್ಹರಿದ್ದಲ್ಲಿ, ಪರಿಹಾರದ ಮೊತ್ತವನ್ನು ಅರ್ಜಿದಾರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು.<br><br>**ಶೈಕ್ಷಣಿಕ ಸಹಾಯ ಧನ ಸೌಲಭ್ಯ:–**<br>❖ ವ್ಯಾಸಂಗ ಪ್ರಮಾಣ ಪತ್ರ<br>❖ ಆಧಾರ್ ಸಂಖ್ಯೆ<br>❖ ಬ್ಯಾಂಕ್ ಖಾತೆ<br>❖ ಅಂಕಪಟ್ಟಿ |

| | | |
|---|---|---|
| | | ಸ್ವೀಕರಿಸಿದ ಅರ್ಜಿಯ ದಾಖಲೆಗಳನ್ನು ಸ್ಥಳೀಯ ಕಾರ್ಮಿಕ ಇಲಾಖಾ ಅಧಿಕಾರಿಗಳಿಂದ ಪರಿಶೀಲನೆ ನಡೆಸಿ, ಅವರು ಸಲ್ಲಿಸಿರುವ ವರದಿಯ ಆಧಾರದ ಮೇಲೆ ಅರ್ಹರಿದ್ದಲ್ಲಿ, ಪರಿಹಾರದ ಮೊತ್ತವನ್ನು ವಿದ್ಯಾರ್ಥಿಯ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುವುದು.<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಅನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ. ಉಳಿದ ಯೋಜನೆಗಳ ಧನ ಸಹಾಯಕ್ಕಾಗಿ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳ ಮೂಲಕ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಸಲ್ಲಿಸಬೇಕಾಗುತ್ತದೆ. ಧನ ಸಹಾಯವನ್ನು ಫಲಾನುಭವಿಗಳ ಉಳಿತಾಯ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್. ಮೂಲಕ ಜಮಾ ಮಾಡಲಾಗುತ್ತಿದೆ. |
| ಇ) | ಯೋಜನೆ ಫಲಾನುಭವಿಗಳು, ಮಧ್ಯವರ್ತಿಗಳ ಅಥವಾ ಇನ್ನಿತರ ಯಾವುದೇ ಅವ್ಯವಸ್ಥೆಗಳಿಗೆ ಒಳಗಾಗದಂತೆ ಯೋಜನಾ ಸೌಲಭ್ಯಗಳನ್ನು ಪಡೆಯುವಲ್ಲಿ ಇಲಾಖೆಯವರ ಕ್ರಮಗಳೇನು; | ಯೋಜನೆ ಫಲಾನುಭವಿಗಳು, ಮಧ್ಯವರ್ತಿಗಳು ಅಥವಾ ಇನ್ನಿತರ ಯಾವುದೇ ಅವ್ಯವಸ್ಥೆಗಳಿಗೆ ಒಳಗಾಗದಂತೆ ಯೋಜನಾ ಸೌಲಭ್ಯಗಳನ್ನು ಪಡೆಯುವಲ್ಲಿ ಕಾರ್ಮಿಕ ಇಲಾಖೆ ಹಾಗೂ ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳು ಈ ಕೆಳಕಂಡಂತಿದೆ.<br><br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಮಂಡಳಿಯ ಯೋಜನೆಗಳನ್ನು ಫಲಾನುಭವಿಗಳು ಆನ್‌ಲೈನ್ ಮೂಲಕವೇ ಪಡೆಯುತ್ತಿರುವುದರಿಂದ ಮಧ್ಯವರ್ತಿಗಳ ನಿಯಂತ್ರಣದಿಂದ ಮುಕ್ತರಾಗಿರುತ್ತಾರೆ. ಇದಲ್ಲದೇ ಫಲಾನುಭವಿಗಳು ನೇರವಾಗಿ ಕಾರ್ಮಿಕ ಇಲಾಖೆಯ ಕಛೇರಿಗೆ ಭೇಟಿ ನೀಡಿ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಪಡೆಯಬೇಕೆಂದು ಹಾಗೂ ಮಧ್ಯವರ್ತಿಗಳ ಪ್ರಭಾವಕ್ಕೆ ಒಳಗಾಗಬಾರದೆಂಬುದರ ಜೊತೆಗೆ ಅವರಿಗೆ ನೋಂದಣಿ ಹಾಗೂ ಸೌಲಭ್ಯಗಳ ಬಗ್ಗೆ ಈ ಕೆಳಕಂಡ ಮಾಹಿತಿ ಶಿಕ್ಷಣ ಸಂವಹನ (ಐಇಸಿ) ಕಾರ್ಯಕ್ರಮಗಳನ್ನು ಸಹ ಹಮ್ಮಿಕೊಳ್ಳುವ ಮೂಲಕ ಮಾಹಿತಿಯನ್ನು ನೀಡಲಾಗಿದೆ. |

ಪೋಸ್ಟರ್ಸ್, ಬ್ರೋಚರ್ಸ್, ಬ್ಯಾನರ್, ಹೋರ್ಡಿಂಗ್ಸ್, ಕಿರುಹೊತ್ತಿಗೆ, ಕ್ಯಾಲೆಂಡರ್ ಮತ್ತು ಲೀಫ್ಲೆಟ್ಸ್/ಪಾಂಪ್ಲೆಟ್ಸ್ ಮುಂತಾದ ಮುದ್ರಣ ಚಟುವಟಿಕೆಗಳು, ಶ್ರಾವ್ಯ ಮಾಧ್ಯಮದ ಮೂಲಕ ಪ್ರಚಾರ, ಆಟೋ ಬ್ರ್ಯಾಂಡಿಂಗ್, ಕಿರುಚಿತ್ರ/ ಸಾಕ್ಷ್ಯಚಿತ್ರಗಳು, ವಾಹನ ಬ್ರ್ಯಾಂಡಿಂಗ್ ಚಟುವಟಿಕೆಗಳು, ರೇಡಿಯೋ ಪ್ರಚಾರ, ಎಲ್.ಇ.ಡಿ ಹೋರ್ಡಿಂಗ್, ಆಟೋಮೇಟೆಡ್‌ಕಾಲ್ಸ್, ಆಟೋಮೇಟೆಡ್ ಮೆಸೇಜಸ್ (ವಾಟ್ಸಾಪ್/ಟೆಕ್ಸ್ಟ್), ಟಿನ್‌ಪ್ಲೇಟ್ಸ್/ ಸನ್ ಬೋರ್ಡ್ / ಬಿಲ್ ಬೋರ್ಡ್ ಮುಂತಾದ ಬೋರ್ಡ್‌ಗಳ ಮುದ್ರಣ, ಬಸ್ ಬ್ರ್ಯಾಂಡಿಂಗ್‌ಚಟುವಟಿಕೆ, ಬಸ್ ನಿಲ್ದಾಣ, ರೈಲು ನಿಲ್ದಾಣ ಮುಂತಾದ ಕಡೆಗಳಲ್ಲಿ ಶ್ರಾವ್ಯ ಮಾಧ್ಯಮಗಳ ಮೂಲಕ ಪ್ರಚಾರ, ರೈಲು ಬ್ರ್ಯಾಂಡಿಂಗ್, ರೈಲು ನಿಲ್ದಾಣಗಳಲ್ಲಿ ವೀಡಿಯೋ/ ಆಡಿಯೋ ಪ್ರಚಾರ, ಬಸ್ ನಿಲ್ದಾಣ ಬ್ರ್ಯಾಂಡಿಂಗ್ ಮೂಲಕ ಪ್ರಚಾರ, ಎಲ್.ಇ.ಡಿ ವಾಹನ ಬ್ರ್ಯಾಂಡಿಂಗ್ ಚಟುವಟಿಕೆ, ಕಿಯೋಸ್ಕ್‌ನಂತಹ ವಿದ್ಯುನ್ಮಾನ ಇಂಟರಾಕ್ಟೀವ್ ಯಂತ್ರಗಳ ಮೂಲಕ ಪ್ರಚಾರ ಹಾಗೂ ಮಾಹಿತಿ ಬಿತ್ತರಿಕೆ, ಬಸ್ ನಿಲ್ದಾಣ/ ರೈಲು ನಿಲ್ದಾಣ ಮುಂತಾದ ಕಡೆಗಳಲ್ಲಿ ಎಲ್.ಇ.ಡಿ ಡಿಸ್ಪ್ಲೇಗಳ ಮೂಲಕ ಪ್ರಚಾರ, ಗೋಡೆ ಬರಹ, ಸಾಮಾಜಿಕ ಮಾಧ್ಯಮ ಚಟುವಟಿಕೆಗಳು, ಟಿ.ವಿ ಜಾಹೀರಾತು, ದಿನ ಪತ್ರಿಕೆಗಳು, ವಾರ ಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ವಿಶೇಷ ಸಂಚಿಕೆಗಳು ಮುಂತಾದವುಗಳಲ್ಲಿ ಪ್ರಕಟಣೆ, ಜಾಹೀರಾತು ಮೂಲಕ ಪ್ರಚಾರ, ವೀಡಿಯೋ ಡಿಸ್‌ಪ್ಲೇಗಳ ಅಳವಡಿಕೆ ಮತ್ತು ಜಾಹೀರಾತು, ಹೋರ್ಡಿಂಗ್ ಪ್ಯಾನೆಲ್‌ಗಳ ಅಳವಡಿಕೆ ಮತ್ತು ಜಾಹೀರಾತು, ಬೀದಿ ನಾಟಕ ಮತ್ತು ಆಟೋ ಮುಂತಾದ ವಾಹನಗಳ ಮೂಲಕ ಪ್ರಚಾರ.

2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಈ ಮಂಡಳಿಯು ಒದಗಿಸುತ್ತಿರುವ ಸೌಲಭ್ಯಗಳನ್ನು ಪಡೆಯಲು ಆನ್‌ಲೈನ್ ವಿಧಾನಗಳನ್ನು ಅನುಸರಿಸುತ್ತಿದ್ದು, ಮಧ್ಯವರ್ತಿಗಳ ಅಥವಾ ಇನ್ನಿತರ ಯಾವುದೇ ಅವ್ಯವಸ್ಥೆಗಳಿಗೆ ಅವಕಾಶವಿರುವುದಿಲ್ಲ.

3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**

ಸಂಘಟಿತ ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ

| | | |
|---|---|---|
| | | ಸಂಸ್ಥೆಗಳು, ಕಾರ್ಖಾನೆಗಳು/ ಸಂಸ್ಥೆಗಳು www.klwb.karnataka.gov.in ಇಲ್ಲಿ ನೊಂದಾಯಿಸಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ. ಉಳಿದ ಯೋಜನೆಗಳ ಧನ ಸಹಾಯಕ್ಕಾಗಿ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳ ಮೂಲಕ ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ ಸಲ್ಲಿಸಬೇಕಾಗುತ್ತದೆ. |
| ಈ) | ಕಾರ್ಮಿಕರಿಗೆ ನೀಡಲಾಗುತ್ತಿರುವ ವಸತಿ ಯೋಜನೆಯಡಿಯಲ್ಲಿ, ಎಷ್ಟು ಜನರಿಗೆ ಸಾಲದ ಮೊತ್ತವನ್ನು ಒದಗಿಸಿಕೊಡಲಾಗಿದೆ; ಆ ಕುರಿತಾದ ಕ್ರಮ/ನಿಯಮಗಳೇನು? (ವಿವರ ನೀಡುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ವತಿಯಿಂದ ರಾಜೀವ್‌ಗಾಂಧಿ ವಸತಿ ನಿಗಮ ನಿಯಮಿತ, ಕರ್ನಾಟಕ ಕೊಳಚೆ ಅಭಿವದ್ಧಿ ಮಂಡಳಿಗಳ ಮೂಲಕ ಒಟ್ಟು 27,687 ನೋಂದಾಯಿತ ಫಲಾನುಭವಿಗಳಿಗೆ ವಸತಿ ನಿರ್ಮಾಣಕ್ಕಾಗಿ ಸಾಲ ಸೌಲಭ್ಯವನ್ನು ಒದಗಿಸಲಾಗಿದೆ.<br><br>ಈ ಸೌಲಭ್ಯದ ಅನುಷ್ಠಾನಕ್ಕಾಗಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ, 1996 ಕಲಂ.22(1) (ಸಿ) ಮತ್ತು ಕರ್ನಾಟಕ ನಿಯಮಗಳು, 2006 ರ ನಿಯಮ 42 ರಲ್ಲಿ ಮಂಡಳಿಯ ಫಲಾನುಭವಿಗಳಿಗೆ ರೂ.2.00 ಲಕ್ಷಗಳ ವರೆಗೆ ಸಾಲ/ಮುಂಗಡ ಹಣ ನೀಡಲು ಪ್ರಾವಧಾನಗಳಿರುತ್ತದೆ. |

**ಕಾಇ 71 ಎಲ್‌ಇಟಿ 2023**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 339 |
| ಸದಸ್ಯರ ಹೆಸರು | : | ಶ್ರೀ ಮಸಾಲ ಜಯರಾಮ್ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿ ಜನಾಂಗದ ಗೊಲ್ಲ ಮತ್ತು ಕಾಡುಗೊಲ್ಲ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸುವ ಪ್ರಸ್ತಾವನೆಯು ಸರ್ಕಾರದ ಯಾವ ಹಂತದಲ್ಲಿದೆ ಮತ್ತು ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ ಕಾಡುಗೊಲ್ಲ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರಿಸಲು ಸರ್ಕಾರದ ಆದೇಶ ಸಂಖ್ಯೆ: ಸಕಇ 89 ಎಸ್‌ಎಡಿ 2010, ದಿನಾಂಕ:08.09.2010 ರಲ್ಲಿ ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯ ಮೂಲಕ ಮೈಸೂರು ವಿಶ್ವವಿದ್ಯಾಲಯ ಕುಲಶಾಸ್ತ್ರೀಯ ಅಧ್ಯಯನವನ್ನು ಕೈಗೊಂಡು, ಸರ್ಕಾರಕ್ಕೆ ವರದಿ ನೀಡುವಂತೆ ಆದೇಶಿಸಲಾಗಿತ್ತು. ಮುಂದುವರೆದು, ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯು ಸರ್ಕಾರಕ್ಕೆ ದಿನಾಂಕ:16.09.2014 ರಂದು ಸಲ್ಲಿಸಿದ ಅಂತಿಮ ವರದಿಯನ್ನು ದಿನಾಂಕ:26.12.2014 ರಂದು ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿದೆ.<br><br>ಕಾಡುಗೊಲ್ಲ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನ ವರದಿ ಕುರಿತಂತೆ ಕೇಂದ್ರ ಸರ್ಕಾರದ ರಿಜಿಸ್ಟ್ರರ್ ಜನರಲ್ ಆಫ್ ಇಂಡಿಯಾ, ನವದೆಹಲಿರವರು ವ್ಯಕ್ತಪಡಿಸಿದ ಪರಿಶೀಲನಾ ಅಂಶಗಳ ಕುರಿತು ವಿವರವಾದ ಸಮರ್ಥನೆ/ಅಭಿಪ್ರಾಯವನ್ನು ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯ ಮೂಲಕ ಮೈಸೂರು ವಿಶ್ವವಿದ್ಯಾಲಯದಿಂದ ಪಡೆದು, ಕೇಂದ್ರ ಸರ್ಕಾರಕ್ಕೆ ದಿನಾಂಕ:28.09.2018 ರಂದು ಸಲ್ಲಿಸಲಾಗಿದೆ.<br><br>ಮತ್ತೊಮ್ಮೆ ಕಾಡುಗೊಲ್ಲ ಸಮುದಾಯದ ಕುಲಶಾಸ್ತ್ರೀಯ ಅಧ್ಯಯನ ವರದಿ ಕುರಿತಂತೆ ಕೇಂದ್ರ ಸರ್ಕಾರದ ರಿಜಿಸ್ಟ್ರರ್ ಜನರಲ್ ಆಫ್ ಇಂಡಿಯಾ, ನವದೆಹಲಿರವರು ವ್ಯಕ್ತಪಡಿಸಿದ ಹೆಚ್ಚುವರಿ ಪರಿಶೀಲನಾ ಅಂಶಗಳ ಕುರಿತು ವಿವರವಾದ ಹೆಚ್ಚುವರಿ ಮಾಹಿತಿಯನ್ನು ಕರ್ನಾಟಕ ರಾಜ್ಯ ಬುಡಕಟ್ಟು ಸಂಶೋಧನಾ ಸಂಸ್ಥೆಯ ಮೂಲಕ ಮೈಸೂರು ವಿಶ್ವವಿದ್ಯಾಲಯದಿಂದ ಪಡೆದು, ಕೇಂದ್ರ ಸರ್ಕಾರಕ್ಕೆ ದಿನಾಂಕ: 04.02.2022 ರಂದು ಸಲ್ಲಿಸಲಾಗಿದೆ. ಸದರಿ ಪ್ರಸ್ತಾವನೆಯು ಕೇಂದ್ರ ಸರ್ಕಾರದ ಹಂತದಲ್ಲಿ ಬಾಕಿ ಇರುತ್ತದೆ. |
| ಆ) | ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸುವ ಪ್ರಸ್ತಾವನೆಯ ಬಗ್ಗೆ ರಾಜ್ಯ ಹಾಗೂ ಕೇಂದ್ರ ಸರ್ಕಾರ ಕೈಗೊಂಡ ಕ್ರಮಗಳೇನು; | |
| ಇ) | ಅತೀ ಹಿಂದುಳಿದ ಗೊಲ್ಲ ಸಮುದಾಯವನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸಿ, ಜನಾಂಗದ ಏಳಿಗೆಗೆ ಮೂಲಭೂತ ಸೌಕರ್ಯ ಕಲ್ಪಿಸುವ ನಿಟ್ಟಿನಲ್ಲಿ ಯಾವ ಯಾವ ಯೋಜನೆಗಳನ್ನು ರೂಪಿಸಲಾಗಿದೆ; ಇದರಿಂದ ಆಗುವ ಪ್ರಯೋಜನಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | |

ಸಕಇ 10 ಎಸ್‌ಎಡಿ 2023

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 458
ಮಾನ್ಯ ಸದಸ್ಯರ ಹೆಸರು : ಶ್ರೀ ನಾಗೇಂದ್ರ ಎಲ್
ಉತ್ತರಿಸುವ ದಿನಾಂಕ : 15-02-2023
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಾಮರಾಜ ವಿಧಾನಸಭಾ ಕ್ಷೇತ್ರದಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಕಳೆದ ಮೂರು ವರ್ಷಗಳಲ್ಲಿ ಹಾಸ್ಟೆಲ್ ಕಟ್ಟಡಗಳ ಅಭಿವೃದ್ಧಿಗೆ ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; (ವಿವರ ಒದಗಿಸುವುದು) | ಮೈಸೂರು ಜಿಲ್ಲೆ, ಚಾಮರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಪರಿಶಿಷ್ಟ ಜಾತಿಯ 05 ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ನಿರ್ವಹಿಸಲಾಗುತ್ತಿದೆ. ಈ ಪೈಕಿ 04 ವಿದ್ಯಾರ್ಥಿ ನಿಲಯಗಳನ್ನು ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒಳಗೊಂಡಿರುವ ಹಾಗೂ ಸುಸ್ಥಿತಿಯಲ್ಲಿರುವ ಸ್ವಂತ ಕಟ್ಟಡಗಳಲ್ಲಿ ನಡೆಸಲಾಗುತ್ತಿರುತ್ತದೆ. |
| ಆ) | ಪ್ರಸ್ತುತ ಯಾವ ಕಾಮಗಾರಿಗಳು ಪೂರ್ಣಗೊಂಡಿವೆ; ಯಾವ ಕಾಮಗಾರಿಗಳು ಚಾಲ್ತಿಯಲ್ಲಿವೆ; (ವಿವರ ಒದಗಿಸುವುದು) | ಸರ್ಕಾರಿ ಸ್ನಾತಕೋತ್ತರ ಬಾಲಕಿಯರ ವಿದ್ಯಾರ್ಥಿ ನಿಲಯ, ವಿಜಯನಗರ, ಮೈಸೂರು ಟೌನ್ ವಿದ್ಯಾರ್ಥಿ ನಿಲಯಗಳನ್ನು ಬಾಡಿಗೆ ಕಟ್ಟಡದಲ್ಲಿ ನಡೆಸಲಾಗುತ್ತಿದ್ದು, ಸ್ವಂತ ಕಟ್ಟಡ ನಿರ್ಮಾಣ ಸಂಬಂಧವಾಗಿ ಸೂಕ್ತ ನಿವೇಶನ ಒದಗಿಸುವಂತೆ ದಿನಾಂಕ:20-10-2022 ರಂದು ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವನ್ನು ಕೋರಲಾಗಿರುತ್ತದೆ. ನಿವೇಶನ ಲಭ್ಯವಾದ ಕೂಡಲೇ ಅನುದಾನದ ಲಭ್ಯತೆಯನ್ನು ಆಧರಿಸಿ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು.<br><br>ಮುಂದುವರೆದು, ಕಳೆದ ಮೂರು ವರ್ಷಗಳಲ್ಲಿ ಚಾಮರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೊಳಪಡುವ ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ವಿ.ವಿ.ಮೊಹಲ್ಲಾ-01 ವಿದ್ಯಾರ್ಥಿ ನಿಲಯದ ಕಾಂಪೌಂಡ್ ಗೋಡೆಯನ್ನು ರೂ.3.10 ಲಕ್ಷಗಳ ಅಂದಾಜು ಮೊತ್ತದಲ್ಲಿ ಉನ್ನತೀಕರಿಸಲಾಗಿದ್ದು, ಕಾಮಗಾರಿಯು ಮುಕ್ತಾಯಗೊಂಡಿರುತ್ತದೆ. |

| ಇ) | ಪ್ರಸ್ತುತ ಯಾವ ಯಾವ ಹಾಸ್ಟೆಲ್ ಕಟ್ಟಡಗಳನ್ನು ನವೀಕರಣಗೊಳಿಸಬೇಕಾಗಿರುತ್ತದೆ? (ವಿವರ ಒದಗಿಸುವುದು) | ಚಾಮರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಇಲಾಖೆಯ ವತಿಯಿಂದ ಸ್ವಂತ ಕಟ್ಟಡದಲ್ಲಿ ನಡೆಸುತ್ತಿರುವ ಈ ಕೆಳಕಂಡ ವಿದ್ಯಾರ್ಥಿ ನಿಲಯಗಳಲ್ಲಿ ದುರಸ್ತಿ/ಉನ್ನತೀಕರಣ ಕಾಮಗಾರಿಗಳ ಅಗತ್ಯತೆ ಇದ್ದು, ಅಂದಾಜು ಪಟ್ಟಿ ಸಿದ್ದಪಡಿಸಿ ಸಲ್ಲಿಸುವಂತೆ ಜಂಟಿ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ಮೈಸೂರು ಜಿಲ್ಲೆ ರವರು ಸರ್ಕಾರಿ ನಿರ್ಮಾಣ ಏಜೆನ್ಸಿಯನ್ನು ಕೋರಿರುತ್ತಾರೆ.<br><br>1. ಸರ್ಕಾರಿ ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯ, ವಿ.ವಿ.ಮೊಹಲ್ಲಾ, ಮೈಸೂರು ಟೌನ್.<br>2. ಸರ್ಕಾರಿ ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯ, ವಿ.ವಿ.ಮೊಹಲ್ಲಾ, ಮೈಸೂರು ಟೌನ್.<br><br>ಈ ಸಂಬಂಧವಾಗಿ, ಜಿಲ್ಲೆಯಿಂದ ಪ್ರಸ್ತಾವನೆ ಸ್ವೀಕೃತಗೊಂಡ ನಂತರ ಅನುದಾನದ ಲಭ್ಯತೆಯನ್ನು ಆಧರಿಸಿ ಕಾಮಗಾರಿಗಳಿಗೆ ಮಂಜೂರಾತಿ ನೀಡಲು ಅಗತ್ಯ ಕ್ರಮವಹಿಸಲಾಗುವುದು. |
|---|---|---|

**ಸಕಇ 18 ಪಕವಿ 2023**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 459 |
| ಮಾನ್ಯ ಸದಸ್ಯರ ಹೆಸರು | ಶ್ರೀ ಸುಕುಮರ್ ಶೆಟ್ಟಿ ಬಿ.ಎಂ. (ಬೈಂದೂರು), |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಡುಪಿ ಜಿಲ್ಲೆಯಲ್ಲಿ ಕಾರ್ಮಿಕ ಇಲಾಖೆಯಡಿ ನೊಂದಾವಣಿಯಾದ ಕಾರ್ಮಿಕರಿಗೆ ಇರುವ ಸೌಲಭ್ಯಗಳು ಯಾವುವು? (ಯೋಜನಾವಾರು ಸಂಪೂರ್ಣ ಮಾಹಿತಿ ಒದಗಿಸುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕೆಲಸ ನಿರ್ವಹಿಸುತ್ತಿರುವ ಮಂಡಳಿಗಳ ಮೂಲಕ ಕಾರ್ಮಿಕರಿಗೆ ನೀಡಲಾಗುತ್ತಿರುವ ಸೌಲಭ್ಯಗಳ ವಿವರಗಳು ಈ ಕೆಳಕಂಡಂತಿದೆ;<br>1. **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ;**<br>ಈ ಮಂಡಳಿಯ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮತ್ತು ಅವರ ಅವಲಂಭಿತರಿಗಾಗಿ ವಿವಿಧ ರೀತಿಯ ಕಲ್ಯಾಣ ಮತ್ತು ಸಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ, ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಗಳನ್ನು ಉಡುಪಿ ಜಿಲ್ಲೆಯಲ್ಲಿ ನೋಂದಾಯಿತ ಅರ್ಹ ಫಲಾನುಭವಿಗಳು ಸಹ ಪಡೆಯಲು ಆರ್ಹರಿರುತ್ತಾರೆ. ಸೌಲಭ್ಯಗಳ ವಿವರವನ್ನು ಅನುಬಂಧದಲ್ಲಿ ಒದಗಿಸಿದೆ.<br>2. **ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ;**<br>ಈ ಮಂಡಳಿಯು ಉಡುಪಿ ಜಿಲ್ಲೆಯು ಸೇರಿದಂತೆ ನೊಂದಾವಣೆಯಾದ ಎಲ್ಲಾ ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಈ ಕೆಳಕಂಡ ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸುತ್ತಿದೆ.<br>(1) **ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br>ಅ) **ಅಪಘಾತ ಪರಿಹಾರ ಸೌಲಭ್ಯ** : ಈ ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ಫಲಾನುಭವಿಗೆ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ. |

| | | |
|---|---|---|
| | | (ಆ) **ಶೈಕ್ಷಣಿಕ ಧನ ಸಹಾಯ** : ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.<br><br>2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**<br>ಈ ಯೋಜನೆಯಡಿ 11 ಅಸಂಘಟಿತ ವರ್ಗಗಳಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಟೈಲರ್, ಕ್ಷೌರಿಕರು, ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸಿ ಸ್ಮಾರ್ಟ್ ಕಾರ್ಡ್ ವಿತರಿಸಲಾಗುತ್ತಿದ್ದು, ಪ್ರಸ್ತುತ ಯಾವುದೇ ಆರ್ಥಿಕ ಸೌಲಭ್ಯಗಳನ್ನು ಒದಗಿಸುತ್ತಿಲ್ಲ.<br><br>(3) **ಇ-ಶ್ರಮ್ ಕಾರ್ಯಕ್ರಮ (ಅಸಂಘಟಿತ ಕಾರ್ಮಿಕರ ನೋಂದಣಿ)**<br>ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿದ್ದು, ಯೋಜನೆಯಡಿ 16-59 ವಯೋಮಾನದ ಇ.ಎಸ್.ಐ ಹಾಗೂ ಇ.ಪಿ.ಎಫ್ ಸೌಲಭ್ಯವನ್ನು ಹೊಂದಿರದ ಹಾಗೂ ಆದಾಯ ತೆರಿಗೆ ಪಾವತಿ ಮಾಡದ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಅವರು ಸಾಮಾನ್ಯ ಸೇವಾ ಕೇಂದ್ರಗಳ ಮೂಲಕ ಅಥವಾ ಸ್ವಯಂ ಆಗಿ ಇ-ಶ್ರಮ್ ಪೋರ್ಟಲ್‌ನಲ್ಲಿ (eshram.gov.in)ಉಚಿತವಾಗಿ ನೋಂದಾಯಿಸಬಹುದಾಗಿದ್ದು, ಗುರುತಿನ ಚೀಟಿಯನ್ನು ನೋಂದಾಯಿತ ಸ್ಥಳದಲ್ಲೆ ವಿತರಿಸಲಾಗುತ್ತದೆ.<br><br>ಸದರಿ ಕಾರ್ಮಿಕರು ಒಂದು ವರ್ಷಕ್ಕೆ ಪ್ರಧಾನ ಮಂತ್ರಿ ಸುರಕ್ಷಾ ಭೀಮಾ ಯೋಜನೆ (PM-SBY) ಪ್ರಯೋಜನ ಪಡೆಯಬಹುದು (ಅಪಘಾತ ವಿಮೆಯಾಗಿದ್ದು, ಅಪಘಾತದಿಂದ ಮರಣ ಹೊಂದಿದಲ್ಲಿ ಅಥವಾ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷ ಹಾಗೂ ಭಾಗಶಃ ಅಂಗವೈಕಲ್ಯಕ್ಕೆ ರೂ.1 ಲಕ್ಷ ಪರಿಹಾರ).<br><br>3. **ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**<br>ಈ ಮಂಡಳಿಯಲ್ಲಿ ಕಾರ್ಮಿಕರನ್ನು ನೊಂದಣಿ ಮಾಡುವ ವ್ಯವಸ್ಥೆ ಇರುವುದಿಲ್ಲ.<br><br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 20:40:20 ರ ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಪ್ರತಿ ಕಾರ್ಮಿಕರಿಂದ ರೂ 20/- ಮತ್ತು ಪ್ರತಿ ಕಾರ್ಮಿಕರಿಗೆ ಮಾಲೀಕರಿಂದ ರೂ 40/- ರಂತೆ ಹಾಗೂ ಸರ್ಕಾರದಿಂದ ಪ್ರತಿ ಕಾರ್ಮಿಕರಿಗೆ ರೂ. 20/- ರಂತೆ ಸಹಾಯಾನುದಾನವನ್ನು ವಂತಿಗೆಯಾಗಿ ನೀಡಲಾಗುತ್ತಿದೆ. ಈ ವಂತಿಗೆಯ ಮೊತ್ತವನ್ನು ಸಂಘಟಿತ ಕಾರ್ಮಿಕರಿಗೆ ಕಲ್ಯಾಣ ಯೋಜನೆಗಳಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ. |

| | | |
|---|---|---|
| | | 1) ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2) ಕಾರ್ಮಿಕರಿಗೆ ವೈದ್ಯಕೀಯ ನೆರವು<br>3) ಕಾರ್ಮಿಕರಿಗೆ ಅಪಘಾತ ಧನ ಸಹಾಯ<br>4) ಮಹಿಳಾ ಕಾರ್ಮಿಕರಿಗೆ ಹೆರಿಗೆ ಭತ್ಯೆ ಸೌಲಭ್ಯ<br>5) ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ<br>6) ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ<br>7) ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ. |
| ಅ) | ಆಟೋರಿಕ್ಷಾ, ಟ್ಯಾಕ್ಸಿ, ಸರಕು ಸಾಗಾಣಿಕ ವಾಹನಗಳ ಚಾಲಕರು, ಟೈಲರ್, ಧ್ವನಿವರ್ಧಕ ಮತ್ತು ಲೈಟಿಂಗ್ಸ್ ವೃತ್ತಿ ನಿರತರು ಅಸಂಘಟಿತ ಕಾರ್ಮಿಕರಾಗಿದ್ದು, ಇವರಿಗೆ ಕಾರ್ಮಿಕ ಇಲಾಖೆಯಿಂದ ನೀಡಲಾಗಿರುವ ಸೌಲಭ್ಯಗಳೇನು; | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಆಟೋರಿಕ್ಷಾ, ಟ್ಯಾಕ್ಸಿ, ಸರಕು ಸಾಗಾಣಿಕ ವಾಹನಗಳ ಚಾಲಕರಿಗೆ ಅಪಘಾತ ಪರಿಹಾರ ಸೌಲಭ್ಯ ಹಾಗೂ ಶೈಕ್ಷಣಿಕ ಧನ ಸಹಾಯ ಸೌಲಭ್ಯವನ್ನು ಒದಗಿಸಲಾಗುತ್ತಿದೆ.<br>ಪ್ರಸ್ತುತ ಟೈಲರ್, ಧ್ವನಿವರ್ಧಕ ಮತ್ತು ಲೈಟಿಂಗ್ಸ್ ವೃತ್ತಿ ನಿರತರು ಒಳಗೊಂಡಂತೆ ಉಳಿದ ಅಸಂಘಟಿತ ವರ್ಗಗಳ ಕಾರ್ಮಿಕರಿಗೆ ಯಾವುದೇ ಸೌಲಭ್ಯಗಳನ್ನು ಈ ಮಂಡಳಿಯ ಮೂಲಕ ಒದಗಿಸುತ್ತಿಲ್ಲ. |
| ಇ) | ಕಾರ್ಮಿಕ ಇಲಾಖೆಯಿಂದ ನೀಡಲಾಗುವ ಆಟೋರಿಕ್ಷಾ, ಟ್ಯಾಕ್ಸಿ, ಸರಕು ಸಾಗಾಣಿಕ ವಾಹನಗಳ ಚಾಲಕರು, ಟೈಲರ್, ಧ್ವನಿವರ್ಧಕ ಮತ್ತು ಲೈಟಿಂಗ್ಸ್ ವೃತ್ತಿ ನಿರತ ಕಾರ್ಮಿಕರಿಗೆ ಎಲ್ಲಾ ಸೌಲಭ್ಯಗಳನ್ನು ವಿಸ್ತರಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಕೇಂದ್ರ ಸರ್ಕಾರದ ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಾಯಿತ ಆಟೋರಿಕ್ಷಾ, ಟ್ಯಾಕ್ಸಿ, ಸರಕು ಸಾಗಾಣಿಕ ವಾಹನಗಳ ಚಾಲಕರು, ಟೈಲರ್, ಧ್ವನಿವರ್ಧಕ ಮತ್ತು ಲೈಟಿಂಗ್ಸ್ ವೃತ್ತಿ ನಿರತ ಕಾರ್ಮಿಕರು ಸೇರಿದಂತೆ ಎಲ್ಲಾ ಅಸಂಘಟಿತ ವರ್ಗಗಳ ಕಾರ್ಮಿಕರಿಗೆ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ, 2008ರನ್ವಯ ನಿಗಧಿಪಡಿಸಲಾದ ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |

**ಕಾಇ 75 ಎಲ್‌ಇಟಿ 2023**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಅನುಬಂಧ-1

## ವಿಧಾನ ಸಭೆಯ ಸದಸ್ಯರಾದ ಮಾನ್ಯ ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ (ಬೈಂದೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 459

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಬಿತರಿಗೆ ಸಹಾಯಧನ ನೀಡಲು ಈ ಕೆಳಕಂಡ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿದೆ:**

1. **ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ** ಮಾಸಿಕ **ರೂ.3,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1500/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ (ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. **ಟ್ರೈನಿಂಗ್-ಕಮ್-ಟೂಲ್ ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.20,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ (ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಗುವಿನ ಜನನಕ್ಕೆ **ರೂ.50,000/-**
9. **ಶಿಶು ಪಾಲನಾ ಸೌಲಭ್ಯ:**06 ತಿಂಗಳಿನಿಂದ 06 ವರ್ಷದೊಳಗಿನ ಫಲಾನುಭವಿಗಳ ಮಕ್ಕಳ ಪಾಲನೆಗಾಗಿ ಕಾರ್ಮಿಕರು ಕೆಲಸದ ಸ್ಥಳಗಳಲ್ಲಿ.
10. **ಅಂತ್ಯಕ್ರಿಯೆ ವೆಚ್ಚ : ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.71,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5 | **5,000** |
| 2 | 1 ರಿಂದ 4ನೇ ತರಗತಿ | **5,000** |
| 3 | 5 ರಿಂದ 8ನೇ ತರಗತಿ | **8,000** |
| 4 | 9 ಹಾಗೂ 10ನೇ ತರಗತಿ | **12,000** |

| | | |
|---|---|---|
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು |
| ತಾಂತ್ರೀಕ/ ವೈದ್ಯಕೀಯ ಎನ್‌ಇಇಟಿ ಅಥವಾ ಕೆಸಿಇಟಿ | | |
| 12 | ಬಿಇ / ಬಿ.ಟೆಕ್ಅಥವಾ ಸಂಬಂಧಪಟ್ಟಯೂಜಿಕೋರ್ಸ್ | ಸದರಿ ಕೋರ್ಸ್‌ನ ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರ ಕೋರ್ಸ್) | ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕ ರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್‌ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರ ಕೋರ್ಸ್ | ರೂ.60,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆ ಗರಿಷ್ಠಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್ ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ |

| | | ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
|---|---|---|
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | **ಪಾವತಿಸಿದ ಬೋದನಾ ಶುಲ್ಕ** |

12. **ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ **ರೂ.300/–** ರಿಂದ **ರೂ.20,000/–**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ **ರೂ.5,00,000/–**, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ **ರೂ.2,00,000/– ಮತ್ತು** ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ **ರೂ.1,00,000/–**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲುತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/–**ವರೆಗೆ
15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್):** ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.60,000/–**
16. **ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪಾರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಪ್ರತಿಷ್ಟೀತ ಸಂಸ್ಥೆಗಳಿಂದ ತರಬೇತಿ ಮತ್ತುಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲು ತಗಲುವ ವೆಚ್ಚವನ್ನು ಮಂಡಳಿವತಿಯಿಂದ ಭರಿಸಲಾಗುವುದು.**
17. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ:** ನೋಂದಾಯಿತ ಫಲಾನುಭವಿಗಳಿಗೆ **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ವಿತರಣೆ**
18. **ತಾಯಿ ಮಗು ಸಹಾಯ ಹಸ್ತ:** ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕರೂ.6,000/– ಗಳ ಸಹಾಯಧನ.
19. ಇಮ್ಯೆನಿಟಿ ಬೂಸ್ಟರ್‌ಕಿಟ್ ವಿತರಣೆ

20. ಪ್ರಿವೆಂಟಿವ್ ಹೆಲ್ತ್‌ಕೇರ್‌ಯೋಜನೆ

21. ಮೋಬೈಲ್ ಮೆಡಿಕಲ್‌ಕೇರ್‌ಯೂನಿಟ್

22.ಪೈಲಟ್ ಟ್ರೈನಿಂಗ್: ಫಲಾನುಭವಿಯ ಆಯ್ಕೆಯಾದ ಮಕ್ಕಳಿಗೆ

23.ವಿದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿ ಶೈಕ್ಷಣಿಕ ಸಹಾಯಧನ ಸೌಲಭ್ಯ

24.ನ್ಯೋಟ್ರೀಸನ್ ಕಿಟ್ಸ್:

(13)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 461
ಉತ್ತರಿಸಬೇಕಾದ ದಿನಾಂಕ : 15.02.2023
ಸದಸ್ಯರ ಹೆಸರು : ಶ್ರೀ ಸುಕುಮಾರ್ ಶೆಟ್ಟಿ ಬಿ.ಎಂ. (ಬೈಂದೂರು)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕ್ರೀಡಾ ಇಲಾಖೆಯಲ್ಲಿರುವ ವಿವಿಧ ಯೋಜನೆಗಳಾವುವು? ಕ್ರೀಡಾ ಉತ್ತೇಜಕ್ಕಾಗಿ ಯಾವ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿರುವ ವಿವಿಧ ಯೋಜನೆಗಳು ಹಾಗೂ ಕ್ರೀಡಾ ಉತ್ತೇಜನಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರವನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕ್ರೀಡಾ ಉತ್ತೇಜನಕ್ಕಾಗಿ ಕಳೆದ ಮೂರು ವರ್ಷಗಳಲ್ಲಿ ಹಮ್ಮಿಕೊಂಡ ಕಾರ್ಯಕ್ರಮಗಳಾವುವು; (ಸಂಪೂರ್ಣ ವಿವರ ಒದಗಿಸುವುದು) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕ್ರೀಡಾ ಉತ್ತೇಜನಕ್ಕಾಗಿ ಕಳೆದ ಮೂರು ವರ್ಷಗಳಲ್ಲಿ ಹಮ್ಮಿಕೊಂಡ ಕಾರ್ಯಕ್ರಮಗಳ ವಿವರವನ್ನು **ಅನುಬಂಧ-2** ರಲ್ಲಿ ನೀಡಲಾಗಿದೆ. |
| ಇ) | ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕ್ರೀಡಾ ಉತ್ತೇಜನಕ್ಕಾಗಿ ಸುಸಜ್ಜಿತ ಕ್ರೀಡಾಂಗಣ ನಿರ್ಮಾಣದ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವ ಹಂತದಲ್ಲಿದೆ? | ಹೌದು.<br><br>ಬೈಂದೂರು ತಾಲ್ಲೂಕಿನಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಡಿ ತಾಲ್ಲೂಕು ಕ್ರೀಡಾಂಗಣವನ್ನು ನಿರ್ಮಿಸುವ ಯೋಜನೆಗೆ ಮೆ: ಐಡೆಕ್ ಸಂಸ್ಥೆಯನ್ನು ವಹಿವಾಟು ಸಲಹೆಗಾರರಾಗಿ ದಿನಾಂಕ: 19-05-2022 ರಂದು ನೇಮಕ ಮಾಡಿಕೊಂಡು ಕರಾರು ಒಪ್ಪಂದ ಮಾಡಿಕೊಳ್ಳಲಾಗಿದೆ.<br><br>ಸದರಿ ಸಂಸ್ಥೆಯವರು ಸ್ಥಳ ಅಧ್ಯಯನ ಕೈಗೊಂಡು, ಕರಡು ಆರ್ಥಿಕ ಕಾರ್ಯ ಸಾಧ್ಯತಾ ವರದಿಯನ್ನು ತಯಾರಿಸಿ ಸಲ್ಲಿಸಿದ್ದು, ಪ್ರಸ್ತುತ ಪರಿಶೀಲನೆಯಲ್ಲಿದೆ. |

ವೈಎಸ್‌ಡಿ-ಇಬಿಬಿ/14/2023

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

## ಅನುಬಂಧ-1

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಲ್ಲಿರುವ ವಿವಿಧ ಯೋಜನೆಗಳು ಹಾಗೂ ಕ್ರೀಡಾ ಉತ್ತೇಜನಕ್ಕಾಗಿ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರ

1. **ಕ್ರೀಡಾ ಮೂಲಸೌಕರ್ಯಗಳ ಸೃಜನೆ:** ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ನಿವೇಶನಗಳಲ್ಲಿ ಕ್ರಿಡಾ ಮೂಲಸೌಕರ್ಯಗಳನ್ನು ಸೃಜಿಸುವ ಮೂಲಕ ಕ್ರೀಡಾಪಟುಗಳ ಕ್ರೀಡಾ ತರಬೇತಿಗೆ ಉತ್ತೇಜನ ನೀಡಲಾಗುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ಹೊರತುಪಡಿಸಿ, 29 ಜಿಲ್ಲಾ ಕೇಂದ್ರಗಳು ಹಾಗೂ 121 ತಾಲ್ಲೂಕು ಕೇಂದ್ರಗಳಲ್ಲಿ ಕ್ರೀಡಾಂಗಣಗಳನ್ನು ನಿರ್ಮಿಸಲಾಗಿದೆ. ರಾಜ್ಯದ 29 ಸ್ಥಳಗಳಲ್ಲಿ ಈಜುಕೊಳಗಳು ಹಾಗೂ 44 ಸ್ಥಳಗಳಲ್ಲಿ ಒಳಾಂಗಣ ಕ್ರೀಡಾಂಗಣಗಳನ್ನು ನಿರ್ಮಿಸಲಾಗಿದೆ. ಅಲ್ಲದೇ, ರಾಜ್ಯದ 15 ಸ್ಥಳಗಳಲ್ಲಿ ಆಧುನಿಕ ಸಿಂಥೆಟಿಕ್ ಅಥ್ಲೆಟಿಕ್ಸ್ ಟ್ರ್ಯಾಕ್‌ಗಳು ಹಾಗೂ 04 ಸ್ಥಳಗಳಲ್ಲಿ ಹಾಕಿ ಟರ್ಫ್‌ಗಳನ್ನು ಅಳವಡಿಸಲಾಗಿದೆ.
2. **ನಗದು ಪುರಸ್ಕಾರ:** ರಾಷ್ಟ್ರೀಯ ಮತ್ತು ಅಂತರ-ರಾಷ್ಟ್ರೀಯ ಮಟ್ಟದ ಕ್ರೀಡಾಕೂಟಗಳಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ಕೆಳಕಾಣಿಸಿದಂತೆ ನಗದು ಪುರಸ್ಕಾರವನ್ನು ನೀಡಲಾಗುತ್ತಿದೆ.

| ಕ್ರಸ | ವಿವರ | ಚಿನ್ನ (ರೂ ಲಕ್ಷಗಳಲ್ಲಿ) | ಬೆಳ್ಳಿ (ರೂ ಲಕ್ಷಗಳಲ್ಲಿ) | ಕಂಚು (ರೂ ಲಕ್ಷಗಳಲ್ಲಿ) |
|---|---|---|---|---|
| 1 | ಒಲಂಪಿಕ್ಸ್ | 500.00 | 300.00 | 200.00 |
| 2 | ಏಷಿಯನ್ ಗೇಮ್ಸ್ | 25.00 | 15.00 | 8.00 |
| 3 | ಕಾಮನ್ ವೆಲ್ತ್ ಗೇಮ್ಸ್ | 25.00 | 15.00 | 8.00 |
| 4 | ವಿಶ್ವ ಕಪ್/ಚಾಂಪಿಯನ್‌ಶಿಪ್ (ಭಾರತ ಸರ್ಕಾರದಿಂದ ಅಂಗೀಕೃತವಾಗಿ ಭಾರತ ತಂಡದ ಭಾಗವಾಗಿ ಪ್ರತಿನಿಧಿಸಿರಬೇಕು) | 5.00 | 3.00 | 2.00 |
| 5 | ನ್ಯಾಷನಲ್ ಗೇಮ್ಸ್ (ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಕ್ರೀಡೆಗಳು) | 5.00 | 3.00 | 2.00 |
| 6 | ನ್ಯಾಷನಲ್ ಚಾಂಪಿಯನ್ ಶಿಪ್ (ಒಲಂಪಿಕ್ ಕ್ರೀಡೆಗಳಿಗೆ) | 2.00 | 1.00 | 0.50 |
| 7 | ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.50 | 0.25 | 0.15 |
| 8 | ಸಬ್ ಜೂನಿಯರ್ ನ್ಯಾಷನಲ್ (ಒಲಂಪಿಕ್ ಕ್ರೀಡೆಗಳಿಗೆ) | 0.25 | 0.15 | 0.10 |

3. **ಏಕಲವ್ಯ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ಪ್ರತಿ ವರ್ಷ ಏಕಲವ್ಯ ಪ್ರಶಸ್ತಿ ನೀಡಲಾಗುತ್ತಿದೆ.
4. **ಜೀವಮಾನ ಸಾಧನೆ ಪ್ರಶಸ್ತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದ ಕ್ರೀಡಾಪಟುಗಳಿಗೆ ತರಬೇತಿ ನೀಡಿದ ರಾಜ್ಯದ ತರಬೇತುದಾರರಿಗೆ ಅವರ ಜೀವಮಾನ ಸಾಧನೆಗೆ ಜೀವಮಾನ ಸಾಧನೆ ಪ್ರಶಸ್ತಿಯನ್ನು ಪ್ರತಿ ವರ್ಷ ನೀಡಲಾಗುತ್ತಿದೆ.

5. **ಕ್ರೀಡಾ ಪೋಷಕ ಪ್ರಶಸ್ತಿ:** ಕ್ರೀಡೆಯ ಅಭಿವೃದ್ಧಿಗೆ ಗಣನೀಯ ಕೊಡುಗೆ ನೀಡಿದ ಖಾಸಗಿ ಸಂಘ-ಸಂಸ್ಥೆಗಳಿಗೆ ಉತ್ತೇಜನ ನೀಡಲು ಕ್ರೀಡಾ ಪೋಷಕ ಪ್ರಶಸ್ತಿಯನ್ನು ಪ್ರತಿ ವರ್ಷ ನೀಡಲಾಗುತ್ತಿದೆ.
6. **ಶೈಕ್ಷಣಿಕ ಶುಲ್ಕ ಮರುಪಾವತಿ:** ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ರಾಜ್ಯದಿಂದ ಪ್ರತಿನಿಧಿಸಿ ಸಾಧನೆ ಮಾಡಿದ ಕ್ರೀಡಾಪಟುಗಳಿಗೆ ವಾರ್ಷಿಕ ಗರಿಷ್ಠ ರೂ 50,000/- ವರೆಗೆ ಶೈಕ್ಷಣಿಕ ಶುಲ್ಕ ಮರುಪಾವತಿ ಮಾಡಲಾಗುತ್ತಿದೆ.
7. **ಕ್ರೀಡಾ ವಿದ್ಯಾರ್ಥಿ ವೇತನ:** ರಾಜ್ಯ ಮಟ್ಟದ ಪದಕ ವಿಜೇತರಾಗಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಾಧನೆ ಮಾಡಿದ ಪ್ರೌಢಶಾಲಾ ವಿದ್ಯಾರ್ಥಿಗಳಿಗೆ ರೂ 10,000/- ವಿದ್ಯಾರ್ಥಿ ವೇತನ ನೀಡಿ ಪ್ರೋತ್ಸಾಹಿಸಲಾಗುತ್ತಿದೆ.
8. **ಮಾಸಾಶನ:** 50 ವರ್ಷ ವಯೋಮಾನ ಮೀರಿದ ಕಷ್ಟ ಪರಿಸ್ಥಿತಿಯಲ್ಲಿರುವ ಮಾಜಿ ಕ್ರೀಡಾಪಟುಗಳಿಗೆ ಮಾಸಾಶನವನ್ನು ಕೆಳಕಾಣಿಸಿದಂತೆ ನೀಡಲಾಗುತ್ತಿದೆ.

| ವಿವರ | ಮಾಜಿ ಕುಸ್ತಿ ಪೈಲ್ವಾನರುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ | ಕುಸ್ತಿಯೇತರ ಮಾಜಿ ಕ್ರೀಡಾಪಟುಗಳಿಗೆ ನೀಡಲಾಗುತ್ತಿರುವ ಮಾಸಾಶನದ ವಿವರ |
|---|---|---|
| ರಾಜ್ಯ ಮಟ್ಟ | ರೂ 3,500/- | ರೂ 2,000/- |
| ರಾಷ್ಟ್ರಮಟ್ಟ | ರೂ 4,000/- | ರೂ 2,500/- |
| ಅಂತರ-ರಾಷ್ಟ್ರೀಯ ಮಟ್ಟ | ರೂ 5,000/- | ರೂ 3,000/- |

9. **'ಯುವ ಚೈತನ್ಯ':** ಯುವ ಸಂಘಗಳಿಗೆ 'ಯುವ ಚೈತನ್ಯ' ಕಾರ್ಯಕ್ರಮದಡಿ ಕ್ರೀಡಾ ಕಿಟ್ ಗಳನ್ನು ವಿತರಿಸಲಾಗುತ್ತಿದೆ.
10. ಪರಿಶಿಷ್ಟ ಜಾತಿ ಮತ್ತು ಪಂಗಡದ ಸಾಧಕ ಕ್ರೀಡಾಪಟುಗಳಿಗೆ ವಿಶೇಷ ನಗದು ಪುರಸ್ಕಾರ ವಿತರಿಸಲಾಗುತ್ತಿದೆ. ಅಂತರ-ರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಕ್ರೀಡಾಕೂಟಗಳ ಪದಕ ವಿಜೇತರಿಗೆ ಕ್ರಮವಾಗಿ ತಲಾ ರೂ 5.00, 3.00 ಮತ್ತು 1.00 ಲಕ್ಷಗಳ ನಗದು ಪುರಸ್ಕಾರ ನೀಡಲಾಗುತ್ತಿದೆ.
11. **ಕ್ರೀಡಾ ವಸತಿ ಶಾಲೆ/ನಿಲಯ:** ಕ್ರೀಡಾ ವಸತಿ ಶಾಲೆ/ನಿಲಯಗಳಲ್ಲಿ ಪ್ರವೇಶ ಪಡೆಯುವ ಪ್ರತಿಭಾವಂತ ಯುವ ಕ್ರೀಡಾಪಟುಗಳಿಗೆ ಉಚಿತ ಊಟೋಪಹಾರ, ವಸತಿ, ಕ್ರೀಡಾ ತರಬೇತಿ ಮತ್ತು ಕ್ರೀಡಾ ಸಮವಸ್ತ್ರ ಒದಗಿಸಲಾಗುತ್ತಿದೆ. ದೈಹಿಕ ಕ್ಷಮತಾ ಪರೀಕ್ಷೆಗಳಲ್ಲಿ ಹಾಗೂ ಕ್ರೀಡಾ ಕೌಶಲ್ಯ ಪರೀಕ್ಷೆ ಆಧಾರಿತವಾಗಿ 5ನೇ ತರಗತಿ ಮೇಲ್ಪಟ್ಟ ಕ್ರೀಡಾಪಟುಗಳಿಗೆ ಆಯ್ಕೆ ಪ್ರಕ್ರಿಯೆ ನಡೆಸಿ, ಪ್ರವೇಶಾವಕಾಶ ಕಲ್ಪಿಸಲಾಗುತ್ತಿದೆ.
12. **ಗರಡಿ ಮನೆ ನಿರ್ಮಾಣ:** ಕುಸ್ತಿ ಕ್ರೀಡಾಪಟುಗಳಿಗೆ ಉತ್ತೇಜನ ನೀಡುವ ಸಲುವಾಗಿ ಗರಡಿ ಮನೆ ನಿರ್ಮಾಣಕ್ಕೆ ತಲಾ ರೂ 10.00 ಲಕ್ಷ ಅನುದಾನ ನೀಡಲಾಗುತ್ತಿದೆ. ಮತ್ತು ನವೀಕರಣಕ್ಕೆ ಆದ್ಯತೆ ನೀಡಲಾಗುತ್ತಿದೆ.
13. **ನಮ್ಮೂರ ಶಾಲೆಗೆ ನಮ್ಮ ಯುವಜನರು:** ಈ ಕಾರ್ಯಕ್ರಮದಡಿ ಕ್ರೀಡಾ ಕ್ಷೇತ್ರದಡಿ ಸಾಧನೆ ಮಾಡಿದ ಸರಕಾರಿ ಶಾಲೆಗಳು ಕ್ರೀಡಾ ಚಟುವಟಿಕೆಗಳ

ಪ್ರೋತ್ಸಾಹಕ್ಕಾಗಿ ಕ್ರೀಡಾ ಸಾಮಗ್ರಿಗಳನ್ನು ಪೂರೈಸಿಕೊಳ್ಳಲು ಪ್ರೋತ್ಸಾಹಧನ ಮತ್ತು ದೈಹಿಕ ಶಿಕ್ಷಕರ ಗೌರವಧನ ನೀಡಲಾಗುವುದು.

14. **ಯುವ ಶಕ್ತಿ ಕೇಂದ್ರ:** ಯುವಜನರ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಲು ಇಲಾಖಾ ಕ್ರೀಡಾಂಗಣಗಳು, ಕ್ರೀಡಾ ವಸತಿ ನಿಲಯಗಳು ಮತ್ತು ಸರ್ಕಾರಿ ಕಾಲೇಜುಗಳಿಗೆ ಜಿಮ್ ಉಪಕರಣಗಳನ್ನು ಒದಗಿಸಲಾಗುವುದು.
15. ಮಾನ್ಯತೆ ಪಡೆದ ರಾಜ್ಯ ಕ್ರೀಡಾ ಸಂಸ್ಥೆಗಳಿಗೆ ಕ್ರೀಡಾಕೂಟಗಳ ಆಯೋಜನೆ, ತರಬೇತಿ ಶಿಬಿರಗಳ ಆಯೋಜನೆ ಹಾಗೂ ಕ್ರೀಡಾಕೂಟಗಳಿಗೆ ರಾಜ್ಯ ತಂಡದ ನಿಯೋಜನೆಗೆ ಅನುದಾನ ನೀಡಲಾಗುತ್ತಿದೆ.
16. ಯುವಜನರಿಗೆ ಸಾಹಸ ಕ್ರೀಡಾ ಪ್ರಶಿಕ್ಷಕರಾಗಲು ವಿವಿಧ ಹಂತಗಳ ತರಬೇತಿಯನ್ನು ನೀಡಲಾಗುತ್ತಿದೆ.
17. ರಾಷ್ಟ್ರೀಯ ಸೇವಾ ಯೋಜನೆ ಮೂಲಕ ನಿಮ್ಹಾನ್ಸ್ ಸಂಸ್ಥೆಯ ಸಹಯೋಗದೊಂದಿಗೆ ಜೀವನ ಕೌಶಲ್ಯ ತರಬೇತಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.
18. **'ಅಮೃತ ಕ್ರೀಡಾ ದತ್ತು ಯೋಜನೆ':** ಭಾರತದ ಸ್ವಾತಂತ್ರ್ಯದ 75ನೇ ವರ್ಷದ ಆಚರಣೆಯ ಅಂಗವಾಗಿ 75 ಯುವ ಪ್ರತಿಭಾವಂತ ಕ್ರೀಡಾಪಟುಗಳನ್ನು ಗುರುತಿಸಿ, ಅವರಿಗೆ ಉತ್ತೇಜನ ನೀಡಲು **'ಅಮೃತ ಕ್ರೀಡಾ ದತ್ತು ಯೋಜನೆ'** ರೂಪಿಸಲಾಗಿದೆ. 2024 ರ ಪ್ಯಾರಿಸ್ ಒಲಿಂಪಿಕ್ಸ್‌ನಲ್ಲಿ ರಾಷ್ಟ್ರಕ್ಕೆ ಕೀರ್ತಿ ತರಲು ಸಹಾಯಕವಾಗುವಂತೆ ಅವರ ಕ್ರೀಡಾ ತರಬೇತಿಗೆ ಅಂದಾಜು ತಲಾ ರೂ 10.00 ಲಕ್ಷ ಅನುದಾನವನ್ನು ಒದಗಿಸಲಾಗುವುದು.

# ಅನುಬಂಧ-2

## ಬೈಂದೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕ್ರೀಡಾ ಉತ್ತೇಜನಕ್ಕಾಗಿ ಕಳೆದ ಮೂರು ವರ್ಷಗಳಲ್ಲಿ ಹಮ್ಮಿಕೊಂಡ ಕಾರ್ಯಕ್ರಮಗಳ ವಿವರಗಳು

| ಕ್ರ ಸ | 2019-20 | 2020-21 | 2021-22 |
|---|---|---|---|
| 1 | 2019-20 ನೇ ಸಾಲಿನಲ್ಲಿ ಹನ್ನೊಂದು (11) ಶಾಲೆಗಳಿಗೆ ತಲಾ. ರೂ 20000/- ದಂತೆ ಕ್ರೀಡೋಪಕರಣ ಅನುದಾನ ನೀಡಲಾಗಿದೆ.<br><br>1) ಸರ್ಕಾರಿ ಪ್ರೌಢ ಶಾಲೆ, ಉಪ್ಪುಂದ<br>2) ಸರ್ಕಾರಿ ಪ್ರೌಢ ಶಾಲೆ, ಶಿರೂರು<br>3) ಸರ್ಕಾರಿ ಪ್ರೌಢ ಶಾಲೆ, ಮರವಂತೆ<br>4) ಸರ್ಕಾರಿ ಪ್ರೌಢ ಶಾಲೆ, ಹಕ್ಲಾಡಿ<br>5) ಸರ್ಕಾರಿ ಪ್ರೌಢ ಶಾಲೆ, ಆಲೂರು<br>6) ಸರ್ಕಾರಿ ಪ್ರೌಢ ಶಾಲೆ, ವಂಡ್ಸೆ<br>7) ಸರ್ಕಾರಿ ಪ್ರೌಢ ಶಾಲೆ, ಸಿದ್ದಾಪುರ<br>8) ಸರ್ಕಾರಿ ಪ್ರೌಢ ಶಾಲೆ, ಬೈಂದೂರು<br>9) ಸರ್ಕಾರಿ ಪ್ರೌಢ ಶಾಲೆ, ಕಂಡ್ಲೂರು<br>10) ಸರ್ಕಾರಿ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ), ನಾವುಂದ<br>11) ಸರ್ಕಾರಿ ಪ್ರೌಢ ಶಾಲೆ, ಗುಜ್ಜಾಡಿ | 2020-21 ನೇ ಸಾಲಿನಲ್ಲಿ ಹತ್ತು (10) ಶಾಲೆಗಳಿಗೆ ತಲಾ ರೂ 20000/- ದಂತೆ ಕ್ರೀಡೋಪಕರಣ ಅನುದಾನ ನೀಡಲಾಗಿದೆ.<br><br>1) ಸರ್ಕಾರಿ ಪ್ರೌಢ ಶಾಲೆ, ಶಿರೂರು<br>2) ರತ್ತೂಬಾಯಿ ಜನತಾ ಪ್ರೌಢ ಶಾಲೆ, ಬೈಂದೂರು<br>3) ಮೂಕಾಂಬಿಕಾ ಪ್ರೌಢ ಶಾಲೆ, ಅರೆಶಿರೂರು<br>4) ಮೂಕಾಂಬಿಕಾ ಪ್ರೌಢ ಶಾಲೆ, ಹೊಸೂರು<br>5) ಸರ್ಕಾರಿ ಪ್ರೌಢ ಶಾಲೆ, ಶಂಕರನಾರಾಯಣ<br>6) ಮೂಕಾಂಬಿಕಾ ಪ್ರೌಢ ಶಾಲೆ, ಕೊಲ್ಲೂರು<br>7) ಸರ್ಕಾರಿ ಪದವಿ ಪೂರ್ವ ಕಾಲೇಜು ಬೈಂದೂರು<br>8) ಸಂಜಯಗಾಂಧಿ ಪ್ರೌಢಶಾಲೆ, ಅಂಪಾರು<br>9) ಸರ್ಕಾರಿ ಪ್ರೌಢ ಶಾಲೆ, ಹಾಲಾಡಿ ಬಿದ್ಕಲ್ ಕಟ್ಟೆ<br>10) ಸರ್ಕಾರಿ ಪ್ರೌಢ ಶಾಲೆ, ಬಿಜೂರು | 2021-22 ನೇ ಸಾಲಿನಲ್ಲಿ ನಾಲ್ಕು (4) ಶಾಲೆಗಳಿಗೆ ತಲಾ ರೂ 20000/- ದಂತೆ ಕ್ರೀಡೋಪಕರಣ ಅನುದಾನ ನೀಡಲಾಗಿದೆ.<br><br>1) ಸರ್ಕಾರಿ ಪ್ರೌಢ ಶಾಲೆ, ಕಿರಿಮಂಜೇಶ್ವರ<br>2) ಸರ್ಕಾರಿ ಪ್ರೌಢ ಶಾಲೆ, ತಲ್ಲೂರು<br>3) ಸರ್ಕಾರಿ ಪ್ರೌಢ ಶಾಲೆ, ಚಿತ್ತೂರು<br>4) ಸರ್ಕಾರಿ ಪ್ರೌಢ ಶಾಲೆ, ಕಂಬದಕೋಣೆ |
| 2 | ಸರ್ಕಾರಿ ಪ್ರೌಢಶಾಲಾ, ಬೈಂದೂರು ನಲ್ಲಿ ಬಯಲುರಂಗ ಮಂದಿರ ನಿರ್ಮಾಣಕ್ಕಾಗಿ ರೂ. 5.00 ಲಕ್ಷ ಅನುದಾನ ಒದಗಿಸಲಾಗಿದೆ. | - | - |
| 3 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ತಗ್ಗರ್ಸೆ ಇಲ್ಲಿ ಆಟದ ಮೈದಾನ ಅಭಿವೃದ್ದಿಗಾಗಿ ರೂ 1.45 ಲಕ್ಷ ಅನುದಾನ ನೀಡಲಾಗಿದೆ | - | - |
| 4 | ಯುವಚೈತನ್ಯ ಯೋಜನೆಯಡಿ 05 ಯುವಕ ಸಂಘಗಳಿಗೆ ಕ್ರೀಡಾ ಕಿಟ್ ವಿತರಿಸಲಾಗಿದೆ.<br>1) ಕೀರ್ತಿ ಸ್ಪೋರ್ಟ್ಸ್ ಕ್ಲಬ್, ಯಡ್ತರೆ<br>2) ಮಾರಿಕಾಂಬ ಯೂತ್ ಕ್ಲಬ್, ಕಳವಾಡಿ<br>3) ಮಹಾಸತಿ ಫ್ರೆಂಡ್ಸ್ ಕ್ರೀಡಾ ಸಂಘ, ಮಯ್ಯಾಡಿ<br>4) ಮಹಾವಿಷ್ಣು ಯುವಕ ಮಂಡಲ, ಹರಗೋಡು<br>5) ಸೇನೇಶ್ವರ ಕಲಾ ಮತ್ತು ಕ್ರೀಡಾ ಸಂಘ, ಬೈಂದೂರು | - | - |
| 5 | ಕೀರ್ತಿ ಯೂತ್ & ಸ್ಪೋರ್ಟ್ಸ್ ಕ್ಲಬ್, ಬೈಂದೂರು ಇವರಿಗೆ ರೂ 10,000/- ರಂತೆ ಕ್ರೀಡೋಪಕರಣ ಅನುದಾನ ನೀಡಲಾಗಿದೆ. | - | ದುರ್ಗಾ ಜಟ್ಟಿಗೇಶ್ವರ ಸಾಂಸ್ಕೃತಿಕ ಮತ್ತು ಕ್ರೀಡಾ ಸಂಘ, ಬೈಂದೂರು ಇವರಿಗೆ ರೂ 10,000/- ದಂತೆ ಕ್ರೀಡೋಪಕರಣ ಅನುದಾನ ನೀಡಲಾಗಿದೆ. |

**ಗ್ರಾಮೀಣ ಕ್ರೀಡೆಗಳು ಮತ್ತು ಪಂದ್ಯಗಳು ಯೋಜನೆಯಡಿ ಬೈಂದೂರು ವಿಧಾನಸಭಾ ವ್ಯಾಪ್ತಿಯ ಒಟ್ಟು ಈ ಕೆಳಕಂಡ ಒಟ್ಟು 24 ಶಾಲೆಗಳಿಗೆ ರಾಜ್ಯ ವಲಯದಿಂದ ಸರಬರಾಜು ಮಾಡಲಾದ ಕ್ರೀಡಾ ಸಾಮಗ್ರಿಗಳನ್ನು ವಿತರಿಸಲಾಗಿರುವ ವಿವರ.**

| ಕ್ರ.ಸಂ. | ಶಾಲೆಗಳ ಹೆಸರು |
|---|---|
| 1 | ಸರ್ಕಾರಿ ಪ್ರೌಢ ಶಾಲೆ, ಆಲೂರು |
| 2 | ನೇತಾಜಿ ಸುಭಾಷ್ ಚಂದ್ರ ಬೋಸ್ ಸರ್ಕಾರಿ ಪ್ರೌಢಶಾಲೆ, ಮರವಂತೆ |
| 3 | ಕರ್ನಾಟಕ ಪಬ್ಲಿಕ್ ಸ್ಕೂಲ್ ವಂಡ್ಸೆ |
| 4 | ಸರ್ಕಾರಿ ಪ್ರೌಢ ಶಾಲೆ, ಚಿತ್ತೂರು |
| 5 | ಸರ್ಕಾರಿ ಪ್ರೌಢ ಶಾಲೆ, ಕಿರಿಮಂಜೇಶ್ವರ |
| 6 | ಸರ್ಕಾರಿ ಪ್ರೌಢ ಶಾಲೆ, ತಲ್ಲೂರು |
| 7 | ಸರ್ಕಾರಿ ಹಿರಿಯ ಪ್ರೌಢ ಶಾಲೆ, ಆಜ್ರಿಹರ |
| 8 | ಸರ್ಕಾರಿ ಹಿರಿಯ ಪ್ರೌಢ ಶಾಲೆ, ಗುಜ್ಜಾಡಿ |
| 9 | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಬೈಂದೂರು |
| 10 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ವಂಡ್ಸೆ |
| 11 | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಕಿರಿಮಂಜೇಶ್ವರ |
| 12 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಳ್ಳೂರು ಮೂಡುಮಠ |
| 13 | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಮಟ್ಟಿನಹೊಳೆ |
| 14 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಪ್ಪುಂದ |
| 15 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕಕ್ಕುಂಜೆ |
| 16 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹೆಸ್ಕುತ್ತೂರು |
| 17 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಉಳ್ಳೂರು |
| 18 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಪಡುವಾಲ್ತೂರು |
| 19 | ಸರ್ಕಾರಿ ಪ್ರೌಢ ಶಾಲೆ, ಕಿತ್ತೂರು |
| 20 | ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಶಂಕರನಾರಾಯಣ |
| 21 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಮೂಡುವಾಲ್ತೂರು |
| 22 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ವಾರಾಹಿ ಕಳಿನಜಡ್ಡು |
| 23 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಆಜ್ರಿ |
| 24 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ನೇರಳಕಟ್ಟೆ |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆಸಂಖ್ಯೆ : 462

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಕುಮಾರ ಸ್ವಾಮಿ ಹೆಚ್ .ಕೆ ( ಸಕಲೇಶಪುರ )

ಉತ್ತರಿಸಬೇಕಾದ ದಿನಾಂಕ : 15-02-2023

ಉತ್ತರಿಸುವ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತುಸಾಂಖ್ಯಿಕ ಸಚಿವರು.

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾಸನ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಹಾಲಿ ಮಂಜೂರಾಗಿರುವ ಹುದ್ದೆಗಳೆಷ್ಟು; ಭರ್ತಿಯಾಗಿರುವ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳೆಷ್ಟು; (ತಾಲ್ಲೂಕುವಾರು ವಿವಿಧ ವೃಂದಗಳವಾರು , ಸಂಪೂರ್ಣ ಮಾಹಿತಿ ನೀಡುವುದು ) | ಹಾಸನ ಜಿಲ್ಲೆಯಲ್ಲಿ ಒಟ್ಟು 228 ಹುದ್ದೆಗಳು ಮಂಜೂರಾಗಿದ್ದು 117 ಹುದ್ದೆಗಳನ್ನು ಭರ್ತಿ ಮಾಡಲಾಗಿದೆ 111 ಹುದ್ದೆಗಳು ಖಾಲಿ ಇರುತ್ತದೆ ತಾಲ್ಲೂಕಾವಾರು ವೃಂದವಾರು ವಿವರ ಕೆಳಗಿನಂತಿದೆ.<br>In Hassan District 228 posts have been sanctioned, 117 posts filled and 111 are vacant. Talluk – wise, cadre-wise details are given below: |

| ತಾಲ್ಲೂಕು Talluk | ವೃಂದ Cadre | ಮಂಜೂರಾದ ಹುದ್ದೆ Sanction posts | ಭರ್ತಿಯಾದ ಹುದ್ದೆ Filled up | ಖಾಲಿ ಹುದ್ದೆ Vacant |
|---|---|---|---|---|
| ಹಾಸನ Hassan | ಎ | 1 | 1 | 0 |
| | ಬಿ | 7 | 6 | 1 |
| | ಸಿ | 5 | 5 | 0 |
| | ಡಿ | 0 | 0 | 0 |
| | ಒಟ್ಟು | 13 | 12 | 1 |
| ಆಲೂರು Alur | ಎ | 1 | 1 | 0 |
| | ಬಿ | 5 | 2 | 3 |
| | ಸಿ | 2 | 1 | 1 |
| | ಡಿ | 1 | 0 | 1 |
| | ಒಟ್ಟು | 9 | 4 | 5 |
| ಅರಕಲಗೂಡು Arakalgudu | ಎ | 1 | 1 | 0 |
| | ಬಿ | 6 | 5 | 1 |
| | ಸಿ | 6 | 6 | 0 |
| | ಡಿ | 0 | 0 | 0 |
| | ಒಟ್ಟು | 13 | 12 | 1 |
| ಅರಸೀಕೆರೆ | ಎ | 1 | 1 | 0 |
| | ಬಿ | 7 | 7 | 0 |

| | | | | |
|---|---|---|---|---|
| Arasikere | ಸಿ | 9 | 7 | 2 |
| | ಡಿ | 1 | 0 | 1 |
| | ಒಟ್ಟು | 18 | 15 | 3 |
| ಬೇಲೂರು Beluru | ಎ | 1 | 1 | 0 |
| | ಬಿ | 6 | 5 | 1 |
| | ಸಿ | 3 | 2 | 1 |
| | ಡಿ | 3 | 0 | 3 |
| | ಒಟ್ಟು | 13 | 8 | 5 |
| ಚನ್ನರಾಯ ಪಟ್ಟಣ Chennarayapatna | ಎ | 1 | 1 | 0 |
| | ಬಿ | 7 | 6 | 1 |
| | ಸಿ | 9 | 7 | 2 |
| | ಡಿ | 3 | 2 | 1 |
| | ಒಟ್ಟು | 20 | 16 | 4 |
| ಹೊಳೆನರಸೀಪುರ Holenarasipura | ಎ | 1 | 0 | 1 |
| | ಬಿ | 4 | 2 | 2 |
| | ಸಿ | 7 | 6 | 1 |
| | ಡಿ | 6 | 0 | 6 |
| | ಒಟ್ಟು | 18 | 8 | 10 |
| ಸಕಲೇಶಪುರ Sakaleshpura | ಎ | 1 | 1 | 0 |
| | ಬಿ | 6 | 3 | 3 |
| | ಸಿ | 6 | 1 | 5 |
| | ಡಿ | 0 | 0 | 0 |
| | ಒಟ್ಟು | 13 | 5 | 8 |
| ತೋ.ಉ.ನಿ ಕಛೇರಿ ಹಾಸನ Dy.Director of Horticulture | ಎ | 1 | 1 | 0 |
| | ಬಿ | 8 | 4 | 4 |
| | ಸಿ | 7 | 5 | 2 |
| | ಡಿ | 2 | 1 | 1 |
| | ಒಟ್ಟು | 18 | 11 | 7 |
| ಹಿ.ಸ.ತೋ.ನಿ (ರಾವ) ಹಾಸನ S.A.D.H. State Sector | ಎ | 1 | 1 | 0 |
| | ಬಿ | 14 | 6 | 8 |
| | ಸಿ | 17 | 9 | 8 |
| | ಡಿ | 61 | 10 | 51 |
| | ಒಟ್ಟು | 93 | 26 | 67 |

ಘೋಷ್ವಾರೆ

| ತಾಲ್ಲೂಕು | ಮಂಜೂರಾದ ಹುದ್ದೆ ಸಂಖ್ಯೆ | ಭರ್ತಿಯಾಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಹುದ್ದೆಗಳ ಸಂಖ್ಯೆ |
|---|---|---|---|
| ಹಾಸನ | 13 | 12 | 1 |
| ಆಲೂರು | 9 | 4 | 5 |
| ಅರಕಲಗೂಡು | 13 | 12 | 1 |
| ಅರಸಿಕೇರೆ | 18 | 15 | 3 |
| ಬೇಲೂರು | 13 | 8 | 5 |
| ಚನ್ನರಾಯಪಟ್ಟಣ | 20 | 16 | 4 |
| ಹೊಳೆನರಸೀಪುರ | 18 | 8 | 10 |
| ಸಕಲೇಶಪುರ | 13 | 5 | 8 |
| ತೋ.ಉ.ನಿ ಕಛೇರಿ ಹಾಸನ | 18 | 11 | 7 |
| ಹಿ.ಸ.ತೋ.ನಿ (ರಾವ) ಹಾಸನ | 93 | 26 | 67 |
| ಒಟ್ಟು | 228 | 117 | 111 |

ಆ) ಹಾಸನ ಜಿಲ್ಲೆಯ ತೋಟಗಾರಿಕೆ ಇಲಾಖೆಯಲ್ಲಿಶೇಕಡ 80 ಕ್ಕೂ ಅಧಿಕ ಹುದ್ದೆಗಳು ಖಾಲಿ ಇರುವುದರಿಂದ ರೈತರಿಗೆ ತೊಂದರೆಯಾಗುತ್ತಿದ್ದು, ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;
( ಸಂಪೂರ್ಣ ಮಾಹಿತಿ ನೀಡುವುದು)

ಹಾಸನ ಜಿಲ್ಲೆಯ ತೋಟಗಾರಿಕೆ ಇಲಾಖೆಯಲ್ಲಿ ಶೇ. 48% ಗಳಷ್ಟು ಹುದ್ದೆಗಳು ಖಾಲಿ ಇರುತ್ತವೆ.

ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದು ಕೊಂಡಿರುವ ಕ್ರಮಗಳು ಈ ಕೆಳಕಂಡಂತಿರುತ್ತದೆ.

- 2021 ರಿಂದ 2023 ರವರೆಗೆ 13 ಸಹಾಯಕ ತೋಟಗಾರಿಕೆ ಅಧಿಕಾರಿಗಳ ಹುದ್ದೆಗಳನ್ನು ಹೊಸದಾಗಿ ನೇರ ನೇಮಕಾತಿ ಮೂಲಕ ಹಾಸನ ಜಿಲ್ಲೆಗೆ ಭರ್ತಿಮಾಡಲಾಗಿರುತ್ತದೆ.
- ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ 22 ಹುದ್ದೆಗಳಿಗೆ ಕೆ.ಪಿ.ಎಸ್.ಸಿಯಿಂದ ಆಯ್ಕೆ ಪಟ್ಟಿಯು ಅಧಿಸೂಚನೆ ಯಾಗಿ ನೇರ ನೇಮಕಾತಿ ಪ್ರಕ್ರಿಯೆಯು ದಾಖಲಾತಿ ಪರಿಶೀಲನೆ ಹಂತದಲ್ಲಿರುತ್ತದೆ.
- ಪ್ರಸ್ತುತ ಇರುವ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ವಿವಿಧ ವೃಂದದ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವ ಪ್ರಸ್ತಾವನೆಯನ್ನು 2 ವರ್ಷಗಳ ಕಾಲ ಮುಂದೂಡುವಂತೆ ಆರ್ಥಿಕ ಇಲಾಖೆಯು ದಿನಾಂಕ: 27-07-2021 ರಂದು ನೀಡಿರುವ ಅಭಿಪ್ರಾಯ ಸಂ: ಆಇ 152 ವೆಚ್ಚ-4/2021 ರಲ್ಲಿ ತಿಳಿಸಿದೆ.

| | | |
|---|---|---|
| | | In Hassan District 48 % posts are vacant in horticulture department. The following measures have been taken to fillup the vacant post.<br>• In Hassan district 13 A.H.O. posts have been filled by direct recruitment during 2021 to 2023.<br>• 22 posts of SDA selected by KPSC has been pubished. Document verification for direct recruitment is in progress. |
| | | • Finance Department vide its endorsement no. : ಆಇ 152 ವೆಚ್ಚ-4/2021 dated 27/7/2021 has informed that in view of present financial restrictions the proposal of horticulture department to fillup different cadre posts is postponed for 2 years. |

No. HORTI 52 HGM 2023

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ,
ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 463 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾರ್ಮಿಕ ಇಲಾಖೆಯಲ್ಲಿರುವ ಯೋಜನೆಗಳು ಯಾವುವು; (ಯೋಜನೆಗಳವಾರು ಸಂಪೂರ್ಣ ಮಾಹಿತಿ ನೀಡುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿಗಳ ಮೂಲಕ ವಿವಿಧ ವರ್ಗದ ಕಾರ್ಮಿಕರಿಗೆ ಹಲವಾರು ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳಡಿ ನೀಡುತ್ತಿರುವ ಯೋಜನೆಗಳ ವಿವರ ಈ ಕೆಳಕಂಡಂತಿದೆ.<br><br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಈ ಮಂಡಳಿಯ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗಾಗಿ ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಿ, ಅನುಷ್ಠಾನಗೊಳಿಸಲಾಗುತ್ತಿದೆ. ವಿವರವನ್ನು **ಅನುಬಂಧ-01**ರಲ್ಲಿ ಒದಗಿಸಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಈ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಈ ಕೆಳಕಂಡ ಯೋಜನೆಗಳನ್ನು ಜಾರಿಗೊಳಿಸುತ್ತಿದೆ.<br><br>**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>(ಅ)**ಅಪಘಾತ ಪರಿಹಾರ ಸೌಲಭ್ಯ:** ಈ ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ಫಲಾನುಭವಿಗೆ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ. |

| | | |
|---|---|---|
| | | (ಆ) **ಶೈಕ್ಷಣಿಕ ಧನ ಸಹಾಯ:** ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.<br><br>(2) **ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-** ಈ ಯೋಜನೆಯಡಿ, 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಗೃಹ ಕಾರ್ಮಿಕರು, ಟೈಲರ್ಸ್, ಚಿಂದಿ ಆಯುವವರು, ಮೆಕ್ಯಾನಿಕ್ಸ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ ನೋಂದಾಯಿಸಿ ಗುರುತಿನ ಚೀಟಿ ವಿತರಿಸಲಾಗುತ್ತಿದ್ದು, ಯಾವುದೇ ಆರ್ಥಿಕ ಸೌಲಭ್ಯ ನೀಡುತ್ತಿಲ್ಲ.<br><br>(3) **ಇ-ಶ್ರಮ್ ಕಾರ್ಯಕ್ರಮ (ಅಸಂಘಟಿತ ಕಾರ್ಮಿಕರ ನೋಂದಣಿ):-** ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿದ್ದು, ಯೋಜನೆಯಡಿ 16-59 ವಯೋಮಾನದ ಇ.ಎಸ್.ಐ ಹಾಗೂ ಇ.ಪಿ.ಎಫ್ ಸೌಲಭ್ಯವನ್ನು ಹೊಂದಿರದ ಹಾಗೂ ಆದಾಯ ತೆರಿಗೆ ಪಾವತಿ ಮಾಡದ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಅವರು ಸಾಮಾನ್ಯ ಸೇವಾ ಕೇಂದ್ರಗಳ ಮೂಲಕ ಅಥವಾ ಸ್ವಯಂ ಆಗಿ ಇ-ಶ್ರಮ್ ಪೋರ್ಟಲ್‌ನಲ್ಲಿ (eshram.gov.in) ಉಚಿತವಾಗಿ ನೋಂದಾಯಿಸಬಹುದಾಗಿದ್ದು, ಗುರುತಿನ ಚೀಟಿಯನ್ನು ನೋಂದಾಯಿತ ಸ್ಥಳದಲ್ಲೆ ವಿತರಿಸಲಾಗುತ್ತದೆ.<br><br>ಸದರಿ ಕಾರ್ಮಿಕರು ಒಂದು ವರ್ಷಕ್ಕೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾ ಯೋಜನೆ (PM-SBY) ಪ್ರಯೋಜನ ಪಡೆಯಬಹುದು (ಅಪಘಾತ ವಿಮೆಯಾಗಿದ್ದು, ಅಪಘಾತದಿಂದ ಮರಣ ಹೊಂದಿದಲ್ಲಿ ಅಥವಾ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷ ಹಾಗೂ ಭಾಗಶಃ ಅಂಗವೈಕಲ್ಯಕ್ಕೆ ರೂ.1 ಲಕ್ಷ ಪರಿಹಾರ).<br><br>**<u>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:</u>**<br><br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 20:40:20 ರ ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಪ್ರತಿ ಕಾರ್ಮಿಕರಿಂದ ರೂ 20/- ಮತ್ತು ಪ್ರತಿ ಕಾರ್ಮಿಕರಿಗೆ ಮಾಲೀಕರಿಂದ ರೂ 40/- ರಂತೆ ಹಾಗೂ ಸರ್ಕಾರದಿಂದ ಪ್ರತಿ ಕಾರ್ಮಿಕರಿಗೆ ರೂ. 20/- ರಂತೆ |

| | | |
|---|---|---|
| | | ಸಹಾಯಾನುದಾನವನ್ನು ವಂತಿಗೆಯಾಗಿ ನೀಡಲಾಗುತ್ತಿದೆ. ಈ ವಂತಿಗೆಯ ಮೊತ್ತವನ್ನು ಸಂಘಟಿತ ಕಾರ್ಮಿಕರಿಗೆ ಕಲ್ಯಾಣ ಯೋಜನೆಗಳಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>1) ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ.<br>2) ಕಾರ್ಮಿಕರಿಗೆ ವೈದ್ಯಕೀಯ ನೆರವು.<br>3) ಕಾರ್ಮಿಕರಿಗೆ ಅಪಘಾತ ಧನ ಸಹಾಯ.<br>4) ಮಹಿಳಾ ಕಾರ್ಮಿಕರಿಗೆ ಹೆರಿಗೆ ಭತ್ಯೆ ಸೌಲಭ್ಯ.<br>5) ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ.<br>6) ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ.<br>7) ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ. |
| ಆ) | ಕಳೆದ ಮೂರು ವರ್ಷಗಳಿಂದ ಹಾಸನ ಜಿಲ್ಲೆಯಲ್ಲಿ ಕಾರ್ಮಿಕ ಇಲಾಖಾವತಿಯಿಂದ ಬಿಡುಗಡೆಗೊಳಿಸಿರುವ ಅನುದಾನವೆಷ್ಟು; (ವರ್ಷಾವಾರು ಹಾಗೂ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿಗಳ ಮೂಲಕ ವಿವಿಧ ವರ್ಗದ ಕಾರ್ಮಿಕರಿಗೆ ಹಲವಾರು ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದ್ದು ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ಸರ್ಕಾರದಿಂದ ನೇರವಾಗಿ ಯಾವುದೇ ಅನುದಾನವನ್ನು ಬಿಡುಗಡೆಗೊಳಿಸಿರುವುದಿಲ್ಲ ಆದರೆ ವಿವಿಧ ಯೋಜನೆಗಳಡಿ ಆರ್ಹ ಫಲಾನುಭವಿಗಳಿಗೆ ನೀಡಲಾದ ಸೌಲಭ್ಯಗಳ ತಾಲ್ಲೂಕುವಾರು ಹಾಗೂ ವರ್ಷವಾರು ಮಾಹಿತಿ ಈ ಕೆಳಕಂಡಂತಿದೆ.<br><br>**<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:</u>**<br>ಮಂಡಳಿಗೆ ಸರ್ಕಾರದಿಂದ ಯಾವುದೇ ಅನುದಾನ ಸ್ವೀಕೃತವಾಗುವುದಿಲ್ಲ. ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು ಕಾಯ್ದೆ 1996 ಹಾಗೂ ನಿಯಾಮಾನುಸಾರ ಫಲಾನುಭವಿಗಳಿಗೆ ರೂಪಿಸಿರುವ ವಿವಿಧ ಕಲ್ಯಾಣ ಮತ್ತು ಸಮಾಜಿಕ ಭದ್ರತಾ ಸೌಲಭ್ಯಗಳನ್ನು ವಿತರಿಸಲು ವಿವಿಧ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಿಂದ ಸಂಗ್ರಹವಾದ ಶೇ.1 ರಷ್ಟು ಸುಂಕ ನಿಧಿಯನ್ನು ಬಳಸಲಾಗುತ್ತಿದ್ದು, ಈ ಸುಂಕ ನಿಧಿಯಿಂದ ಕಳೆದ ಮೂರು ವರ್ಷದಲ್ಲಿ ಹಾಸನ ಜಿಲ್ಲೆಯಲ್ಲಿ 2020-21, 2021-22 ಹಾಗೂ 2022-23ನೇ ಸಾಲಿನಲ್ಲಿ ವಿವಿಧ ಸೌಲಭ್ಯಗಳಡಿ ಸಹಾಯ ಧನ ಬಿಡುಗಡೆ ಮಾಡಿರುವ ವರ್ಷಾವಾರು, ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರ ಕಛೇರಿವಾರು ವಿವರವನ್ನು **<u>ಅನುಬಂಧ-02</u>** ರಲ್ಲಿ ಒದಗಿಸಿದೆ.<br><br>ಸಹಾಯ ಧನ ಪಡೆದ ಫಲಾನುಭವಿಗಳ ವಿಧಾನಸಭಾ ಕ್ಷೇತ್ರವಾರು ವಿವರವನ್ನು ತಂತ್ರಾಂಶದಲ್ಲಿ ನಿರ್ವಹಿಸಿರುವುದಿಲ್ಲ. |

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**

ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ಜಿಲ್ಲಾವಾರು/ಕ್ಷೇತ್ರವಾರು ಪ್ರತ್ಯೇಕ ಅನುದಾನವನ್ನು ಬಿಡುಗಡೆಗೊಳಿಸುತ್ತಿಲ್ಲ. ಆದರೆ, ರಾಜ್ಯದಾದ್ಯಂತ ಯೋಜನೆಗಳ ಜಾರಿಗಾಗಿ ಸರ್ಕಾರದಿಂದ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಅನುದಾನದಲ್ಲಿ ಹಾಸನ ಜಿಲ್ಲೆಗೆ ಸಂಬಂಧಿಸಿದಂತೆ ವಿತರಿಸಿದ ಯೋಜನಾವಾರು ಪರಿಹಾರದ ವಿವರ ಈ ಕೆಳಗಿನಂತಿದೆ.

(ಮೊತ್ತ ರೂ.ಗಳಲ್ಲಿ)

| ವರ್ಷ | ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ | | | | ಕೋವಿಡ್–19ರ ವಿಶೇಷ ಪ್ಯಾಕೇಜ್ | |
|---|---|---|---|---|---|---|
| | ಅಪಘಾತ ಪರಿಹಾರ | | ಶೈಕ್ಷಣಿಕ ಧನ ಸಹಾಯ | | | |
| | ಪ್ರಕರಣಗಳು | ಮೊತ್ತ | ವಿದ್ಯಾರ್ಥಿಗಳು | ಮೊತ್ತ | ಫಲಾನುಭವಿಗಳು | ಮೊತ್ತ |
| 2020–21 | 10 | 4080000 | 02 | 20000 | 3365 | 16825000 |
| 2021–22 | 08 | 3100000 | 06 | 60000 | 19523 | 39046000 |
| 2022–23 | 08 | 4000000 | 03 | 30000 | – | – |
| ಒಟ್ಟು | 26 | 11180000 | 11 | 110000 | 22888 | 55871000 |

**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:**

ಕಳೆದ ಮೂರು ವರ್ಷಗಳಲ್ಲಿ ಹಾಸನ ಜಿಲ್ಲೆಯ ಸಂಘಟಿತ ಕಾರ್ಮಿಕರು ಮತ್ತು ಅವರ ಅವಲಂಭಿತರಿಗೆ ಕಾರ್ಮಿಕ ಕಲ್ಯಾಣ ಯೋಜನೆಗಳ ಸೌಲಭ್ಯವನ್ನು ನೀಡಿರುವ ವಿವರಗಳನ್ನು **ಅನುಬಂಧ–3**ರಲ್ಲಿ ನೀಡಲಾಗಿದೆ. ಕ್ಷೇತ್ರವಾರು ವಿವರಗಳ ಮಾಹಿತಿ ಲಭ್ಯವಿರುವುದಿಲ್ಲ.

ಇ) ಕಾರ್ಮಿಕ ಇಲಾಖಾ ವತಿಯಿಂದ ಅರ್ಹ ಫಲಾನುಭವಿಗಳನ್ನು ಗುರುತಿಸಲು ಅನುಸರಿಸಲಾಗುವ ಮಾನದಂಡಗಳೇನು; (ಸಂಪೂರ್ಣ ಮಾಹಿತಿ ನೀಡುವುದು)

ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿಗಳಿಂದ ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಅರ್ಹ ಫಲಾನುಭವಿಗಳನ್ನು ಗುರುತಿಸಲು ಅನುಸರಿಸಲಾಗುವ ಮಾನದಂಡಗಳ ವಿವರ ಕೆಳಕಂಡಂತಿದೆ.

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**

ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996 ಯ ಕಲಂ 12 ರ ಪ್ರಾವದಾನಗಳನ್ವಯ ನೋಂದಣಿ ಪೂರ್ವದಲ್ಲಿ 12 ತಿಂಗಳ ಅವಧಿಯಲ್ಲಿ (ಒಂದು ವರ್ಷದಲ್ಲಿ) 90 ದಿನ ಕಟ್ಟಡ ಮತ್ತು ಇತರೆ ನಿರ್ಮಾಣ

| | | |
|---|---|---|
| | | ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ 18–60ರ ವಯೋಮಾನದ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಆರ್ಹರಿರುತ್ತಾರೆ.<br><br>**ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:**<br><br>ಎ) ನಮೂನೆ–5ರಲ್ಲಿ ಅರ್ಜಿ<br><br>ಬಿ) ಮಾಲೀಕರ ಪ್ರಮಾಣ ಪತ್ರ: ಕಾಮಗಾರಿ ನಡೆಯುವ ಕಟ್ಟಡದ ಮಾಲೀಕರು/ ಗುತ್ತಿಗೆದಾರರು,CREDAI (Confederation of Real Estate Developers Association of India), BAI (Builders Association of India) ಅಥವಾ ಕರ್ನಾಟಕ ಸ್ಟೇಟ್ ಕಾಂಟ್ರಾಕ್ಟರ್ಸ್ ಅಸೋಸಿಯೇಷನ್ ನವರು ನಮೂನೆ-V(A)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ನೋಂದಾಯಿತ ಕಾರ್ಮಿಕ ಸಂಘಗಳು ನಮೂನೆ–V(B)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಕಾರ್ಮಿಕ ಅಧಿಕಾರಿ / ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರು ನಮೂನೆ–V(C)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಪಂಚಾಯತಿ ಅಭಿವೃದ್ಧಿ ಅಧಿಕಾರಿ/ ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ನಮೂನೆ–V(D)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ'.<br>ಸಿ) ಪಾಸ್ ಪೋರ್ಟ್ ಅಳತೆಯ ಭಾವಚಿತ್ರ<br>ಡಿ) ವಯಸ್ಸಿನ ದೃಢೀಕರಣ ಪತ್ರ: ಶಾಲಾ ದಾಖಲಾತಿ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್ ಕಾರ್ಡ್, ಆಧಾರ್ ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾ ಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ ಸರ್ಕಾರಿ ಆಸ್ಪತ್ರೆ/ ಇಎಸ್‌ಐ ಆಸ್ಪತ್ರೆ/ ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿದದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.<br><br>**ನೋಂದಣಿ ಮಾಡುವ ಕಛೇರಿಗಳು:**<br>ಕಾರ್ಮಿಕ ಇಲಾಖೆಯ ಹಿರಿಯ ಕಾರ್ಮಿಕ ನಿರೀಕ್ಷಕರು/ಕಾರ್ಮಿಕ ನಿರೀಕ್ಷಕರುಗಳ ಕಛೇರಿಗೆ ಈ ಮೇಲೆ ನಿಗಧಿಪಡಿಸಿದ ದಾಖಲೆಗಳೊಂದಿಗೆ ಆನ್‌ಲೈನ್ ಮೂಲಕ ಸಂಬಂಧಪಟ್ಟ ಕಾರ್ಯವ್ಯಾಪ್ತಿಗೆ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ. |

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಈ ಮಂಡಳಿಯು ಅಸಂಘಟಿತ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸಲು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ಅನುಸರಿಸಲಾಗುತ್ತಿರುವ ಮಾನದಂಡಗಳ ವಿವರ ಈ ಕೆಳಗಿನಂತಿವೆ.

**(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:-** ಈ ಯೋಜನೆಯಡಿ ಸಾರಿಗೆ ಇಲಾಖೆಯಿಂದ ಕರ್ನಾಟಕ ರಾಜ್ಯದಲ್ಲಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿ ಪಡೆದ ಎಲ್ಲಾ ಚಾಲಕರು ತಕ್ಷಣದಿಂದ ಫಲಾನುಭವಿಯೆಂದು ಪರಿಗಣಿಸುತ್ತಿದ್ದು, ಯೋಜನೆಯಡಿ ಪ್ರತ್ಯೇಕ ನೋಂದಣಿಯ ಅವಶ್ಯಕತೆಯಿರುವುದಿಲ್ಲ.

ಸದರಿ ವಾಹನಗಳ ನಿರ್ವಾಹಕರು ಹಾಗೂ ಕ್ಲೀನರ್‌ಗಳು ಯೋಜನೆಯಡಿ ನೋಂದಣಾಧಿಕಾರಿಗಳಲ್ಲಿ ನೋಂದಾಯಿಸಬೇಕಾಗುತ್ತಿದ್ದು, ಮಾನದಂಡಗಳು ಹೀಗಿವೆ:

- ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.
- ಯೋಜನೆಯು ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅನ್ವಯಿಸುತ್ತದೆ.
- ವಯೋಮಿತಿ 20 ರಿಂದ 70 ವರ್ಷಗಳು.
- ನಿರ್ವಾಹಕರು ಸಾರಿಗೆ ಇಲಾಖೆಯಿಂದ ನೀಡಲ್ಪಟ್ಟ ಊರ್ಜಿತ ನಿರ್ವಾಹಕ ಪತ್ರ ಹೊಂದಿರಬೇಕು. ಹಾಗೂ ಸಾರಿಗೆ ವಾಹನದ ಮಾಲೀಕರಿಂದ ಊರ್ಜಿತ ಉದ್ಯೋಗ ಪ್ರಮಾಣ ಪತ್ರವನ್ನು ಹೊಂದಿರಬೇಕು.
- ಕ್ಲೀನರ್‌ಗಳು ಸಾರಿಗೆ ವಾಹನದ ಮಾಲೀಕರಿಂದ ಊರ್ಜಿತ ಉದ್ಯೋಗ ಪ್ರಮಾಣ ಪತ್ರವನ್ನು ಹೊಂದಿರಬೇಕು.

**(2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-**

ಈ ಯೋಜನೆಯಡಿ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ"ರನ್ನು ನೋಂದಾಯಿಸುತ್ತಿದ್ದು, ಮಾನದಂಡಗಳು ಈ ಕೆಳಗಿನಂತಿದೆ.

- ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.
- ವಯೋಮಿತಿ 18 ರಿಂದ 60 ವರ್ಷಗಳು.
- ಮೇಲಿನ 11 ವರ್ಗಗಳ ಅಸಂಘಟಿತ ಕಾರ್ಮಿಕರಿಗೆ ಮಾತ್ರ ಅನ್ವಯಿಸುತ್ತದೆ.

| | | |
|---|---|---|
| | | • ಯೋಜನೆಯಡಿ ನೋಂದಣಿಯಾಗಲು ಅರ್ಜಿದಾರರು ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಅನುಸೂಚಿ II ರಲ್ಲಿ ನಮೂದಿಸಿರುವ ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರಬಾರದು.<br><br>(3) <u>**ಕೇಂದ್ರ ಸರ್ಕಾರದ ಇ-ಶ್ರಮ್ ಯೋಜನೆಯಡಿ ನೋಂದಣಿ:-**</u> ಈ ಯೋಜನೆಯಡಿ ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿದ್ದು, 379 ಅಸಂಘಟಿತ ವರ್ಗಗಳ ಕಾರ್ಮಿಕರನ್ನು ಗುರುತಿಸಿದ್ದು, ನೋಂದಣಿಗಾಗಿ ನಿಗದಿ ಪಡಿಸಿರುವ ಮಾನದಂಡಗಳು ಈ ಕೆಳಗಿನಂತಿವೆ.<br>• ಪಟ್ಟಿಯಲ್ಲಿ ನಮೂದಿಸಿದ ಅಸಂಘಟಿತ ವರ್ಗದ ಕಾರ್ಮಿಕನಾಗಿರಬೇಕು.<br>• 16 ರಿಂದ 59 ವರ್ಷ ವಯೋಮಾನ.<br>• ಆದಾಯ ತೆರಿಗೆ ಪಾವತಿದಾರರಾಗಿರಬಾರದು.<br>• ಭವಿಷ್ಯನಿಧಿ ಹಾಗೂ ಇ.ಎಸ್.ಐ ಫಲಾನುಭವಿಯಾಗಿರಬಾರದು.<br><br><u>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ :**</u><br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 20:40 ರ ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಪ್ರತಿ ಕಾರ್ಮಿಕರಿಂದ ರೂ 20/- ಮತ್ತು ಪ್ರತಿ ಕಾರ್ಮಿಕರಿಗೆ ಮಾಲೀಕರಿಂದ ರೂ 40/- ರಂತೆ ವಂತಿಕೆಯನ್ನು ವರ್ಷಕ್ಕೆ ಒಂದು ಬಾರಿ ಪಾವತಿಸುವ ಸಂಘಟಿತ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗೆ ಕಲ್ಯಾಣ ಯೋಜನೆಯಡಿ ಸೌಲಭ್ಯಗಳನ್ನು ನೀಡಲಾಗುತ್ತದೆ.ಕಲ್ಯಾಣ ಯೋಜನೆಗಳನ್ನು ಅರ್ಹ ಫಲಾನುಭವಿಗಳಿಗೆ ತಲುಪಿಸಲು ಅನುಸರಿಸುತ್ತಿರುವ ಮಾನದಂಡಗಳನ್ನು <u>**ಅನುಬಂಧ-4**</u> ರಲ್ಲಿ ಒದಗಿಸಿದೆ. |
| ಈ) | ಹಾಸನ ಜಿಲ್ಲೆಯಲ್ಲಿ ಶಾಸಕರುಗಳ ಗಮನಕ್ಕೆ ಬಾರದೆ ಇಲಾಖೆಯವರೇ ತಮಗಿಷ್ಟ ಬಂದವರನ್ನು ಆಯ್ಕೆ ಮಾಡಿರುವುದರಿಂದ ಅರ್ಹ ಫಲಾನುಭವಿಗಳಿಗೆ ಅನ್ಯಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲಾಖೆಯ ಅಧೀನದಲ್ಲಿ ಬರುವ ಮಂಡಳಿಗಳ ಮೂಲಕ ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ನಿಯಮಾನುಸಾರ ಅರ್ಹ ಕಾರ್ಮಿಕರನ್ನು ಗುರುತಿಸಿ ಸೂಕ್ತ ಅರಿವು ಮೂಡಿಸುವುದರ ಮೂಲಕ ಸೌಲಭ್ಯಗಳನ್ನು ಒದಗಿಸಲಾಗುತ್ತಿದ್ದು ಈ ಕುರಿತ ಮಾಹಿತಿ ಕೆಳಕಂಡಂತಿದೆ.<br><br><u>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**</u><br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996 ಯ ಕಲಂ 12 ರ ಪ್ರಾವದಾನಗಳನ್ವಯ ನೋಂದಣಿ ಪೂರ್ವದಲ್ಲಿ 12 ತಿಂಗಳ ಅವಧಿಯಲ್ಲಿ (ಒಂದು ವರ್ಷದಲ್ಲಿ) 90 ದಿನ ಕಟ್ಟಡ ಮತ್ತು ಇತರೆ |

|  |  |  |
|---|---|---|
|  |  | ನಿರ್ಮಾಣ ಕೆಲಸದಲ್ಲಿ ತೊಡಗಿರುವ ಮತ್ತು 18–60ರ ವಯೋಮಾನದ ಕಾರ್ಮಿಕರು ನಿಗದಿತ ದಾಖಲೆಗಳನ್ನು ಆನ್ ಲೈನ್ ಮೂಲಕ ಸಲ್ಲಿಸಿ, ಸ್ವತಃ ತಾವೇ ಮಂಡಳಿಯ ಫಲಾನುಭವಿಗಳಾಗಿ ನಿಯಮಾನುಸಾರ ನೋಂದಣಿಯಾಗಲು ಅರ್ಜಿ ಸಲ್ಲಿಸಲು ಅವಕಾಶಕಲ್ಪಿಸಲಾಗಿದೆ. ಆದುದರಿಂದ ಮಂಡಳಿಯ/ ಇಲಾಖೆಯ ಅಧಿಕಾರಿಗಳು ತಮಗಿಷ್ಟ ಬಂದವರನ್ನು ಆಯ್ಕೆ ಮಾಡುವ ಸನ್ನಿವೇಶ ಉದ್ಭವಿಸುವುದಿಲ್ಲ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**<br>ಮಂಡಳಿಯು ಜಾರಿಗೊಳಿಸುತ್ತಿರುವ ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆಯಡಿ ಮಾತ್ರ ಆರ್ಥಿಕ ಸೌಲಭ್ಯಗಳನ್ನು ಒದಗಿಸಲಾಗುತ್ತಿದ್ದು, ಸದರಿ ಯೋಜನೆಯಡಿ ಸರ್ಕಾರವು ಕಾಲ-ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿಗಳನ್ವಯ ನಿಯಮಾನುಸಾರ ಅರ್ಹ ಫಲಾನುಭವಿಯ/ ನಾಮನಿರ್ದೇಶಿತರ ಬ್ಯಾಂಕ್ ಖಾತೆಗೆ ನೇರವಾಗಿ ಪರಿಹಾರದ ಮೊತ್ತವನ್ನು ಜಮೆ ಮಾಡಲಾಗುತ್ತಿದ್ದು, ಆಯ್ಕೆ ಮಾಡುವ ಅವಶ್ಯಕತೆ ಇರುವುದಿಲ್ಲ.<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ :**<br>ಈ ಮಂಡಳಿಗೆ ವಂತಿಕೆ ಪಾವತಿ ಮಾಡುವ ಅರ್ಹ ಕಾರ್ಮಿಕರಿಗೆ ನಿಯಮಾನುಸಾರ ಸೌಲಭ್ಯಗಳನ್ನು ನೀಡಲಾಗುತ್ತಿದ್ದು ಪ್ರತ್ಯೇಕವಾಗಿ ಆಯ್ಕೆ ಮಾಡುವ ಅವಶ್ಯಕತೆ ಇರುವುದಿಲ್ಲ. |
| ಉ) | ಬಂದಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ನಿಯಾಮಾನುಸಾರ ಅರ್ಹ ಫಲನಾಭವಿಗಳಿಗೆ ಸೌಲಭ್ಯಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

**ಕಾಇ 74 ಎಲ್‌ಇಟಿ 2023**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್ ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 463ಕ್ಕೆ

## ಅನುಬಂಧ-01

### ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:

ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಬಿತರಿಗೆ ಸಹಾಯ ಧನ ನೀಡಲು ಈ ಕೆಳಕಂಡ 25 ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿದೆ:

1. ಪಿಂಚಣಿ ಸೌಲಭ್ಯ: ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ ರೂ.3,000/-
2. ಕುಟುಂಬ ಪಿಂಚಣಿ ಸೌಲಭ್ಯ: ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ ರೂ.1500/-
3. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.
4. ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ ಮರುಪಾವತಿ ಸೌಲಭ್ಯ
5. ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.20,000/- ವರೆಗೆ
6. ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ: ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ
7. ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/- ದವರೆಗೆ ಮುಂಗಡ ಸಾಲ ಸೌಲಭ್ಯ
8. ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್): ಮಹಿಳಾ ಫಲಾನುಭವಿಯ ಮೊದಲ ಎರಡು ಮಗುವಿನ ಜನನಕ್ಕೆ ರೂ.50,000/-
9. ಶಿಶು ಪಾಲನಾ ಸೌಲಭ್ಯ: ಕಾರ್ಮಿಕರ ಮಕ್ಕಳ ಪಾಲನೆಗಾಗಿ ರಾಜ್ಯಾದ್ಯಂತ 100 ಕಿತ್ತೂರು ರಾಣಿ ಚೆನ್ನಮ್ಮ ಶಿಶುಪಾಲನಾ ಕೇಂದ್ರಗಳನ್ನು ಪ್ರಾರಂಭಿಸಲಾಗಿದೆ.
10. ಅಂತ್ಯಕ್ರಿಯೆ ವೆಚ್ಚ : ರೂ.4,000/- ಹಾಗೂ ಅನುಗ್ರಹ ರಾಶಿ ರೂ.71,000/-ಸಹಾಯಧನ
11. ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:

| ಕ್ರ. ಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯ ಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್ ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು |

| | ತಾಂತ್ರೀಕ/ ವೈದ್ಯಕೀಯ ಎನ್‌ಇಇಟಿ ಅಥವಾ ಕೆಸಿಇಟಿ | |
|---|---|---|
| 12 | ಬಿಇ / ಬಿ.ಟೆಕ್ ಅಥವಾ ಸಂಬಂಧಪಟ್ಟ ಯೂಜಿ ಕೋರ್ಸ್ | ಸದರಿ ಕೋರ್ಸ್‌ನ ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರ ಕೋರ್ಸ್) | ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕ ರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್ ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕೋತ್ತರ ಕೋರ್ಸ್ | ರೂ.60,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು ) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆ ಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷ ರೂ. 25,000 (ಯೂಜಿಸಿಯ ಜೂನಿಯರ್ ರಿಸರ್ಚ್ ಫೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋದನಾ ಶುಲ್ಕ |

**12.** ವೈದ್ಯಕೀಯ ಸಹಾಯಧನ (ಕಾರ್ಮಿಕ ಆರೋಗ್ಯ ಭಾಗ್ಯ): ನೋಂದಾಯಿತ ಫಲಾನುಭವಿ ಹಾಗೂ ಅವರ ಅವಲಂಭಿತರಿಗೆ ರೂ.300/– ರಿಂದ ರೂ.20,000/–ವರೆಗೆ

**13.** ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿ ರೂ.5,00,000/–, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/– ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/–

**14.** ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕ ಚಿಕಿತ್ಸಾ ಭಾಗ್ಯ): ಹೃದ್ರೋಗ, ಕಿಡ್ನಿ ಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ ರೂ.2,00,000/–ವರೆಗೆ

**15.** ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್): ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ ರೂ.60,000/–

16. ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಪ್ರತಿಷ್ಠಿತ ಸಂಸ್ಥೆಗಳಿಂದ ತರಬೇತಿ ಮತ್ತು ಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲು ತಗಲುವ ವೆಚ್ಚವನ್ನು ಮಂಡಳಿವತಿಯಿಂದ ಭರಿಸಲಾಗುವುದು.
17. ಬಿಎಂಟಿಸಿ ಬಸ್ ಪಾಸ್ ಸೌಲಭ್ಯ: ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತಿರುವಂತಹ / ವಾಸಸ್ಥಳದಿಂದ ಬೆಂಗಳೂರಿಗೆ ಪ್ರಯಾಣಿಸುವ ನೋಂದಾಯಿತ ಕಟ್ಟಡ ಕಾರ್ಮಿಕರಿಗೆ
18. ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ: ನೋಂದಾಯಿತ ಫಲಾನುಭವಿಗಳಿಗೆ ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ವಿತರಣೆ
19. ತಾಯಿ ಮಗು ಸಹಾಯ ಹಸ್ತ: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ ರೂ.6,000/- ಗಳ ಸಹಾಯಧನ.
20. ಇಮ್ಯೂನಿಟಿ ಬೂಸ್ಟರ್ ಕಿಟ್ ವಿತರಣೆ
21. ಪ್ರಿವೆಂಟಿವ್ ಹೆಲ್ತ್‌ಕೇರ್ ಯೋಜನೆ
22. ಮೊಬೈಲ್ ಮೆಡಿಕಲ್ ಕೇರ್ ಯೂನಿಟ್
23. ಪೈಲಟ್ ಟ್ರೈನಿಂಗ್: ಫಲಾನುಭವಿಯ ಆಯ್ಕೆಯಾದ ಮಕ್ಕಳಿಗೆ
24. ವಿದೇಶದಲ್ಲಿ ವಿದ್ಯಾಭ್ಯಾಸಕ್ಕಾಗಿ ಶೈಕ್ಷಣಿಕ ಸಹಾಯ ಧನ ಸೌಲಭ್ಯ
25. ನ್ಯೂಟ್ರೀಶನ್ ಕಿಟ್ಸ್:

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್ ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 463ಕ್ಕೆ

**ಅನುಬಂಧ-02**

**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**

**2020-21**

| ಕ್ರ. ಸಂ. | ತಾಲ್ಲೂಕು/ ಕಛೇರಿ | ಶೈಕ್ಷಣಿಕಧನ ಸಹಾಯ | | ಮದುವೆಧನ ಸಹಾಯ | | ವೈದ್ಯಕೀಯಧನ ಸಹಾಯ | | ಪ್ರಮುಖವೈದ್ಯಕೀಯ | | ಹೆರಿಗೆಧನಸಹಾಯ | | ತಾಯಿ ಮಗು ಸಹಾಯ ಹಸ್ತ | | ಅಂತ್ಯ ಸಂಸ್ಕಾರ ಮತ್ತುಅನುಗ್ರಹ ರಾಶಿ | | ಅಪಘಾತ ಮರಣ/ಭಾಗಶಃ/ ಶಾಶ್ವತದುರ್ಬಲತೆ | | ಪಿಂಚಣಿ | | ಕೋವಿಡ್-19 ಪರಿಹಾರ-3000/- | |
|---|---|---|---|---|---|---|---|---|---|---|---|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಆಲೂರು | 326 | 5007000 | 15 | 650000 | 0 | 0 | 10 | 686094 | 0 | 0 | 0 | 0 | 0 | 0 | 0 | 0 | 0 | 0 | 1474 | 4422000 |
| 2 | ಬೇಲೂರು | 114 | 2240000 | 18 | 900000 | 0 | 0 | 0 | 0 | 0 | 0 | 0 | 0 | 3 | 162000 | 0 | 0 | 05 | 120000 | 2631 | 7893000 |
| 3 | ಸಕಲೇಶಪುರ | 47 | 674000 | 6 | 300000 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 0 | 1006 | 3018000 |
| 4 | ಹಾಸನ | 2140 | 30587000 | 130 | 5900000 | 0 | 0 | 52 | 3243632 | 0 | 0 | 0 | 0 | 34 | 1836000 | 5 | 2500000 | 57 | 1368000 | 12356 | 37068000 |
| 5 | ಅರಕಲಗೂಡು | 36 | 348000 | 34 | 1525000 | 0 | 0 | 02 | 50183 | 01 | 20000 | 0 | 0 | 4 | 216000 | 0 | 0 | 15 | 360000 | 2771 | 8313000 |
| 6 | ಅರಸೀಕೆರೆ | 263 | 3214000 | 43 | 2025000 | 0 | 0 | 1 | 35000 | 0 | 0 | 0 | 0 | 1 | 54000 | 1 | 500000 | 1 | 24000 | 5767 | 17301000 |
| 7 | ಚನ್ನರಾಯಪಟ್ಟಣ | 259 | 3272000 | 70 | 3175000 | 0 | 0 | 16 | 966481 | 6 | 150000 | 02 | 12000 | 9 | 486000 | 0 | 0 | 19 | 456000 | 8407 | 25221000 |
| 8 | ಹೊಳೆನರಸೀಪುರ | 37 | 469000 | 24 | 1075000 | 0 | 0 | 0 | 0 | 0 | 0 | 0 | 0 | 5 | 270000 | 4 | 2000000 | 07 | 168000 | 3120 | 9360000 |
| | ಒಟ್ಟು | 3222 | 45811000 | 340 | 15550000 | 0 | 0 | 81 | 4981390 | 7 | 170000 | 2 | 12000 | 56 | 3024000 | 10 | 5000000 | 104 | 2496000 | 37532 | 112596000 |

# 2021-22ನೇ ಸಾಲಿನ ಧನಸಹಾಯ ಧನ ಮಂಜೂರಾತಿಯ ವಿವರ. ಹಾಸನ ಜಿಲ್ಲೆ.

| ಕ್ರ.ಸಂ. | ತಾಲ್ಲೂಕು/ಕಛೇರಿ | ಶೈಕ್ಷಣಿಕಧನ ಸಹಾಯ | | ಮದುವೆಧನ ಸಹಾಯ | | ವೈದ್ಯಕೀಯಧನ ಸಹಾಯ | | ಪ್ರಮುಖವೈದ್ಯಕೀಯ | | ಹೆರಿಗೆಧನಸಹಾಯ | | ತಾಯಿ ಮಗು ಸಹಾಯ ಹಸ್ತ | | ಅಂತ್ಯ ಸಂಸ್ಕಾರ ಮತ್ತುಅನುಗ್ರಹ ರಾಶಿ | | ಅಪಘಾತ ಮರಣ/ಭಾಗಶಃ/ ಶಾಶ್ವತದುರ್ಬಲತೆ | | ಪಿಂಚಣಿ | |
|---|---|---|---|---|---|---|---|---|---|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಆಲೂರು | 216 | 3256000 | 63 | 3150000 | 02 | 7200 | 21 | 1489784 | 02 | 40000 | 0 | 0 | 0 | 0 | 0 | 0 | 0 | 0 |
| 2 | ಬೇಲೂರು | 197 | 2549000 | 35 | 1750000 | 0 | 0 | 05 | 471100 | 0 | 0 | 01 | 6000 | 5 | 270000 | 1 | 500000 | 06 | 18000 |
| 3 | ಸಕಲೇಶಪುರ | 87 | 1120000 | 14 | 700000 | 01 | 900 | 02 | 144000 | 0 | 0 | 0 | 0 | 08 | 432000 | 0 | 0 | 3 | 18000 |
| 4 | ಹಾಸನ | 1054 | 15100000 | 289 | 14450000 | 11 | 17700 | 179 | 12519278 | 03 | 90000 | 0 | 0 | 89 | 4806000 | 6 | 2700000 | 59 | 474000 |
| 5 | ಅರಕಲಗೂಡು | 250 | 3303000 | 11 | 550000 | 02 | 1800 | 03 | 220800 | 0 | 0 | 0 | 0 | 9 | 486000 | 1 | 500000 | 14 | 122000 |
| 6 | ಅರಸೀಕೆರೆ | 413 | 5899000 | 93 | 4650000 | 01 | 1500 | 20 | 1669009 | 04 | 100000 | 05 | 30000 | 13 | 702000 | 0 | 0 | 08 | 70000 |
| 7 | ಚನ್ನರಾಯಪಟ್ಟಣ | 690 | 8787000 | 112 | 5600000 | 01 | 900 | 42 | 3477637 | 07 | 190000 | 01 | 6000 | 39 | 2106000 | 0 | 0 | 17 | 140000 |
| 8 | ಹೊಳೆನರಸೀಪುರ | 243 | 3408000 | 40 | 2000000 | 02 | 2400 | 08 | 395420 | 0 | 0 | 0 | 0 | 11 | 594000 | 1 | 500000 | 15 | 130000 |
| | ಒಟ್ಟು | 3150 | 43422000 | 657 | 32850000 | 20 | 32400 | 280 | 20387028 | 16 | 4200 00 | 7 | 42000 | 174 | 9396000 | 9 | 4200000 | 122 | 972000 |

# 2022-23ನೇ ಸಾಲಿನ ಧನಸಹಾಯದ ಮಂಜೂರಾತಿಯ ವಿವರ. ಹಾಸನ ಜಿಲ್ಲೆ

| ಕ್ರ.ಸಂ. | ತಾಲ್ಲೂಕು/ಕಛೇರಿ | ಶೈಕ್ಷಣಿಕಧನ ಸಹಾಯ | | ಮದುವೆಧನ ಸಹಾಯ | | ವೈದ್ಯಕೀಯಧನ ಸಹಾಯ | | ಪ್ರಮುಖ ವೈದ್ಯಕೀಯ | | ಹೆರಿಗೆಧನಸಹಾಯ | | ತಾಯಿ ಮಗು ಸಹಾಯ ಹಸ್ತ | | ಅಂತ್ಯ ಸಂಸ್ಕಾರ ಮತ್ತುಅನುಗ್ರಹ ರಾಶಿ | | ಅಪಘಾತ ಮರಣ/ಭಾಗಶಃ/ ಶಾಶ್ವತದುರ್ಬಲತೆ | | ಪಿಂಚಣಿ | |
|---|---|---|---|---|---|---|---|---|---|---|---|---|---|---|---|---|---|---|---|
| | | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ | ಸಂಖ್ಯೆ | ಮೊತ್ತ |
| 1 | ಆಲೂರು | ಮಂಡಳಿಯ ನೋಂದಾಯಿತ ಫಲಾನುಭವಿಗಳಿಗೆ ಈ ಸಾಲಿನಿಲ್ಲಿ ಎಸ್‌ಎಸ್‌ಪಿ ಪೋರ್ಟಲ್ ಮುಖೇನ ಶೈಕ್ಷಣಿ ಸಹಾಯ ಧನ ಬಿಡುಗಡೆ ಮಾಡಲಾಗಿದೆ. ಹಾಗಾಗಿ ತಾಲ್ಲೂಕುವಾರು ಮಾಹಿತ ಲಭ್ಯವಿರುವುದಿಲ್ಲ. ಹಾಸನ ಜಿಲ್ಲೆಯಲ್ಲಿ ಈ ಸೌಲಭ್ಯದಡಿ ಸಹಾಯ ಧನ ಪಡೆದ ಫಲಾನುಭವಿಗಳ ಸಂಖ್ಯೆ: 6,005 ಸಹಾಯ ಧನ ಪಡೆದ ಮೊತ್ತ ರೂ.1,50,43,000 | | 38 | 1900000 | 0 | 0 | 01 | 48000 | 0 | 0 | 0 | 0 | 0 | 0 | 0 | 0 | 0 | 0 |
| 2 | ಬೇಲೂರು | | | 24 | 1200000 | 0 | 0 | 03 | 216200 | 0 | 0 | 0 | 0 | 04 | 216000 | 0 | 0 | 02 | 4000 |
| 3 | ಸಕಲೇಶಪುರ | | | 23 | 1150000 | 0 | 0 | 02 | 188000 | 0 | 0 | 0 | 0 | 02 | 108000 | 0 | 0 | 01 | 2000 |
| 4 | ಹಾಸನ | | | 210 | 10500000 | 04 | 43200 | 93 | 6678311 | 0 | 0 | 0 | 0 | 65 | 3531000 | 05 | 2200000 | 05 | 10000 |
| 5 | ಅರಕಲಗೂಡು | | | 50 | 2500000 | 0 | 0 | 03 | 435800 | 0 | 0 | 0 | 0 | 01 | 75000 | 0 | 0 | 11 | 22000 |
| 6 | ಅರಸೀಕೆರೆ | | | 87 | 4350000 | 0 | 0 | 05 | 693800 | 01 | 20000 | 0 | 0 | 22 | 1209000 | 01 | 500000 | 03 | 6000 |
| 7 | ಚನ್ನರಾಯಪಟ್ಟಣ | | | 153 | 7650000 | 02 | 9168 | 15 | 1088782 | 01 | 30000 | 0 | 0 | 21 | 1134000 | 04 | 1700000 | 01 | 2000 |
| 8 | ಹೊಳೆನರಸೀಪುರ | | | 76 | 3800000 | 0 | 0 | 04 | 390500 | 0 | 0 | 0 | 0 | 14 | 756000 | 01 | 500000 | 05 | 10000 |
| ಒಟ್ಟು | | | | 661 | 33050000 | 6 | 52368 | 126 | 9739393 | 2 | 50000 | 0 | 0 | 129 | 7029000 | 11 | 4900000 | 28 | 56000 |

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್ ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 463ಕ್ಕೆ

## ಅನುಬಂಧ-03

### ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:

2019-20 ರಿಂದ 2021-22 ರವರೆಗೆ ಹಾಸನ ಜಿಲ್ಲೆಯ ಸಂಘಟಿತ ಕಾರ್ಮಿಕರು ಮತ್ತು ಅವರ ಅವಲಂಬಿತರಿಗೆ ಕಲ್ಯಾಣ ಯೋಜನೆಗಳಡಿ ಸೌಲಭ್ಯಗಳನ್ನು ನೀಡಿರುವ ವಿವರಗಳು:

| ಯೋಜನೆಗಳು | 2019-20 | | 2020-21 | | 2021-22 | |
|---|---|---|---|---|---|---|
| | ಫಲಾನುಭವಿ | ಮೊತ್ತ | ಫಲಾನುಭವಿ | ಮೊತ್ತ | ಫಲಾನುಭವಿ | ಮೊತ್ತ |
| ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ | 1202 | 46,44,000/- | 398 | 17,14,000/- | 289 | 11,95,000/- |
| ಮೃತ ಕಾರ್ಮಿಕರ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ | 13 | 65,000/- | 17 | 85,000/- | 20 | 1,25,000/- |

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್ ಕೆ (ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 463ಕ್ಕೆ

ಅನುಬಂಧ-04

## ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ:

### ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಕಾರ್ಮಿಕ ಕಲ್ಯಾಣ ಯೋಜನೆಗಳ ವಿವರಗಳು :

ಕರ್ನಾಟಕ ರಾಜ್ಯದಲ್ಲಿ ಕಾರ್ಮಿಕರ ಕಲ್ಯಾಣವನ್ನು ಸಂವರ್ಧನಗೊಳಿಸುವುದಕ್ಕೆ ಹಣಕಾಸು ನೆರವು ಒದಗಿಸಲು ಮತ್ತು ಚಟುವಟಿಕೆಗಳನ್ನು ನಡೆಸುವುದಕ್ಕಾಗಿ ಒಂದು ನಿಧಿಯನ್ನು, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಅಧಿನಿಯಮ, 1965ರ ಅಡಿಯಲ್ಲಿ ಸ್ಥಾಪಿಸಲಾಗಿದೆ. ಮಂಡಳಿಗೆ ವಂತಿಗೆ ಪಾವತಿಸುವ ವಿವಿಧ ಕ್ಷೇತ್ರಗಳಾದ ಕಾರ್ಖಾನೆಗಳು/ಸಂಸ್ಥೆಗಳು/ಪ್ಲಾಂಟೇಶನ್/ಸಾರಿಗೆ ಸಂಸ್ಥೆಗಳಲ್ಲಿ ದುಡಿಯುತ್ತಿರುವ ಸಂಘಟಿತ ಕಾರ್ಮಿಕರು ಮತ್ತು ಅವರ ಕುಟುಂಬದ ಅವಲಂಬಿತರ ಕ್ಷೇಮಾಭಿವೃದ್ಧಿಗಾಗಿ ಕಾರ್ಮಿಕ ಕಲ್ಯಾಣ ಮಂಡಳಿಯಲ್ಲಿ ಈ ಕೆಳಗಿನ ಯೋಜನೆಗಳು ಜಾರಿಯಲ್ಲಿರುತ್ತದೆ.

ಸೂಚನೆ :

1. ಯೋಜನೆಯ ಸೌಲಭ್ಯ ಪಡೆಯಲು ಪ್ರತಿ ವರ್ಷ ಜನವರಿ 15 ರೊಳಗೆ ಕಾರ್ಮಿಕರು, ಮಾಲೀಕರು ರೂ. 20 : 40 ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಒಟ್ಟು ರೂ. 60/- ಗಳಂತೆ ವಂತಿಕೆಯನ್ನು ಕಾರ್ಮಿಕ ಕಲ್ಯಾಣ ನಿಧಿಗೆ ಪಾವತಿಸತಕ್ಕದ್ದು.
2. ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ ಪಡೆಯಲು ವಿದ್ಯಾರ್ಥಿಗಳು, ಶೈಕ್ಷಣಿಕ ಸಂಸ್ಥೆಗಳು, ಕಾರ್ಖಾನೆಗಳು/ಸಂಸ್ಥೆಗಳು klwb.karnataka.gov.in ಇಲ್ಲಿ ನೊಂದಾಯಿಸಿ ಅನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿರುತ್ತದೆ.
3. ವಂತಿಕೆ ಪಾವತಿ ಮಾಡುವ ಸಂಸ್ಥೆಗಳು ಹಾಗೂ ಕಾರ್ಖಾನೆಗಳು klwb.karnataka.gov.in ಇಲ್ಲಿ ತಮ್ಮ ಸಂಸ್ಥೆಗಳನ್ನು ನೊಂದಾಯಿಸಿ ವಂತಿಕೆ ಪಾವತಿ ಮಾಡಬೇಕಾಗಿರುತ್ತದೆ.

**ಕೆಳಗಿನ ಯೋಜನೆಗಳಿಗೆ ಮಾಸಿಕ ವೇತನ ರೂ. 21,000/- ಗಿಂತ ಮೀರಿರಬಾರದು. ವಯೋಮಿತಿ 18- 60 ವರ್ಷ**

1. ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ: **ಪ್ರೌಢ ಶಾಲೆ,** (8 ರಿಂದ 10ನೇ ತರಗತಿವರೆಗೆ) ರೂ.3,000/ ಪಿಯುಸಿ/ಡಿಪ್ಲೊಮಾ/ಐಟಿಐ/ಟಿಸಿಹೆಚ್ ಶಿಕ್ಷಣಕ್ಕಾಗಿ ರೂ.4,000/-ಪದವಿ ಶಿಕ್ಷಣಕ್ಕಾಗಿ ರೂ.5,000/ ಸ್ನಾತಕೋತ್ತರ ಶಿಕ್ಷಣಕ್ಕಾಗಿ ರೂ.6,000/-ಇಂಜಿನೀಯರಿಂಗ್/ವೈದ್ಯಕೀಯ ಶಿಕ್ಷಣಕ್ಕಾಗಿ ರೂ.10,000/-ಗಳ ಪ್ರೋತ್ಸಾಹ ಧನ ನೀಡಲಾಗುವುದು.(ಅರ್ಜಿ ಸಲ್ಲಿಸಲು ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ.50 ಹಾಗೂ ಪ.ಜಾ / ಪ.ಪಂಗಡದ ವಿದ್ಯಾರ್ಥಿಗಳು ಶೇ. 45 ರಷ್ಟು ಅಂಕ ಪಡೆದು ತೇರ್ಗಡೆಯಾಗಿರಬೇಕು. ಒಂದು ಕುಟುಂಬದಲ್ಲಿ ಒಬ್ಬ ವಿದ್ಯಾರ್ಥಿಗೆ ಮಾತ್ರ ಈ ಸೌಲಭ್ಯ ನೀಡಲಾಗುವುದು)

2. ಕಾರ್ಮಿಕರಿಗೆ ವೈದ್ಯಕೀಯ ನೆರವು : ಹೃದಯ ಶಸ್ತ್ರಚಿಕಿತ್ಸೆ, ಕಿಡ್ನಿ ಟ್ರಾನ್ಸ್‌ಪ್ಲಾಂಟೇಷನ್, ಕ್ಯಾನ್ಸರ್, ಆಂಜಿಯೋಪ್ಲಾಸ್ಟಿ, ಕಣ್ಣು, ಅರ್ಥೋಪೆಡಿಕ್, ಗರ್ಭಕೋಶದ ಶಸ್ತ್ರ ಚಿಕಿತ್ಸೆ, ಗಾಲ್ ಬ್ಲಾಡರ್ ತೊಂದರೆ, ಮೆದುಳಿನ ರಕ್ತಸ್ರಾವ ಚಿಕಿತ್ಸೆಗೆ ಕನಿಷ್ಠ ರೂ. 1,000/-ದಿಂದ ಗರಿಷ್ಠ ರೂ,25,000/-ವರೆಗೆ ಮತ್ತು ಆರೋಗ್ಯ ತಪಾಸಣೆಗೆ ರೂ. 500/-ರಿಂದ ರೂ, 1000/-ವರೆಗೆ ಧನ ಸಹಾಯ ನೀಡಲಾಗುವುದು.

3. **ಕಾರ್ಮಿಕರಿಗೆ ಅಪಘಾತ ಧನ ಸಹಾಯ :** ಕಾರ್ಮಿಕರಿಗೆ ಕೆಲಸದ ವೇಳೆಯಲ್ಲಿ ಅಪಘಾತವಾದಲ್ಲಿ ಕನಿಷ್ಠ **ರೂ. 1,000/-** ಗರಿಷ್ಠ **ರೂ. 10,000/-** ವರೆಗೆ ಧನ ಸಹಾಯ ನೀಡಲಾಗುವುದು. ಸೌಲಭ್ಯ ಪಡೆಯುವ ಕಾರ್ಮಿಕರು ಅಪಘಾತವಾದ ಮೂರು ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

4. **ಹೆರಿಗೆ ಭತ್ಯೆ ಸೌಲಭ್ಯ :** ಮಹಿಳಾ ಕಾರ್ಮಿಕರಿಗೆ ಮೊದಲ 2 ಮಕ್ಕಳಿಗೆ ಮಾತ್ರ ಹೆರಿಗೆ ಭತ್ಯೆ ಸೌಲಭ್ಯವನ್ನು ತಲಾ **ರೂ. 10,000/-** ಧನ ಸಹಾಯ ನೀಡಲಾಗುವುದು. ಮಗು ಜನಿಸಿದ 6 ತಿಂಗಳೊಳಗೆ ಅರ್ಜಿ ಸಲ್ಲಿಸತಕ್ಕದ್ದು.

## ಈ ಕೆಳಗಿನ ಯೋಜನೆಗಳಿಗೆ ಮಾಸಿಕ ಸಂಬಳದ ಮಿತಿಯಿರುವುದಿಲ್ಲ. ವಯೋಮಿತಿ 18- 60

5. **ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ :**ಈ ಯೋಜನೆಯ ಸೌಲಭ್ಯ ಪಡೆಯಲು ಮೃತರ ಕುಟುಂಬದ ಅವಲಂಬಿತರು ಕಾರ್ಮಿಕ ಮೃತಪಟ್ಟ ಆರು ತಿಂಗಳೊಳಗೆ ನಿಗಧಿತ ಅರ್ಜಿ ನಮೂನೆಯಲ್ಲಿ ಸೂಕ್ತ ದಾಖಲೆಗಳೊಂದಿಗೆ ಅರ್ಜಿ ಸಲ್ಲಿಸಿದಲ್ಲಿ, **ರೂ. 10,000/-** ಧನ ಸಹಾಯ ನೀಡಲಾಗುವುದು.

6. **ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ :** ನೋಂದಾಯಿತ ಕಾರ್ಮಿಕ ಸಂಘಟನೆಗಳು/ಸರ್ಕಾರೇತರ ಸಂಸ್ಥೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ಹಮ್ಮಿಕೊಳ್ಳುವ ವಾರ್ಷಿಕ ಆರೋಗ್ಯ ತಪಾಸಣೆ ಶಿಬಿರಕ್ಕೆ **ರೂ. 1,00,000/-** ಧನ ಸಹಾಯ ನೀಡಲಾಗುವುದು.

7. **ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ :** ನೋಂದಾಯಿತ ಕಾರ್ಮಿಕ ಸಂಘಟನೆಗಳು ಕಲ್ಯಾಣ ಆಯುಕ್ತರ ಪೂರ್ವಾನುಮತಿಯೊಂದಿಗೆ ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಂಡಲ್ಲಿ **ರೂ. 1,00,000/-** ಧನ ಸಹಾಯ ನೀಡಲಾಗುವುದು.

**ಧನ ಸಹಾಯವನ್ನು ಫಲಾನುಭವಿಗಳ ಉಳಿತಾಯ ಖಾತೆಗೆ ನೇರವಾಗಿ ಆರ್.ಟಿ.ಜಿ.ಎಸ್ ಮೂಲಕ ಜಮಾ ಮಾಡಲಾಗುವುದು.**

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **464** |
| ಮಾನ್ಯ ಸದಸ್ಯರ ಹೆಸರು | ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಶಪುರ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ನಗರದ ಅಕ್ಕ ಪಕ್ಕದ ಜಿಲ್ಲೆಗಳು ಮತ್ತು ದೂರದ ಜಿಲ್ಲಾ ಕೇಂದ್ರಗಳಿಂದ ಗ್ರಾಮೀಣ ಪ್ರದೇಶಗಳ ಬಡಕುಟುಂಬದ ಮಕ್ಕಳು ಹಾಸನ ನಗರದಲ್ಲಿರುವ ಕಾಲೇಜುಗಳಲ್ಲಿ ವ್ಯಾಸಂಗ ಮಾಡುತ್ತಿದ್ದು, ಹಾಸನ ನಗರದಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ಎಷ್ಟು ವಸತಿ ನಿಲಯಗಳು ಕಾರ್ಯನಿರ್ವಹಿಸುತ್ತಿವೆ; ಅವುಗಳಲ್ಲಿರುವ ಸಂಖ್ಯಾಬಲವೆಷ್ಟು; | ಹಾಸನ ನಗರದಲ್ಲಿ ಇಲಾಖೆಯ 2 ಮೆಟ್ರಿಕ್ ಪೂರ್ವ ಹಾಗೂ 17 ಮೆಟ್ರಿಕ್ ನಂತರದ ಹೀಗೆ ಒಟ್ಟು 19 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಒಟ್ಟಾರೆ ಮಂಜೂರಾತಿ ಸಂಖ್ಯಾಬಲ 3115 ಇರುತ್ತದೆ. |
| ಆ) | 2022-23ನೇ ಶೈಕ್ಷಣಿಕ ಸಾಲಿನಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ವಸತಿ ನಿಲಯಗಳಲ್ಲಿ ಪ್ರವೇಶಾತಿ ಕೋರಿ ಬಂದಿರುವ ಅರ್ಜಿಗಳೆಷ್ಟು;(ಬಾಲಕಿಯರ ಮತ್ತು ಬಾಲಕರ ಮೆಟ್ರಿಕ್ ನಂತರದ ಮತ್ತು ಮೆಟ್ರಿಕ್ ಪೂರ್ವ ವಸತಿ ನಿಲಯವಾರು ಸಂಪೂರ್ಣ ಮಾಹಿತಿ ನೀಡುವುದು) | 2022-23ನೇ ಶೈಕ್ಷಣಿಕ ಸಾಲಿನಲ್ಲಿ ಇಲಾಖೆಯಡಿ ವಸತಿ ನಿಲಯಗಳಲ್ಲಿ ಪ್ರವೇಶಾತಿ ಕೋರಿ ಬಂದಿರುವ ಅರ್ಜಿಗಳ ವಿವರವನ್ನು **ಅನುಬಂಧ** ದಲ್ಲಿ ಒದಗಿಸಿದೆ. |

<table>
<tr><td>ಇ)</td><td>2022-23ನೇ ಶೈಕ್ಷಣಿಕ ಸಾಲಿನಲ್ಲಿ ಹಿಂದುಳಿದ ವರ್ಗಗಳ ಇಲಾಖೆಯ ವಸತಿ ನಿಲಯಗಳಲ್ಲಿ ಪ್ರವೇಶಾತಿಗಾಗಿ ಕೌನ್ಸಿಲಿಂಗ್ ನಡೆಸಿದ್ದು, ಬಯೋಮೆಟ್ರಿಕ್ ಹಾಜರಾತಿ ಕಡ್ಡಾಯವಾಗಿರುವುದರಿಂದ ವಿದ್ಯಾರ್ಥಿಗಳಿಗೆ ಅನಾವಶ್ಯಕವಾಗಿ ಸಮಯ ವ್ಯರ್ಥವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td rowspan="2">ಪ್ರಸಕ್ತ ಸಾಲಿನ ಆಯವ್ಯಯ ಭಾಷಣದ ಘೋಷಣೆಯಂತೆ ಇಲಾಖಾ ವಿದ್ಯಾರ್ಥಿನಿಲಯಗಳಲ್ಲಿ ಬೇಡಿಕೆ ಮತ್ತು ಹಂಚಿಕೆಯನ್ನು ಸರಿದೂಗಿಸುವ ನಿಟ್ಟಿನಲ್ಲಿ ನಿಲಯವಾರು ಅರ್ಜಿಗಳನ್ನು ಸ್ವೀಕರಿಸುವ ಬದಲು ತಾಲ್ಲೂಕುವಾರು ಅರ್ಜಿಗಳನ್ನು ಅಹ್ವಾನಿಸಿ, ವಿದ್ಯಾರ್ಥಿನಿಲಯಗಳಲ್ಲಿ ಕೌನ್ಸಿಲಿಂಗ್ ಮಾದರಿಯಲ್ಲಿ ಪ್ರವೇಶವನ್ನು ಕಲ್ಪಿಸುವ ಸಂಬಂಧ ಸರ್ಕಾರದ ಆದೇಶ ಸಂಖ್ಯೆ: ಹಿಂವಕ 230 ಬಿಎಂಎಸ್ 2022, ದಿನಾಂಕ:21.06.2022 ರಲ್ಲಿ ಪರಿಷ್ಕೃತ ಪ್ರವೇಶ ನಿಯಮಾವಳಿಗಳನ್ನು ಹೊರಡಿಸಲಾಗಿದ್ದು, ಸದರಿ ನಿಯಮಾವಳಿಗಳ ಪ್ರಕಾರ ತಾಲ್ಲೂಕುವಾರು ಆನ್ ಲೈನ್ ಅರ್ಜಿಗಳನ್ನು ಆಹ್ವಾನಿಸಿ, ವಿದ್ಯಾರ್ಥಿನಿಲಯಗಳಲ್ಲಿ ಖಾಲಿ ಇರುವ ಸ್ಥಾನಗಳಿಗೆ ಆನ್ ಲೈನ್ ಕೌನ್ಸಿಲಿಂಗ್ ಮೂಲಕ ವಿದ್ಯಾರ್ಥಿನಿಲಯಗಳಲ್ಲಿ ನಿಗದಿಪಡಿಸಿದ ಮಂಜೂರಾತಿ ಸಂಖ್ಯೆಗನುಗುಣವಾಗಿ ಪ್ರವೇಶ ನಿಯಮಗಳನುಸಾರ ಪ್ರವರ್ಗವಾರು ಅರ್ಹ ವಿದ್ಯಾರ್ಥಿಗಳಿಗೆ ಪ್ರವೇಶವನ್ನು ಕಲ್ಪಿಸಲಾಗುತ್ತಿರುತ್ತದೆ.<br><br>ಮುಂದುವರೆದು, ಇಲಾಖಾ ವಿದ್ಯಾರ್ಥಿನಿಲಯಗಳ ಸಮರ್ಪಕ ನಿರ್ವಹಣೆ ಹಾಗೂ ನಿಲಯಾರ್ಥಿಗಳ ಹಾಜರಾತಿಯನ್ನು ಪಡೆಯುವ ದೃಷ್ಟಿಯಿಂದ ಇಲಾಖಾ ವಿದ್ಯಾರ್ಥಿನಿಲಯಗಳಲ್ಲಿ ಬಯೋಮೆಟ್ರಿಕ್ ಹಾಜರಾತಿ ತಂತ್ರಾಂಶದ ವ್ಯವಸ್ಥೆಯನ್ನು ಜಾರಿಗೆ ತರಲಾಗಿರುತ್ತದೆ.</td></tr>
<tr><td>ಈ)</td><td>ಬಂದಿದ್ದಲ್ಲಿ, ಕೌನ್ಸಿಲಿಂಗ್ ಮತ್ತು ಬಯೋಮೆಟ್ರಿಕ್ ವ್ಯವಸ್ಥೆಯನ್ನು ತೆಗೆದುಹಾಕಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?(ಸಂಪೂರ್ಣ ಮಾಹಿತಿ ನೀಡುವುದು)</td></tr>
</table>

**ಸಂಖ್ಯೆ: ಹಿಂವಕ 97 ಬಿಎಂಎಸ್ 2023**

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

## ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ.(ಸಕಲೇಶಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 464ಕ್ಕೆ ಅನುಬಂಧ

ಹಾಸನ ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯಗಳಲ್ಲಿ ಪ್ರಸಕ್ತ ಸಾಲಿನಲ್ಲಿ ಸ್ವೀಕೃತವಾಗಿರುವ ಅರ್ಜಿಗಳ ಬಾಲಕಿಯರ ಮತ್ತು ಬಾಲಕರ ವಿದ್ಯಾರ್ಥಿನಿಲಯಗಳ ವಿವರ

| ಕ್ರ.ಸಂ. | ವಿದ್ಯಾರ್ಥಿ ನಿಲಯಗಳ ವಿವರ | ಬಾಲಕ/ ಬಾಲಕಿ | ಒಟ್ಟು ಮಂಜೂರಾತಿ ಸಂಖ್ಯೆ (ಖಾಲಿ ಸ್ಥಾನಗಳ ತಾತ್ಕಾಲಿಕ ವರ್ಗಾವಣೆ ಸೇರಿ) | 2022-23 ನೇ ಸಾಲಿನಲ್ಲಿ ಹೊಸದಾಗಿ ಪ್ರವೇಶ ಕೋರಿ ಬಂದ ಒಟ್ಟು ಅರ್ಜಿಗಳ ಸಂಖ್ಯೆ (ನವೀಕರಣ + ಹೊಸದು) |
|---|---|---|---|---|
| 1 | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಹಾಸನ ಟೌನ್ BCWD616 | ಮೆ.ಪೂ ಬಾಲಕಿ | 45 | 35 |
| | **ಒಟ್ಟು** | | **45** | **35** |
| 1 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ಹೊಸದು 2015) BCWD2024 | ಬಾಲಕಿ | 175 | 2232 |
| 2 | ಮೆಟ್ರಿಕ್ ನಂತರ ಬಾಲಕಿಯರ ಇಂಜಿನಿಯರಿಂಗ್/ವೈದ್ಯಕೀಯ ವಿದ್ಯಾರ್ಥಿ ನಿಲಯ, ಹಾಸನ.BCWD2025 | ಬಾಲಕಿ | 185 | |
| 3 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ಮೂಲ) ಹಾಸನ ಟೌನ್, BCWD2026 | ಬಾಲಕಿ | 218 | |
| 4 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ವಿಭಜಿತ-2) ವಿದ್ಯಾನಗರ, BCWD2027 | ಬಾಲಕಿ | 145 | |
| 5 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ವಿಭಜಿತ-1) ಶಾಂತಿನಗರ, BCWD2028 | ಬಾಲಕಿ | 175 | |
| 6 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ಎನ್.ಡಿ.ಆರ್.ಕೆ. ಹತ್ತಿರ) BCWD2029 | ಬಾಲಕಿ | 185 | |
| 7 | ಮೆಟ್ರಿಕ್ ನಂತರ ಬಾಲಕಿಯರ ಸ್ನಾತಕೋತ್ತರ ವಿದ್ಯಾರ್ಥಿನಿಲಯ, ಶಾಂತಿನಗರ, BCWD2030 | ಬಾಲಕಿ | 145 | |
| 8 | ಶ್ರೀಮತಿ ಇಂದಿರಾಗಾಂಧಿ ಮೆಟ್ರಿಕ್ ನಂತರ ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಲಯ, ಹಾಸನ.BCWD2031 | ಬಾಲಕಿ | 185 | |
| 9 | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ(ಹೊಸದು 2016) BCWD2032 | ಬಾಲಕಿ | 167 | |
| | **ಒಟ್ಟು** | | **1580** | **2232** |
| | | | | |

| | | | | |
|---|---|---|---|---|
| 1 | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಹಾಸನ ಟೌನ್ BCWD608 | ಮೆ.ಪೂ ಬಾಲಕ | 50 | 34 |
| ಒಟ್ಟು | | | **50** | **34** |
| | | | | |
| 1 | ಮೆಟ್ರಿಕ್ ನಂತರ ಬಾಲಕರ ಇಂಜಿನಿಯರಿಂಗ್/ವೈದ್ಯಕೀಯ ವಿದ್ಯಾರ್ಥಿನಿಲಯ, ಹಾಸನ.BCWD2015 | ಬಾಲಕ | 155 | 2010 |
| 2 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ (ಕಲ್ಲುಕಟ್ಟಡ) ಮೂಲ, ಹಾಸನ ಟೌನ್.BCWD2016 | ಬಾಲಕ | 208 | |
| 3 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ(ವಿಭಜಿತ-2) ಹಾಸನ ಟೌನ್.BCWD2017 | ಬಾಲಕ | 155 | |
| 4 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ (ವೃತ್ತಿಪರ - ವಿಭಜಿತ), ಹಾಸನ ಟೌನ್ BCWD2018 | ಬಾಲಕ | 189 | |
| 5 | ಮೆಟ್ರಿಕ್ ನಂತರ ಬಾಲಕರ ಸ್ನಾತಕೋತ್ತರ ವಿದ್ಯಾರ್ಥಿನಿಲಯ, ಹಾಸನ ಟೌನ್. BCWD2020 | ಬಾಲಕ | 145 | |
| 6 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ (ವೃತ್ತಿಪರ -ಮೂಲ), ಹಾಸನ ಟೌನ್ BCWD2021 | ಬಾಲಕ | 199 | |
| 7 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ(ವಿಭಜಿತ-1) ಗುಡ್ಡೇನಹಳ್ಳಿ, BCWD2022 | ಬಾಲಕ | 201 | |
| 8 | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ(ಮಾದರಿ) ಗುಡ್ಡೇನಹಳ್ಳಿ, BCWD2023 | ಬಾಲಕ | 188 | |
| ಒಟ್ಟು | | | **1440** | **2010** |
| ಒಟ್ಟಾರೆ | | | **3115** | **4311** |

ಆಯುಕ್ತರು
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ
ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 465 |
| ಸದಸ್ಯರ ಹೆಸರು | ಶ್ರೀ ಬಾಲಕೃಷ್ಣ ಸಿ.ಎನ್ (ಶ್ರವಣಬೆಳಗೊಳ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆಯ ಕೃಷಿ ಇಲಾಖೆಯಲ್ಲಿ ಹಾಲಿ ಮಂಜೂರಾಗಿರುವ ಹುದ್ದೆಗಳೆಷ್ಟು; ಭರ್ತಿ ಯಾಗಿರುವ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳೆಷ್ಟು; (ವಿವಿಧ ವೃಂದಗಳವಾರು ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಗೆ 328 ಹುದ್ದೆಗಳು ಮಂಜೂರಾಗಿದ್ದು, 105 ಹುದ್ದೆಗಳು ಭರ್ತಿಯಾಗಿರುತ್ತವೆ. (ತಾಲ್ಲೂಕುವಾರು / ವೃಂದವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಲಾಗಿದೆ) |
| ಆ) | ಹಾಸನ ಜಿಲ್ಲೆಯ ಕೃಷಿ ಇಲಾಖೆಯಲ್ಲಿ ಶೇಕಡಾ 80ಕ್ಕೂ ಅಧಿಕ ಹುದ್ದೆಗಳು ಖಾಲಿ ಇರುವುದರಿಂದ ರೈತರಿಗೆ ತೊಂದರೆ ಯಾಗುತ್ತಿದ್ದು, ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ರೈತರಿಗೆ ಇಲಾಖಾ ಸವಲತ್ತುಗಳನ್ನು ವಿತರಣೆ ಮಾಡುವಲ್ಲಿ ಹಾಗೂ ನೌಕರರ ಕೊರತೆ ನೀಗಿಸಲು ತಾಂತ್ರಿಕ ಅಧಿಕಾರಿಗಳಿಗೆ ಹೆಚ್ಚುವರಿಯಾಗಿ ಪ್ರಭಾರ ವಹಿಸಲಾಗಿದೆ ಹಾಗೂ ಎಲ್ಲಾ ರೈತ ಸಂಪರ್ಕ ಕೇಂದ್ರಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ದಾಸ್ತಾನು ನಿರ್ವಹಣಾ ಸಿಬ್ಬಂದಿಗಳನ್ನು ಪಡೆದು ಕಚೇರಿಯಲ್ಲಿ ಕಾರ್ಯ ನಿರ್ವಹಿಸುವಂತೆ ಕ್ರಮವಹಿಸಲಾಗಿದೆ. ರೈತರಿಗೆ ಮಾರ್ಗದರ್ಶನ ನೀಡಲು ATMA (Agriculture Technology Management Agency) ಯೋಜನೆಯಡಿ ಹೊರಗುತ್ತಿಗೆ ಆಧಾರದಲ್ಲಿ ತಾಂತ್ರಿಕ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಸಹಾಯಕ ತಾಂತ್ರಿಕ ವ್ಯವಸ್ಥಾಪಕರು **(ATM)**ಗಳನ್ನು ಹೋಬಳಿ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಬ್ಲಾಕ್ ತಾಂತ್ರಿಕ ವ್ಯವಸ್ಥಾಪಕರು **(BTM)** ಹಾಗೂ ಜಿಲ್ಲಾ ಮಟ್ಟದಲ್ಲಿ ಉಪ ಯೋಜನಾ ನಿರ್ದೇಶಕರು **(DPD)**ಗಳನ್ನು ನೇಮಿಸಿಕೊಂಡು ಕಚೇರಿ ಕೆಲಸಗಳು ವಿಳಂಬವಾಗದಂತೆ ಕ್ರಮವಹಿಸಲಾಗುತ್ತಿದೆ. ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗಳನ್ನು ಹಾಗೂ ಕೃಷಿ ಅಧಿಕಾರಿ ಹುದ್ದೆಗಳನ್ನು ಹುದ್ದೆಗಳನ್ನು ಮುಂಬಡ್ತಿ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಮುಂದುವರೆದು 300 ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಆರ್ಥಿಕ ಇಲಾಖೆಯು ಸಹಮತಿ ನೀಡಿದ್ದು, ಅದರನ್ವಯ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |

NO.AGRI/35/AGS/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

ಶ್ರೀ. ಬಾಲಕೃಷ್ಣ ಸಿ.ಎನ್, ವಿಧಾನ ಸಭಾ ಸದಸ್ಯರು, ಶ್ರವಣಬೆಳಗೊಳ ವಿಧಾನ ಸಭಾ ಕ್ಷೇತ್ರ, ಇವರ ಚುಕ್ಕೆ ಗುರುತಿನ ಸಂಖ್ಯೆ 465 ಕ್ಕೆ ಮಾಹಿತಿಯನ್ನು ನೀಡುವ ಬಗ್ಗೆ

ಜನವರಿ-23ರ ಅಂತ್ಯಕ್ಕೆ

| ಕ್ರ ಸಂ. | ಕಛೇರಿ ಹೆಸರು | ಹುದ್ದೆ | ಮಂಜೂರು | ಭರ್ತಿ | ಖಾಲಿ | ಷರಾ |
|---|---|---|---|---|---|---|
| 1 | ಜಂಟಿ ಕೃಷಿ ನಿರ್ದೇಶಕರ ಕಛೇರಿ, ಹಾಸನ | ಜಂಟಿ ಕೃಷಿ ನಿರ್ದೇಶಕರು | 1 | 1 | 0 | |
| 2 | | ಸಹಾಯಕ ಕೃಷಿ ನಿರ್ದೇಶಕರು(ಕೇಂದ್ರ) | 1 | 0 | 1 | |
| 3 | | ಸಹಾಯಕ ಕೃಷಿ ನಿರ್ದೇಶಕರು(ಜಾದ-1) | 1 | 1 | 0 | |
| 4 | | ಸಹಾಯಕ ಕೃಷಿ ನಿರ್ದೇಶಕರು(ಜಾದ-2) | 1 | 0 | 1 | |
| 5 | | ಸಹಾಯಕ ಕೃಷಿ ನಿರ್ದೇಶಕರು(ವಿತ) | 1 | 0 | 1 | |
| 6 | | ಸಹಾಯಕ ಕೃಷಿ ನಿರ್ದೇಶಕರು(ಉ&ಮ) | 1 | 0 | 1 | |
| 7 | | ಸಹಾಯಕ ಕೃಷಿ ನಿರ್ದೇಶಕರು(ರೈಮ) | 1 | 1 | 0 | |
| 8 | | ಕೃಷಿ ಅಧಿಕಾರಿ | 3 | 2 | 1 | |
| 9 | | ಆಡಳಿತಾಧಿಕಾರಿ | 1 | 0 | 1 | |
| 10 | | ಸಹಾಯಕ ಸಾಂಖ್ಯಿಕ ಅಧಿಕಾರಿ | 1 | 0 | 1 | |
| 11 | | ಅಧೀಕ್ಷಕರು | 2 | 2 | 0 | |
| 12 | | ಪ್ರಥಮ ದರ್ಜೆ ಸಹಾಯಕರು | 3 | 0 | 3 | |
| 13 | | ಶೀಘ್ರಲಿಪಿಗಾರರು | 1 | 1 | 0 | |
| 14 | | ದ್ವಿತೀಯ ದರ್ಜೆ ಸಹಾಯಕರು | 3 | 1 | 2 | |
| 15 | | ಬೆರಳಚ್ಚುಗಾರರು | 2 | 0 | 2 | |
| 16 | | ವಾ.ಚಾಲಕರು | 3 | 0 | 3 | |
| 17 | | ಡಿ ಗುಂಪು | 4 | 2 | 2 | |
| ಒಟ್ಟು | | | 30 | 11 | 19 | |

Administrative Officer
Comm... ...culture
Seshadri ...

\\192.168.1.93\g\acer data\2022-23\EST\Vacancy position 2022

| 1 | ಉಪ ಕೃಷಿ ನಿರ್ದೇಶಕರು-1, ಹಾಸನ | ಉಪ ಕೃಷಿ ನಿರ್ದೇಶಕರು | 1 | 1 | 0 | |
|---|---|---|---|---|---|---|
| 2 | | ಸಹಾಯಕ ಕೃಷಿ ನಿರ್ದೇಶಕರು | 0 | 0 | 0 | |
| 3 | | ಕೃಷಿ ಅಧಿಕಾರಿ | 2 | 1 | 1 | |
| 4 | | ಆಡಳಿತ ಸಹಾಯಕರು | 1 | 0 | 1 | |
| 5 | | ಅಧೀಕ್ಷಕರು | 2 | 1 | 1 | |
| 6 | | ಪ್ರಥಮ ದರ್ಜೆ ಸಹಾಯಕರು | 3 | 0 | 3 | |
| 7 | | ಶೀಘ್ರಲಿಪಿಗಾರರು | 1 | 0 | 1 | |
| 8 | | ದ್ವಿತೀಯ ದರ್ಜೆ ಸಹಾಯಕರು | 3 | 0 | 3 | |
| 9 | | ಬೆರಳಚ್ಚುಗಾರರು | 1 | 1 | 0 | |
| 10 | | ಹಿರಿಯ ವಾಹನ ಚಾಲಕ | 1 | 0 | 1 | |
| 11 | | ಡಿ ಗುಂಪು | 4 | 1 | 3 | |
| | | **ಒಟ್ಟು** | **19** | **5** | **14** | |
| 1 | ಉಪ ಕೃಷಿ ನಿರ್ದೇಶಕರು-2, ಸಕಲೇಶಪುರ | ಉಪ ಕೃಷಿ ನಿರ್ದೇಶಕರು | 1 | 1 | 0 | |
| 2 | | ಸಹಾಯಕ ಕೃಷಿ ನಿರ್ದೇಶಕರು | 0 | 0 | 0 | |
| 3 | | ಕೃಷಿ ಅಧಿಕಾರಿ | 2 | 1 | 1 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 3 | 0 | 3 | |
| 6 | | ದ್ವಿತೀಯ ದರ್ಜೆ ಸಹಾಯಕರು | 3 | 0 | 3 | |
| 7 | | ಬೆರಳಚ್ಚುಗಾರರು | 1 | 0 | 1 | |
| 8 | | ಶೀಘ್ರಲಿಪಿಗಾರರು | 1 | 0 | 1 | |
| 9 | | ಡಿ ಗುಂಪು | 4 | 1 | 3 | |
| | | **ಒಟ್ಟು** | **16** | **4** | **12** | |
| 1 | ಸಹಾಯಕ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಅರಕಲಗೂಡು | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಸಹಾಯಕ ಕೃಷಿ ನಿರ್ದೇಶಕರು(ರೈಮ) | 1 | 0 | 1 | |
| 3 | | ಕೃಷಿ ಅಧಿಕಾರಿ | 3 | 1 | 2 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 2 | 1 | 1 | |
| 6 | | ಬೆರಳಚ್ಚುಗಾರರು | 1 | 0 | 1 | |
| 7 | | ವಾ.ಚಾಲಕರು | 1 | 1 | 0 | |
| 8 | | ಬಾಣಸಿಗರು | 2 | 0 | 2 | |
| 9 | | ಡಿ ಗುಂಪು | 2 | 1 | 1 | |
| | | **ಒಟ್ಟು** | **14** | **6** | **8** | |
| 1 | ಸಹಾಯಕ ಕೃಷಿ ನಿರ್ದೇಶಕರು, ಆಲೂರು | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಕೃಷಿ ಅಧಿಕಾರಿ | 6 | 4 | 2 | |
| 3 | | ಸಹಾಯಕ ಕೃಷಿ ಅಧಿಕಾರಿ | 8 | 1 | 7 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 1 | 0 | 1 | |
| 6 | | ದ್ವಿತೀಯ ದರ್ಜೆ ಸಹಾಯಕರು | 2 | 0 | 2 | |
| 7 | | ಬೆರಳಚ್ಚುಗಾರರು | 1 | 0 | 1 | |
| 8 | | ವಾ.ಚಾಲಕರು | 1 | 0 | 1 | |
| 9 | | ಡಿ ಗುಂಪು | 4 | 1 | 3 | |
| | | **ಒಟ್ಟು** | **25** | **8** | **17** | |
| 1 | ಸಹಾಯಕ ಕೃಷಿ ನಿರ್ದೇಶಕರು, ಅರಕಲಗೂಡು | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಕೃಷಿ ಅಧಿಕಾರಿ | 7 | 3 | 4 | |
| 3 | | ಕೃಷಿ ಅಧಿಕಾರಿ(ಬೀಜ ಕ್ಷೇತ್ರ) | 1 | 0 | 1 | |
| 4 | | ಸಹಾಯಕ ಕೃಷಿ ಅಧಿಕಾರಿ | 14 | 0 | 14 | |
| 5 | | ಅಧೀಕ್ಷಕರು | 1 | 1 | 0 | |
| 6 | | ಪ್ರಥಮ ದರ್ಜೆ ಸಹಾಯಕರು | 1 | 0 | 1 | |
| 7 | | ದ್ವಿತೀಯ ದರ್ಜೆ ಸಹಾಯಕರು | 2 | 1 | 1 | |
| 8 | | ಬೆರಳಚ್ಚುಗಾರರು | 1 | 0 | 1 | |
| 9 | | ವಾ.ಚಾಲಕರು | 1 | 0 | 1 | |
| 10 | | ಡಿ ಗುಂಪು | 4 | 2 | 2 | |
| 11 | | ಡಿ ಗುಂಪು(ಬೀಜ ಕ್ಷೇತ್ರ) | 1 | 0 | 1 | |
| | | **ಒಟ್ಟು** | **34** | **8** | **26** | |

| | | | | | | |
|---|---|---|---|---|---|---|
| 1 | ಸಹಾಯಕ ಕೃಷಿ ನಿರ್ದೇಶಕರು, ಅರಸೀಕೆರೆ | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಕೃಷಿ ಅಧಿಕಾರಿ | 8 | 7 | 1 | |
| 3 | | ಸಹಾಯಕ ಕೃಷಿ ಅಧಿಕಾರಿ | 18 | 1 | 17 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 1 | 1 | 0 | |
| 6 | | ದ್ವಿತೀಯ ದರ್ಜೆ ಸಹಾಯಕರು | 2 | 1 | 1 | |
| 8 | | ಬೆರಳಚ್ಚುಗಾರರು | 1 | 0 | 1 | |
| 9 | | ವಾ.ಚಾಲಕರು | 1 | 0 | 1 | |
| 10 | | ಡಿ ಗುಂಪು | 4 | 2 | 2 | |
| | | **ಒಟ್ಟು** | **37** | **14** | **23** | |
| 1 | ಸಹಾಯಕ ಕೃಷಿ ನಿರ್ದೇಶಕರು, ಬೇಲೂರು | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಕೃಷಿ ಅಧಿಕಾರಿ | 9 | 6 | 3 | |
| 3 | | ಸಹಾಯಕ ಕೃಷಿ ಅಧಿಕಾರಿ | 13 | 0 | 13 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 1 | 0 | 1 | |
| 6 | | ದ್ವಿತೀಯ ದರ್ಜೆ ಸಹಾಯಕರು | 2 | 0 | 2 | |
| 8 | | ಬೆರಳಚ್ಚುಗಾರರು | 1 | 0 | 1 | |
| 9 | | ವಾ.ಚಾಲಕರು | 1 | 0 | 1 | |
| 10 | | ಡಿ ಗುಂಪು | 4 | 2 | 2 | |
| | | **ಒಟ್ಟು** | **33** | **10** | **23** | |
| 1 | ಸಹಾಯಕ ಕೃಷಿ ನಿರ್ದೇಶಕರು, ಚನ್ನರಾಯಪಟ್ಟಣ | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 | |
| 2 | | ಕೃಷಿ ಅಧಿಕಾರಿ | 8 | 7 | 1 | |
| 3 | | ಸಹಾಯಕ ಕೃಷಿ ಅಧಿಕಾರಿ | 12 | 1 | 11 | |
| 4 | | ಅಧೀಕ್ಷಕರು | 1 | 1 | 0 | |
| 5 | | ಪ್ರಥಮ ದರ್ಜೆ ಸಹಾಯಕರು | 1 | 0 | 1 | |
| 6 | | ದ್ವಿತೀಯ ದರ್ಜೆ ಸಹಾಯಕರು | 2 | 2 | 0 | |
| 8 | | ಬೆರಳಚ್ಚುಗಾರರು | 1 | 0 | 1 | |
| 9 | | ವಾ.ಚಾಲಕರು | 1 | 0 | 1 | |
| 10 | | ಡಿ ಗುಂಪು | 4 | 2 | 2 | |
| | | **ಒಟ್ಟು** | **31** | **14** | **17** | |

Administrative Officer
Commissionerate of Agriculture
Seshadri Road, Bangalore-1

|  |  |  |  |  |  |  |
|---|---|---|---|---|---|---|
| 1 | ಸಹಾಯಕ ಕೃಷಿ ನಿರ್ದೇಶಕರು, ಹಾಸನ | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 |  |
| 2 |  | ಕೃಷಿ ಅಧಿಕಾರಿ | 8 | 7 | 1 |  |
| 3 |  | ಸಹಾಯಕ ಕೃಷಿ ಅಧಿಕಾರಿ | 16 | 0 | 16 |  |
| 4 |  | ಅಧೀಕ್ಷಕರು | 1 | 1 | 0 |  |
| 5 |  | ಪ್ರಥಮ ದರ್ಜೆ ಸಹಾಯಕರು | 1 | 0 | 1 |  |
| 6 |  | ದ್ವಿತೀಯ ದರ್ಜೆ ಸಹಾಯಕರು | 2 | 1 | 1 |  |
| 7 |  | ಕೃ.ಉ.ಮೇಲ್ವಿಚಾರಕರು | 1 | 0 | 1 |  |
| 8 |  | ಬೆರಳಚ್ಚುಗಾರರು | 1 | 0 | 1 |  |
| 9 |  | ವಾ.ಚಾಲಕರು | 1 | 1 | 0 |  |
| 10 |  | ಡಿ ಗುಂಪು | 4 | 0 | 4 |  |
|  |  | **ಒಟ್ಟು** | **36** | **11** | **25** |  |
| 1 | ಸಹಾಯಕ ಕೃಷಿ ನಿರ್ದೇಶಕರು, ಹೊಳೇನರಸೀಪುರ | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 |  |
| 2 |  | ಕೃಷಿ ಅಧಿಕಾರಿ | 6 | 4 | 2 |  |
| 3 |  | ಸಹಾಯಕ ಕೃಷಿ ಅಧಿಕಾರಿ | 10 | 0 | 10 |  |
| 4 |  | ಅಧೀಕ್ಷಕರು | 1 | 1 | 0 |  |
| 5 |  | ಪ್ರಥಮ ದರ್ಜೆ ಸಹಾಯಕರು | 1 | 0 | 1 |  |
| 6 |  | ದ್ವಿತೀಯ ದರ್ಜೆ ಸಹಾಯಕರು | 2 | 2 | 0 |  |
| 8 |  | ಬೆರಳಚ್ಚುಗಾರರು | 1 | 0 | 1 |  |
| 9 |  | ವಾ.ಚಾಲಕರು | 1 | 0 | 1 |  |
| 10 |  | ಡಿ ಗುಂಪು | 4 | 1 | 3 |  |
|  |  | **ಒಟ್ಟು** | **27** | **9** | **18** |  |
| 1 | ಸಹಾಯಕ ಕೃಷಿ ನಿರ್ದೇಶಕರು, ಸಕಲೇಶಪುರ | ಸಹಾಯಕ ಕೃಷಿ ನಿರ್ದೇಶಕರು | 1 | 0 | 1 |  |
| 2 |  | ಕೃಷಿ ಅಧಿಕಾರಿ | 8 | 4 | 4 |  |
| 3 |  | ಸಹಾಯಕ ಕೃಷಿ ಅಧಿಕಾರಿ | 8 | 0 | 8 |  |
| 4 |  | ಅಧೀಕ್ಷಕರು | 1 | 0 | 1 |  |
| 5 |  | ಪ್ರಥಮ ದರ್ಜೆ ಸಹಾಯಕರು | 1 | 0 | 1 |  |
| 6 |  | ದ್ವಿತೀಯ ದರ್ಜೆ ಸಹಾಯಕರು | 2 | 0 | 2 |  |
| 8 |  | ಬೆರಳಚ್ಚುಗಾರರು | 1 | 0 | 1 |  |
| 9 |  | ವಾ.ಚಾಲಕರು | 1 | 0 | 1 |  |
| 10 |  | ಡಿ ಗುಂಪು | 4 | 1 | 3 |  |
|  |  | **ಒಟ್ಟು** | **27** | **5** | **22** |  |

\\192.168.1.93\g\acer data\2022-23\EST\Vacancy position 2022

| ಜಂಟಿ ಕೃಷಿ ನಿರ್ದೇಶಕರು, ಹಾಸನ ಜಿಲ್ಲೆ. | | | | | | |
|---|---|---|---|---|---|---|
| ಮಂಜೂರು ಭರ್ತಿ ಮತ್ತು ಖಾಲಿ ಹುದ್ದೆಗಳ ವಿವರ | | | | | | |
| | | | ಜನವರಿ-23ರ ಅಂತ್ಯಕ್ಕೆ | | | |
| ಕ್ರ | ಕಛೇರಿ ಹೆಸರು | ಹುದ್ದೆ | ಮಂಜೂರು | ಭರ್ತಿ | ಖಾಲಿ | ಷರಾ |
| 1 | ಜಿಲ್ಲೆಯ ಕ್ರೋಢೀಕೃತ ಮಂಜೂರು, ಭರ್ತಿ ಖಾಲಿ ಹುದ್ದೆಗಳ ವಿವರ | ಜಂಟಿ ಕೃಷಿ ನಿರ್ದೇಶಕರು | 1 | 1 | 0 | |
| 2 | | ಉಪ ಕೃಷಿ ನಿರ್ದೇಶಕರು | 2 | 2 | 0 | |
| 3 | | ಸಹಾಯಕ ಕೃಷಿ ನಿರ್ದೇಶಕರು | 16 | 10 | 6 | |
| 4 | | ಕೃಷಿ ಅಧಿಕಾರಿ | 71 | 47 | 24 | |
| 5 | | ಸಹಾಯಕ ಕೃಷಿ ಅಧಿಕಾರಿ | 99 | 3 | 96 | |
| 6 | | ಆಡಳಿತಾದಿಕಾರಿಗಳು | 1 | 0 | 1 | |
| 7 | | ಆಡಳಿತ ಸಹಾಯಕರು | 1 | 0 | 1 | |
| 8 | | ಅದೀಕ್ಷಕರು | 14 | 12 | 2 | |
| 9 | | ಪ್ರಥಮ ದರ್ಜೆ ಸಹಾಯಕರು | 19 | 2 | 17 | |
| 10 | | ಶೀಘ್ರಲಿಪಿಗಾರರು | 3 | 1 | 2 | |
| 11 | | ಕೃಉಮೇ | 1 | 0 | 1 | |
| 13 | | ದ್ವಿತೀಯ ದರ್ಜೆ ಸಹಾಯಕರು | 25 | 8 | 17 | |
| 15 | | ಬೆರಳಚ್ಚುಗಾರರು | 13 | 1 | 12 | |
| 16 | | ವಾ.ಚಾಲಕರು | 13 | 2 | 11 | |
| 18 | | ಬಾಣಸಿಗರು | 2 | 0 | 2 | |
| 19 | | ಡಿ ಗುಂಪು | 47 | 16 | 31 | |
| ಒಟ್ಟು | | | **328** | **105** | **223** | |

ಜಂಟಿ ಕೃಷಿ ನಿರ್ದೇಶಕರು
ಹಾಸನ

Administrative Officer
... of Agriculture
... Bangalore-1

\\192.168.1.93\g\acer data\2022-23\EST\Vacancy position 2022

| ಜಂಟಿ ಕೃಷಿ ನಿರ್ದೇಶಕರು, ಹಾಸನ ಜಿಲ್ಲೆ. | | | | | | |
|---|---|---|---|---|---|---|
| ಮಂಜೂರು ಭರ್ತಿ ಮತ್ತು ಖಾಲಿ ಹುದ್ದೆಗಳ ವಿವರ | | | | | | |
| | | | ಜನವರಿ–23ರ ಅಂತ್ಯಕ್ಕೆ | | | |
| ಕ್ರ | ಕಛೇರಿ ಹೆಸರು | ಹುದ್ದೆ | ಮಂಜೂರು | ಭರ್ತಿ | ಖಾಲಿ | ಷರಾ |
| 1 | ಜಿಲ್ಲೆಯ ಕ್ರೋಢೀಕೃತ ಮಂಜೂರು, ಭರ್ತಿ ಖಾಲಿ ಹುದ್ದೆಗಳ ವಿವರ | ಜಂಟಿ ಕೃಷಿ ನಿರ್ದೇಶಕರು | 1 | 1 | 0 | |
| 2 | | ಉಪ ಕೃಷಿ ನಿರ್ದೇಶಕರು | 2 | 2 | 0 | |
| 3 | | ಸಹಾಯಕ ಕೃಷಿ ನಿರ್ದೇಶಕರು | 16 | 10 | 6 | |
| 4 | | ಕೃಷಿ ಅಧಿಕಾರಿ | 71 | 47 | 24 | |
| 5 | | ಸಹಾಯಕ ಕೃಷಿ ಅಧಿಕಾರಿ | 99 | 3 | 96 | |
| 6 | | ಆಡಳಿತಾದಿಕಾರಿಗಳು | 1 | 0 | 1 | |
| 7 | | ಆಡಳಿತ ಸಹಾಯಕರು | 1 | 0 | 1 | |
| 8 | | ಅದೀಕ್ಷಕರು | 14 | 12 | 2 | |
| 9 | | ಪ್ರಥಮ ದರ್ಜೆ ಸಹಾಯಕರು | 19 | 2 | 17 | |
| 10 | | ಶೀಘ್ರಲಿಪಿಗಾರರು | 3 | 1 | 2 | |
| 11 | | ಕೃಉಮೇ | 1 | 0 | 1 | |
| 13 | | ದ್ವಿತೀಯ ದರ್ಜೆ ಸಹಾಯಕರು | 25 | 8 | 17 | |
| 15 | | ಬೆರಳಚ್ಚುಗಾರರು | 13 | 1 | 12 | |
| 16 | | ವಾ.ಚಾಲಕರು | 13 | 2 | 11 | |
| 18 | | ಬಾಣಸಿಗರು | 2 | 0 | 2 | |
| 19 | | ಡಿ ಗುಂಪು | 47 | 16 | 31 | |
| ಒಟ್ಟು | | | 328 | 105 | 223 | |

ಜಂಟಿ ಕೃಷಿ ನಿರ್ದೇಶಕರು
ಹಾಸನ

Commissioner of Agriculture
Seshadri Road, Bangalore-1

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆಸಂಖ್ಯೆ : 466

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಬಾಲಕೃಷ್ಣಸಿ. ಎನ್ ( ಶ್ರವಣಬೆಳಗೊಳ )

ಉತ್ತರಿಸಬೇಕಾದ ದಿನಾಂಕ : 15-02-2023

ಉತ್ತರಿಸುವವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಹಾಸನ ಜಿಲ್ಲೆಯಲ್ಲಿ ಪ್ರಮುಖವಾಗಿ ತೋಟಗಾರಿಕೆ ಬೆಳೆಗಳಾದ ಆಲೂಗಡ್ಡೆ,ತೆಂಗು,ಕಾಫಿ, ಮೆಣಸು, ಏಲಕ್ಕಿ, ಅಡಿಕೆ, ಶುಂಠಿ ಹಣ್ಣಿನ ಬೆಳೆಗಳಾದ ಮಾವು, ಬಾಳೆ, ಸಪೋಟ, ಪಪ್ಪಾಯ ಹಾಗೂ ತರಕಾರಿ ಬೆಳೆಗಳಾದ ಟೊಮೆಟೋ, ಹಸಿರು ಮೆಣಸಿನಕಾಯಿ, ಬೀನ್ಸ್, ಈರುಳ್ಳಿ ಪ್ರಮುಖ ಬೆಳೆಗಳನ್ನು ಸುಮಾರು ಒಂದು ಲಕ್ಷತೊಂಬತ್ತುಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯತ್ತಿದ್ದು ಸದರಿ ಇಲಾಖೆಯಲ್ಲಿಶೇಕಡ 80 ಕ್ಕೂ ಅಧಿಕ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೇಯೇ;<br>( ಸಂಪೂರ್ಣ ಮಾಹಿತಿ ನೀಡುವುದು) | ಹಾಸನ ಜಿಲ್ಲೆಯ ತೋಟಗಾರಿಕೆ ಇಲಾಖೆಯಲ್ಲಿ ಒಟ್ಟು 228 ಹುದ್ದೆಗಳು ಮಂಜೂರಾಗಿದ್ದು 117 ಹುದ್ದೆಗಳು ಭರ್ತಿಯಾಗಿವೆ. 111 ಹುದ್ದೆಗಳು ಎಂದರೆ 48% ಹುದ್ದೆಗಳು ಖಾಲಿ ಇರುತ್ತದೆ. ಹುದ್ದೆವಾರು ಸಂಪೂರ್ಣ ಮಾಹಿತಿ ಈ ಕೆಳಗಿನಂತಿರುತ್ತದೆ. |

| ಕ್ರಸಂ | ಅಧಿಕಾರಿ/ನೌಕರರಪದನಾಮ | ಮಂಜೂರಾದಹುದ್ದೆ | ಭರ್ತಿ ಮಾಡಲಾದ ಹುದ್ದೆಗಳು | ಖಾಲಿಹುದ್ದೆ |
|---|---|---|---|---|
| 1. | ತೋಟಗಾರಿಕೆ ಉಪ ನಿರ್ದೇಶಕರು | 1 | 1 | 0 |
| 2. | ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು | 9 | 8 | 1 |
| 3. | ಸಹಾಯಕ ತೋಟಗಾರಿಕೆ ನಿರ್ದೇಶಕರು | 17 | 07 | 10 |
| 4. | ಸಹಾಯಕ ತೋಟಗಾರಿಕೆ ಅಧಿಕಾರಿ | 53 | 39 | 14 |
| 5. | ಅಧೀಕ್ಷಕರು | 6 | 6 | 0 |
| 6. | ಪ್ರಥಮ ದರ್ಜೆ ಸಹಾಯಕರು | 7 | 7 | 0 |
| 7. | ದ್ವಿತೀಯ ದರ್ಜೆ ಸಹಾಯಕರು | 9 | 8 | 1 |
| 8. | ಬೆರಳಚ್ಚುಗಾರರು | 2 | 0 | 2 |
| 9. | ಕಛೇರಿ ಸೇವಕರು | 4 | 2 | 2 |
| 10. | ತೋಟಗಾರಿಕೆ ಸಹಾಯಕರು | 41 | 25 | 16 |
| 11. | ವಾಹನ ಚಾಲಕರು | 2 | 2 | 0 |
| 12. | ಜೇನು ಕೃಷಿ ಪ್ರದರ್ಶಕರು | 1 | 0 | 1 |

| | | | | | |
|---|---|---|---|---|---|
| | | 13. | ಜೇನು ಕೃಷಿ ಸಹಾಯಕರು | 3 | 0 | 3 |
| | | 14. | ಸಹಾಯಕ ಸಾಂಖ್ಯಿಕ ಅಧಿಕಾರಿ | 1 | 0 | 1 |
| | | 15. | ತೋಟಗಾರರು | 72 | 12 | 60 |
| | | | ಒಟ್ಟು | 228 | 117 | 111 |

| | | |
|---|---|---|
| ಆ) | ಹಾಸನ ಜಿಲ್ಲೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಹುದ್ದೆ, ಸಹಾಯಕ ತೋಟಗಾರಿಕೆ ನಿರ್ದೇಶಕರು, ಸಹಾಯಕ ತೋಟಗಾರಿಕೆ ಅಧಿಕಾರಿ, ದ್ವಿತೀಯ ದರ್ಜೆ ಸಹಾಯಕರು, ಬೆರಳಚ್ಚುಗಾರರು, ತೋಟಗಾರಿಕೆ ಸಹಾಯಕರು, ಜೇನು ಕೃಷಿ ಪ್ರದರ್ಶಕರು, ಜೇನು ಕೃಷಿ ಸಹಾಯಕರು ಒಳಗೊಂಡಂತೆ ತೋಟಗಾರಿಕೆ ಇಲಾಖೆಯಲ್ಲಿ ಮಂಜೂರಾದ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳೆಷ್ಟು; ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದು ಕೊಂಡಿರುವ ಕ್ರಮಗಳೇನು; ( ಸಂಪೂರ್ಣ ಮಾಹಿತಿ ನೀಡುವುದು) | ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದು ಕೊಂಡಿರುವ ಕ್ರಮಗಳು ಈ ಕೆಳಕಂಡಂತಿರುತ್ತದೆ.<br>• 2021 ರಿಂದ 2023 ರವರೆಗೆ 13 ಸಹಾಯಕ ತೋಟಗಾರಿಕೆ ಅಧಿಕಾರಿಗಳ ಹುದ್ದೆಗಳನ್ನು ಹೊಸದಾಗಿ ನೇರ ನೇಮಕಾತಿ ಮೂಲಕ ಹಾಸನ ಜಿಲ್ಲೆಗೆ ಭರ್ತಿಮಾಡಲಾಗಿರುತ್ತದೆ.<br>• ದ್ವಿತೀಯ ದರ್ಜೆ ಸಹಾಯಕರ ವೃಂದದಲ್ಲಿ 22 ಹುದ್ದೆಗಳಿಗೆ ಕೆ.ಪಿ.ಎಸ್.ಸಿಯಿಂದ ಆಯ್ಕೆ ಪಟ್ಟಿಯು ಅಧಿಸೂಚನೆ ಯಾಗಿ ನೇರ ನೇಮಕಾತಿ ಪ್ರಕ್ರಿಯೆಯು ದಾಖಲಾತಿ ಪರಿಶೀಲನೆ ಹಂತದಲ್ಲಿರುತ್ತದೆ.<br>• ಪ್ರಸ್ತುತ ಇರುವ ಆರ್ಥಿಕ ನಿರ್ಬಂಧಗಳ ಹಿನ್ನಲೆಯಲ್ಲಿ ತೋಟಗಾರಿಕೆ ಇಲಾಖೆಯಲ್ಲಿ ಖಾಲಿ ಇರುವ ವಿವಿಧ ವೃಂದದ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳುವ ಪ್ರಸ್ತಾವನೆಯನ್ನು 2 ವರ್ಷಗಳ ಕಾಲ ಮುಂದೂಡುವಂತೆ ಆರ್ಥಿಕ ಇಲಾಖೆಯು ದಿನಾಂಕ: 27-07-2021 ರಂದು ನೀಡಿರುವ ಅಭಿಪ್ರಾಯ ಸಂ: ಆಇ 152 ವೆಚ್ಚ-4/2021 ರಲ್ಲಿ ತಿಳಿಸಿದೆ.<br>• ಹುದ್ದೆಗಳನ್ನು ಭರ್ತಿ ಮಾಡಲು ಹಂತ ಹಂತವಾಗಿ ಕ್ರಮ ಕೈಗೊಳ್ಳುತ್ತಿದ್ದು ಕಾಲಮಿತಿ ಹಮ್ಮಿಕೊಳ್ಳಲಾಗಿರುವುದಿಲ್ಲ. |
| ಇ) | ಹಾಸನ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯ ಉಪ ನಿರ್ದೇಶಕರ ಕಛೇರಿ ಅಧೀನದಲ್ಲಿರುವ ವಿವಿಧ ತಾಲ್ಲೂಕುಗಳಲ್ಲಿ ಹಲವಾರು ವರ್ಷಗಳಿಂದ ಖಾಲಿ ಇರುವ ಹುದ್ದೆಗಳನ್ನು ರೈತರ ಹಿತದೃಷ್ಟಿಯಿಂದ ನೇಮಕಾತಿ ಮಾಡಲು ಯಾವ ಕಾಲಮಿತಿಯಲ್ಲಿ ಕ್ರಮಕೈಗೊಳ್ಳಲಾಗುವುದು ( ಸಂಪೂರ್ಣ ಮಾಹಿತಿ ನೀಡುವುದು) | |

No. HORTI 55 HGM 2023

(ಮುನಿರತ್ನ)

ತೋಟಗಾರಿಕೆ ಹಾಗೂ ಯೋಜನೆ,

ಕಾರ್ಯಕ್ರಮ ಸಂಯೋಜನೆ ಮತ್ತು

ಸಾಂಖ್ಯಿಕ ಸಚಿವರು

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 467 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ನರೇಂದ್ರ ಆರ್. (ಹನೂರು) |
| ಉತ್ತರಿಸಬೇಕಾದ ದಿನಾಂಕ | **15/02/2023** |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಾರ್ಮಿಕ ಇಲಾಖೆ ವ್ಯಾಪ್ತಿಯಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಲ್ಲದವರು ನಕಲಿ ದಾಖಲಾತಿ ಸೃಷ್ಟಿಸಿ ಮಂಡಳಿಯು ನೀಡುವ ಕಾರ್ಮಿಕರ ಗುರುತಿನ ಚೀಟಿಯನ್ನು ಹೊಂದಿ ಸೌಲಭ್ಯಗಳನ್ನು ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ; | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಲ್ಲದವರು ನಕಲಿ ದಾಖಲಾತಿ ಸೃಷ್ಟಿಸಿ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯು ನೀಡುವ ಕಾರ್ಮಿಕರ ಗುರುತಿನ ಚೀಟಿಯನ್ನು ಪಡೆದು, ಸಹಾಯಧನವನ್ನು ಪಡೆಯುವುದನ್ನು ತಡೆಗಟ್ಟಲು ಈ ಕೆಳಕಂಡಂತೆ ಕ್ರಮ ವಹಿಸಲಾಗುತ್ತಿದೆ:<br><br>ಅನರ್ಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಗುರುತಿನ ಚೀಟಿಯನ್ನು ಪಡೆದಿದ್ದಲ್ಲಿ ಅಂತಹ ಗುರುತಿನ ಚೀಟಿಯನ್ನು ರದ್ದು ಪಡಿಸಲು ಕಟ್ಟಡ & ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ ಕರ್ನಾಟಕ ನಿಯಮ, (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) 2006 ರ ನಿಯಮ, 20 (7) ರಲ್ಲಿ ನೋಂದಣಾಧಿಕಾರಿಗಳಿಗೆ ಪ್ರಾವಧಾನ ಕಲ್ಪಿಸಲಾಗಿದೆ.<br><br>ಅನರ್ಹ ಕಟ್ಟಡ ಕಾರ್ಮಿಕರ ನೋಂದಣಿಯ ರದ್ದತಿಗಾಗಿ ದಿನಾಂಕ:25-01-2023 ರಿಂದ 25-02-2023ರವರೆಗೆ ಬೋಗಸ್ ಕಾರ್ಡು ನೋಂದಣಿ ರದ್ದತಿ ಅಭಿಯಾನವನ್ನು ಹಲವಾರು ಮಾರ್ಗಸೂಚಿಗಳೊಂದಿಗೆ ರಾಜ್ಯದಾದ್ಯಂತ ಹಮ್ಮಿಕೊಂಡು ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸ ನಿರ್ವಹಿಸದೇ ಕಾರ್ಮಿಕರ ಗುರುತಿನಚೀಟಿ ಪಡೆದಿರುವ ಕಾರ್ಮಿಕರ ನೋಂದಣಿಯನ್ನು ರದ್ದುಪಡಿಸಲು ಹಾಗೂ ಕಾನೂನಿನನ್ವಯ ಕ್ರಮ ಕೈಗೊಳ್ಳಲು ಕ್ರಮವಹಿಸಲಾಗುತ್ತಿದೆ.<br><br>ದಿನ ಪತ್ರಿಕೆಗಳಲ್ಲಿ ಹಾಗೂ ಐಇಸಿ ಚಟುವಟಿಕೆಗಳ ಮೂಲಕ ಅನರ್ಹ ಕಟ್ಟಡ ಮತ್ತುಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಗುರುತಿನ ಚೀಟಿಯನ್ನು ಪಡೆದಿದ್ದಲ್ಲಿ ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸುವುದಾಗಿ ಪ್ರಚಾರ ಕೈಗೊಳ್ಳಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಇಂಥವರ ವಿರುದ್ಧ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; (ವಿವರ ನೀಡುವುದು) | |

|  |  |  |
| --- | --- | --- |
|  |  | ನಕಲಿ ಕಾರ್ಡ್‌ಗಳನ್ನು ಕೂಡಲೇ ರದ್ದುಪಡಿಸಿ, ಅಂತಹವರ ವಿರುದ್ಧ ಸಕ್ಷಮ ಪ್ರಾಧಿಕಾರದ ಮುಂದೆ ಮೊಕದ್ದಮೆ ದಾಖಲಿಸಲು ಕ್ರಮವಹಿಸುವಂತೆ ಸಂಬಂಧಪಟ್ಟ ನೋಂದಣಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ. |
| ಇ) | ಕಾರ್ಮಿಕರ ಗುರುತಿನ ಚೀಟಿಯನ್ನು ನೀಡಲು ಸರ್ಕಾರ ಅನುಸರಿಸುತ್ತಿರುವ ಮಾನದಂಡಗಳೇನು: ಹಾಗೂ ಈ ಗುರುತಿನ ಚೀಟಿಯಿಂದ ಆ ಕಾರ್ಮಿಕ ಹಾಗೂ ಅವನ ಕುಟುಂಬಕ್ಕೆ ಸರ್ಕಾರ ನೀಡುವ ಸೌಲಭ್ಯಗಳೇನು: (ಸಂಪೂರ್ಣ ವಿವರ ನೀಡುವುದು) | ಅಸಂಘಟಿತ ವಲಯಕ್ಕೆ ಸೇರಿದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996 ಯ ಕಲಂ 12 ರ ಪ್ರಾವದಾನಗಳನ್ವಯ ನೋಂದಣಿ ಪೂರ್ವದಲ್ಲಿ 12 ತಿಂಗಳ ಅವಧಿಯಲ್ಲಿ (ಒಂದು ವರ್ಷದಲ್ಲಿ) 90 ದಿನ ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸದಲ್ಲಿ ತೊಡಗಿರುವ ಮತ್ತು 18-60ರ ವಯೋಮಾನದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಾಣಿಯಾಗಲು ಅರ್ಹರಿರುತ್ತಾರೆ.<br><br>**ನೋಂದಣಿಗಾಗಿ ಸಲ್ಲಿಸಬೇಕಾದ ಅಗತ್ಯ ದಾಖಲೆಗಳು:**<br>ಎ) ನಮೂನೆ-5ರಲ್ಲಿ ಅರ್ಜಿ<br>ಬಿ) ಮಾಲೀಕರ ಪ್ರಮಾಣ ಪತ್ರ: ಕಾಮಗಾರಿ ನಡೆಯುವ ಕಟ್ಟಡದ ಮಾಲೀಕರು/ ಗುತ್ತಿಗೆದಾರರು, CREDAI (Confederation of Real Estate Developers Association of India), BAI (Builders Association of India)ಅಥವಾ ಕರ್ನಾಟಕ ಸ್ಟೇಟ್ ಕಾಂಟ್ರಾಕ್ಟರ್ಸ್ ಅಸೋಸಿಯೇಷನ್ ನವರು ನಮೂನೆ-V(A)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ನೋಂದಾಯಿತ ಕಾರ್ಮಿಕ ಸಂಘಗಳು ನಮೂನೆ-V(B)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಕಾರ್ಮಿಕ ಅಧಿಕಾರಿ/ ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರು ನಮೂನೆ-V(C)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಪಂಚಾಯತಿ ಅಭಿವೃದ್ಧಿಅಧಿಕಾರಿ/ ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ನಮೂನೆ-V(D)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ'. |

| | | |
|---|---|---|
| | | ಸಿ) ಪಾಸ್ ಪೋರ್ಟ್ ಅಳತೆಯ ಭಾವಚಿತ್ರ<br>ಡಿ) ವಯಸ್ಸಿನ ದೃಢೀಕರಣ ಪತ್ರ: ಶಾಲಾ ದಾಖಲಾತಿ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್ ಕಾರ್ಡ್, ಆಧಾರ್‌ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾ ಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ ಸರ್ಕಾರಿ ಆಸ್ಪತ್ರೆ/ ಇಎಸ್‌ಐ ಆಸ್ಪತ್ರೆ/ ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿದದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.<br><br>ಮಂಡಳಿಯ ವತಿಯಿಂದ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಭಿತರಿಗೆ ಅನುಷ್ಠಾನಗೊಳಿಸುತ್ತಿರುವ ಸೌಲಭ್ಯಗಳ ವಿವರವನ್ನು **ಅನುಬಂಧ**ದಲ್ಲಿ ನೀಡಲಾಗಿದೆ. |
| ಈ) | ರಾಜ್ಯದಲ್ಲಿ ಈಗಾಗಲೇ ನೀಡಿರುವ ಕಾರ್ಮಿಕ ಗುರುತಿನ ಚೀಟಿಗಳ ಸಂಖ್ಯೆ ಎಷ್ಟು; ಅದರಲ್ಲಿ ಅಸಲಿ ಎಷ್ಟು; ನಕಲಿ ಎಷ್ಟು? (ವಿವರ ನೀಡುವುದು) | ಪ್ರಾರಂಭದಿಂದ ಇಲ್ಲಿಯವರೆಗೆ 32,92,607 ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ನೋಂದಣಿಯಾಗಿ ಗುರುತಿನ ಚೀಟಿಯನ್ನು ಪಡೆದಿರುತ್ತಾರೆ.<br><br>ಇದರಲ್ಲಿ ಅಸಲಿ ಎಷ್ಟು; ನಕಲಿ ಎಷ್ಟು ಎಂದು ಪರಿಪೂರ್ಣ ತಂತ್ರಾಂಶದಲ್ಲಿ ಮಾಹಿತಿ ಲಭ್ಯವಿರುವುದಿಲ್ಲ. |

**ಕಾಇ 73 ಎಲ್‌ಇಟಿ 2023**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*

# ಅನುಬಂಧ

## ಮಂಡಳಿಯ ನೋಂದಾಯಿತ ಫಲಾನುಭವಿಗಳಿಗೆ ಮತ್ತು ಅವರ ಅವಲಂಭಿತರಿಗೆ ಸಹಾಯಧನ ನೀಡಲು ಈ ಕೆಳಕಂಡ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ರೂಪಿಸಲಾಗಿದೆ:

1. **ಪಿಂಚಣಿ ಸೌಲಭ್ಯ:** ಮೂರು ವರ್ಷ ಸದಸ್ಯತ್ವದೊಂದಿಗೆ 60 ವರ್ಷ ಪೂರೈಸಿದ ಫಲಾನುಭವಿಗೆ ಮಾಸಿಕ **ರೂ.3,000/-**
2. **ಕುಟುಂಬ ಪಿಂಚಣಿ ಸೌಲಭ್ಯ:** ಮೃತ ಪಿಂಚಣಿದಾರರ ಪತಿ / ಪತ್ನಿ ಮಾಸಿಕ **ರೂ.1500/-**
3. **ದುರ್ಬಲತೆ ಪಿಂಚಣಿ:** ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ **ರೂ.2,000/-** ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ **ರೂ.2,00,000/-** ದವರೆಗೆ ಅನುಗ್ರಹ ರಾಶಿ ಸಹಾಯಧನ.
4. **ಕನ್ನಡಕ, ಶ್ರವಣಯಂತ್ರ, ಕೃತಕ ಕೈಕಾಲು ಮತ್ತು ಗಾಲಿ ಕುರ್ಚಿ** ಮರುಪಾವತಿ ಸೌಲಭ್ಯ (ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
5. **ಟ್ರೈನಿಂಗ್-ಕಮ್-ಟೂಲ್‌ಕಿಟ್ ಸೌಲಭ್ಯ (ಶ್ರಮ ಸಾಮರ್ಥ್ಯ) : ರೂ.20,000/- ವರೆಗೆ**
6. **ಶ್ರಮ ಸಂಸಾರ ಸಾಮರ್ಥ್ಯ ತರಬೇತಿ ಸೌಲಭ್ಯ:** ನೋಂದಾಯಿತ ಫಲಾನುಭವಿಯ ಅವಲಂಭಿತರಿಗೆ (ಈ ಯೋಜನೆಯನ್ನು ಜಾರಿಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ)
7. **ವಸತಿ ಸೌಲಭ್ಯ (ಕಾರ್ಮಿಕ ಗೃಹ ಭಾಗ್ಯ): ರೂ.2,00,000/-** ದವರೆಗೆ ಮುಂಗಡ ಸೌಲಭ್ಯ
8. **ಹೆರಿಗೆ ಸೌಲಭ್ಯ (ತಾಯಿ ಲಕ್ಷ್ಮೀ ಬಾಂಡ್):** ಮಹಿಳಾ ಫಲಾನುಭವಿಯ ಮೊದಲ ಎರಡು ಮಗುವಿನ ಜನನಕ್ಕೆ**ರೂ.50,000/-**
9. **ಶಿಶು ಪಾಲನಾ ಸೌಲಭ್ಯ:**
10. **ಅಂತ್ಯಕ್ರಿಯೆ ವೆಚ್ಚ :ರೂ.4,000/-** ಹಾಗೂ ಅನುಗ್ರಹ ರಾಶಿ **ರೂ.71,000/-**ಸಹಾಯಧನ
11. **ಶೈಕ್ಷಣಿಕ ಸಹಾಯಧನ (ಕಲಿಕೆ ಭಾಗ್ಯ): ಫಲಾನುಭವಿಯ ಇಬ್ಬರು ಮಕ್ಕಳ ವಿದ್ಯಾಭ್ಯಾಸಕ್ಕಾಗಿ:**

| ಕ್ರ.ಸಂ | ತರಗತಿ (ಉತ್ತೀರ್ಣಕ್ಕೆ) | |
|---|---|---|
| 1 | ಕೆಜಿ/ ಪೂರ್ವ ಶಾಲೆ /ನರ್ಸರಿ (ವರ್ಷ 3 ರಿಂದ 5) | 5,000 |
| 2 | 1 ರಿಂದ 4ನೇ ತರಗತಿ | 5,000 |
| 3 | 5 ರಿಂದ 8ನೇ ತರಗತಿ | 8,000 |
| 4 | 9 ಹಾಗೂ 10ನೇ ತರಗತಿ | 12,000 |
| | ಪದವಿ ಪೂರ್ವ | |
| 5 | ಪ್ರಥಮ ಪಿಯುಸಿ ಮತ್ತು ದ್ವಿತೀಯಪಿ.ಯು.ಸಿ | 15,000 |
| 6 | ಪಾಲಿಟೆಕ್ನಿಕ್ / ಡಿಪ್ಲಮಾ/ ಐಟಿಐ | 20,000 |
| 7 | ಬಿಎಸ್‌ಸಿ ನರ್ಸಿಂಗ್/ ಜಿಎನ್‌ಎಮ್/ ಎಎನ್‌ಎಮ್/ ಪಾರಮೆಡಿಕಲ್‌ಕೋರ್ಸ್ | 40,000 |
| 8 | ಡಿ.ಎಡ್ | 25,000 |
| | ಬಿ.ಎಡ್ | 35,000 |
| 9 | ಪದವಿ ಪ್ರತಿ ವರ್ಷಕ್ಕೆ (ಯಾವುದೇ ಪದವಿ) | 25,000 |
| 10 | ಎಲ್‌ಎಲ್‌ಬಿ / ಎಲ್‌ಎಲ್‌ಎಮ್ | 30,000 |
| 11 | ಸ್ನಾತಕೋತ್ತರ ಪದವಿ ಸೇರ್ಪಡೆಗೆ | 35,000 ಗರಿಷ್ಠ 2 ವರ್ಷಅವಧಿಗೆ ಒಳಪಟ್ಟು |

| ತಾಂತ್ರೀಕ/ ವೈದ್ಯಕೀಯ ಎನ್‌ಇಇಟಿ ಅಥವಾ ಕೆಸಿಇಟಿ | | |
|---|---|---|
| 12 | ಬಿಇ /ಬಿ.ಟೆಕ್ ಅಥವಾ ಸಂಬಂಧಪಟ್ಟ ಯೂಜಿ ಕೋರ್ಸ್ | ಸದರಿ ಕೋರ್ಸ್‌ನ ಗರಿಷ್ಠ 2 ವರ್ಷ ಅವಧಿಗೆ ಒಳಪಟ್ಟು ವಾರ್ಷಿಕ ರೂ.50,000 |
| 13 | ಎಮ್.ಟೆಕ್/ ಎಮ್ ಇ ( ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರಕೋರ್ಸ್) | ಸದರಿ ಕೋರ್ಸ್‌ನಗರಿಷ್ಠ ಅವಧಿಗೆ ಒಳಪಟ್ಟು ವಾರ್ಷಿಕ ರೂ. 60,000 |
| 14 | ವೈದ್ಯಕೀಯ (ಎಮ್‌ಬಿಬಿಎಸ್ /ಬಿಎಎಮ್‌ಎಸ್ / ಬಿಡಿಎಸ್ /ಬಿಹೆಚ್‌ಎಮ್‌ಎಸ್ ಕೋರ್ಸ್‌ಗೆ ಅಥವಾ ಇದಕ್ಕೆ ಸಂಬಂಧಪಟ್ಟ ಸಮಾನಾಂತರ ಸ್ನಾತಕ್ಕೊತ್ತರ ಕೋರ್ಸ್ | ರೂ.60,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| | ಎಮ್‌ಡಿ | ರೂ. 75,000 (ಸದರಿ ಕೋರ್ಸ್‌ನ ಗರಿಷ್ಠ ಅವಧಿಗೆ ಒಳಪಟ್ಟು) |
| 15 | ಪಿಹೆಚ್‌ಡಿ / ಎಮ್. ಫಿಲ್ (ಯಾವುದೇ ವಿಷಯ) | ಪಿಹೆಚ್‌ಡಿಗೆ ಗರಿಷ್ಠ ಮೂರು ವರ್ಷಗಳಿಗೆ ಹಾಗೂ ಎಮ್‌ಫಿಲ್‌ಗೆ 1 ವರ್ಷಕ್ಕೆ ಪ್ರತಿ ವರ್ಷರೂ. 25,000 (ಯೂಜಿಸಿಯ ಜೂನಿಯರ್‌ರಿಸರ್ಚ್ ಪೆಲೋಶಿಫ್‌ಗೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಅಭ್ಯರ್ಥಿಗಳು ಹಾಗೂ ಯೂಜಿಸಿ ನಿಯಮಗಳನ್ವಯ ವೇತನ ಅನುದಾನಕ್ಕೆ ಒಳಪಡುವ ಹುದ್ದೆಗಳಲ್ಲಿ ಅನುದಾನಿತ ಕಾಲೇಜುಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಆಭ್ಯರ್ಥಿಗಳು ಈ ಸೌಲಭ್ಯವನ್ನು ಪಡೆಯಲು ಅರ್ಹರಿರುವುದಿಲ್ಲ. |
| 16 | ಐಐಟಿ/ಐಐಐಟಿ/ ಐಐಎಮ್/ ಎನ್‌ಐಟಿ/ ಐಐಎಸ್‌ಇಆರ್/ ಎಐಐಎಮ್‌ಎಸ್ /ಎನ್‌ಎಲ್‌ಯೂ ಮತ್ತು ಭಾರತ ಸರ್ಕಾರದ ಮಾನ್ಯತೆ ಪಡೆದ ಕೋರ್ಸ್‌ಗಳು | ಪಾವತಿಸಿದ ಬೋದನಾ ಶುಲ್ಕ |

12. **ವೈದ್ಯಕೀಯ ಸಹಾಯಧನ (ಕಾರ್ಮಿಕಆರೋಗ್ಯ ಭಾಗ್ಯ):** ನೋಂದಾಯಿತ ಫಲಾನುಭವಿ ಹಾಗೂ ಅವರಅವಲಂಭಿತರಿಗೆ**ರೂ.300/–** ರಿಂದ**ರೂ.20,000/–**ವರೆಗೆ
13. **ಅಪಘಾತ ಪರಿಹಾರ:** ಮರಣ ಹೊಂದಿದ್ದಲ್ಲಿ**ರೂ.5,00,000/–,** ಸಂಪೂರ್ಣ ಶಾಶ್ವತದುರ್ಬಲತೆಯಾದಲ್ಲಿ **ರೂ.2,00,000/–** ಮತ್ತುಭಾಗಶಃ ಶಾಶ್ವತದುರ್ಬಲತೆಯಾದಲ್ಲಿ **ರೂ.1,00,000/–**
14. **ಪ್ರಮುಖ ವೈದ್ಯಕೀಯ ವೆಚ್ಚ ಸಹಾಯಧನ (ಕಾರ್ಮಿಕಚಿಕಿತ್ಸಾ ಭಾಗ್ಯ):** ಹೃದ್ರೋಗ, ಕಿಡ್ನಿಜೋಡಣೆ, ಕ್ಯಾನ್ಸರ್ ಶಸ್ತ್ರಚಿಕಿತ್ಸೆ, ಕಣ್ಣಿನ ಶಸ್ತ್ರಚಿಕಿತ್ಸೆ, ಪಾರ್ಶ್ವವಾಯು, ಮೂಳೆ ಶಸ್ತ್ರಚಿಕಿತ್ಸೆ, ಗರ್ಭಕೋಶ ಶಸ್ತ್ರಚಿಕಿತ್ಸೆ, ಅಸ್ತಮ ಚಿಕಿತ್ಸೆ, ಗರ್ಭಪಾತ ಪ್ರಕರಣಗಳು, ಪಿತ್ತಕೋಶದ ತೊಂದರೆಗೆ ಸಂಬಂಧಿತ ಚಿಕಿತ್ಸೆ, ಮೂತ್ರ ಪಿಂಡದಲ್ಲಿನ ಕಲ್ಲು ತೆಗೆಯುವ ಚಿಕಿತ್ಸೆ, ಮೆದುಳಿನ ರಕ್ತಸ್ರಾವದ ಚಿಕಿತ್ಸೆ, ಅಲ್ಸರ್ ಚಿಕಿತ್ಸೆ, ಡಯಾಲಿಸಿಸ್ ಚಿಕಿತ್ಸೆ, ಕಿಡ್ನಿ ಶಸ್ತ್ರಚಿಕಿತ್ಸೆ, ಇ.ಎನ್.ಟಿ. ಚಿಕಿತ್ಸೆ ಮತ್ತು ಶಸ್ತಚಿಕಿತ್ಸೆ, ನರರೋಗ ಶಸ್ತ್ರಚಿಕಿತ್ಸೆ, ವ್ಯಾಸ್ಕ್ಯೂಲರ್ ಶಸ್ತ್ರಚಿಕಿತ್ಸೆ, ಅನ್ನನಾಳದ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಕರುಳಿನ ಶಸ್ತ್ರಚಿಕಿತ್ಸೆ, ಸ್ತನ ಸಂಬಂಧಿತ ಚಿಕಿತ್ಸೆ ಮತ್ತು ಶಸ್ತ್ರಚಿಕಿತ್ಸೆ, ಹರ್ನಿಯ ಶಸ್ತ್ರಚಿಕಿತ್ಸೆ, ಅಪೆಂಡಿಕ್ಸ್ ಶಸ್ತ್ರಚಿಕಿತ್ಸೆ, ಮೂಳೆ ಮುರಿತ/ ಡಿಸ್‌ಲೊಕೇಶನ್ ಚಿಕಿತ್ಸೆ, ಇತರೆ ಔದ್ಯೋಗಿಕ ಖಾಯಿಲೆಗಳ ಚಿಕಿತ್ಸೆಗಳಿಗೆ **ರೂ.2,00,000/–**ವರೆಗೆ

15. **ಮದುವೆ ಸಹಾಯಧನ (ಗೃಹ ಲಕ್ಷ್ಮೀ ಬಾಂಡ್)**: ಫಲಾನುಭವಿ ಅಥವಾ ಅವರ ಇಬ್ಬರು ಮಕ್ಕಳ ಮದುವೆಗೆ ತಲಾ **ರೂ.60,000/-**
16. **ಫಲಾನುಭವಿಯ ಮಕ್ಕಳು ಯುಪಿಎಸ್‌ಸಿ, ಕೆಪಿಎಸ್‌ಸಿ ಹುದ್ದೆಗಳಿಗಾಗಿ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಎದುರಿಸಲು ಪ್ರತಿಷ್ಠಿತ ಸಂಸ್ಥೆಗಳಿಂದ ತರಬೇತಿ ಮತ್ತು ಅವರ ಮಕ್ಕಳು ಹೊರದೇಶಗಳಲ್ಲಿ ಉನ್ನತ ವ್ಯಾಸಂಗ ಮಾಡಲು ತಗಲುವ ವೆಚ್ಚವನ್ನು ಮಂಡಳಿ ವತಿಯಿಂದ ಭರಿಸಲಾಗುವುದು.**
17. **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ಸೌಲಭ್ಯ**: ನೋಂದಾಯಿತ ಫಲಾನುಭವಿಗಳಿಗೆ **ಕೆಎಸ್‌ಆರ್‌ಟಿಸಿ ಬಸ್ ಪಾಸ್‌ನ ವಿತರಣೆ**
18. **ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಉಚಿತ ಬಸ್ ಪಾಸ್ ಸೌಲಭ್ಯ**
19. **ತಾಯಿ ಮಗು ಸಹಾಯ ಹಸ್ತ**: ಮಹಿಳಾ ಫಲಾನುಭವಿಯು ಮಗುವಿಗೆ ಜನ್ಮ ನೀಡಿದ ಸಂದರ್ಭದಲ್ಲಿ ಆಕೆಯ ಮಗುವಿನ ಶಾಲಾ ಪೂರ್ವ ಶಿಕ್ಷಣ ಮತ್ತು ಪೌಷ್ಠಿಕತೆಗಾಗಿ ಮಗುವಿಗೆ ಮೂರು ವರ್ಷಗಳು ತುಂಬುವವರೆಗೆ ವಾರ್ಷಿಕ**ರೂ.6,000/-** ಗಳ ಸಹಾಯಧನ.
20. ಇಮ್ಯೆನಿಟಿ ಬೂಸ್ಟರ್‌ಕಿಟ್ ವಿತರಣೆ
21. ಪ್ರಿವೆಂಟಿವ್ ಹೆಲ್ತ್‌ಕೇರ್ ಯೋಜನೆ
22. ಮೋಬೈಲ್ ಮೆಡಿಕಲ್ ಕೇರ್ ಯೂನಿಟ್
23. ಪೈಲಟ್ ಟ್ರೈನಿಂಗ್: ಫಲಾನುಭವಿಯ ಆಯ್ಕೆಯಾದ ಮಕ್ಕಳಿಗೆ
24. ವಿದೇಶದಲ್ಲಿ ವಿದ್ಯಾಬ್ಯಾಸಕ್ಕಾಗಿ ಶೈಕ್ಷಣಿಕ ಸಹಾಯಧನ ಸೌಲಭ್ಯ
25. ನ್ಯೋಟ್ರೀಸನ್ ಕಿಟ್ಸ್:

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 468

ಸದಸ್ಯರ ಹೆಸರು : ಶ್ರೀ ನರೇಂದ್ರ ಆರ್.

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಗ್ರಾಮಗಳಿಂದ ದಿನನಿತ್ಯ ನೂರಾರು ವಿದ್ಯಾರ್ಥಿಗಳು ಹನೂರು ಹಾಗೂ ಕೊಳ್ಳೇಗಾಲದ ಶಾಲಾ ಕಾಲೇಜುಗಳಿಗೆ ತೆರಳಲು ಬಸ್ಸುಗಳು ಸರಿಯಾದ ಸಮಯಕ್ಕೆ ಬಾರದಿರುವುದರಿಂದ ವಿದ್ಯಾರ್ಥಿಗಳು ಸಕಾಲಕ್ಕೆ ಶಾಲಾ-ಕಾಲೇಜುಗಳಿಗೆ ಹೋಗಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಬಂದಿದ್ದಲ್ಲಿ, ವಿದ್ಯಾರ್ಥಿಗಳ | ಚಾಮರಾಜನಗರ ಜಿಲ್ಲೆಯ ಹನೂರು ವಿಧಾನ |

Scanned By Camera Scanner

| | | |
|---|---|---|
| | ಈ ಸಮಸ್ಯೆಯನ್ನು ಬಗೆಹರಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ 179 ಗ್ರಾಮಗಳ ಪೈಕಿ 174 ಗ್ರಾಮಗಳಿಗೆ ಸಾರಿಗೆ ಸೌಲಭ್ಯ ಕಲ್ಪಿಸಲಾಗಿದೆ. ಉಳಿದ 5 ಗ್ರಾಮಗಳಿಗೆ ರಸ್ತೆಗಳು ಭಾರಿ ವಾಹನಗಳ ಸಂಚಾರಕ್ಕೆ ಯೋಗ್ಯವಿಲ್ಲದ ಕಾರಣ ಸಾರಿಗೆ ಸೌಲಭ್ಯ ಕಲ್ಪಿಸಿರುವುದಿಲ್ಲ.<br><br>ಹನೂರು ವಿಧಾನ ಸಭೆ ಕ್ಷೇತ್ರ ವ್ಯಾಪ್ತಿಯಲ್ಲಿ ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ 38 ಸಾಮಾನ್ಯ ಅನುಸೂಚಿಗಳಿಂದ 142 ಸಾಮಾನ್ಯ ಏಕ ಸುತ್ತುವಳಿಗಳ ಮತ್ತು 55 ವೇಗದೂತ ಅನುಸೂಚಿಗಳಿಂದ 144 ವೇಗದೂತ ಏಕ ಸುತ್ತುವಳಿಗಳು ಸೇರಿ ಒಟ್ಟು 286 ಏಕ ಸುತ್ತುವಳಿಗಳ ಸಾರಿಗೆ ಸೌಲಭ್ಯ ಕಲ್ಪಿಸಿ ಪ್ರತಿ ದಿನ ನಿಯಮಿತವಾಗಿ, ಸಮಯಕ್ಕೆ ಸರಿಯಾಗಿ ಕಾರ್ಯಾಚರಣೆ ಮಾಡಲಾಗುತ್ತಿದೆ.<br>ಹನೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಪ್ರಸ್ತುತ ಒದಗಿಸಿರುವ ಸಾರಿಗೆ ಸೌಲಭ್ಯವು ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅವಶ್ಯಕತೆಗೆ ಅನುಗುಣವಾಗಿರುತ್ತದೆ. |
| ಇ. | ವಿದ್ಯಾರ್ಥಿಗಳು ಹಲವು ಬಾರಿ ರಸ್ತೆ ತಡೆ, ಬಸ್ ತಡೆ ಮಾಡಿ ಹಾಗೂ ಧರಣಿ ನಡೆಸಿ ಸಾರಿಗೆ | ದಿನಾಂಕ: 14/12/2022ರಂದು ಕೊಳ್ಳೇಗಾಲದಲ್ಲಿ ಲೊಕ್ಕನಹಳ್ಳಿ-ಕೊಳ್ಳೇಗಾಲ ಮಾರ್ಗದಲ್ಲಿ ಬೆಳಿಗ್ಗೆ ಶಾಲಾ ಸಮಯಕ್ಕೆ ಸಾರಿಗೆ |

Scanned By Camera Scanner

|  | ಇಲಾಖೆಯ ಅಧಿಕಾರಿಗಳ ಗಮನಕ್ಕೆ ತಂದಿದ್ದರೂ ಸಹ ಇದುವರೆವಿಗೂ ಈ ಸಮಸ್ಯೆಯನ್ನು ಪರಿಹರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸೌಲಭ್ಯ ಕಲ್ಪಿಸುವಂತೆ ಸಾರ್ವಜನಿಕ ಪ್ರಯಾಣಿಕರು ಮತ್ತು ವಿದ್ಯಾರ್ಥಿಗಳು ರಸ್ತೆ ತಡೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆ.<br>ಈ ಕುರಿತು ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕೊಳ್ಳೇಗಾಲ ಘಟಕದ ಅನುಸೂಚಿ ಸಂಖ್ಯೆ: 22ರಲ್ಲಿ ಲೊಕ್ಕನಹಳ್ಳಿ-ಕೊಳ್ಳೇಗಾಲ ಮಾರ್ಗದಲ್ಲಿ ಶಾಲಾ/ ಕಾಲೇಜು ಸಮಯಕ್ಕೆ ಬೆಳಿಗ್ಗೆ 8.00 ಗಂಟೆಗೆ ಹೆಚ್ಚುವರಿ ಸಾರಿಗೆ ಸೌಲಭ್ಯ ಕಲ್ಪಿಸಿ ಪ್ರತಿದಿನ ಸಮಯಕ್ಕೆ ಸರಿಯಾಗಿ ನಿಯಮಿತವಾಗಿ ಕಾರ್ಯಾಚರಣೆ ಮಾಡಲಾಗುತ್ತಿದೆ.<br>ದಿನಾಂಕ:24/12/2022ರಂದು ಹನೂರಿನಲ್ಲಿ ಹನೂರು-ಕೊಳ್ಳೇಗಾಲ ಮಾರ್ಗದಲ್ಲಿ ಬೆಳಿಗ್ಗೆ ಶಾಲಾ ಸಮಯಕ್ಕೆ ಸಾರಿಗೆ ಸೌಲಭ್ಯ ಕಲ್ಪಿಸುವಂತೆ ಸಾರ್ವಜನಿಕ ಪ್ರಯಾಣಿಕರು ಮತ್ತು ವಿದ್ಯಾರ್ಥಿಗಳು ರಸ್ತೆ ತಡೆ ಮಾಡಿದ್ದು, ಈ ಸಂಬಂಧ ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಹನೂರಿನಿಂದ ಕೊಳ್ಳೇಗಾಲಕ್ಕೆ ಕೊಳ್ಳೇಗಾಲ ಘಟಕದ ಅನುಸೂಚಿ ಸಂಖ್ಯೆ: 111ರಲ್ಲಿ ಬೆಳಗ್ಗೆ 8.45ಕ್ಕೆ ಶಾಲಾ/ಕಾಲೇಜು ಸಮಯಕ್ಕೆ ಹೆಚ್ಚುವರಿ ಸಾರಿಗೆ ಸೌಲಭ್ಯ ಕಲ್ಪಿಸಿ ಪ್ರತಿದಿನ ನಿಯಮಿತವಾಗಿ ಕಾರ್ಯಾಚರಣೆ ಮಾಡಲಾಗುತ್ತಿರುತ್ತದೆ. |
|---|---|---|
| ಈ. | ಬಂದಿದ್ದಲ್ಲಿ, ಇಂಥಹ ಅಧಿಕಾರಿಗಳ ವಿರುದ್ಧ ಸರ್ಕಾರ ತೆಗೆದುಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | |

Scanned By Camera Scanner

| | | |
|---|---|---|
| | | ದಿನಾಂಕ: 20/01/2023ರಂದು ಒಡೆಯರಪಾಳ್ಯದಲ್ಲಿ ಒಡೆಯರಪಾಳ್ಯ-ಹನೂರು ಮಾರ್ಗದಲ್ಲಿ ಬೆಳಿಗ್ಗೆ ಶಾಲಾ/ ಕಾಲೇಜು ಸಮಯಕ್ಕೆ ಹೆಚ್ಚುವರಿ ಸಾರಿಗೆ ಸೌಲಭ್ಯ ಕಲ್ಪಿಸುವಂತೆ ಸಾರ್ವಜನಿಕ ಪ್ರಯಾಣಿಕರು ಮತ್ತು ವಿದ್ಯಾರ್ಥಿಗಳು ರಸ್ತೆ ತಡೆ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ, ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕೊಳ್ಳೇಗಾಲ ಘಟಕದ ಅನುಸೂಚಿ ಸಂಖ್ಯೆ: 49 ಎಬಿ ಯಲ್ಲಿ ಬೆಳಿಗ್ಗೆ 8.00 ಗಂಟೆಗೆ ಒಡೆಯರಪಾಳ್ಯ-ಹನೂರು ಮಾರ್ಗದಲ್ಲಿ ಹೆಚ್ಚುವರಿ ಸಾರಿಗೆ ಸೌಲಭ್ಯ ಕಲ್ಪಿಸಿ ಪ್ರತಿ ದಿನ ನಿಯಮಿತವಾಗಿ ಕಾರ್ಯಾಚರಣೆ ಮಾಡಲಾಗುತ್ತಿದೆ. |

ಸಂಖ್ಯೆ: ಟಿಡಿ 3 ಟಿಸಿಕ್ಯೂ 2023

(ಬಿ.ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

Scanned By Camera Scanner

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 469
ಸದಸ್ಯರ ಹೆಸರು : ಶ್ರೀ ಲಿಂಗೇಶ ಕೆ.ಎಸ್.
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 15.02.2023

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ, ಹುಬ್ಬಳ್ಳಿ ಮತ್ತು ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ನಿಗಮ, ಗುಲ್ಬರ್ಗ ನಿಗಮಗಳಡಿಯಲ್ಲಿ ಒಟ್ಟಾರೆ ಎಷ್ಟು ಸಾರಿಗೆ ಬಸ್ಸುಗಳು ಪ್ರತಿನಿತ್ಯ ಸಂಚರಿಸುತ್ತಿವೆ (ನಿಗಮಗಳ ವ್ಯಾಪ್ತಿಯ ಜಿಲ್ಲೆಗಳಲ್ಲಿರುವ ವಿಭಾಗಗಳು ಹಾಗೂ ಘಟಕಗಳವಾರು ಸಂಚಾರಿ ಮಾರ್ಗಗಳ ಸಂಪೂರ್ಣ ಮಾಹಿತಿ ನೀಡುವುದು) | ಸಾರಿಗೆ ಸಂಸ್ಥೆಗಳಾದ ಕ.ರಾ.ರ.ಸಾ.ನಿಗಮ, ವಾ.ಕ.ರ.ಸಾ.ಸಂಸ್ಥೆ ಮತ್ತು ಕ.ಕ.ರ.ಸಾ.ನಿಗಮಗಳ ವ್ಯಾಪ್ತಿಯಲ್ಲಿ ಪ್ರತಿದಿನ ಜಿಲ್ಲಾವಾರು/ ವಿಭಾಗವಾರು, ಘಟಕವಾರು ಕಾರ್ಯಾಚರಣೆಯಲ್ಲಿರುವ ಅನುಸೂಚಿಗಳ ವಿವರಗಳನ್ನು ಅನುಬಂಧ-1ರಲ್ಲಿ ನೀಡಲಾಗಿದೆ. |
| ಆ | ಕಳೆದ 3 ವರ್ಷಗಳಲ್ಲಿ ಈ ನಿಗಮಗಳು ಗಳಿಸುತ್ತಿರುವ ಲಾಭ/ನಷ್ಟವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಕಳೆದ ಮೂರು ವರ್ಷದಲ್ಲಿ ಈ ನಿಗಮಗಳು ಅನುಭವಿಸಿದ ನಷ್ಟದ ವಿವರ ಕೆಳಕಂಡಂತಿದೆ: (ರೂ.ಕೋಟಿಗಳಲ್ಲಿ) (see table below) |
| ಇ | ಈ ನಿಗಮಗಳು ನಷ್ಟ ಅನುಭವಿಸುತ್ತಿದ್ದಲ್ಲಿ, ಅದಕ್ಕೆ ಕಾರಣಗಳೇನು; ಈ ನಿಗಮ | ಈ ಸಾರಿಗೆ ನಿಗಮಗಳು ನಷ್ಟ ಅನುಭವಿಸಲು ಕಾರಣಗಳನ್ನು **ಅನುಬಂಧ-2** ರಲ್ಲಿ ಹಾಗ |

(ರೂ.ಕೋಟಿಗಳಲ್ಲಿ)

| ಕ್ರ.ಸಂ | ಸಂಸ್ಥೆಗಳು | ವರ್ಷ | | |
|---|---|---|---|---|
| | | 2019-20 | 2020-21 | 2021-22 |
| 1 | ಕ.ರಾ.ರ.ಸಾ. ನಿಗಮ | 157.56 | 581.15 | 423.31 |
| 3 | ವಾ.ಕ.ರ.ಸಾ. ಸಂಸ್ಥೆ | 186.45 | 389.08 | 462.58 |
| 4 | ಕ.ಕ.ರ.ಸಾ.ಸಂಸ್ಥೆ | 89.27 | 186.45 | 225.82 |



Generated from eOffice by B SREERAMULU, TD-MIN(BS), TRANSPORT MINISTER, Trans on 15/02/2023 11:30 AM

| | | |
|---|---|---|
| | ಗಳನ್ನು ನಷ್ಟದಿಂದ ಪಾರು ಮಾಡಿ ಲಾಭ ಗಳಿಸುವಂತೆ ಮಾಡಲು ಸರ್ಕಾರವು ಕೈಗೊಂಡಿರುವ ಮಾರ್ಗೋಪಾಯಗಳೇನು (ಸಂಪೂರ್ಣ ಮಾಹಿತಿ ನೀಡುವುದು) | ೂ ಸಂಸ್ಥೆಯನ್ನು ನಷ್ಟದಿಂದ ಪಾರು ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳನ್ನು **ಅನುಬಂಧ-3** ರಲ್ಲಿ ನೀಡಲಾಗಿದೆ. |
| ಈ | ಮುಂದಿನ ದಿನಗಳಲ್ಲಿ ಈ ನಿಗಮಗಳಿಂದ ಗ್ರಾಮೀಣ ಪ್ರದೇಶಗಳಲ್ಲಿನ ಶಾಲಾ/ಕಾಲೇಜಿನ ವಿದ್ಯಾರ್ಥಿಗಳಿಗೆ, ಗಾರ್ಮೆಂಟ್ ಮತ್ತು ಕಾರ್ಖಾನೆಗಳಿಗೆ ತೆರಳುವ ಹೆಣ್ಣು ಮಕ್ಕಳಿಗೆ ರಿಯಾಯಿತಿ ದರದಲ್ಲಿ ಬಸ್ ಪಾಸ್ ವ್ಯವಸ್ಥೆ ಮಾಡುವ ಬಗ್ಗೆ ಹಾಗೂ ಸಾರ್ವಜನಿಕರ ಸುಗಮ ಪ್ರಯಾಣಕ್ಕೆ ಉತ್ತಮ ಬಸ್ ಸೌಕರ್ಯವನ್ನು ಒದಗಿಸಲು ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳೇನು? (ಸಂಪೂರ್ಣ ವಿವರ ನೀಡುವುದು) | ಗ್ರಾಮೀಣ ಪ್ರದೇಶಗಳಲ್ಲಿರುವ ಶಾಲಾ/ ಕಾಲೇಜು ವಿದ್ಯಾರ್ಥಿಗಳಿಗೆ (ಹೆಣ್ಣು ಮಕ್ಕಳಿಗೆ) ನೀಡಲಾಗುತ್ತಿರುವ ಬಸ್ ಪಾಸ್ ಸೌಲಭ್ಯಗಳ ವಿವರ ಈ ಕೆಳಕಂಡಂತಿದೆ:<br><br>1. ವಿದ್ಯಾರ್ಥಿಯು ಕರ್ನಾಟಕ ಸರ್ಕಾರ / ಭಾರತ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳ ಪೂರ್ಣಾವಧಿ ಕೋರ್ಸುಗಳಲ್ಲಿ ಅಭ್ಯಸಿಸುತ್ತಿರಬೇಕು.<br><br>2. ವಿದ್ಯಾರ್ಥಿಗಳು ವಾಸಸ್ಥಳದಿಂದ ವಿದ್ಯಾ ಸಂಸ್ಥೆವರೆಗೆ ಪ್ರಯಾಣಿಸಲು, ಗರಿಷ್ಠ ಪ್ರಯಾಣ ಮಿತಿ 60 ಕಿ.ಮೀವರೆಗೆ ಮಾತ್ರ ಬಸ್ ಪಾಸ್ ವಿತರಿಸಲಾಗುತ್ತಿದೆ.<br><br>3. 7ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಉಚಿತ ಪಾಸು ವಿತರಿಸಲಾಗುತ್ತಿದೆ.<br><br>4. ಪ್ರೌಢಶಾಲಾ ಹೆಣ್ಣು ಮಕ್ಕಳಿಗೆ ಪಾಸಿನ ದರದಲ್ಲಿ ಶೇ.25 ರಷ್ಟು ಹೆಚ್ಚುವರಿ ರಿಯಾಯಿತಿ ನೀಡಲಾಗುತ್ತಿದೆ.<br><br>5. ಎಲ್ಲಾ ತರಗತಿಗಳ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್ ಪಾಸುಗಳನ್ನು ವಿತರಿಸಲಾಗುತ್ತಿದೆ.<br><br>6. ರಾಜ್ಯದ ಗಡಿಭಾಗದಲ್ಲಿ ಅಂದರೆ ಕರ್ನಾಟಕದ ಹೊರಭಾಗದಲ್ಲಿ ಇರುವ ವಿದ್ಯಾರ್ಥಿಗಳು ರಾಜ್ಯದೊಳಗಿನ ಶಿಕ್ಷಣ ಸಂಸ್ಥೆಗಳಲ್ಲಿ ಅಭ್ಯಸಿಸುತ್ತಿದ್ದಲ್ಲಿ, ಅಂತಹ ವಿದ್ಯಾರ್ಥಿಗಳೂ ಸಹ ಉಚಿತ / ರಿಯಾಯಿತಿ ಬಸ್ ಪಾಸ್ ಪಡೆಯಲು ಅವಕಾಶವಿರುತ್ತದೆ.<br><br>7. ವಿದ್ಯಾರ್ಥಿಗಳ ಅಗತ್ಯಕ್ಕನುಗುಣವಾಗಿ ಅವಶ್ಯಕತೆಯಿರುವ ಮಾರ್ಗಗಳಲ್ಲಿ ಹೆಚ್ಚುವರಿ |

| | | |
|---|---|---|
| | | ಟ್ರಿಪ್‌ಗಳನ್ನು ಆಚರಣೆ ಮಾಡಲಾಗುತ್ತಿದೆ.<br><br>ಗಾರ್ಮೆಂಟ್ಸ್ ಮತ್ತು ಕಾರ್ಖಾನೆಗಳಿಗೆ ತೆರಳುವ ಹೆಣ್ಣು ಮಕ್ಕಳಿಗೆ ರಿಯಾಯಿತಿ ಬಸ್ ಪಾಸ್ ವಿತರಿಸುವ ಪ್ರಸ್ತಾವನೆ ಇರುವುದಿಲ್ಲ.<br><br>ಸದರಿ ಸಾರಿಗೆ ಸಂಸ್ಥೆಗಳು ಸಾರ್ವಜನಿಕರ ಸುಗಮ ಪ್ರಯಾಣಕ್ಕೆ ಉತ್ತಮ ಬಸ್ ಸೌಕರ್ಯವನ್ನು ಒದಗಿಸುತ್ತಿರುವ ವಿವರಗಳನ್ನು <u>**ಅನುಬಂಧ-4**</u> ರಲ್ಲಿ ನೀಡಲಾಗಿದೆ. |

ಖ್ಯೆ: ಟಿಡಿ 12 ಟಿಸಿಕ್ಯೂ 2023

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

ಅನುಬಂಧ-1

# ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ

## ವಿಭಾಗಗಳ ಮತ್ತು ಘಟಕವಾರು ಮಾರ್ಗಗಳ ವಿವರ

| ಜಿಲ್ಲೆ | ವಿಭಾಗ | ಘಟಕ | ಪ್ರತಿನಿತ್ಯ ಸಂಚರಿಸುತ್ತಿರುವ ಬಸ್/ ಅನುಸೂಚಿಗಳ ಸಂಖ್ಯೆ | ಪ್ರತಿನಿತ್ಯ ಸಂಚರಿಸುವ ಮಾರ್ಗಗಳ ಸಂಖ್ಯೆ |
|---|---|---|---|---|
| ಬೆಂಗಳೂರು ನಗರ | ಬೆಂಗಳೂರು ಕೇಂದ್ರ | ಘಟಕ-1 | 99 | 36 |
| ಬೆಂಗಳೂರು ನಗರ | ಬೆಂಗಳೂರು ಕೇಂದ್ರ | ಘಟಕ-2 | 81 | 24 |
| ಬೆಂಗಳೂರು ನಗರ | ಬೆಂಗಳೂರು ಕೇಂದ್ರ | ಘಟಕ-4 | 89 | 31 |
| ಬೆಂಗಳೂರು ನಗರ | ಬೆಂಗಳೂರು ಕೇಂದ್ರ | ಘಟಕ-5 | 101 | 30 |
| ಬೆಂಗಳೂರು ನಗರ | ಬೆಂಗಳೂರು ಕೇಂದ್ರ | ಘಟಕ-6 | 100 | 32 |
| ಬೆಂಗಳೂರು ಗ್ರಾಮಾಂತರ | ಬೆಂಗಳೂರು ಕೇಂದ್ರ | ನೆಲಮಂಗಲ | 67 | 30 |
| | ಒಟ್ಟು | | 537 | 183 |
| ಬೆಂಗಳೂರು ನಗರ | ರಾಮನಗರ | ಅನೇಕಲ್ | 65 | 28 |
| ರಾಮನಗರ | ರಾಮನಗರ | ಕನಕಪುರ | 86 | 89 |
| ರಾಮನಗರ | ರಾಮನಗರ | ಚನ್ನಪಟ್ಟಣ | 69 | 65 |
| ರಾಮನಗರ | ರಾಮನಗರ | ಹಾರೋಹಳ್ಳಿ | 53 | 54 |
| ರಾಮನಗರ | ರಾಮನಗರ | ರಾಮನಗರ | 82 | 89 |
| ರಾಮನಗರ | ರಾಮನಗರ | ಮಾಗಡಿ | 68 | 54 |
| | ಒಟ್ಟು | | 423 | 379 |
| ತುಮಕೂರು | ತುಮಕೂರು | ತುಮಕೂರು ಘಟಕ-1 | 93 | 60 |
| ತುಮಕೂರು | ತುಮಕೂರು | ತುಮಕೂರು ಘಟಕ-2 | 104 | 74 |
| ತುಮಕೂರು | ತುಮಕೂರು | ಕುಣಿಗಲ್ | 72 | 72 |
| ತುಮಕೂರು | ತುಮಕೂರು | ತುರುವೇಕೆರೆ | 97 | 71 |
| ತುಮಕೂರು | ತುಮಕೂರು | ತಿಪಟೂರು | 74 | 44 |
| ತುಮಕೂರು | ತುಮಕೂರು | ಮಧುಗಿರಿ | 48 | 28 |
| ತುಮಕೂರು | ತುಮಕೂರು | ಸಿರಾ | 78 | 46 |
| | ಒಟ್ಟು | | 566 | 395 |
| ಕೋಲಾರ | ಕೋಲಾರ | ಕೋಲಾರ | 134 | 118 |
| ಕೋಲಾರ | ಕೋಲಾರ | ಕೆ.ಜಿ.ಎಫ್ | 109 | 74 |
| ಕೋಲಾರ | ಕೋಲಾರ | ಶ್ರೀನಿವಾಸಪುರ | 95 | 126 |
| ಕೋಲಾರ | ಕೋಲಾರ | ಮಾಲೂರು | 82 | 92 |
| ಕೋಲಾರ | ಕೋಲಾರ | ಮುಳಬಾಗಿಲು | 84 | 85 |
| | ಒಟ್ಟು | | 504 | 495 |
| ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | 112 | 76 |
| ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಚಿಂತಾಮಣಿ | 106 | 96 |
| ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | 89 | 53 |
| ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಗೌರಿಬಿದನೂರು | 92 | 47 |
| ಚಿಕ್ಕಬಳ್ಳಾಪುರ | ಚಿಕ್ಕಬಳ್ಳಾಪುರ | ಶಿಡ್ಲಘಟ್ಟ | 38 | 57 |
| ಬೆಂಗಳೂರು ಗ್ರಾಮಾಂತರ | ಚಿಕ್ಕಬಳ್ಳಾಪುರ | ದೊಡ್ಡಬಳ್ಳಾಪುರ | 80 | 23 |
| | ಒಟ್ಟು | | 517 | 352 |

| ಜಿಲ್ಲೆ | ವಿಭಾಗ | ಘಟಕ | ಪ್ರತಿನಿತ್ಯ ಸಂಚರಿಸುತ್ತಿರುವ ಬಸ್/ ಅನುಸೂಚಿಗಳ ಸಂಖ್ಯೆ | ಪ್ರತಿನಿತ್ಯ ಸಂಚರಿಸುವ ಮಾರ್ಗಗಳ ಸಂಖ್ಯೆ |
|---|---|---|---|---|
| ಮೈಸೂರು | ಮೈಸೂರು | ಕುವೆಂಪುನಗರ | 112 | 107 |
| ಮೈಸೂರು | ಮೈಸೂರು | ಸಾತಗಳ್ಳಿ | 125 | 126 |
| ಮೈಸೂರು | ಮೈಸೂರು | ವಿಜಯನಗರ | 120 | 91 |
| ಮೈಸೂರು | ಮೈಸೂರು | ಗ್ರಾಮಾಂತರ ಘಟಕ – 1 | 137 | 82 |
| ಮೈಸೂರು | ಮೈಸೂರು | ಗ್ರಾಮಾಂತರ ಘಟಕ – 3 | 107 | 37 |
| ಮೈಸೂರು | ಮೈಸೂರು | ಕೆ.ಆರ್. ನಗರ | 119 | 132 |
| ಮೈಸೂರು | ಮೈಸೂರು | ಹುಣಸೂರು | 100 | 125 |
| ಮೈಸೂರು | ಮೈಸೂರು | ಹೆಚ್.ಡಿ.ಕೋಟೆ | 86 | 90 |
| ಮೈಸೂರು | ಮೈಸೂರು | ಪಿರಿಯಾಪಟ್ಟಣ | 62 | 87 |
| | ಒಟ್ಟು | | **968** | **877** |
| ಮಂಡ್ಯ | ಮಂಡ್ಯ | ಮಂಡ್ಯ | 101 | 190 |
| ಮಂಡ್ಯ | ಮಂಡ್ಯ | ಮದ್ದೂರು | 77 | 164 |
| ಮಂಡ್ಯ | ಮಂಡ್ಯ | ಮಳವಳ್ಳಿ | 70 | 131 |
| ಮಂಡ್ಯ | ಮಂಡ್ಯ | ನಾಗಮಂಗಲ | 58 | 148 |
| ಮಂಡ್ಯ | ಮಂಡ್ಯ | ಕೆ.ಆರ್.ಪೇಟೆ | 58 | 147 |
| ಮಂಡ್ಯ | ಮಂಡ್ಯ | ಪಾಂಡವಪುರ | 58 | 129 |
| | ಒಟ್ಟು | | **422** | **909** |
| ಚಾಮರಾಜನಗರ | ಚಾಮರಾಜನಗರ | ಚಾಮರಾಜನಗರ | 122 | 62 |
| ಚಾಮರಾಜನಗರ | ಚಾಮರಾಜನಗರ | ಗುಂಡ್ಲುಪೇಟೆ | 118 | 61 |
| ಚಾಮರಾಜನಗರ | ಚಾಮರಾಜನಗರ | ಕೊಳ್ಳೇಗಾಲ | 111 | 60 |
| ಮೈಸೂರು | ಚಾಮರಾಜನಗರ | ನಂಜನಗೂಡು | 120 | 80 |
| | ಒಟ್ಟು | | **471** | **263** |
| ಹಾಸನ | ಹಾಸನ | ಹಾಸನ–1 | 100 | 120 |
| ಹಾಸನ | ಹಾಸನ | ಹಾಸನ–2 | 101 | 104 |
| ಹಾಸನ | ಹಾಸನ | ಚೆನ್ನರಾಯಪಟ್ಟಣ | 93 | 105 |
| ಹಾಸನ | ಹಾಸನ | ರಾಮನಾಥಪುರ | 72 | 77 |
| ಹಾಸನ | ಹಾಸನ | ಹೊಳೆನರಸೀಪುರ | 91 | 95 |
| ಹಾಸನ | ಹಾಸನ | ಅರಕಲಗೂಡು | 75 | 58 |
| | ಒಟ್ಟು | | **532** | **559** |
| ಚಿಕ್ಕಮಗಳೂರು | ಚಿಕ್ಕಮಗಳೂರು | ಚಿಕ್ಕಮಗಳೂರು | 131 | 145 |
| ಚಿಕ್ಕಮಗಳೂರು | ಚಿಕ್ಕಮಗಳೂರು | ಕಡೂರು | 78 | 85 |
| ಚಿಕ್ಕಮಗಳೂರು | ಚಿಕ್ಕಮಗಳೂರು | ಮೂಡಿಗೆರೆ | 61 | 75 |
| ಹಾಸನ | ಚಿಕ್ಕಮಗಳೂರು | ಅರಸೀಕೆರೆ | 98 | 123 |
| ಹಾಸನ | ಚಿಕ್ಕಮಗಳೂರು | ಸಕಲೇಶಪುರ | 85 | 80 |
| ಹಾಸನ | ಚಿಕ್ಕಮಗಳೂರು | ಬೇಲೂರು | 45 | 46 |
| | ಒಟ್ಟು | | **498** | **554** |

| ಜಿಲ್ಲೆ | ವಿಭಾಗ | ಘಟಕ | ಪ್ರತಿನಿತ್ಯ ಸಂಚರಿಸುತ್ತಿರುವ ಬಸ್/ ಅನುಸೂಚಿಗಳ ಸಂಖ್ಯೆ | ಪ್ರತಿನಿತ್ಯ ಸಂಚರಿಸುವ ಮಾರ್ಗಗಳ ಸಂಖ್ಯೆ |
|---|---|---|---|---|
| ದಕ್ಷಿಣ ಕನ್ನಡ | ಮಂಗಳೂರು | ಮಂಗಳೂರು-1 | 113 | 37 |
| ದಕ್ಷಿಣ ಕನ್ನಡ | ಮಂಗಳೂರು | ಮಂಗಳೂರು-2 | 76 | 21 |
| ದಕ್ಷಿಣ ಕನ್ನಡ | ಮಂಗಳೂರು | ಮಂಗಳೂರು-3 | 130 | 53 |
| ದಕ್ಷಿಣ ಕನ್ನಡ | ಮಂಗಳೂರು | ಕುಂದಾಪುರ | 93 | 61 |
| ಉಡುಪಿ | ಮಂಗಳೂರು | ಉಡುಪಿ | 88 | 46 |
| | ಒಟ್ಟು | | **500** | **218** |
| ದಕ್ಷಿಣ ಕನ್ನಡ | ಪುತ್ತೂರು | ಪುತ್ತೂರು | 116 | 149 |
| ದಕ್ಷಿಣ ಕನ್ನಡ | ಪುತ್ತೂರು | ಧರ್ಮಸ್ಥಳ | 117 | 115 |
| ದಕ್ಷಿಣ ಕನ್ನಡ | ಪುತ್ತೂರು | ಬಿಸಿರೋಡು | 86 | 81 |
| ದಕ್ಷಿಣ ಕನ್ನಡ | ಪುತ್ತೂರು | ಸುಳ್ಯ | 58 | 93 |
| ಕೊಡಗು | ಪುತ್ತೂರು | ಮಡಿಕೇರಿ | 91 | 73 |
| | ಒಟ್ಟು | | **468** | **511** |
| ದಾವಣಗೆರೆ | ದಾವಣಗೆರೆ | ದಾವಣಗೆರೆ ಘಟಕ-1 | 151 | 77 |
| ದಾವಣಗೆರೆ | ದಾವಣಗೆರೆ | ದಾವಣಗೆರೆ ಘಟಕ-2 | 96 | 28 |
| ದಾವಣಗೆರೆ | ದಾವಣಗೆರೆ | ಹರಿಹರ | 109 | 53 |
| | ಒಟ್ಟು | | **356** | **158** |
| ಶಿವಮೊಗ್ಗ | ಶಿವಮೊಗ್ಗ | ಶಿವಮೊಗ್ಗ | 141 | 91 |
| ಶಿವಮೊಗ್ಗ | ಶಿವಮೊಗ್ಗ | ಭದ್ರಾವತಿ | 64 | 48 |
| ಶಿವಮೊಗ್ಗ | ಶಿವಮೊಗ್ಗ | ಸಾಗರ | 71 | 65 |
| ದಾವಣಗೆರೆ | ಶಿವಮೊಗ್ಗ | ಹೊನ್ನಾಳಿ | 39 | 46 |
| | ಒಟ್ಟು | | **315** | **250** |
| ಚಿತ್ರದುರ್ಗ | ಚಿತ್ರದುರ್ಗ | ಚಿತ್ರದುರ್ಗ | 133 | 78 |
| ಚಿತ್ರದುರ್ಗ | ಚಿತ್ರದುರ್ಗ | ಚಳ್ಳಕೆರೆ | 53 | 42 |
| ಚಿತ್ರದುರ್ಗ | ಚಿತ್ರದುರ್ಗ | ಹೊಸದುರ್ಗ | 60 | 34 |
| ತುಮಕೂರು | ಚಿತ್ರದುರ್ಗ | ಪಾವಗಡ | 38 | 32 |
| | ಒಟ್ಟು | | **284** | **186** |
| | ಕರಾರಸಾ ನಿಗಮ | | **7361** | **6289** |

| ಕ್ರ.ಸಂ. | ವಿಭಾಗ | ಘಟಕಗಳು | ಸಂಚರಿಸುವ ಬಸ್‌ಗಳ ಸಂಖ್ಯೆ | ಸಂಚರಿಸುವ ಮಾರ್ಗಗಳ ಸಂಖ್ಯೆ |
|---|---|---|---|---|
| 1 | ಹುಬ್ಬಳ್ಳಿ ಗ್ರಾಮಾಂತರ | ಹುಬ್ಬಳ್ಳಿ ಗ್ರಾ-1 | 125 | 83 |
| 2 | | ಹುಬ್ಬಳ್ಳಿ ಗ್ರಾ-2 | 127 | 116 |
| 3 | | ಹುಬ್ಬಳ್ಳಿ ಗ್ರಾ-3 | 62 | 20 |
| 4 | | ನವಲಗುಂದ | 64 | 66 |
| 5 | | ಕಲಘಟಗಿ | 59 | 74 |
| 6 | | ಒಟ್ಟು | **437** | **359** |
| 7 | ಹುಬ್ಬಳ್ಳಿ-ಧಾರವಾಡ ನಗರ ಸಾರಿಗೆ | ಬಿಆರ್‌ಟಿಎಸ್-ಹುಬ್ಬಳ್ಳಿ | 47 | 3 |
| 8 | | ಬಿಆರ್‌ಟಿಎಸ್-ಧಾರವಾಡ | 46 | 3 |
| 9 | | ಹುಬ್ಬಳ್ಳಿ ನ.ಸಾ.-1 | 185 | 134 |
| 10 | | ಧಾರವಾಡ ನ.ಸಾ. | 120 | 125 |
| 11 | | ಒಟ್ಟು | **398** | **265** |
| 12 | ಧಾರವಾಡ ಗ್ರಾಮಾಂತರ | ಧಾರವಾಡ | 91 | 79 |
| 13 | | ಸವದತ್ತಿ | 108 | 98 |
| 14 | | ಹಳಿಯಾಳ | 72 | 83 |
| 15 | | ದಾಂಡೇಲಿ | 54 | 72 |
| 16 | | ಒಟ್ಟು | **325** | **332** |
| 17 | ಹಾವೇರಿ | ಹಾವೇರಿ | 91 | 109 |
| 18 | | ಹಿರೇಕೇರೂರು | 84 | 96 |
| 19 | | ರಾಣೆಬೆನ್ನೂರು | 113 | 101 |
| 20 | | ಹಾನಗಲ್ | 80 | 78 |
| 21 | | ಬ್ಯಾಡಗಿ | 63 | 64 |
| 22 | | ಸವಣೂರು | 52 | 61 |
| 23 | | ಒಟ್ಟು | **483** | **509** |
| 24 | ಬೆಳಗಾವಿ | ಬೆಳಗಾವಿ-1 | 111 | 56 |
| 25 | | ಬೆಳಗಾವಿ-2 | 116 | 112 |
| 26 | | ಬೆಳಗಾವಿ-3 | 104 | 87 |
| 27 | | ಬೆಳಗಾವಿ-4 | 61 | 44 |
| 28 | | ಬೈಲಹೊಂಗಲ | 119 | 177 |
| 29 | | ರಾಮದುರ್ಗ | 88 | 76 |
| 30 | | ಖಾನಾಪುರ | 64 | 89 |
| 31 | | ಒಟ್ಟು | **663** | **641** |
| 32 | ಚಿಕ್ಕೋಡಿ | ಚಿಕ್ಕೋಡಿ | 109 | 101 |
| 33 | | ಸಂಕೇಶ್ವರ | 85 | 130 |
| 34 | | ಗೋಕಾಕ್ | 103 | 107 |
| 35 | | ನಿಪ್ಪಾಣಿ | 76 | 72 |
| 36 | | ರಾಯಬಾಗ | 75 | 80 |
| 37 | | ಅಥಣಿ | 120 | 92 |
| 38 | | ಹುಕ್ಕೇರಿ | 33 | 33 |
| 39 | | ಒಟ್ಟು | **601** | **615** |
| 40 | ಉತ್ತರ ಕನ್ನಡ | ಶಿರ್ಸಿ | 122 | 51 |
| 41 | | ಕುಮಟಾ | 104 | 49 |
| 42 | | ಕಾರವಾರ | 80 | 46 |
| 43 | | ಭಟ್ಕಳ | 62 | 42 |
| 44 | | ಯಲ್ಲಾಪುರ | 62 | 51 |
| 45 | | ಅಂಕೋಲಾ | 53 | 47 |
| 46 | | ಒಟ್ಟು | **483** | **286** |

| ಕ್ರ.ಸಂ. | ವಿಭಾಗ | ಘಟಕಗಳು | ಸಂಚರಿಸುವ ಬಸ್‌ಗಳ ಸಂಖ್ಯೆ | ಸಂಚರಿಸುವ ಮಾರ್ಗಗಳ ಸಂಖ್ಯೆ |
|---|---|---|---|---|
| 47 | | ಬಾಗಲಕೋಟೆ | 120 | 94 |
| 48 | | ಜಮಖಂಡಿ | 102 | 85 |
| 49 | | ಬದಾಮಿ | 82 | 85 |
| 50 | | ಇಳಕಲ್ | 90 | 93 |
| 51 | ಬಾಗಲಕೋಟೆ | ಮುಧೋಳ | 89 | 91 |
| 52 | | ಬೀಳಗಿ | 64 | 46 |
| 53 | | ಗುಳೇದಗುಡ್ಡ | 48 | 48 |
| 54 | | ಹುನಗುಂದ | 56 | 64 |
| 55 | | ಒಟ್ಟು | **651** | **606** |
| 56 | | ಗದಗ | 103 | 89 |
| 57 | | ರೋಣ | 72 | 77 |
| 58 | | ಲಕ್ಷ್ಮೇಶ್ವರ | 61 | 70 |
| 59 | | ನರಗುಂದ | 61 | 44 |
| 60 | ಗದಗ | ಮುಂಡರಗಿ | 66 | 66 |
| 61 | | ಬೆಟಗೇರಿ | 61 | 48 |
| 62 | | ಗಜೇಂದ್ರಗಡ | 64 | 58 |
| 63 | | ಶಿರಹಟ್ಟಿ | 17 | 27 |
| 64 | | ಒಟ್ಟು | **505** | **479** |
| 65 | | ಸಂಸ್ಥೆ | **4546** | **4092** |

ಮುಖ್ಯ ... ವ್ಯವಸ್ಥಾಪಕರು
ವಾಯವ್ಯ ... ರಸ್ತೆ ಸಾರಿಗೆ ಸಂಸ್ಥೆ
ಕೇಂದ್ರ ಕಛೇರಿ, ಹುಬ್ಬಳ್ಳಿ

ಅನುಬಂಧ-1

## ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮ, ಕೇಂದ್ರ ಕಛೇರಿ, ಕಲಬುರಗಿ

| ಕ್ರ ಸಂ | ಜಿಲ್ಲೆ | ವಿಭಾಗ | ವಿಭಾಗ/ಘಟಕ | ಪ್ರತಿದಿನ ಕಾರ್ಯಾಚರಣೆಯಲ್ಲಿರುವ ಅನುಸೂಚಿಗಳ ಸಂಖ್ಯೆ | ಕಾರ್ಯಾಚರಣೆಯಲ್ಲಿರುವ ಮಾರ್ಗಗಳ ಸಂಖ್ಯೆ |
|---|---|---|---|---|---|
| 1 | ಕಲಬುರಗಿ | ವಿಭಾಗ-1 | ಕಲಬುರಗಿ-1 | 98 | 53 |
| 2 | | | ಕಲಬುರಗಿ-4 | 87 | 94 |
| 3 | | | ಚಿಂಚೋಳಿ | 58 | 86 |
| 4 | | | ಚಿತ್ತಾಪುರ | 58 | 64 |
| 5 | | | ಕಾಳಗಿ | 31 | 47 |
| 6 | | | ಸೇಡಂ | 59 | 79 |
| | | | ಒಟ್ಟು | 391 | 423 |
| 1 | | ವಿಭಾಗ-2 | ಕಲಬುರಗಿ-2 | 91 | 87 |
| 2 | | | ಕಲಬುರಗಿ-3 | 99 | 101 |
| 3 | | | ಆಳಂದ | 82 | 103 |
| 4 | | | ಜೇವರ್ಗಿ | 74 | 100 |
| 5 | | | ಅಫಜಲಪೂರ | 65 | 59 |
| | ಒಟ್ಟು | | | 411 | 450 |
| 1 | ಬೀದರ | ಬೀದರ | ಬೀದರ-1 | 98 | 47 |
| 2 | | | ಬೀದರ-2 | 80 | 51 |
| 3 | | | ಹುಮನಾಬಾದ | 101 | 68 |
| 4 | | | ಬ.ಕಲ್ಯಾಣ | 90 | 57 |
| 5 | | | ಭಾಲ್ಕಿ | 101 | 67 |
| 6 | | | ಔರಾದ | 74 | 47 |
| | ಒಟ್ಟು | | | 544 | 337 |
| 1 | ಯಾದಗಿರಿ | ಯಾದಗಿರಿ | ಯಾದಗಿರಿ | 99 | 92 |
| 2 | | | ಶಹಾಪೂರ | 102 | 101 |
| 3 | | | ಗುರುಮಠಕಲ್ | 45 | 72 |
| 4 | | | ಸುರಪೂರ | 70 | 74 |
| | ಒಟ್ಟು | | | 316 | 339 |
| 1 | ರಾಯಚೂರು | ರಾಯಚೂರು | ರಾಯಚೂರು-2 | 95 | 86 |
| 2 | | | ರಾಯಚೂರು-3 | 93 | 56 |
| 3 | | | ಲಿಂಗಸ್ಗೂರು | 115 | 87 |
| 4 | | | ಸಿಂಧನೂರು | 85 | 79 |
| 5 | | | ಮಾನ್ವಿ | 34 | 46 |
| 6 | | | ದೇವದುರ್ಗ | 77 | 62 |
| 7 | | | ಮಸ್ಕಿ | 70 | 65 |
| | ಒಟ್ಟು | | | 569 | 481 |

| ಕ್ರ ಸಂ | ಜಿಲ್ಲೆ | ವಿಭಾಗ | ವಿಭಾಗ/ಘಟಕ | ಪ್ರತಿದಿನ ಕಾರ್ಯಾಚರಣೆಯಲ್ಲಿರುವ ಅನುಸೂಚಿಗಳ ಸಂಖ್ಯೆ | ಕಾರ್ಯಾಚರಣೆಯಲ್ಲಿರುವ ಮಾರ್ಗಗಳ ಸಂಖ್ಯೆ |
|---|---|---|---|---|---|
| 1 | ಕೊಪ್ಪಳ | ಕೊಪ್ಪಳ | ಕೊಪ್ಪಳ | 120 | 158 |
| 2 | | | ಕುಷ್ಟಗಿ | 96 | 121 |
| 3 | | | ಗಂಗಾವತಿ | 100 | 125 |
| 4 | | | ಯಲಬುರ್ಗಾ | 57 | 79 |
| 5 | | | ಕುಕನೂರ | 38 | 56 |
| | ಒಟ್ಟು | | | **411** | **539** |
| 1 | ಬಳ್ಳಾರಿ | ಬಳ್ಳಾರಿ | ಬಳ್ಳಾರಿ-1 | 88 | 73 |
| 2 | | | ಬಳ್ಳಾರಿ-2 | 96 | 88 |
| 3 | | | ಬಳ್ಳಾರಿ-3 | 46 | 54 |
| 4 | | | ಸಿರಗುಪ್ಪ | 70 | 57 |
| 5 | | | ಕುರುಗೋಡ | 35 | 23 |
| 6 | | | ಸಂಡೂರ | 61 | 43 |
| | ಒಟ್ಟು | | | **396** | **338** |
| 1 | ಹೊಸಪೇಟೆ | ಹೊಸಪೇಟೆ | ಹೊಸಪೇಟೆ | 122 | 81 |
| 2 | | | ಕೂಡ್ಲಿಗಿ | 74 | 93 |
| 3 | | | ಹಡಗಲಿ | 78 | 102 |
| 4 | | | ಹ.ಬೊ.ಹಳ್ಳಿ | 56 | 57 |
| 5 | | | ಹರಪನಹಳ್ಳಿ | 61 | 78 |
| | ಒಟ್ಟು | | | **391** | **411** |
| 1 | ವಿಜಯಪುರ | ವಿಜಯಪುರ | ವಿಜಯಪುರ-1 | 95 | 72 |
| 2 | | | ವಿಜಯಪುರ-2 | 70 | 54 |
| 3 | | | ವಿಜಯಪುರ-3 | 57 | 45 |
| 4 | | | ಇಂಡಿ | 85 | 51 |
| 5 | | | ಸಿಂದಗಿ | 94 | 43 |
| 6 | | | ಮುದ್ದೇಬಿಹಾಳ | 108 | 64 |
| 7 | | | ತಾಳಕೋಟೆ | 76 | 73 |
| 8 | | | ಬ.ಬಾಗೇವಾಡಿ | 68 | 61 |
| | ಒಟ್ಟು | | | **653** | **463** |
| | ನಿಗಮ | | | **4082** | **3781** |

ಅನುಬಂಧ-2

## ಸಾರಿಗೆ ಸಂಸ್ಥೆಗಳು ನಷ್ಟದಲ್ಲಿರಲು ಪ್ರಮುಖ ಕಾರಣಗಳು

### ಕ.ರಾ.ರ.ಸಾ ನಿಗಮ:

- ಕ.ರಾ.ರ.ಸಾ.ನಿಗಮದ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಗ್ರಾಮಾಂತರ, ತುಮಕೂರು, ರಾಮನಗರ, ಕೋಲಾರ, ಚಿಕ್ಕಬಳ್ಳಾಪುರ, ಮೈಸೂರು, ಚಾಮರಾಜನಗರ. ಮಂಡ್ಯ, ಹಾಸನ, ಚಿಕ್ಕಮಗಳೂರು, ಮಂಗಳೂರು, ಉಡುಪಿ, ಪುತ್ತೂರು, ಕೊಡಗು, ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ ಜಿಲ್ಲಾ ವ್ಯಾಪ್ತಿಯ ರಾಷ್ಟ್ರೀಕೃತ ಮಾರ್ಗಗಳಲ್ಲಿ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಕರಾರಸಾ ನಿಗಮದ ವತಿಯಿಂದ ಸಾಕಷ್ಟು ಸಂಖ್ಯೆಯಲ್ಲಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ. ಆದಾಗ್ಯೂ, ಮೇಲ್ಕಂಡ ಜಿಲ್ಲೆಗಳ ವ್ಯಾಪ್ತಿಯ ರಾಷ್ಟ್ರೀಕೃತ ಮಾರ್ಗಗಳಲ್ಲಿ ಖಾಸಗಿ ಪ್ರವರ್ತಕರ ಖಾಸಗಿ ಬಸ್, ಮ್ಯಾಕ್ಸಿಕ್ಯಾಬ್, ಜೀಪ್, ಆಪೆ ಆಟೋ, ಮಿನಿ ಬಸ್, ಇತ್ಯಾದಿ, ಪ್ರಯಾಣಿಕರ ವಾಹನಗಳು ಅನಧಿಕೃತವಾಗಿ ಕಾರ್ಯಾಚರಣೆಯಾಗುತ್ತಿರುವುದು ಕಂಡುಬಂದಿರುತ್ತದೆ. ಸದರಿ ಖಾಸಗಿ ಪ್ರವರ್ತಕರು Contract Carriage/All India Tourist Permit ಪರವಾನಗಿಗಳನ್ನು ಪಡೆದು, ಕಾನೂನು ಬಾಹಿರವಾಗಿ ಮಜಲು ಸಾರಿಗೆಗಳನ್ನಾಗಿ (stage Carriage) ಕಾರ್ಯಾಚರಣೆ ಮಾಡುವುದರ ಜೊತೆಗೆ ರಾಷ್ಟ್ರೀಕೃತವಲ್ಲದ ಒಳ ಮಾರ್ಗಗಳಲ್ಲಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡುವುದಾಗಿ ತಿಳಿಸಿ ಮಜಲು ಸಾರಿಗೆ (Stage Carriage) ಪರವಾನಗಿಗಳನ್ನು ಪಡೆದು ರಾಷ್ಟ್ರೀಕೃತ ಮತ್ತು ಮುಖ್ಯ ಮಾರ್ಗಗಳಲ್ಲಿ ಕಳ್ಳಾಟಿಕೆ ಕಾರ್ಯಾಚರಣೆ ಮಾಡಿ ನಿಗಮದ ಸಾರಿಗೆಗಳೊಂದಿಗೆ ಅನಾರೋಗ್ಯಕರ ಪೈಪೋಟಿ ನಡೆಸಿ ನಿಗಮದ ಸಾರಿಗೆಗಳ ಆದಾಯಕ್ಕೆ ಧಕ್ಕೆ ಉಂಟು ಮಾಡುತ್ತಿರುತ್ತಾರೆ.

- ಕ.ರಾ.ರ.ಸಾ.ನಿಗಮದ ಹಲವಾರು ಬಸ್ಸು ನಿಲ್ದಾಣದ ಪ್ರದೇಶಗಳಲ್ಲಿ ಖಾಸಗಿ ಪ್ರವರ್ತಕರ ಬಸ್ಸುಗಳನ್ನು ನಿಲ್ಲಿಸಲು ನಿರ್ಬಂಧವಿದ್ದರೂ ಹಲವಾರು ಬಸ್ಸು ನಿಲ್ದಾಣಗಳ ಸುತ್ತಮುತ್ತ ಖಾಸಗಿ ಪ್ರವರ್ತಕರು ನಿಯಮಾವಳಿಗಳನ್ನು ಉಲ್ಲಂಘಿಸಿ ಬಸ್ಸು ನಿಲ್ದಾಣದ ಸುತ್ತಮುತ್ತ ಪ್ರಯಾಣಿಕರನ್ನು ಹತ್ತಿಸಿಕೊಳ್ಳುತ್ತಿದ್ದು ಇದರಿಂದ ನಿಗಮಕ್ಕೆ ನ್ಯಾಯೋಚಿತವಾಗಿ ಬರಬೇಕಾದ ಆದಾಯಕ್ಕೆ ಧಕ್ಕೆಯುಂಟು ಮಾಡುತ್ತಿದ್ದಾರೆ.

- ಕ.ರಾ.ರ.ಸಾ.ನಿಗಮದಲ್ಲಿ ಪ್ರಸ್ತುತ 7361 ಅನುಸೂಚಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದ್ದು, ಅದರಲ್ಲಿ 2698 ಅನುಸೂಚಿಗಳು ಸಾಮಾನ್ಯ ಅನುಸೂಚಿಗಳಾಗಿರುತ್ತವೆ. ಶೇ.36.65 ರಷ್ಟು ಸಾರಿಗೆಗಳನ್ನು ಗ್ರಾಮೀಣ ಭಾಗಗಳಿಗೆ ವಿದ್ಯಾರ್ಥಿಗಳ ಅನುಕೂಲಕ್ಕಾಗಿ, ಜನಪ್ರತಿನಿಧಿಗಳ ಬೇಡಿಕೆಗನುಗುಣವಾಗಿ ಕಾರ್ಯಾಚರಿಸಲಾಗುತ್ತಿದೆ. ನಿಗಮದ ವ್ಯಾಪ್ತಿಯ ಮಾರ್ಗಗಳಲ್ಲಿ ಒಟ್ಟು 45057 ಸಿಂಗಲ್ ಟ್ರಿಪ್‌ಗಳನ್ನು ಪ್ರತಿ ದಿನ ಕಾರ್ಯಾಚರಣೆ ಮಾಡುತ್ತಿದ್ದು, ಅದರಲ್ಲಿ 25229 ಸಾಮಾನ್ಯ ಸುತ್ತುವಳಿಗಳನ್ನು ಅಂದರೆ ಶೇ.55.99 ರಷ್ಟು ಸ್ಥಳೀಯ ಗ್ರಾಮಾಂತರ ಪ್ರದೇಶಗಳಿಗೆ ಕಾರ್ಯಾಚರಣೆ ಮಾಡಲಾಗುತ್ತಿದೆ. ಈ ಸುತ್ತುವಳಿಗಳಲ್ಲಿ ನಿರೀಕ್ಷಿತ ಸಾರಿಗೆ ಆದಾಯ ಬರದೆ ನಷ್ಟ ಉಂಟಾಗುತ್ತಿರುತ್ತದೆ. ಸದರಿ ಟ್ರಿಪ್‌ಗಳ ಕಾರ್ಯಾಚರಣೆಯಿಂದ ನಷ್ಟ ಉಂಟಾಗುತ್ತಿದ್ದರೂ ಸಾರ್ವಜನಿಕ ಪ್ರಯಾಣಿಕರ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಅನಿವಾರ್ಯವಾಗಿ ಸಾರಿಗೆಗಳನ್ನು (Obligatory Services) ಕಾರ್ಯಾಚರಣೆ ಮಾಡಬೇಕಾಗಿರುವ ಪರಿಸ್ಥಿತಿ ಇರುತ್ತದೆ.

- ಭಾರತ್ ಬಂದ್, ಕರ್ನಾಟಕ ಬಂದ್, ಇತ್ಯಾದಿ ಕಾರಣಗಳಿಂದಾಗಿ ಸಾರಿಗೆಗಳ ಕಾರ್ಯಾಚರಣೆಗೆ ತೊಡಕಾಗಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡದಿರುವುದರಿಂದ ಸಾರಿಗೆ ಆದಾಯ ನಷ್ಟ ಉಂಟಾಗಲು ಕಾರಣವಾಗಿರುತ್ತದೆ. ಮುಂದುವರೆದು 2020-21 ಹಾಗೂ 2021-22 ರ ಸಾಲಿನಲ್ಲಿ ಕರೋನಾ ಸಂಬಂಧಿತ ಲಾಕ್‌ಡೌನ್ ಮತ್ತು ನಿರ್ಬಂಧಗಳಿಂದ ಸಾರಿಗೆಗಳ ಕಾರ್ಯಾಚರಣೆಯಲ್ಲಿ ತೊಡಕಾಗಿರುತ್ತದೆ ಹಾಗೂ ಸಾರ್ವಜನಿಕ ಪ್ರಯಾಣಿಕರು ನಿರೀಕ್ಷಿತ ಮಟ್ಟದಲ್ಲಿ ಬಾರದ ಕಾರಣ ಅನುಸೂಚಿಗಳನ್ನು ಪೂರ್ಣ ಪ್ರಮಾಣದಲ್ಲಿ ಕಾರ್ಯಾಚರಣೆ ಮಾಡಲು ಸಾಧ್ಯವಾಗಿರುವುದಿಲ್ಲ.

- ನಗರದ ಸಾರ್ವಜನಿಕ ಪ್ರಯಾಣಿಕರಿಗೆ ಹೆಚ್ಚಿನ ಸಾರಿಗೆ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ನಿಗಮವು ಜನವರಿ-2023 ರ ಅಂತ್ಯಕ್ಕೆ 14 ನಗರಗಳಲ್ಲಿ 622 ನಗರ ಸಾರಿಗೆ ವಾಹನಗಳನ್ನು ಕಾರ್ಯಾಚರಣೆ ಮಾಡಿದ್ದು, ಈ ಪೈಕಿ ಹೆಚ್ಚಿನ ಸಾರಿಗೆಗಳು ನಷ್ಟದಲ್ಲಿ ಕಾರ್ಯಾಚರಣೆಯಾಗುತ್ತಿರುತ್ತವೆ.

- ದಿನದಿಂದ ದಿನಕ್ಕೆ ಏರಿಕೆಯಾಗುತ್ತಿರುವ ಡೀಸಲ್ ಬೆಲೆ ಹೆಚ್ಚಳದಿಂದ ಕಾಲಕಾಲಕ್ಕೆ ತುಟ್ಟಿಭತ್ಯೆ ಹೆಚ್ಚಳದಿಂದಾಗಿ ಸಿಬ್ಬಂದಿ ವೆಚ್ಚದ ಹೆಚ್ಚಳದಿಂದಾಗಿ ಕಾರ್ಯಾಚರಣೆಯ ವೆಚ್ಚವು ಹೆಚ್ಚಾಗಿ, ವೆಚ್ಚಕ್ಕೆ ಅನುಗುಣವಾಗಿ ಆದಾಯ ಗಳಿಕೆಯಲ್ಲಿ ಕೊರತೆ, ಇಂಧನ ದರ ಹಾಗೂ ತುಟ್ಟಿಭತ್ಯೆ ಹೆಚ್ಚಳದ ಅನುಸಾರ ಪ್ರಯಾನ ದರ ಪರಿಷ್ಕರಣೆ ಮಾಡದೇ ಇರುವುದು ಇದರಿಂದಾಗಿ ನಷ್ಟ ಉಂಟಾಗಿರುತ್ತದೆ.

**ವಾ.ಕ.ರ.ಸಾ.ಸಂಸ್ಥೆ:**

- ಸಾರ್ವಜನಿಕ ಸೇವಾ ಸಂಸ್ಥೆಯಾಗಿ ಪ್ರಯಾಣಿಕರಿಗೆ ಸುರಕ್ಷಿತ ಮತ್ತು ಸುಗಮ ಸಾರಿಗೆ ಒದಗಿಸುವ ದ್ಯೇಯಗೊಂದಿಗೆ ವಿವಿಧ ರೀತಿಯ ರಿಯಾಯಿತಿ ಪಾಸುಗಳ ಸೌಲಭ್ಯದೊಂದಿಗೆ ಸಾರಿಗೆ ಸೇವೆ ಒದಗಿಸುತ್ತಿರುವುದರಿಂದ ಅಲ್ಲದೇ ಸಿಬ್ಬಂದಿ, ಇಂಧನ ಹಾಗು ಬಿಡಿಭಾಗಗಳ ವೆಚ್ಚಗಳಲ್ಲಿ ಏರಿಕೆಯಂತೆ ಪ್ರಯಾಣ ದರ ಏರಿಕೆಯಾಗಿಲ್ಲವಾದ್ದರಿಂದ ನಿಗಮ ನಷ್ಟದಲ್ಲಿ ಮುಂದುವರೆದಿದೆ.
- 2020-21, 2021-22 ರಲ್ಲಿ ಕೋವಿಡ್-19 ಲಾಕ್‌ಡೌನ್ ಪರಿಣಾಮ ಸಾರಿಗೆ ಕಾರ್ಯಾಚರಣೆ ಸ್ಥಗಿತ, ಷರತ್ತು ಬದ್ಧ ಕಾರ್ಯಾಚರಣೆಯಿಂದಾಗಿ ಮತ್ತು ಕೋವಿಡ್ ತರುವಾಯವೂ ಪ್ರಯಾಣಿಕರ ಸಂಖ್ಯೆಯಲ್ಲಿ ಗಣನೀಯ ಇಳಿಕೆಯಾಗಿರುವುದರಿಂದ ಪ್ರತಿದಿನ ಆದಾಯವು ವೆಚ್ಚಕ್ಕಿಂತ ತೀರಾ ಕಡಿಮೆಯಾಗಿರುವುದರಿಂದ ನಷ್ಟ ಉಂಟಾಗುತ್ತಿದೆ.
- ಹಿಂದಿನ ಪ್ರಯಾಣ ದರ ಪರಿಷ್ಕರಣೆ ದಿನಾಂಕ 25-26/02/2020 ರ ಅವಧಿಯಲ್ಲಿ ಡಿಸೇಲ್ ದರ ಪ್ರತಿ ಲೀ.ಗೆ ರೂ.59.64 ಇದ್ದು, ಪ್ರಸ್ತುತ ಇಂಧನ ದರ ಪ್ರತಿ ಲೀ.ಗೆ ರೂ.92.02 ಇದ್ದು, ಪ್ರತಿ ಲೀಟರ್‌ಗೆ ಸುಮಾರು ರೂ.32.38 ಗಳಷ್ಟು ಹೆಚ್ಚಳವಾಗಿರುತ್ತದೆ.
- ತುಟ್ಟಿ ಭತ್ಯೆ ಹೆಚ್ಚಳದಿಂದ ಸಿಬ್ಬಂದಿ ವೆಚ್ಚ ಹೆಚ್ಚಾಗಿರುತ್ತದೆ.
- ವಾಹನಗಳ ಬಿಡಿ ಭಾಗಗಳ, ಸಲಕರಣೆಗಳ ದರದಲ್ಲಿ ನಿತಂತರವಾಗಿ ಹೆಚ್ಚಳವಾಗುತ್ತಿದೆ.
- ಪ್ರಯಾಣದರ ಪರಿಷ್ಕರಣೆಯಾಗಿರುವುದಿಲ್ಲ..
- 2012-13 ನ ಸಾಲಿನಿಂದ ವಿದ್ಯಾರ್ಥಿ ರಿಯಾಯಿತಿ ಬಸ್ ಪಾಸ್ ದರವನ್ನು ಪರಿಷ್ಕರಣೆಯಾಗಿರುವುದಿಲ್ಲ.
- 2016 ರಿಂದ ವಿಶೇಷಚೇತನರ ರಿಯಾಯಿತಿ ಬಸ್ ಪಾಸ್ ದರ ಪರಿಷ್ಕರಣೆಯಾಗಿರುವುದಿಲ್ಲ.
- 2020-21 ಹಾಗೂ 2021-22 ನೇ ಸಾಲಿನಲ್ಲಿ ಕೋವಿಡ್-19 ರಿಂದಾಗಿ ಸಂಸ್ಥೆಯ ಸಾರಿಗೆ ಮತ್ತು ವಾಣಿಜ್ಯ ಆದಾಯದಲ್ಲಿ ತೀವ್ರ ನಷ್ಟ ಉಂಟಾಗಿರುತ್ತದೆ. .
- ಸಂಸ್ಥೆಯು ಸಾಮಾಜಿಕ ಹೊಣೆಗಾರಿಕೆ ಅಡಿಯಲ್ಲಿ ಸಾರ್ವಜನಿಕ ಸೇವೆಯನ್ನು ಆಧ್ಯತೆಯಾಗಿ ಪರಿಗಣಿಸಿ ಒಟ್ಟು ಸಾರಿಗೆಗಳಲ್ಲಿ ಶೇ. 50 ರಷ್ಟು ಸಾರಿಗೆಗಳನ್ನು ಗ್ರಾಮೀಣ ಭಾಗದ ಸಾರ್ವಜನಿಕ ಮತ್ತು ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕಾರ್ಯಾಚರಿಸುತ್ತಿದ್ದು, ಸದರಿ ಸಾರಿಗೆಗಳು ತೀವ್ರ ನಷ್ಟದಲ್ಲಿರುತ್ತವೆ.

**ಕ.ಕ.ರ.ಸಾ.ನಿಗಮ:**

- ಕ.ಕ.ರ.ಸಾ ನಿಗಮದ ಗ್ರಾಮೀಣ ಭಾಗದಲ್ಲಿ ಹೆಚ್ಚಿನ ಸಂಖ್ಯೆಯ ಸಾಮಾನ್ಯ ಅನುಸೂಚಿಗಳನ್ನು ಕಾರ್ಯಾಚರಣೆ ಮಾಡುತ್ತಿದ್ದು, ಅವುಗಳ ಪ್ರತಿ ಕಿ.ಮೀ ಆದಾಯ ವೆಚ್ಚಕ್ಕಿಂತ ಕಡಿಮೆ ಬರುತ್ತಿದೆ.

- ಕೋವಿಡ್-19ರ ಹಿನ್ನಲೆಯಲ್ಲಿ ಸಹ ನಿಗಮಕ್ಕೆ ನಷ್ಟ ಉಂಟಾಗಲು ಕಾರಣವಾಗಿರುತ್ತದೆ.

- ನಗರದ ಸಾರ್ವಜನಿಕ ಪ್ರಯಾಣಿಕರಿಗೆ ಹೆಚ್ಚಿನ ಸಾರಿಗೆ ಸೌಲಭ್ಯ ಕಲ್ಪಿಸುವ ನಿಟ್ಟಿನಲ್ಲಿ ನಿಗಮವು ಪ್ರಸ್ತುತ 10 ನಗರಗಳಲ್ಲಿ 163 ನಗರ ಸಾರಿಗೆ ವಾಹನಗಳನ್ನು ಕಾರ್ಯಾಚರಣೆ ಮಾಡಿದ್ದು, ಈ ಪೈಕಿ ಹೆಚ್ಚಿನ ಸಾರಿಗೆಗಳು ನಷ್ಟದಲ್ಲಿ ಕಾರ್ಯಾಚರಣೆಯಾಗುತ್ತಿವೆ.

- ಡೀಸಲ್ ಬೆಲೆ ಹೆಚ್ಚಳ, ಕಾರ್ಯಾಚರಣೆಯ ವೆಚ್ಚವು ಹೆಚ್ಚಾಗಿ ನಷ್ಟ ಉಂಟಾಗುತ್ತಿರುತ್ತದೆ.

*****

ಅನುಬಂಧ-3

## ನಷ್ಟದಿಂದ ಪಾರು ಮಾಡಿ ಲಾಭಗಳಿಸುವ ನಿಟ್ಟಿನಲ್ಲಿ ಕೈಗೊಂಡ ಕ್ರಮಗಳು

ಸಾರಿಗೆ ಸಂಸ್ಥೆಗಳ ನಷ್ಟವನ್ನು ಸರಿದೂಗಿಸಲು ಸರ್ಕಾರವು ಈ ಕೆಳಕಂಡಂತೆ ವಿಶೇಷ ಆರ್ಥಿಕ ಸಹಾಯವನ್ನು ಒದಗಿಸಿದೆ:

**(ರೂ. ಕೋಟಿಗಳಲ್ಲಿ)**

| ಕ್ರ. ಸಂ. | ವಿಶೇಷ ಸಹಾಯಧನದ ವಿವರ | 2020-21 | 2021-22 | 2022-23 (ಆಗಸ್ಟ್- 22ರ ಅಂತ್ಯದ ವರೆಗೆ) |
|---|---|---|---|---|
| **1. ನೌಕರರ ವೇತನ ಪಾವತಿಗಾಗಿ** | | | | |
| | ಕ.ರಾ.ರ.ಸಾ.ನಿಗಮ | 563.55 | 235.86 | - |
| | ಬೆಂ.ಮ.ಸಾ.ಸಂಸ್ಥೆ | 690.55 | 582.05 | 35.00 |
| | ವಾ.ಕ.ರ.ಸಾ.ಸಂಸ್ಥೆ | 369.41 | 230.17 | - |
| | ಕ.ಕ.ರ.ಸಾ.ನಿಗಮ | 329.89 | 134.14 | - |
| **2. ಇಂಧನ ವೆಚ್ಚ ಹಾಗೂ ಭವಿಷ್ಯನಿಧಿ ಹಿಂಬಾಕಿ ಪಾವತಿಗಾಗಿ** | | | | |
| | ಕ.ರಾ.ರ.ಸಾ.ನಿಗಮ | - | 200.00 | 330.00 |
| | ಬೆಂ.ಮ.ಸಾ.ಸಂಸ್ಥೆ | 308.00 | 400.00 | 420.00 |
| | ವಾ.ಕ.ರ.ಸಾ.ಸಂಸ್ಥೆ | - | - | 320.00 |
| | ಕ.ಕ.ರ.ಸಾ.ನಿಗಮ | - | - | 130.00 |

**3. ಮೋಟಾರು ವಾಹನ ತೆರಿಗೆ ಮನ್ನಾ**

ನಾಲ್ಕೂ ಸಾರಿಗೆ ಸಂಸ್ಥೆಗಳು ಸರ್ಕಾರಕ್ಕೆ 2020-21ನೇ ಸಾಲಿನವರೆಗೆ ಹಾಗೂ 2021-22ನೇ ಸಾಲಿನಲ್ಲಿ ಪಾವತಿಸಬೇಕಾಗಿದ್ದ ಮೋಟಾರು ವಾಹನ ತೆರಿಗೆ ಮೊತ್ತಕ್ಕೆ ವಿನಾಯಿತಿ ನೀಡಲಾಗಿದೆ.

ಇದಲ್ಲದೆ, 2000-01ರಿಂದ ಬೆಂ.ಮ.ಸಾ.ಸಂಸ್ಥೆ, ವಾ.ಕ.ರ.ಸಾ.ಸಂಸ್ಥೆ ಹಾಗೂ ಕ.ಕ.ರ.ಸಾ.ನಿಗಮಗಳು ಸರ್ಕಾರಕ್ಕೆ ಪಾವತಿಸಬೇಕಾಗಿದ್ದು, ಆದರೆ ಬಾಕಿ ಉಳಿಸಿಕೊಳ್ಳಲಾಗಿದ್ದ ಮೋಟಾರು ವಾಹನ ತೆರಿಗೆ ಮೊತ್ತ ಕ್ರಮವಾಗಿ ರೂ.269.47 ಕೋಟಿ, ರೂ.327.06 ಕೋಟಿ ಮತ್ತು ರೂ.392.33 ಕೋಟಿಗಳನ್ನು ಸರ್ಕಾರದ ಷೇರು ಬಂಡವಾಳವಾಗಿ ಪರಿವರ್ತಿಸಲಾಗಿದೆ.

ಮುಂದುವರೆದು, ಸಾರಿಗೆ ಸಂಸ್ಥೆಗಳು ನಷ್ಟವನ್ನು ಸರಿದೂಗಿಸಲು ಕೈಗೊಂಡ ಕ್ರಮಗಳ ವಿವರಗಳು ಈ ಕೆಳಕಂಡಂತಿದೆ:

## ಕ.ರಾ.ರ.ಸಾ.ನಿಗಮ:

- ಕ.ರಾ.ರ.ಸಾ.ನಿಗಮದ ವತಿಯಿಂದ ಸಾಮಾನ್ಯ, ನಗರ ಮತ್ತು ವೇಗದೂತ ಸಾರಿಗೆಗಳಲ್ಲದೆ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಾಜಹಂಸ, ಐರಾವತ, ಎ.ಸಿ ಸ್ಲೀಪರ್, ನಾನ್ ಎಸಿ ಸ್ಲೀಪರ್, ಐರಾವತ ಕ್ಲಬ್‌ಕ್ಲಾಸ್, ಫ್ಲೈ-ಬಸ್, ಅಂಬಾರಿ ಡ್ರೀಮ್‌ಕ್ಲಾಸ್ ಮುಂತಾದ ಪ್ರತಿಷ್ಠಿತ ಸಾರಿಗೆಗಳನ್ನು ಕಾರ್ಯಾಚರಿಸಿ ರಾಜ್ಯದ ಹಾಗೂ ನೆರೆ ರಾಜ್ಯದ ಪ್ರಮುಖ ಸ್ಥಳಗಳಿಗೆ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.
- ಕರ್ನಾಟಕ ಮತ್ತು ನೆರೆ ರಾಜ್ಯಗಳಾದ ಆಂಧ್ರಪ್ರದೇಶ, ತೆಲಂಗಾಣ, ಮಹಾರಾಷ್ಟ್ರ, ಗುಜರಾತ್, ತಮಿಳುನಾಡು ಮತ್ತು ಪುದುಚೆರಿ ರಾಜ್ಯಗಳ ಜೊತೆಗೆ ನೂತನ ಪೂರಕ ಅಂತರರಾಜ್ಯ ಸಾರಿಗೆ ಒಪ್ಪಂದಗಳನ್ನು ಮಾಡಿಕೊಳ್ಳುವ ಪ್ರಸ್ತಾವನೆ ಇದ್ದು, ಒಪ್ಪಂದಗಳ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. ಈ ರಾಜ್ಯಗಳ ಜೊತೆಗೆ ಒಪ್ಪಂದವಾದ ನಂತರ ಕರ್ನಾಟಕದಿಂದ ಹೆಚ್ಚುವರಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲು ಹಾಗೂ ಹೆಚ್ಚು ಸಾರಿಗೆ ಆದಾಯ ಗಳಿಸಲು ಅವಕಾಶವಾಗುವುದು.
- ಕ.ರಾ.ರ.ಸಾ ನಿಗಮವು ಟಿಕೆಟ್ ವಿತರಣೆಯಲ್ಲಿ ಸರಳತೆ ಹಾಗೂ ಪಾರದರ್ಶಕತೆ ತರುವ ನಿಟ್ಟಿನಲ್ಲಿ ಇ.ಟಿ.ಎಂ (Electronic Ticketing Machine) ಜಾರಿಗೆ ತಂದಿರುತ್ತದೆ.
- ಸಾರ್ವಜನಿಕ ಪ್ರಯಾಣಿಕರಿಗೆ ಮುಂಗಡವಾಗಿ ಆಸನಗಳನ್ನು ಕಾಯ್ದಿರಿಸುವ ಅನುಕೂಲಕ್ಕಾಗಿ ನಿಗಮವು ಅವತಾರ್(ಯಾವುದೇ ಸ್ಥಳದಿಂದ ಯಾವುದೇ ಸಮಯದಲ್ಲಿ ಟಿಕೆಟು ಕಾಯ್ದಿರಿಸುವಿಕೆ) ಗಣಕೀಕೃತ ಮುಂಗಡ ಬುಕಿಂಗ್ ಯೋಜನೆ ಜಾರಿಗೊಳಿಸಿದ್ದು, ರಾಜ್ಯದ ಹಾಗೂ ಹೊರ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ನಿಗಮದ ಕೌಂಟರುಗಳು/ಖಾಸಗಿ ಬುಕಿಂಗ್ ಏಜೆಂಟರುಗಳ ಮೂಲಕ ಮುಂಗಡ ಟಿಕೆಟ್ ಬುಕಿಂಗ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
- ಕರಾರಸಾ ನಿಗಮದ ಸಾರಿಗೆಗಳಲ್ಲಿ ಮುಂಗಡ ಆಸನಗಳನ್ನು ಕಾಯ್ದಿರಿಸಲು ಜಿ.ಪಿಆರ್‌ಎಸ್ ಸೌಲಭ್ಯವುಳ್ಳ ಮೊಬೈಲ್ ದೂರವಾಣಿ ಮೂಲಕ ಮುಂಗಡ ಟಿಕೆಟು ಕಾಯ್ದಿರಿಸುವ ಎಂ-ಬುಕಿಂಗ್ ಮತ್ತು ಇ-ಬುಕಿಂಗ್ ವ್ಯವಸ್ಥೆ ಜಾರಿಗೊಳಿಸಿದೆ.
- ಸಾರ್ವಜನಿಕ ಪ್ರಯಾಣಿಕರು ನಿಲ್ದಾಣವಾರು ವಾಹನಗಳ ನಿರ್ಗಮನಗಳ ಮಾಹಿತಿ ಪಡೆಯಲು ಮೈಸೂರು ನಗರದ ನಗರ ಸಾರಿಗೆ ವಾಹನಗಳಲ್ಲಿ ಐ.ಟಿ.ಎಸ್(ಇಂಟೆಲಿಜೆಂಟ್ ಟ್ರ್ಯಾನ್ಸ್‌ಪೋರ್ಟ್ ಸಿಸ್ಟಮ್) ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಸದರಿ ವಾಹನಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ನಿಲ್ದಾಣವಾರು ಘೋಷಣೆಯ ವ್ಯವಸ್ಥೆಯನ್ನು ಅಳವಡಿಸಲಾಗಿದೆ.(ಪ್ಯಾಸೆಂಜರ್ ಅನೌನ್ಸ್‌ಮೆಂಟ್ ಸಿಸ್ಟಮ್).
- ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ನಿಗಮದ ಪ್ರಮುಖ 104 ಬಸ್ ನಿಲ್ದಾಣಗಳಲ್ಲಿ ವಾಹನಗಳ ಸಂಖ್ಯೆ, ನಿರ್ಗಮನದ ವೇಳೆ, ತಲುಪುವ ಸ್ಥಳ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ತಿಳಿಸಲಾಗುತ್ತಿದೆ.
- ಕ.ರಾ.ರ.ಸಾ.ನಿಗಮದ ವತಿಯಿಂದ ಬೆಂಗಳೂರಿನಿಂದ ತಿರುಪತಿ-ತಿರುಮಲಕ್ಕೆ ಪ್ಯಾಕೇಜ್ ಟೂರ್‌ಗಳ ಆಚರಣೆ ಮಾಡಲಾಗುತ್ತಿದೆ. ಅಲ್ಲದೇ, ವಿವಿಧ ಪ್ರವಾಸಿ ತಾಣಗಳಿಗೆ ಪ್ಯಾಕೇಜ್ ಟೂರ್‌ಗಳನ್ನು ಪ್ರಾರಂಭಿಸಲಾಗಿದೆ ಹಾಗೂ ಇನ್ನೂ ಹಲವು ಪ್ರವಾಸಿ ತಾಣಗಳಿಗೆ ಅವಶ್ಯಕತೆಗೆ ಅನುಗುಣವಾಗಿ ಪ್ಯಾಕೇಜ್ ಟೂರ್‌ಗಳನ್ನು ಪ್ರಾರಂಭಿಸಲಾಗುವುದು.
- ಸಾರಿಗೆ ನಿಗಮಗಳ ಆದಾಯ ವೃದ್ಧಿಯ ಭಾಗವಾಗಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಹಾಗೂ ಕಲ್ಯಾಣ ಕರ್ನಾಟಕ ರಸ್ತೆ ಸಾರಿಗೆ ನಿಗಮಗಳಲ್ಲಿ ಪಾರ್ಸಲ್ ಸೇವೆಗಳನ್ನು ದಿನಾಂಕ.01.03.2021 ರಿಂದ ಪ್ರಾರಂಭಿಸಲಾಗಿದೆ.

- ನಿಗಮದ ಖಾಲಿ ನಿವೇಶನಗಳಲ್ಲಿ ಪೆಟ್ರೋಲಿಯಂ ಔಟ್‌ಲೆಟ್‌ಗಳನ್ನು ತೆರೆಯಲು ಸಾರ್ವಜನಿಕ ಸ್ವಾಮ್ಯದ ಆಸಕ್ತ ತೈಲ ಕಂಪನಿಯವರುಗಳಿಂದ ಟೆಂಡರ್ ಮೂಲಕ ಬಿಡ್‌ನ್ನು ಆಹ್ವಾನಿಸಲಾಗಿರುತ್ತದೆ. ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿರುತ್ತದೆ.
- ಸಾರ್ವಜನಿಕ ಬೇಡಿಕೆಗನುಗುಣವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಸಾಂದರ್ಭಿಕ ಒಪ್ಪಂದದ ಬಸ್ಸುಗಳನ್ನು ಒದಗಿಸಲಾಗುತ್ತಿದೆ.
- ಖಾಲಿಯಿರುವ ವಾಣಿಜ್ಯ ಮಳಿಗೆಗಳಿಗೆ ಪರವಾನಗಿದಾರರ ಆಯ್ಕೆ ಪ್ರಕ್ರಿಯೆ ನಿರಂತರವಾಗಿ ಚಾಲ್ತಿಯಲ್ಲಿರುತ್ತದೆ.
- ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಹಾಗೂ ಸಾರಿಗೆ ಆದಾಯ ಹೆಚ್ಚಿಸುವ ದೃಷ್ಟಿಯಿಂದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ವತಿಯಿಂದ ಪ್ಯಾಕೇಜ್ ಪ್ರವಾಸಗಳನ್ನು ಕಾರ್ಯಾಚರಿಸಲಾಗುತ್ತಿರುತ್ತದೆ.
- ಕರಾರಸಾನಿಗಮವು ಆಂಧ್ರ ಪ್ರದೇಶ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ರವರೊಂದಿಗೆ ಒಪ್ಪಂದ ಮಾಡಿಕೊಂಡು ಬೆಂಗಳೂರು-ತಿರುಪತಿ ಪ್ಯಾಕೇಜ್ ಪ್ರವಾಸವನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.
- ವಿಭಾಗದ ಘಟಕಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಚಾಲನಾ ಸಿಬ್ಬಂದಿಗಳಿಗೆ ಕಾಲ ಕಾಲಕ್ಕೆ ವಾಹನ ತಯಾರಿಕಾ ಸಂಸ್ಥೆ/ಮೆ:ಪಿ.ಸಿ.ಆರ್.ಎ ವತಿಯಿಂದ ಮತ್ತು ನಿಗಮದ ತರಬೇತಿ ಕೇಂದ್ರಗಳಲ್ಲಿ ತರಬೇತಿ ಕಾರ್ಯಗಳನ್ನು ಹಮ್ಮಿಕೊಂಡು, ಉತ್ತಮ ಚಾಲನಾ ಕೌಶಲ್ಯಗಳ ಬಗ್ಗೆ ಅರಿವು ಮೂಡಿಸಿ ಇಂಧನ ಕೆ.ಎಂ.ಪಿ.ಎಲ್. ಸಾಧಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ.
- ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ತಾಂತ್ರಿಕ ಸಿಬ್ಬಂದಿಗಳಿಗೆ ತಯಾರಿಕಾ ಸಂಸ್ಥೆ ಮತ್ತು ನಿಗಮದ ತರಬೇತಿ ಕೇಂದ್ರಗಳಲ್ಲಿ ಕಾಲ ಕಾಲಕ್ಕೆ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು, ವಾಹನಗಳ ಉತ್ತಮ ತಾಂತ್ರಿಕ ನಿರ್ವಹಣಾ ವಿಧಾನಗಳನ್ನು ಅನುಸರಿಸಿ ಅವಘಡಗಳನ್ನು ನಿಯಂತ್ರಿಸಲು ಕ್ರಮ ಕೈಗೊಳ್ಳಲಾಗುತ್ತಿರುತ್ತದೆ.
- ಕಾರ್ಯಾಚರಣೆಯಲ್ಲಿರುವ ವಾಹನಗಳಿಗೆ ಅವಶ್ಯಕತೆಗನುಗುಣವಾಗಿ ಅಗತ್ಯ ಬಿಡಿಭಾಗಗಳನ್ನು ಮೂಲ ತಯಾರಿಕಾ ಸಂಸ್ಥೆ ಹಾಗೂ ಸರಬರಾಜುದಾರರುಗಳಿಂದಲೇ ಉತ್ತಮ ಗುಣಮಟ್ಟದ ಬಿಡಿಭಾಗಗಳನ್ನು ಖರೀದಿಸಿ ವಾಹನಗಳಿಗೆ ಅಳವಡಿಸಲಾಗುತ್ತಿರುತ್ತದೆ.
- ಮಾಸಿಕ ಹಾಗೂ ದೈನಂದಿನ ಪಾಸುಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ವಿತರಿಸಿ ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ.

<u>ವಾ.ಕ.ರ.ಸಾ.ಸಂಸ್ಥೆ</u>

- ಸಂಸ್ಥೆಯ ವ್ಯಾಪ್ತಿಯಿಂದ ಪಣಜಿ, ಪುಣೆ, ಮುಂಬೈ, ಹೈದ್ರಾಬಾದ, ಕಲಬುರ್ಗಿ, ಬೀದರ, ಬಳ್ಳಾರಿ, ಮೈಸೂರು, ಮಂಗಳೂರು, ಬೆಂಗಳೂರು ಮಾರ್ಗಗಳಲ್ಲಿ ಹಾಗೂ ಹೊಸ ಮಾರ್ಗಗಳಲ್ಲಿ ಪ್ರತಿಷ್ಠಿತ ಸಾರಿಗೆಗಳನ್ನು ಅಳವಡಿಸಿ ಆದಾಯ ಹೆಚ್ಚಿಸಲು ಮೊಬೈಲ್ ಆಪ್ ಮೂಲಕ ಹಾಗೂ ಎಂ-ಬುಕಿಂಗ್, ಇ–ಬುಕಿಂಗ್, ಫ್ರಾಂಚೈಸಿ ಬುಕಿಂಗ್ ಹೆಚ್ಚಿಸಿ, ಹೆಚ್ಚಿನ ಪ್ರಚಾರ ಕೈಗೊಂಡು ಪ್ರೋತ್ಸಾಹಕ ದರ ಮತ್ತು ರಿಯಾಯಿತಿಗಳ ಮಾಹಿತಿಯನ್ನು ಪ್ರಯಾಣಿಕರಿಗೆ ನೀಡಿ ಪ್ರಯಾಣಿಕರನ್ನು ಆಕರ್ಷಿಸಲು ಎಲ್ಲ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.
- ಪ್ರಯಾಣ ದರ ಪರಿಷ್ಕರಣೆಗೆ ಮಾತೃಸಂಸ್ಥೆಯಾದ ಕ.ರಾ.ರ.ಸಾ.ನಿಗಮದ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ.

- ಚಾಲನಾ ಸಿಬ್ಬಂದಿಗಳು ಹಾಗೂ ವಾಹನಗಳ ಲಭ್ಯತೆಯನ್ನಾಧರಿಸಿ, ಸುಮಾರು 100 ಅನುಸೂಚಿಗಳನ್ನು ಹುಬ್ಬಳ್ಳಿ, ಧಾರವಾಡ ಹಾಗೂ ಬೆಳಗಾವಿ ನಗರ ವ್ಯಾಪ್ತಿಯಲ್ಲಿ ನೂತನವಾಗಿ ಕಾರ್ಯಾಚರಿಸಲು ಯೋಜಿಸಲಾಗಿದೆ.
- ಗ್ರಾಮೀಣ ಭಾಗದ ವಿದ್ಯಾರ್ಥಿಗಳು ಮತ್ತು ಪ್ರಯಾಣಿಕರ ಬೇಡಿಕೆ, ಕನಿಷ್ಟ ಸಾರಿಗೆ ಸೌಲಭ್ಯವಿರುವ ಹೋಬಳಿ/ ಗ್ರಾಮಗಳಿಗೆ ಸಮರ್ಪಕ ಸಾರಿಗೆ ಸೌಲಭ್ಯವನ್ನು ಕಲ್ಪಿಸಲು ಹಾಗೂ ರಸ್ತೆ ಸಂಪರ್ಕವಿಲ್ಲದ ಗ್ರಾಮಗಳ ರಸ್ತೆ ದುರಸ್ತಿಯಾದ ನಂತರ ಕಲ್ಪಿಸುವ ಸಾರಿಗೆಗಳು ಸೇರಿದಂತೆ ಸುಮಾರು 180 ಅನುಸೂಚಿಗಳನ್ನು ಕಾರ್ಯಾಚರಿಸಲು ಯೋಜಿಸಲಾಗಿದೆ.
- ತಾಲ್ಲೂಕದಿಂದ ತಾಲ್ಲೂಕ ಕೇಂದ್ರಗಳಿಗೆ, ತಾಲ್ಲೂಕ ಕೇಂದ್ರದಿಂದ ಜಿಲ್ಲಾ ಕೇಂದ್ರಗಳಿಗೆ ಹಾಗೂ ಜಿಲ್ಲಾ ಕೇಂದ್ರದಿಂದ ಜಿಲ್ಲಾ ಕೇಂದ್ರಗಳಿಗೆ ಪಾಯಿಂಟ-ಟು-ಪಾಯಿಂಟ ಮಾದರಿಯಲ್ಲಿ ಸುಮಾರು 220 ಅನುಸೂಚಿಗಳನ್ನು ಕಾರ್ಯಾಚರಿಸಲು ಯೋಜಿಸಲಾಗಿದೆ.
- ನಗದು ರಹಿತ ವಹಿವಾಟನ್ನು ಪ್ರೋತ್ಸಾಹಿಸಲು ಪ್ರಯಾಣಿಕ ಸ್ನೇಹಿ Prepaid RFID ಕಾರ್ಡ ಬಳಸಿ ಪ್ರಯಾಣಿಸಲು ಬೆಳಗಾವಿ ನಗರದಲ್ಲಿ ಪ್ರಾರಂಭಿಸಲಾಗಿದ್ದು. ಸಾಧಕ-ಭಾದಕಗಳನ್ನು ಪರಿಶೀಲಿಸಿ ಇತರ ಘಟಕಗಳಿಗೂ ವಿಸ್ತರಿಸಲಾಗುವುದು.
- ಪ್ರಸ್ತುತ 239 ಅನುಸೂಚಿಗಳನ್ನು ನಿರ್ವಾಹಕರಹಿತ ಸಾರಿಗೆಗಳಾಗಿ ಕಾರ್ಯಾಚರಣೆ ಮಾಡಲಾಗುತ್ತಿದ್ದು, ಇದರಿಂದ ಪ್ರತಿ ಅನುಸೂಚಿಗೆ ಇಬ್ಬರು ಸಿಬ್ಬಂದಿ ಬದಲು ಒಬ್ಬರೆ ಸಿಬ್ಬಂದಿ ನಿಯೋಜನೆ ಮಾಡುವುದರಿಂದ 239 ಸಿಬ್ಬಂದಿ ಉಳಿತಾಯ ಮಾಡಲಾಗಿದೆ. ಮುಂದಿನ ದಿನಗಳಲ್ಲಿ ಇನ್ನೂ ಹೆಚ್ಚಿನ ಅನುಸೂಚಿಗಳನ್ನು ನಿರ್ವಾಹಕರಹಿತ ಸಾರಿಗೆಗಳಾಗಿ ಕಾರ್ಯಾಚರಣೆ ಮಾಡುವ ಯೋಜನೆ ಇರುತ್ತದೆ.
- ಕರ್ನಾಟಕ ಮತ್ತು ನೆರೆ ರಾಜ್ಯಗಳಾದ ಆಂಧ್ರ ಪ್ರದೇಶದೊಂದಿಗೆ ನೂತನ ಪೂರಕ ಅಂತರರಾಜ್ಯ ಸಾರಿಗೆ ಒಪ್ಪಂದ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಅಲ್ಲದೇ ಮಹಾರಾಷ್ಟ್ರ, ಗೋವಾ, ತಮಿಳುನಾಡು ಹಾಗೂ ಗುಜರಾತ ರಾಜ್ಯಗಳ ಜೊತೆಗೆ ನೂತನ ಪೂರಕ ಅಂತರರಾಜ್ಯ ಸಾರಿಗೆ ಒಪ್ಪಂದಗಳನ್ನು ಮಾಡಿಕೊಳ್ಳುವ ಪ್ರಸ್ತಾವನೆ ಇದ್ದು, ಒಪ್ಪಂದಗಳ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಈ ರಾಜ್ಯಗಳ ಜೊತೆ ಒಪ್ಪಂದವಾದ ನಂತರ ಕರ್ನಾಟಕದಿಂದ ಹೆಚ್ಚುವರಿ ಸಾರಿಗೆಗಳನ್ನು ಕಾರ್ಯಾಚರಣೆ ಮಾಡಲು ಹಾಗೂ ಹೆಚ್ಚು ಸಾರಿಗೆ ಆದಾಯ ಗಳಿಸಲು ಅವಕಾಶವಾಗುವುದು.
- ಸಾರ್ವಜನಿಕ ಪ್ರಯಾಣಿಕರು ನಿಲ್ದಾಣವಾರು ವಾಹನಗಳ ನಿರ್ಗಮನಗಳ ಮಾಹಿತಿ ಪಡೆಯಲು ಹುಬ್ಬಳ್ಳಿ-ಧಾರವಾಡ ನಗರ ಸಾರಿಗೆ (ಚಿಗರಿ) ವಾಹನಗಳಲ್ಲಿ ಐ.ಟಿ.ಎಸ್ ತಂತ್ರಾಂಶ ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಸದರಿ ವಾಹನಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ನಿಲ್ದಾಣವಾರು ಉದ್ಘೋಷಣಾ ವ್ಯವಸ್ಥೆಯನ್ನು ಅಳವಡಿಸಲಾಗಿದೆ.
- ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಸಂಸ್ಥೆಯ ಪ್ರಮುಖ 57 ಬಸ್ ನಿಲ್ದಾಣಗಳಲ್ಲಿ ವಾಹನ ಸಂಖ್ಯೆ, ನಿರ್ಗಮನ ವೇಳೆ, ತಲುಪುವ ವೇಳೆ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ನೀಡಲಾಗುತ್ತಿದೆ.
- ಸಂಸ್ಥೆಯ ಪ್ರಮುಖ ಸ್ಥಳಗಳಿಂದ ಬದಾಮಿ, ಐಹೊಳೆ, ಪಟ್ಟದಕಲ್ಲು, ಕೂಡಲಸಂಗಮ, ಜೋಗ್ ಫಾಲ್ಸ್, ಗೋಕಾಕ್ ಫಾಲ್ಸ್, ಕಪ್ಪತಗುಡ್ಡ ಮುಂತಾದ ಪ್ರವಾಸಿ ತಾಣಗಳಿಗೆ ಪ್ಯಾಕೇಜ್ ಟೂರ್ ವ್ಯವಸ್ಥೆಯನ್ನು ನಿರ್ದಿಷ್ಟ ಮಾಹೆಗಳಲ್ಲಿ ಪ್ರಾರಂಭಿಸಲಾಗಿದೆ.
- ಸಾರಿಗೇತರ ಆದಾಯ ವೃದ್ಧಿಗೆ "ನಮ್ಮ ಕಾರ್ಗೋ" ಪಾರ್ಸಲ್ ಸೇವೆಯನ್ನು ಆರಂಭಿಸಲಾಗಿದೆ.

- ಸಾರಿಗೇತರ ಆದಾಯ (ವಾಣಿಜ್ಯ ಆದಾಯ) ಹೆಚ್ಚಿಸಲು, ಖಾಲಿ ನಿವೇಶನ/ಕಟ್ಟಡಗಳನ್ನು ಬಾಡಿಗೆ ನೀಡಲು, ಪಿಪಿಪಿ ಮೇರೆಗೆ ಆದಾಯ ಕ್ರೋಢೀಕರಿಸಲು, ಜಾಹೀರಾತು ಮೂಲಕ ಆದಾಯ ಹೆಚ್ಚಿಸಲು ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ.
- ಬಸ್ಸುಗಳ ಮೇಲೆ ಜಾಹೀರಾತು, ಬಸ್ ನಿಲ್ದಾಣಗಳಲ್ಲಿ ಹೋರ್ಡಿಂಗ್ಸ್ ಅಳವಡಿಕೆ, ಡಿಜಿಟಲ್ ಗ್ಲೋಸೈನ್ ಬೋರ್ಡ್, ವಿಡಿಯೋವಾಲ್ ಅಡ್ವರ್ಟೈಜ್‌ಮೆಂಟ್‌ಗಳ ಮೂಲಕ ಆದಾಯ ಹೆಚ್ಚಳಕ್ಕೆ ಕ್ರಮ ವಹಿಸಲಾಗಿದೆ.
- ಮಾನ್ಯ ಮುಖ್ಯಮಂತ್ರಿಗಳು ಬಜೆಟ್‌ನಲ್ಲಿ ಘೋಷಿಸಿದಂತೆ ವಾ.ಕ.ರ.ಸಾ.ಸಂಸ್ಥೆ ವತಿಯಿಂದ ಕಟ್ಟಡ ಹಾಗೂ ಇತರೆ ನಿರ್ಮಾಣ ಕಾಮಗಾರಿ ಕಾರ್ಮಿಕರಿಗೆ ಮೊದಲ ಹಂತದಲ್ಲಿ 54150 ಪಾಸುಗಳನ್ನು ಹಾಗೂ ಎರಡನೇ ಹಂತದಲ್ಲಿ 37449 ಪಾಸುಗಳನ್ನು ಮೂರು ತಿಂಗಳ ಅವಧಿಗೆ ಉಚಿತ ಬಸ್ಸ್ ಪಾಸ್ ನೀಡಲಾಗಿದ್ದು, ಸಂಸ್ಥೆ ಆದಾಯ ಹೆಚ್ಚಿಸಲಾಗಿದೆ.

**ಕ.ಕ.ರ.ಸಾ.ನಿಗಮ:**

- ಘಟಕ/ವಿಭಾಗಗಳ ಮಟ್ಟದಲ್ಲಿ ದಿನಂಪ್ರತಿ ಅನುಸೂಚಿವಾರು ಆದಾಯಗಳನ್ನು ಪರಿಶೀಲಿಸಿ, ಕಡಿಮೆ ಆದಾಯ ಬರುವ/ಹೆಚ್ಚಿಗೆ ನಷ್ಟ ಉಂಟು ಮಾಡುವ ಅನುಸೂಚಿಗಳನ್ನು ಪರಿಷ್ಕರಿಸಿ ಕಾರ್ಯಾಚರಣೆ ಮಾಡಲಾಗುತ್ತಿದೆ.
- ಡಬಲ್ ಕ್ರೂ ಅನುಸೂಚಿಗಳನ್ನು ಸೂಕ್ತ ರೀತಿಯಲ್ಲಿ ಪರಿಷ್ಕರಣೆ ಮಾಡಲಾಗುತ್ತಿದೆ.
- ಖಾಸಗಿ ವಾಹನಗಳಿಂದ ಪೈಪೋಟಿ ಇರುವ ಮಾರ್ಗಗಳಲ್ಲಿ ಪ್ರೋತ್ಸಾಹದಾಯಕ ಪ್ರಯಾಣ ದರಗಳನ್ನು ಜಾರಿಗೊಳಿಸಿ ಪ್ರಯಾಣಿಕರನ್ನು ನಿಗಮದ ಸಾರಿಗೆಗಳಿಗೆ ಆಕರ್ಷಿಸಲು ಕ್ರಮ ಜರುಗಿಸಲಾಗುತ್ತಿದೆ.
- ಅನಧಿಕೃತವಾಗಿ ಕಾರ್ಯಾಚರಣೆಯಲ್ಲಿರುವ ಜೀಪ್, ಕ್ರೂಜರ್ ಮುಂತಾದ ಖಾಸಗಿ ವಾಹನಗಳ ಕಾರ್ಯಾಚರಣೆ ನಿಯಂತ್ರಿಸಲು ಕ್ರಮ ಜರುಗಿಸುವಂತೆ ಕಾಲಕಾಲಕ್ಕೆ ಸರ್ಕಾರದ ಆಯುಕ್ತರಿಗೆ, ಜಿಲ್ಲಾಧಿಕಾರಿಗಳಿಗೆ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ, ಪೋಲೀಸ್ ವರಿಷ್ಠಾಧಿಕಾರಿಗಳಿಗೆ ಕೋರಲಾಗುತ್ತಿದೆ.
- ಉತ್ತಮ ಆದಾಯ ಬರುವ ಮಾರ್ಗಗಳಲ್ಲಿ ಹೊಸ ವಾಹನಗಳನ್ನು ಕಾರ್ಯಾಚರಣೆ ಮಾಡಲು ಯೋಜಿಸಲಾಗಿದೆ.
- ಕೆಲವು ಆಯ್ದ ಪ್ರಮುಖ ಮಾರ್ಗಗಳಲ್ಲಿ ಎಸಿ ಸ್ಲೀಪರ್ ಹಾಗೂ ನಾನ್ ಎಸಿ ಸ್ಲೀಪರ್ ವಾಹನಗಳನ್ನು ಕಾರ್ಯಾಚರಣೆ ಮಾಡಲು ಯೋಜಿಸಲಾಗಿದೆ.
- ಸಾರಿಗೆ ಆದಾಯ ಸೋರಿಕೆಯಾಗದಂತೆ ಮಾರ್ಗ ತನಿಖಾ ಕಾರ್ಯವನ್ನು ಪರಿಣಾಮಕಾರಿಯಾಗಿ ಹಮ್ಮಿಕೊಳ್ಳಲಾಗುತ್ತಿದೆ.
- ಅನುಸೂಚಿಗಳಿಗೆ ಆದಾಯದ ಗುರಿಯನ್ನು ನಿಗದಿಪಡಿಸಿ, ಅದರಂತೆ ಆದಾಯವನ್ನು ಸಂದಾಯವಾಗುವಂತೆ ಸಂಬಂಧಪಟ್ಟ ಸಿಬ್ಬಂದಿಗಳಿಗೆ ತಿಳುವಳಿಕೆ ನೀಡಿ ಆದಾಯ ಹೆಚ್ಚಿಸಲು ಕ್ರಮ ಜರುಗಿಸಲಾಗುತ್ತಿದೆ.
- ವಿಭಾಗ ಮಟ್ಟದಲ್ಲಿ ಭೌತಿಕ ಮತ್ತು ಆರ್ಥಿಕ ಕಾರ್ಯಾಚರಣೆ ಕುರಿತಂತೆ ಘಟಕ ವ್ಯವಸ್ಥಾಪಕರ ಮತ್ತು ಶಾಖಾ ಮುಖ್ಯಸ್ಥರ ವಾರಾಂತ್ಯ ಮತ್ತು ಮಾಸಾಂತ್ಯ ಸಭೆ ನಡೆಸಿ, ಸಾರಿಗೆ ಆದಾಯ ಉತ್ತಮ ಪಡಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ವಿಭಾಗೀಯ ಅಧಿಕಾರಿಗಳು ಮೇಲಿಂದ ಮೇಲೆ ಘಟಕಗಳಿಗೆ ಭೇಟಿ ನೀಡಿ, ಕಡಿಮೆ ಆದಾಯ ಬರುವ ಅನುಸೂಚಿಗಳನ್ನು ಪರಿಶೀಲಿಸಿ, ಆದಾಯ ಹೆಚ್ಚಿಸುವ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಸುಧಾರಣಾ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

- ಖಾಲಿ ಇರುವ ಮಳಿಗೆಗಳಿಗೆ ಟೆಂಡರ್ ಪ್ರಕ್ರೀಯೆ ಸರಳೀಕರಣಗೊಳಿಸಿ ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಜಾಹೀರಾತು ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಶಾಲಾ-ಕಾಲೇಜು ಮತ್ತು ಕಾರ್ಖಾನೆಗಳ ಮುಖ್ಯಸ್ಥರಿಗೆ ಪತ್ರ ಬರೆದು ಚಾರ್‍ರ್ಡ್ ಸರ್ವಿಸ್ ಪಡೆದುಕೊಳ್ಳಲು ಕ್ರಮ ಜರುಗಿಸಲಾಗಿರುತ್ತದೆ.
- ನಿಗಮದ ತೆರೆದ ನಿವೇಶನಗಳಲ್ಲಿ ಬಾಡಿಗೆ ಆಧಾರದ ಮೇಲೆ ಇಂಧನ ಬಂಕ ಅಳವಡಿಸಿ ವಾಣಿಜ್ಯ ಆದಾಯ ಸಂಗ್ರಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ತನಿಖಾ ತಂಡಗಳನ್ನು ನಿಯೋಜಿಸಿ, ಪ್ರಯಾಣಿಕರು ಟಿಕೇಟ್ ಪಡೆದಿರುವ ಬಗ್ಗೆ ನಿಯಮಿತವಾಗಿ ತನಿಖೆ ನಡೆಸುವ ಮೂಲಕ ಪ್ರಯಾಣಿಕರಲ್ಲಿ ಜಾಗೃತಿ ಮೂಡಿಸಿ ಎಲ್ಲಾ ಪ್ರಯಾಣಿಕರು ಟಿಕೇಟ್ ಪಡೆದು ಪ್ರಯಾಣಿಸುವ ಬಗ್ಗೆ ಅರಿವು ಮೂಡಿಸಲಾಗುತ್ತಿದೆ.
- ಕೇಂದ್ರ ಕಛೇರಿಯ ಮಟ್ಟದಲ್ಲಿ ವಿಭಾಗಗಳ ಕಾರ್ಯಾಚರಣೆಯ ಅಂಕಿ-ಅಂಶಗಳನ್ನು ಪರಿಶೀಲಿಸಿ, ಆದಾಯ ಹೆಚ್ಚಿಸಲು ವಿಭಾಗಗಳಿಗೆ ಮಾರ್ಗದರ್ಶನ ನೀಡಲಾಗುತ್ತಿದೆ. ಸಮನಾಂತರ ಕಾರ್ಯಾಚರಣೆಯನ್ನು ಅಭ್ಯಸಿಸಿ, ಅನುಸೂಚಿಗಳನ್ನು ಪರಿಷ್ಕರಿಸಲು ಆಯಾ ವಿಭಾಗದವರಿಗೆ ಮಾರ್ಗದರ್ಶನ ನೀಡಲಾಗುತ್ತಿದೆ.
- ಪ್ರಯಾಣಿಕರು ಹೆಚ್ಚಿನ ಸಂಖ್ಯೆಯಲ್ಲಿ ಮುಂಗಡ ಟಿಕೇಟ್ ಪಡೆದು ಪ್ರಯಾಣಿಸಲು ಅನುಕೂಲವಾಗುವ ದೃಷ್ಟಿಯಿಂದ ಹೆಚ್ಚಿನ ಸಂಖ್ಯೆಯ ಫ್ರಾಂಚೈಸಿ ಗಳನ್ನು ನೇಮಿಸಿ, ಆದಾಯ ಹೆಚ್ಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಕೇಂದ್ರ ಕಛೇರಿ ಮಟ್ಟದಲ್ಲಿ ನಡೆಯುವ ಇಲಾಖಾ ಮುಖ್ಯಸ್ಥರ/ವಿಭಾಗೀಯ ನಿಯಂತ್ರಣಾಧಿಕಾರಿ ಗಳ/ವಿಭಾಗೀಯ ಸಂಚಾರ ಅಧಿಕಾರಿಗಳ ಸಭೆಯನ್ನು ಕಾಲಕಾಲಕ್ಕೆ ನಿಗಧಿ ಮಾಡಿ ಅಲ್ಲಿ ಅನುಸೂಚಿಗಳ ಬಗ್ಗೆ ವಿಶ್ಲೇಷಣೆ ಮಾಡಿ ಇತ್ಯಾಧಿಗಳ ಬಗ್ಗೆ ಪರಿಶೀಲಿಸಿ, ಅಗತ್ಯ ಸುಧಾರಣಾ ಕ್ರಮ ಕೈಗೊಳ್ಳುವಂತೆ ವಿಭಾಗೀಯ ಅಧಿಕಾರಿಗಳಿಗೆ ಸೂಕ್ತ ಸಲಹೆ ನೀಡಿ, ಸಾರಿಗೆ ಆದಾಯ ಹೆಚ್ಚಿಸುವಂತೆ ಕ್ರಮ ಕೈಗೊಳ್ಳಲಾಗುತ್ತಿದೆ.
- ವಿವಿಧ ಸಾಮಾಜಿಕ ಹೊಣೆಗಾರಿಕೆಯಡಿ ನೀಡುತ್ತಿರುವ ಸೇವೆಯಿಂದ ಉಂಟಾಗುತ್ತಿರುವ ವೆಚ್ಚದ ಪೈಕಿ ಸರ್ಕಾರದ ಪಾಲಿನ ಮೊತ್ತವನ್ನು ಸಂಸ್ಥೆಗೆ ಮಂಜೂರು ಮಾಡುವಂತೆ ಸರ್ಕಾರಕ್ಕೆ ಕೋರಲಾಗಿದೆ.
- ನಿಗಮದ ತೆರೆದ ನಿವೇಶನಗಳಲ್ಲಿ ಬಾಡಿಗೆ ಆಧಾರದ ಮೇಲೆ ಇಂಧನ ಬಂಕ ಅಳವಡಿಸಿ ವಾಣಿಜ್ಯ ಆದಾಯ ಸಂಗ್ರಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ಸಂಸ್ಥೆಯ ವಾಹನಗಳ ಇಂಧನ ಕಾರ್ಯಕ್ಷಮತೆ (ಕೆ.ಎಂ.ಪಿ.ಎಲ್) ಯನ್ನು ಹೆಚ್ಚಿಸಿ, ಇಂಧನ ಬಳಕೆಯನ್ನು ಕಡಿಮೆಗೊಳಿಸಿ ಇಂಧನ ಮೇಲಿನ ಖರ್ಚನ್ನು ಕಡಿಮೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.
- ವ್ಯವಸ್ಥಿತವಾದ ವಾಹನ ನಿರ್ವಹಣೆ ಮಾಡುವ ಮೂಲಕ ಇಂಧನ ಸೋರಿಕೆ ಮುಂತಾದವುಗಳನ್ನು ತಡೆಗಟ್ಟಿ ಲುಬ್ರಿಕೆಂಟ್ಸ್ ಮತ್ತು ಬಿಡಿಭಾಗಗಳ ಮೇಲಿನ ಖರ್ಚನ್ನು ಕಡಿಮೆ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಹೊಸ ಟೈರ್‌ಗಳ ಮತ್ತು ಸಂಸ್ಕರಿಸಿದ ಟೈರ್‌ಗಳ ಜೀವಮಾನವನ್ನು ಹೆಚ್ಚಿಸಿ, ಟೈರುಗಳ ಮೇಲಿನ ಖರ್ಚನ್ನು ಕಡಿಮೆಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.

****

ಅನುಬಂಧ-4

ಕ.ರಾ.ರ.ಸಾ.ನಿಗಮದಿಂದ ಸಾರ್ವಜನಿಕರ ಸುಗಮ ಪ್ರಯಾಣಕ್ಕೆ/ ಪ್ರಯಾಣಿಕರನ್ನುಆಕರ್ಷಿಸಲು/ ಪ್ರಯಾಣಿಕರಿಗೆ ಸಂಚಾರ ಸೇವೆಯನ್ನು ಸುಲಭ ಲಭ್ಯ ಮತ್ತು ಸುರಕ್ಷತೆ/ಉತ್ತಮ ಬಸ್ ಸೌಕರ್ಯವನ್ನು ಒದಗಿಸಲು ಕೈಗೊಂಡಿರುವ ಕ್ರಮಗಳ/ಯೋಜನೆಗಳ ವಿವರಗಳು.

• ಕ.ರಾ.ರ.ಸಾ.ನಿಗಮದ ವತಿಯಿಂದ ಸಾಮಾನ್ಯ, ನಗರ ಮತ್ತು ವೇಗದೂತ ಸಾರಿಗೆಗಳಲ್ಲದೆ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಾಜಹಂಸ, ಐರಾವತ, ಎ.ಸಿ ಸ್ಲೀಪರ್, ನಾನ್ ಎಸಿ ಸ್ಲೀಪರ್, ಐರಾವತ ಕ್ಲಬ್‌ಕ್ಲಾಸ್, ಫ್ಲೈ-ಬಸ್, ಅಂಬಾರಿ ಡ್ರೀಮ್‌ಕ್ಲಾಸ್ ಮುಂತಾದ ಪ್ರತಿಷ್ಠಿತ ಸಾರಿಗೆಗಳನ್ನು ಕಾರ್ಯಾಚರಿಸಿ ರಾಜ್ಯದ ಹಾಗೂ ನೆರೆ ರಾಜ್ಯದ ಪ್ರಮುಖ ಸ್ಥಳಗಳಿಗೆ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.

• ನಿಗಮವು ಒಟ್ಟು 16 ನಗರಗಳಲ್ಲಿ ಅಂದರೆ ತುಮಕೂರು, ಮೈಸೂರು, ಹಾಸನ, ಮಂಡ್ಯ, ರಾಮನಗರ, ಮಂಗಳೂರು, ಉಡುಪಿ, ಕೋಲಾರ, ಕೆ.ಜಿ.ಎಫ್., ದಾವಣಗೆರೆ, ಶಿವಮೊಗ್ಗ, ಭದ್ರಾವತಿ, ಚಿತ್ರದುರ್ಗ, ಚಿಕ್ಕಮಗಳೂರು, ಚಾಮರಾಜನಗರ ಮತ್ತು ಚಿಕ್ಕಬಳ್ಳಾಪುರ ನಗರಗಳಲ್ಲಿ ನಗರ ಸಾರಿಗೆಗಳನ್ನು ನಗರ ಮತ್ತು ಹೊರವಲಯಗಳಲ್ಲಿ ಕಾರ್ಯಾಚರಣೆ ಮಾಡಲಾಗುತ್ತಿದೆ.

• ಕ.ರಾ.ರ.ಸಾ ನಿಗಮವು ಟಿಕೆಟ್ ವಿತರಣೆಯಲ್ಲಿ ಸರಳತೆ ಹಾಗೂ ಪಾರದರ್ಶಕತೆ ತರುವ ನಿಟ್ಟಿನಲ್ಲಿ ಇ.ಟಿ.ಎಂ (Electronic Ticketing Machine) ಜಾರಿಗೆ ತಂದಿರುತ್ತದೆ.

• ಬೆಂಗಳೂರಿನ ಕೆಂಪೇಗೌಡ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಮೈಸೂರು, ಮಂಗಳೂರು-ಉಡುಪಿ-ಕುಂದಾಪುರ, ಕುಶಾಲನಗರ-ಮಡಿಕೇರಿಗೆ ನೇರ ಸಂಪರ್ಕ ಕಲ್ಪಿಸಲು "Fly bus" ಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ.

• ಸಾರ್ವಜನಿಕ ಪ್ರಯಾಣಿಕರಿಗೆ ಮುಂಗಡವಾಗಿ ಆಸನಗಳನ್ನು ಕಾಯ್ದಿರಿಸುವ ಅನುಕೂಲಕ್ಕಾಗಿ ನಿಗಮವು ಅವತಾರ್ (ಯಾವುದೇ ಸ್ಥಳದಿಂದ ಯಾವುದೇ ಸಮಯದಲ್ಲಿ ಟಿಕೆಟು ಕಾಯ್ದಿರಿಸುವಿಕೆ) ಗಣಕೀಕೃತ ಮುಂಗಡ ಬುಕಿಂಗ್ ಯೋಜನೆ ಜಾರಿಗೊಳಿಸಿದ್ದು, ರಾಜ್ಯದ ಹಾಗೂ ಹೊರ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ನಿಗಮದ ಕೌಂಟರುಗಳು/ಖಾಸಗಿ ಬುಕಿಂಗ್ ಏಜೆಂಟರುಗಳ ಮೂಲಕ ಮುಂಗಡ ಟಿಕೇಟ್ ಬುಕಿಂಗ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.

• ಕರಾರಸಾ ನಿಗಮದ ಸಾರಿಗೆಗಳಲ್ಲಿ ಮುಂಗಡ ಆಸನಗಳನ್ನು ಗುಂಪಾಗಿ (ಅಂದರೆ ನಾಲ್ಕು ಜನ ಮತ್ತು ಅದಕ್ಕೆ ಮೇಲ್ಪಟ್ಟು) ಕಾಯ್ದಿರಿಸಿದಲ್ಲಿ ಶೇ.5 ರಷ್ಟು ವಿಶೇಷ ರಿಯಾಯಿತಿಯನ್ನು ಕಲ್ಪಿಸಲಾಗಿದೆ ಹಾಗೂ ಮುಂಗಡ ಆಸನವನ್ನು ಹೋಗುವ ಮತ್ತು ಬರುವ (Onward/Return) ಒಮ್ಮೆಲೆ ಕಾಯ್ದಿರಿಸಿದಲ್ಲಿ ಬರುವ (Return) ಪ್ರಯಾಣಕ್ಕೆ ಶೇ.10 ರಷ್ಟು ವಿಶೇಷ ರಿಯಾಯಿತಿಯನ್ನು ಕಲ್ಪಿಸಲಾಗಿದೆ.

• ಕರಾರಸಾ ನಿಗಮದ ಸಾರಿಗೆಗಳಲ್ಲಿ ಮುಂಗಡ ಆಸನಗಳನ್ನು ಕಾಯ್ದಿರಿಸಲು ಜಿ.ಪಿಆರ್‌ಎಸ್ ಸೌಲಭ್ಯವುಳ್ಳ ಮೊಬೈಲ್ ದೂರವಾಣಿ ಮೂಲಕ ಮುಂಗಡ ಟಿಕೆಟು ಕಾಯ್ದಿರಿಸುವ ಎಂ-ಬುಕಿಂಗ್ ಮತ್ತು ಇ-ಬುಕಿಂಗ್ ವ್ಯವಸ್ಥೆ ಜಾರಿಗೊಳಿಸಿದೆ ಹಾಗೂ ಬೆಂಗಳೂರು ಒನ್ ಮತ್ತು ಕರ್ನಾಟಕ ಒನ್ ಆಪ್ ಮೂಲಕ ಮುಂಗಡ ಟಿಕೇಟು ಕಾಯ್ದಿರಿಸುವ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ. ಸದರಿ ಮುಂಗಡ ಆಸನಗಳನ್ನು ಕಾಯ್ದಿರಿಸಲು ಎಲ್ಲಾ ಡೆಬಿಟ್/ಕ್ರೆಡಿಟ್ ಕಾರ್ಡುಗಳ ಮೂಲಕ ಹಣ ಪಾವತಿಸಲು ಅವಕಾಶ ಕಲ್ಪಿಸಿದ್ದು, ಈ ಸಂಬಂಧ ತಗಲುವ ಗೇಟ್‌ವೇ ಶುಲ್ಕವನ್ನು ಪ್ರಯಾಣಿಕರಿಂದ ಪಡೆಯುತ್ತಿರುವುದಿಲ್ಲ.

• ಕೌಂಟರ್‌ಗಳ ಮೂಲಕ ಮುಂಗಡ ಆಸನ ಕಾಯ್ದಿರಿಸಿರುವ ಟಿಕೆಟ್‌ಗಳಿಗೆ ಪ್ರಯಾಣವನ್ನು ಮುಂದೂಡುವ ಮತ್ತು ಹಿಂದೂಡುವ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.

• ಒಂಟಿಯಾಗಿ ಪ್ರಯಾಣ ಮಾಡುವ ಮಹಿಳೆಯರಿಗಾಗಿ, ಮಹಿಳೆಯರು ಮಾತ್ರ ಕಾಯ್ದಿರಿಸಬಹುದಾದ ಆಸನಗಳ ವ್ಯವಸ್ಥೆ ಕಲ್ಪಿಸಲಾಗಿದೆ.

• ನಿಗಮದ ಸಾರಿಗೆಗಳಲ್ಲಿ ಮುಂಗಡ ಕಾಯ್ದಿರಿಸಿರುವ ಪ್ರಯಾಣಿಕರಿಗೆ ಪ್ರಯಾಣ ವೇಳೆಯ ಎರಡು ಗಂಟೆಯ ಮುಂಚಿತವಾಗಿ ನಗರ ಸಾರಿಗೆಗಳಿರುವ ನಗರಗಳಲ್ಲಿ ಉಚಿತವಾಗಿ ಪ್ರಯಾಣಿಸಲು ಅವಕಾಶ ಕಲ್ಪಿಸಲಾಗಿದೆ.

• ಮುಂಗಡವಾಗಿ ಸೀಟು ಕಾಯ್ದಿರಿಸುವ ಪ್ರಯಾಣಿಕರಿಗೆ ಅವರುಗಳು ಪ್ರಯಾಣ ಮಾಡುವ ವಾಹನ ಸಂಖ್ಯೆ, ನಿರ್ಗಮನದ ಸಮಯ ಹಾಗೂ ಸದರಿ ವಾಹನದಲ್ಲಿ ಕರ್ತವ್ಯ ನಿರ್ವಹಿಸುವ ಚಾಲನಾ ಸಿಬ್ಬಂದಿಯ ಮೊಬೈಲ್ ಸಂಖ್ಯೆ ಗಳನ್ನು ಎಸ್.ಎಂ.ಎಸ್. ಮೂಲಕ ಮಾಹಿತಿಯನ್ನು ಒದಗಿಸಲಾಗುತ್ತಿದೆ.

• ಪ್ರಯಾಣಿಕರ ಅನುಕೂಲಕ್ಕಾಗಿ ಆನ್‌ಲೈನ್ ಅಥವಾ ಮೊಬೈಲ್ ಮೂಲಕ ಟಿಕೆಟನ್ನು ಕಾಯ್ದಿರಿಸಿ, ಎಂ-ಟಿಕೆಟನ್ನು ಲ್ಯಾಪ್‌ಟಾಪ್/ಐಪ್ಯಾಡ್/ಟ್ಯಾಬ್ಲೆಟ್ ಅಥವಾ ಮೊಬೈಲ್ ಫೋನ್‌ನಲ್ಲಿ ತೋರಿಸಿ ಪ್ರಯಾಣಿಸಲು ಅನುವು ಮಾಡಿಕೊಡಲಾಗಿದೆ.

• ಸಾರ್ವಜನಿಕ ಪ್ರಯಾಣಿಕರು ನಿಲ್ದಾಣವಾರು ವಾಹನಗಳ ನಿರ್ಗಮನಗಳ ಮಾಹಿತಿ ಪಡೆಯಲು ಮೈಸೂರು ನಗರದ ನಗರ ಸಾರಿಗೆ ವಾಹನಗಳಲ್ಲಿ ಐ.ಟಿ.ಎಸ್(ಇಂಟೆಲಿಜೆಂಟ್ ಟ್ರ್ಯಾನ್ಸ್‌ಪೋರ್ಟ್ ಸಿಸ್ಟಮ್) ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಸದರಿ ವಾಹನಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ನಿಲ್ದಾಣವಾರು ಘೋಷಣೆಯ ವ್ಯವಸ್ಥೆಯನ್ನು ಅಳವಡಿಸಲಾಗಿದೆ.(ಪ್ಯಾಸೆಂಜರ್ ಅನೌನ್ಸಮೆಂಟ್ ಸಿಸ್ಟಮ್).

• ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ನಿಗಮದ ಪ್ರಮುಖ 107 ಬಸ್ ನಿಲ್ದಾಣಗಳಲ್ಲಿ ವಾಹನಗಳ ಸಂಖ್ಯೆ, ನಿರ್ಗಮನದ ವೇಳೆ, ತಲುಪುವ ಸ್ಥಳ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ತಿಳಿಸಲಾಗುತ್ತಿದೆ.

• ಕ.ರಾ.ರ.ಸಾ.ನಿಗಮದ ವತಿಯಿಂದ ಬೆಂಗಳೂರಿನಿಂದ ತಿರುಪತಿ-ತಿರುಮಲಕ್ಕೆ ಮತ್ತು ಪ್ರಮುಖ ಪ್ರವಾಸಿ ತಾಣಗಳಿಗೆ ಪ್ಯಾಕೇಜ್ ಟೂರ್‌ಗಳನ್ನು ಆಚರಣೆ ಮಾಡಲಾಗುತ್ತಿದೆ.

ವ್ಯವಸ್ಥಾಪಕ ನಿರ್ದೇಶಕರವರ ಪರವಾಗಿ

ಕರಾರಸಾನಿಗಮ

## ಸಂಸ್ಥೆಯು ಸಾರ್ವಜನಿಕರ ಸುಗಮ ಪ್ರಯಾಣಕ್ಕೆ ಉತ್ತಮ ಬಸ್ ಸೌಕರ್ಯವನ್ನು ಒದಗಿಸಲು/ಒದಗಿಸುತ್ತಿರುವ ವಿವರಗಳು

1. ವಿದ್ಯಾರ್ಥಿಗಳಿಗೆ ಹಾಗೂ ವಿಶೇಷ ಚೇತನರಿಗೆ ಸೇವಾ ಸಿಂಧು ಪೋರ್ಟಲ್ ಮೂಲಕ ಅರ್ಜಿ ಆಹ್ವಾನಿಸಿ ಪಾಸನ್ನು ವಿತರಿಸಲಾಗುತ್ತಿದೆ.
2. ಸಂಸ್ಥೆಯ ವ್ಯಾಪ್ತಿಯಿಂದ ಪಣಜಿ, ಪುಣೆ, ಮುಂಬೈ, ಹೈದ್ರಾಬಾದ, ಕಲಬುರ್ಗಿ, ಬೀದರ, ಬಳ್ಳಾರಿ, ಮೈಸೂರು, ಮಂಗಳೂರು, ಬೆಂಗಳೂರು ಮಾರ್ಗಗಳಲ್ಲಿನ ಪ್ರತಿಷ್ಠಿತ ಸಾರಿಗೆಗಳ ಆದಾಯ ಹೆಚ್ಚಿಸಲು ಎಂ-ಬುಕಿಂಗ್, ಇ–ಬುಕಿಂಗ್, ಫ್ರಾಂಚಸಿ ಬುಕಿಂಗ್ ಗಳ ಜಾಲವನ್ನು ವಿಸ್ತ್ರತಗೊಳಿಸಿ, ಹೆಚ್ಚಿನ ಪ್ರಚಾರ ಕೈಗೊಂಡು ಪ್ರೋತ್ಸಾಹಕ ದರ ಮತ್ತು ರಿಯಾಯಿತಿಗಳ ಮಾಹಿತಿಯನ್ನು ಪ್ರಯಾಣಿಕರಿಗೆ ನೀಡಿ ಪ್ರಯಾಣಿಕರನ್ನು ಆಕರ್ಷಿಸಲು ಎಲ್ಲ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.
3. ಸಾರ್ವಜನಿಕ ಪ್ರಯಾಣಿಕರು ನಿಲ್ದಾಣವಾರು ವಾಹನಗಳ ನಿರ್ಗಮನಗಳ ಮಾಹಿತಿ ಪಡೆಯಲು ಹುಬ್ಬಳ್ಳಿ-ಧಾರವಾಡ ನಗರ ಸಾರಿಗೆ (ಚಿಗರಿ) ವಾಹನಗಳಲ್ಲಿ ಐ.ಟಿ.ಎಸ್ ತಂತ್ರಾಂಶ ವ್ಯವಸ್ಥೆಯನ್ನು ಅಳವಡಿಸಲಾಗಿದ್ದು, ಸದರಿ ವಾಹನಗಳಲ್ಲಿ ಸಾರ್ವಜನಿಕ ಪ್ರಯಾಣಿಕರಿಗೆ ನಿಲ್ದಾಣವಾರು ಉದ್ಘೋಷಣಾ ವ್ಯವಸ್ಥೆಯನ್ನು ಅಳವಡಿಸಲಾಗಿದೆ.
4. ಅನುಸೂಚಿಗಳ ವ್ಯವಸ್ಥಿತ ಕಾರ್ಯಾಚರಣೆಗೆ ಆಡಳಿತದಲ್ಲಿ ಪಾರದರ್ಶಕತೆಯನ್ನು ತರಲು ಘಟಕಗಳಲ್ಲಿ ಡ್ಯೂಟಿರೋಟಾ ಹಾಗೂ ಗಣಕೀಕೃತ ರಜೆ ವ್ಯವಸ್ಥೆಗಳನ್ನು ಅಳವಡಿಸಲಾಗಿದೆ.
5. ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ಸಂಸ್ಥೆಯ ಪ್ರಮುಖ 57 ಬಸ್ ನಿಲ್ದಾಣಗಳಲ್ಲಿ ವಾಹನ ಸಂಖ್ಯೆ, ನಿರ್ಗಮನ ವೇಳೆ, ತಲುಪುವ ವೇಳೆ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ನೀಡಲಾಗುತ್ತಿದೆ.
6. ಸಾರ್ವಜನಿಕ ಪ್ರಯಾಣಿಕರ ತಮ್ಮ ಲಗೇಜುಗಳನ್ನು ಸಾಗಿಸಲು "ನಮ್ಮ ಕಾರ್ಗೋ" ಪಾರ್ಸಲ್ ಸೇವೆಯನ್ನು ಆರಂಭಿಸಲಾಗಿದೆ.
7. ಪ್ರಯಾಣಿಕರ ಅನುಕೂಲಕ್ಕಾಗಿ ನಗದು ರಹಿತ ವಹಿವಾಟನ್ನು ಪ್ರೋತ್ಸಾಹಿಸಲು ಪ್ರಯಾಣಿಕ ಸ್ನೇಹಿ Prepaid RFID ಕಾರ್ಡ ಬಳಸಿ ಪ್ರಯಾಣಿಸಲು ಬೆಳಗಾವಿ ನಗರದಲ್ಲಿ ಪ್ರಾರಂಭಿಸಲಾಗಿದ್ದು.
8. ಎಲ್ಲ ಬಸ್ ನಿಲ್ದಾಣಗಳಲ್ಲಿ UPI Payment ಮೂಲಕ ಮಾಸಿಕ ಬಸ್ ಪಾಸ್ ಪಡೆಯಲು ಮತ್ತು ಮುಂಗಡ ಟಿಕೇಟ್ ಕಾಯ್ದಿರಿಸಲು ಅವಕಾಶ ಕಲ್ಪಿಸಲಾಗಿದೆ.

ಮುಖ್ಯ ಸಂಚಾರ ವ್ಯವಸ್ಥಾಪಕರು

## ವಿಧಾನಸಭೆಯ ಸಂಖ್ಯೆ 469ಕ್ಕೆ ಹೆಚ್ಚುವರಿ ಮಾಹಿತಿ

ಅನುಬಂಧ-4

ಕ.ಕ.ರ.ಸಾ.ನಿಗಮದಿಂದ ಸಾರ್ವಜನಿಕರ ಸುಗಮ ಪ್ರಯಾಣಕ್ಕೆ/ ಪ್ರಯಾಣಿಕರನ್ನು ಆಕರ್ಷಿಸಲು/ ಪ್ರಯಾಣಿಕರಿಗೆ ಸಂಚಾರ ಸೇವೆಯನ್ನು ಸುಲಭ ಲಭ್ಯ ಮತ್ತು ಸುರಕ್ಷತೆ/ಉತ್ತಮ ಬಸ್ ಸೌಕರ್ಯವನ್ನು ಒದಗಿಸಲು ಕೈಗೊಂಡಿರುವ ಕ್ರಮಗಳ/ಯೋಜನೆಗಳ ವಿವರಗಳು.

- ಕ.ಕ.ರ.ಸಾ.ನಿಗಮದ ವತಿಯಿಂದ ಸಾಮಾನ್ಯ, ನಗರ ಮತ್ತು ವೇಗದೂತ ಸಾರಿಗೆಗಳಲ್ಲದೆ ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಾಜಹಂಸ, ಎ.ಸಿ ಸ್ಲೀಪರ್, ನಾನ್ ಎಸಿ ಸ್ಲೀಪರ್ ಮುಂತಾದ ಪ್ರತಿಷ್ಠಿತ ಸಾರಿಗೆಗಳನ್ನು ಕಾರ್ಯಾಚರಿಸಿ ರಾಜ್ಯದ ಹಾಗೂ ನೆರೆ ರಾಜ್ಯದ ಪ್ರಮುಖ ಸ್ಥಳಗಳಿಗೆ ಸಾರಿಗೆ ಸೌಲಭ್ಯವನ್ನು ಕಲ್ಪಿಸಲಾಗಿದೆ.
- ನಿಗಮವು ಒಟ್ಟು 09 ನಗರಗಳಲ್ಲಿ ಅಂದರೆ ಕಲಬುರಗಿ, ಸೇಡಂ, ಬೀದರ, ಯಾದಗಿರಿ, ರಾಯಚೂರು, ಕೊಪ್ಪಳ, ಹೊಸಪೇಟೆ, ಬಳ್ಳಾರಿ ಮತ್ತು ವಿಜಯಪುರ ನಗರಗಳಲ್ಲಿ ನಗರ ಸಾರಿಗೆಗಳನ್ನು ನಗರ ಮತ್ತು ಹೊರವಲಯಗಳಲ್ಲಿ ಕಾರ್ಯಾಚರಣೆ ಮಾಡಲಾಗುತ್ತಿದೆ.
- ಕ.ಕ.ರ.ಸಾ ನಿಗಮವು ಟಿಕೆಟ್ ವಿತರಣೆಯಲ್ಲಿ ಸರಳತೆ ಹಾಗೂ ಪಾರದರ್ಶಕತೆ ತರುವ ನಿಟ್ಟಿನಲ್ಲಿ ಇ.ಟಿ.ಎಂ (Electronic Ticketing Machine) ಜಾರಿಗೆ ತಂದಿರುತ್ತದೆ.
- ಸಾರ್ವಜನಿಕ ಪ್ರಯಾಣಿಕರಿಗೆ ಮುಂಗಡವಾಗಿ ಆಸನಗಳನ್ನು ಕಾಯ್ದಿರಿಸುವ ಅನುಕೂಲಕ್ಕಾಗಿ ನಿಗಮವು ಅವತಾರ್ (ಯಾವುದೇ ಸ್ಥಳದಿಂದ ಯಾವುದೇ ಸಮಯದಲ್ಲಿ ಟಿಕೆಟು ಕಾಯ್ದಿರಿಸುವಿಕೆ) ಗಣಕೀಕೃತ ಮುಂಗಡ ಬುಕಿಂಗ್ ಯೋಜನೆ ಜಾರಿಗೊಳಿಸಿದ್ದು, ರಾಜ್ಯದ ಹಾಗೂ ಹೊರ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ನಿಗಮದ ಕೌಂಟರುಗಳು/ಖಾಸಗಿ ಬುಕಿಂಗ್ ಏಜೆಂಟರುಗಳ ಮೂಲಕ ಮುಂಗಡ ಟಿಕೆಟ್ ಬುಕಿಂಗ್ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
- ಕಕರಸಾ ನಿಗಮದ ಸಾರಿಗೆಗಳಲ್ಲಿ ಮುಂಗಡ ಆಸನಗಳನ್ನು ಗುಂಪಾಗಿ (ಅಂದರೆ ನಾಲ್ಕು ಜನ ಮತ್ತು ಅದಕ್ಕೆ ಮೇಲ್ಪಟ್ಟು) ಕಾಯ್ದಿರಿಸಿದಲ್ಲಿ ಶೇ.5 ರಷ್ಟು ವಿಶೇಷ ರಿಯಾಯಿತಿಯನ್ನು ಕಲ್ಪಿಸಲಾಗಿದೆ ಹಾಗೂ ಮುಂಗಡ ಆಸನವನ್ನು ಹೋಗುವ ಮತ್ತು ಬರುವ (Onward/Return) ಒಮ್ಮೆಲೆ ಕಾಯ್ದಿರಿಸಿದಲ್ಲಿ ಬರುವ (Return) ಪ್ರಯಾಣಕ್ಕೆ ಶೇ.10 ರಷ್ಟು ವಿಶೇಷ ರಿಯಾಯಿತಿಯನ್ನು ಕಲ್ಪಿಸಲಾಗಿದೆ.
- ಕೌಂಟರ್‌ಗಳ ಮೂಲಕ ಮುಂಗಡ ಆಸನ ಕಾಯ್ದಿರಿಸಿರುವ ಟಿಕೆಟ್‌ಗಳಿಗೆ ಪ್ರಯಾಣವನ್ನು ಮುಂದೂಡುವ ಮತ್ತು ಹಿಂದೂಡುವ ವ್ಯವಸ್ಥೆಯನ್ನು ಕಲ್ಪಿಸಲಾಗಿದೆ.
- ಒಂಟಿಯಾಗಿ ಪ್ರಯಾಣ ಮಾಡುವ ಮಹಿಳೆಯರಿಗಾಗಿ, ಮಹಿಳೆಯರು ಮಾತ್ರ ಕಾಯ್ದಿರಿಸಬಹುದಾದ ಆಸನಗಳ ವ್ಯವಸ್ಥೆ ಕಲ್ಪಿಸಲಾಗಿದೆ.
- ನಿಗಮದ ಸಾರಿಗೆಗಳಲ್ಲಿ ಮುಂಗಡ ಕಾಯ್ದಿರಿಸಿರುವ ಪ್ರಯಾಣಿಕರಿಗೆ ಪ್ರಯಾಣ ವೇಳೆಯ ಎರಡು ಗಂಟೆಯ ಮುಂಚಿತವಾಗಿ ನಗರ ಸಾರಿಗೆಗಳಿರುವ ನಗರಗಳಲ್ಲಿ ಉಚಿತವಾಗಿ ಪ್ರಯಾಣಿಸಲು ಅವಕಾಶ ಕಲ್ಪಿಸಲಾಗಿದೆ.
- ಮುಂಗಡವಾಗಿ ಸೀಟು ಕಾಯ್ದಿರಿಸುವ ಪ್ರಯಾಣಿಕರಿಗೆ ಅವರುಗಳು ಪ್ರಯಾಣ ಮಾಡುವ ವಾಹನ ಸಂಖ್ಯೆ, ನಿರ್ಗಮನದ ಸಮಯ ಹಾಗೂ ಸದರಿ ವಾಹನದಲ್ಲಿ ಕರ್ತವ್ಯ ನಿರ್ವಹಿಸುವ ಚಾಲನಾ ಸಿಬ್ಬಂದಿಯ ಮೊಬೈಲ್ ಸಂಖ್ಯೆ ಗಳನ್ನು ಎಸ್.ಎಂ.ಎಸ್. ಮೂಲಕ ಮಾಹಿತಿಯನ್ನು ಒದಗಿಸಲಾಗುತ್ತಿದೆ.
- ಪ್ರಯಾಣಿಕರ ಅನುಕೂಲಕ್ಕಾಗಿ ಆನ್‌ಲೈನ್ ಅಥವಾ ಮೊಬೈಲ್ ಮೂಲಕ ಟಿಕೆಟನ್ನು ಕಾಯ್ದಿರಿಸಿ, ಎಂ-ಟಿಕೆಟನ್ನು ಲ್ಯಾಪ್‌ಟಾಪ್/ಐಪ್ಯಾಡ್/ಟ್ಯಾಬ್ಲೆಟ್ ಅಥವಾ ಮೊಬೈಲ್ ಫೋನ್‌ನಲ್ಲಿ ತೋರಿಸಿ ಪ್ರಯಾಣಿಸಲು ಅನುವು ಮಾಡಿಕೊಡಲಾಗಿದೆ.
- ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ನಿಗಮದ ಪ್ರಮುಖ 60 ಬಸ್ ನಿಲ್ದಾಣಗಳಲ್ಲಿ ವಾಹನಗಳ ಸಂಖ್ಯೆ, ನಿರ್ಗಮನದ ವೇಳೆ, ತಲುಪುವ ಸ್ಥಳ, ಮಾರ್ಗದ ಮಾಹಿತಿಯನ್ನು ಸಾರ್ವಜನಿಕ ಉದ್ಘೋಷಣಾ ವ್ಯವಸ್ಥೆಯ ಮುಖಾಂತರ ತಿಳಿಸಲಾಗುತ್ತಿದೆ.

ಮುಖ್ಯ ಸಂಚಾರ ವ್ಯವಸ್ಥಾಪಕರು
ಕಕರಸಾನಿಗಮ

Scanned with CamScanner

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 470 |
| ಸದಸ್ಯರ ಹೆಸರು | ಶ್ರೀ ಲಿಂಗೇಶ್ ಕೆ. ಎಸ್ (ಬೇಲೂರು) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಇಲಾಖೆಯಲ್ಲಿ ಸಹಾಯಕ ಕೃಷಿ ಅಧಿಕಾರಿಗಳ, ಕೃಷಿ ಅಧಿಕಾರಿಗಳ ಹಾಗೂ ಇತರೆ ಹುದ್ದೆಗಳು ಹಲವಾರು ವರ್ಷಗಳಿಂದ ಖಾಲಿ ಇರುವುದರಿಂದ ರೈತರ ಕೆಲಸ ಕಾರ್ಯಗಳಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಖಾಲಿ ಇರುವ ಸಹಾಯಕ ಕೃಷಿ ಅಧಿಕಾರಿಗಳು ಮತ್ತು ಕೃಷಿ ಅಧಿಕಾರಿಗಳು ಹಾಗೂ ಇತರೆ ಹುದ್ದೆಗಳ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಖಾಲಿ ಇರುವ ಸಹಾಯಕ ಕೃಷಿ ಅಧಿಕಾರಿಗಳು ಮತ್ತು ಕೃಷಿ ಅಧಿಕಾರಿಗಳು ಹಾಗೂ ಇತರೆ ಹುದ್ದೆಗಳ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ) | ಹಾಗಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿಗಳನ್ನು ಹಾಗೂ ದಾಖಲಾತಿಗಳನ್ನು ನೀಡುವುದು) | ರೈತರಿಗೆ ಇಲಾಖಾ ಸವಲತ್ತುಗಳನ್ನು ವಿತರಣೆ ಮಾಡುವಲ್ಲಿ ಹಾಗೂ ನೌಕರರ ಕೊರತೆ ನೀಗಿಸಲು ತಾಂತ್ರಿಕ ಅಧಿಕಾರಿಗಳಿಗೆ ಹೆಚ್ಚುವರಿಯಾಗಿ ಪ್ರಭಾರ ವಹಿಸಲಾಗಿದೆ ಹಾಗೂ ಎಲ್ಲಾ ರೈತ ಸಂಪರ್ಕ ಕೇಂದ್ರಗಳಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ದಾಸ್ತಾನು ನಿರ್ವಹಣಾ ಸಿಬ್ಬಂದಿಗಳನ್ನು ಪಡೆದು ಕಚೇರಿಯಲ್ಲಿ ಕಾರ್ಯ ನಿರ್ವಹಿಸುವಂತೆ ಕ್ರಮವಹಿಸಲಾಗಿದೆ. ರೈತರಿಗೆ ಮಾರ್ಗದರ್ಶನ ನೀಡಲು ATMA (Agriculture Technology Management Agency) ಯೋಜನೆಯಡಿ ಹೊರಗುತ್ತಿಗೆ ಆಧಾರದಲ್ಲಿ ತಾಂತ್ರಿಕ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ತೊಡಗಿಸಿಕೊಳ್ಳಲು ಸಹಾಯಕ ತಾಂತ್ರಿಕ ವ್ಯವಸ್ಥಾಪಕರು **(ATM)** ಗಳನ್ನು ಹೋಬಳಿ ಮಟ್ಟದಲ್ಲಿ, ತಾಲ್ಲೂಕು ಮಟ್ಟದಲ್ಲಿ ಬ್ಲಾಕ್ ತಾಂತ್ರಿಕ ವ್ಯವಸ್ಥಾಪಕರು **(BTM)** ಹಾಗೂ ಜಿಲ್ಲಾ ಮಟ್ಟದಲ್ಲಿ ಉಪ |

| | | |
|---|---|---|
| | | ಯೋಜನಾ ನಿರ್ದೇಶಕರು (DPD) ಗಳನ್ನು ನೇಮಿಸಿಕೊಂಡು ಕಚೇರಿ ಕೆಲಸಗಳು ವಿಳಂಬವಾಗದಂತೆ ಕ್ರಮವಹಿಸಲಾಗುತ್ತಿದೆ. ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಕೃಷಿ ನಿರ್ದೇಶಕರ ಹುದ್ದೆಗಳನ್ನು ಹಾಗೂ ಕೃಷಿ ಅಧಿಕಾರಿ ಹುದ್ದೆಗಳನ್ನು ಮುಂಬಡ್ತಿ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಮುಂದುವರೆದು 300 ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಿಕೊಳ್ಳಲು ಆರ್ಥಿಕ ಇಲಾಖೆಯು ಸಹಮತಿ ನೀಡಿದ್ದು, ಕರ್ನಾಟಕ ಲೋಕ ಸೇವಾ ಆಯೋಗದಿಂದ ನೇಮಕ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಕಳೆದ ಮೂರು ವರ್ಷಗಳಿಂದ ರಾಜ್ಯ ಸರ್ಕಾರದಿಂದ ಮತ್ತು ಕೇಂದ್ರ ಸರ್ಕಾರದಿಂದ ಕೃಷಿ ಇಲಾಖೆಗೆ ಎಸ್.ಎಂ.ಎ.ಎಂ. ಕೃಷಿ ಯಾಂತ್ರೀಕರಣ, ಪಿ.ಎಂ.ಕೆ.ಎಸ್.ವೈ. ರಾಷ್ಟ್ರೀಯ ಆಹಾರ ಭದ್ರತಾ ಯೋಜನೆ ಅಡಿಯಲ್ಲಿ ಹಾಗೂ ವಿವಿಧ ಲೆಕ್ಕಶೀರ್ಷಿಕೆಯಡಿಯಲ್ಲಿ ನೀಡಿರುವ ಅನುದಾನವೆಷ್ಟು; ಈ ದಿನಾಂಕದವರೆಗೆ ಖರ್ಚು ಮಾಡಿರುವ ಅನುದಾನವೆಷ್ಟು? (ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು) | ಪ್ರಸಕ್ತ ಸಾಲಿನಲ್ಲಿ ಕೃಷಿ ಇಲಾಖೆಗೆ ರಾಜ್ಯ ಸರ್ಕಾರ ಮತ್ತು ಕೇಂದ್ರ ಸರ್ಕಾರದಿಂದ ಎಸ್.ಎಂ.ಎ.ಎಂ. ಕೃಷಿ ಯಾಂತ್ರೀಕರಣ, ಪಿ.ಎಂ.ಕೆ.ಎಸ್.ವೈ. ಯೋಜನೆಯಡಿಯಲ್ಲಿ ವಿವಿಧ ಲೆಕ್ಕ ಶೀರ್ಷಿಕೆಯಡಿಯಲ್ಲಿ ಬಿಡುಗಡೆಯಾದ ಅನುದಾನದ ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. 2019-20 ರಿಂದ ಇಲ್ಲಿಯವರೆಗೆ ನೀಡಿರುವ ಅನುದಾನ ಜಿಲ್ಲಾವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿಯನ್ನು ಸಿ.ಡಿ ರೂಪದಲ್ಲಿ ನೀಡಲಾಗಿದೆ. ಅನುಬಂಧ-3. ಮುಂದುವರೆದು, ರಾಷ್ಟ್ರೀಯ ಆಹಾರ ಭದ್ರತಾ ಯೋಜನೆಯಡಿ ಬಿಡುಗಡೆಯಾದ ಅನುದಾನದ ಬಗ್ಗೆ ಅನುಬಂಧ-4 ರಲ್ಲಿ ನೀಡಲಾಗಿದೆ. |

ಸಂಖ್ಯೆ:AGRI/36/AGS/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

# ಅನುಬಂಧ-1

## ಕೃಷಿ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಮಾಹಿತಿ

| ಕ್ರ ಸಂ | ಕಛೇರಿ | ಜಂಟಿ ಕೃಷಿ ನಿರ್ದೇಶಕರು | ಉಪ ಕೃಷಿ ನಿರ್ದೇಶಕರು | ಸಹಾಯಕ ಕೃಷಿ ನಿರ್ದೇಶಕರು | ಸಹಾಯಕ ಕೃಷಿ ನಿರ್ದೇಶಕರು (ರೈಮ) | ಕೃಷಿ ಅಧಿಕಾರಿ | ಸಹಾಯಕ ಕೃಷಿ ಅಧಿಕಾರಿ | ಕೃಷಿ ಸಹಾಯಕ | ಆಡಳಿತ ಅಧಿಕಾರಿ | ಆಡಳಿತ ಸಹಾಯಕರು |
|---|---|---|---|---|---|---|---|---|---|---|
| 1 | ಕಾರ್ಯದರ್ಶಿ ಕಛೇರಿ, (ಜಾಗೃತದಳ), ಬೆಂಗಳೂರು | 0 | 0 | 0 | 0 | 0 | 0 | 0 | 0 | 0 |
| 2 | ಕಾರ್ಯದರ್ಶಿ ಕಛೇರಿ, (ಜಾಗೃತದಳ), ಬೆಳಗಾವಿ | 0 | 0 | 0 | 0 | 0 | 0 | 0 | 0 | 0 |
| 3 | ಕೇಂದ್ರ ಕಛೇರಿ, ಬೆಂಗಳೂರು | 0 | 0 | 2 | 0 | 18 | 0 | 0 | 1 | 1 |
| 4 | ಜಲಾನಯನ ಅಭಿವೃದ್ಧಿ ಇಲಾಖೆ | 0 | 0 | 0 | 0 | 0 | 0 | 0 | 0 | 0 |
| | ಬೆಂಗಳೂರು ಜಿಲ್ಲೆ | | | | | | | | | |
| 1 | ಜಕೃನಿ, | 0 | 0 | 0 | 0 | 1 | 0 | 0 | 0 | 1 |
| 2 | ಉಕೃನಿ-1, | 0 | 0 | 0 | 0 | 0 | 0 | 0 | 0 | 0 |
| 3 | ಸಕೃನಿ, ದೇವನಹಳ್ಳಿ | 0 | 0 | 0 | 0 | 4 | 6 | 0 | 0 | 0 |
| 4 | ಸಕೃನಿ, ದೊಡ್ಡಬಳ್ಳಾಪುರ | 0 | 0 | 0 | 0 | 1 | 9 | 0 | 0 | 0 |
| 5 | ಸಕೃನಿ, ನೆಲಮಂಗಲ | 0 | 0 | 0 | 0 | 3 | 2 | 0 | 0 | 0 |
| 6 | ಸಕೃನಿ, ಹೊಸಕೋಟೆ | 0 | 0 | 0 | 0 | 3 | 5 | 0 | 0 | 0 |
| 7 | ಸಕೃನಿ, ಆನೇಕಲ್ | 0 | 0 | 0 | 0 | 3 | 14 | 0 | 0 | 0 |
| 8 | ಸಕೃನಿ, ಬೆಂಗಳೂರು ಉತ್ತರ | 0 | 0 | 0 | 0 | 1 | 9 | 0 | 0 | 0 |
| 9 | ಸಕೃನಿ. ಜಿಕೃತ ಕೇ, ಆನೇಕಲ್ ತಾ | 0 | 0 | 0 | 0 | 0 | 0 | 0 | 0 | 0 |
| 10 | ಸ ಕೃನಿ ಬೀಜ ಪರೀಕ್ಷಾ ಪ್ರಯೋಗಾಲಯ ಹೆಬ್ಬಾಳ, ಬೆಂಗಳೂರು | 0 | 0 | 0 | 0 | 0 | 0 | 0 | 0 | 0 |
| 11 | ಸ.ಕೃನಿ ರೃಜೂ ಪ್ರ. ಹೆಬ್ಬಾಳ, ಬೆಂಗಳೂರು | 0 | 0 | 0 | 1 | 0 | 0 | 0 | 0 | 0 |
| 12 | ಸ.ಕೃ.ನಿ ಕೀಟನಾಶಕ ಶೇಷಾಂಶ, ವಿಶ್ಲೇಷಣಾ ಪ್ರಯೋಗಾಲಯ ಬನಶಂಕರಿ ಬೆಂಗಳೂರು | 0 | 0 | 0 | 1 | 0 | 0 | 0 | 0 | 0 |
| | ಒಟ್ಟು | 0 | 0 | 0 | 2 | 16 | 45 | 0 | 0 | 1 |

taluk-jilla Vacancy details.xlsx

| ಸಂ | ಕಛೇರಿ | ಅಧೀಕ್ಷಕರು | ಪ್ರಥಮ ದರ್ಜೆ ಸಹಾಯಕರು | ದ್ವಿತೀಯ ದರ್ಜೆ ಸಹಾಯಕರು | ಶೀಘ್ರಲಿಪಿಗಾರರು | ಬೆರಳಚ್ಚುಗಾರರು | ವಾಹನ ಚಾಲಕರು | ಪ್ರಯೋಗಶಾಲಾ ಸಹಾಯಕ | ಗ್ರೂಪ್-ಡಿ | ಒಟ್ಟು |
|---|---|---|---|---|---|---|---|---|---|---|
| 1 | ಕಾರ್ಯದರ್ಶಿ ಕಛೇರಿ, (ಜಾಗೃತದಳ), ಬೆಂಗಳೂರು | 0 | 0 | 0 | 0 | 4 | 0 | 0 | 1 | 5 |
| 2 | ಕಾರ್ಯದರ್ಶಿ ಕಛೇರಿ, (ಜಾಗೃತದಳ), ಬೆಳಗಾವಿ | 0 | 0 | 0 | 0 | 0 | 0 | 0 | 0 | 0 |
| 3 | ಕೇಂದ್ರ ಕಛೇರಿ, ಬೆಂಗಳೂರು | 0 | 44 | 8 | 0 | 23 | 14 | 18 | 42 | 171 |
| 4 | ಜಲಾನಯನ ಅಭಿವೃದ್ಧಿ ಇಲಾಖೆ | 0 | 11 | 4 | 3 | 4 | 6 | 0 | 10 | 38 |
| | ಬೆಂಗಳೂರು ಜಿಲ್ಲೆ | | | | | | | | | |
| 1 | ಜಕೃನಿ, | 0 | 3 | 1 | 0 | 1 | 3 | 0 | 2 | 12 |
| 2 | ಉಕೃನಿ-1, | 1 | 1 | 3 | 0 | 1 | 1 | 0 | 2 | 8 |
| 3 | ಸಕೃನಿ, ದೇವನಹಳ್ಳಿ | 0 | 1 | 1 | 0 | 1 | 1 | 0 | 4 | 19 |
| 4 | ಸಕೃನಿ, ದೊಡ್ಡಬಳ್ಳಾಪುರ | 0 | 1 | 1 | 0 | 1 | 1 | 0 | 3 | 16 |
| 5 | ಸಕೃನಿ, ನೆಲಮಂಗಲ | 0 | 1 | 1 | 0 | 1 | 1 | 0 | 3 | 12 |
| 6 | ಸಕೃನಿ, ಹೊಸಕೋಟೆ | 0 | 0 | 0 | 0 | 1 | 1 | 0 | 3 | 13 |
| 7 | ಸಕೃನಿ, ಆನೇಕಲ್ | 0 | 1 | 1 | 0 | 1 | 1 | 0 | 3 | 24 |
| 8 | ಸಕೃನಿ, ಬೆಂಗಳೂರು ಉತ್ತರ | 0 | 1 | 0 | 0 | 1 | 1 | 0 | 3 | 16 |
| 9 | ಸಕೃನಿ. ಜಿಕೃತ ಕೇ, ಆನೇಕಲ್ ತಾ | 0 | 0 | 0 | 0 | 1 | 1 | 0 | 3 | 5 |
| 10 | ಸ.ಕೃನಿ ಬೀಜ ಪರಿಕ್ಷಾ ಪ್ರಯೋಗಾಲಯ ಹೆಬ್ಬಾಳ, ಬೆಂಗಳೂರು | 0 | 0 | 0 | 0 | 1 | 0 | 0 | 1 | 2 |
| 11 | ಸ.ಕೃನಿ ರೈಜೂ ಪ್ರ. ಹೆಬ್ಬಾಳ, ಬೆಂಗಳೂರು | 0 | 0 | 0 | 0 | 0 | 0 | 0 | 1 | 2 |
| 12 | ಸ.ಕೃನಿ ಕೀಟನಾಶಕ ಶೇಷಾಂಶ ವಿಶ್ಲೇಷಣಾ ಪ್ರಯೋಗಾಲಯ ಬನಶಂಕರಿ ಬೆಂಗಳೂರು | 0 | 1 | | 0 | | 0 | 0 | 3 | 4 |
| | ಒಟ್ಟು | 1 | 10 | 8 | 9 | 11 | 0 | 31 | | 133 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 541 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಆಟೋ ಚಾಲಕರ ಕಲ್ಯಾಣಕ್ಕಾಗಿ ಯಾವ ಯಾವ ಜಿಲ್ಲೆಯಲ್ಲಿ ಕೈಗಾರಿಕಾ ವಸಾಹತು ನಿರ್ಮಾಣ ಮಾಡಲಾಗಿದೆ? | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಆಟೋ ಚಾಲಕರ ಕಲ್ಯಾಣಕ್ಕಾಗಿ ಯಾವುದೇ ಕೈಗಾರಿಕಾ ವಸಾಹತು ನಿರ್ಮಾಣ ಮಾಡಿರುವುದಿಲ್ಲ. |
| ಆ) | ಅವರುಗಳ ಸರ್ವಾಂಗೀಣ ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು, ಖಾಸಗಿ ವಾಣಿಜ್ಯ ಸಾರಿಗೆ ವಾಹನಗಳಾದ ಆಟೋರಿಕ್ಷಾ, ಟ್ಯಾಕ್ಸಿ, ಸರಕು ಸಾಗಾಣಿಕೆ, ಮ್ಯಾಕ್ಸಿ ಕ್ಯಾಬ್ ಮತ್ತು ಲಾರಿ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರಗಳಿಗೆ ಸಂಬಂಧಿಸಿದಂತೆ, **"ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ"** ಜಾರಿಗೊಳಿಸುತ್ತಿದ್ದು, ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ:-<br><br>ಅ)**ಅಪಘಾತ ಪರಿಹಾರ ಸೌಲಭ್ಯ:** ಈ ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ.5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ಫಲಾನುಭವಿಗೆ ರೂ.2 ಲಕ್ಷದ ವರೆಗೆ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದ ವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ.<br><br>ಆ)**ಶೈಕ್ಷಣಿಕ ಧನ ಸಹಾಯ:** ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ. |

| ಇ) | ರಾಯಚೂರು ಜಿಲ್ಲೆಯ ಮಾನ್ವಿ ವಿಧಾನಸಭಾ ಕ್ಷೇತ್ರದಲ್ಲಿ "ಸಿರವಾರ" ಪಟ್ಟಣ್ಣ ಹೊಸ ತಾಲ್ಲೂಕು ಆಗಿರುವುದರಿಂದ ಇಲ್ಲಿಯ ಆಟೋ ಕಾರ್ಮಿಕರ ಅನುಕೂಲಕ್ಕಾಗಿ " ಆಟೋ ಕೈಗಾರಿಕಾ ವಸಾಹತು ನಿರ್ಮಾಣ ಮಾಡಲು ಸರ್ಕಾರದಿಂದ ಯಾವ ಕ್ರಮಗಳನ್ನು ಕೈಗೊಳ್ಳಲಾಗುವುದು ? | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ "ಸಿರವಾರ" ಪಟ್ಟಣಕ್ಕೆ ಆಟೋ ಕೈಗಾರಿಕಾ ವಸಾಹತು ನಿರ್ಮಾಣದ ಪ್ರಸ್ತಾವನೆ ಇರುವುದಿಲ್ಲ. |
|---|---|---|
| ಈ) | "ಸಿರವಾರ ಪಟ್ಟಣದಲ್ಲಿ" ಆಟೋ ಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ನೀಡಲು ಸರ್ಕಾರ ಕೈಗೊಳ್ಳಲಾಗಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿಯನ್ನು ನೀಡುವುದು) | ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಆಟೋ ಕಾರ್ಮಿಕರು ಸೇರಿದಂತೆ ಯಾವುದೇ ಅಸಂಘಟಿತ ವರ್ಗದ ಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ಒದಗಿಸುತ್ತಿಲ್ಲ. |

**ಕಾಇ 76 ಎಲ್‌ಇಟಿ 2023**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 542 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕೃಷಿ ಕಾರ್ಮಿಕರನ್ನು ಮತ್ತು ಮನೆಕೆಲಸ ಮಾಡುತ್ತಿರುವ ಕಾರ್ಮಿಕರನ್ನು ಇಲಾಖೆಯ ವ್ಯಾಪ್ತಿಯಲ್ಲಿ ತಂದು, ಅವರ ಕಲ್ಯಾಣಕ್ಕಾಗಿ ಸರ್ಕಾರ ಹಾಕಿಕೊಂಡಿರುವ ಯೋಜನೆಗಳೇನು; | ಕರ್ನಾಟಕ ರಾಜ್ಯ ಸರ್ಕಾರವು ಅಸಂಘಟಿತ ವಲಯದ ಇತರೆ ವರ್ಗ ಅಂದರೆ, ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ "ಕೃಷಿ ಕಾರ್ಮಿಕರು ಹಾಗೂ ಮನೆ ಕೆಲಸ ಮಾಡುವ" ವರ್ಗ ಸೇರಿದಂತೆ, ಒಟ್ಟು 43 ವರ್ಗಗಳ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಿದೆ.<br><br>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅಸಂಘಟಿತ ಕಾರ್ಮಿಕರನ್ನು ಈ ಕೆಳಕಂಡ ಯೋಜನೆಗಳಡಿ ನೋಂದಾಯಿಸುತ್ತಿದೆ.<br><br>**(ಅ)'ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ':-** ಈ ಯೋಜನೆಯಡಿ ಪ್ರಸ್ತುತ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಗೃಹ ಕಾರ್ಮಿಕರು, ಟೈಲರ್ಸ್, ಚಿಂದಿ ಆಯುವವರು, ಮೆಕ್ಯಾನಿಕ್ಸ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ ನೋಂದಾಯಿಸಿ ಗುರುತಿನ ಚೀಟಿ ವಿತರಿಸಲಾಗುತ್ತಿದ್ದು, ಯಾವುದೇ ಆರ್ಥಿಕ ಸೌಲಭ್ಯ ನೀಡುತ್ತಿಲ್ಲ.<br><br>(ಆ) ಇ-ಶ್ರಮ್ ಕಾರ್ಯಕ್ರಮ:-<br>ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿ ಪಡಿಸಿದ್ದು, ಯೋಜನೆಯಡಿ 16-59 ವಯೋಮಾನದ ಇ.ಎಸ್.ಐ ಹಾಗೂ ಇ.ಪಿ.ಎಫ್ ಸೌಲಭ್ಯವನ್ನು |

| | | |
|---|---|---|
| | | ಹೊಂದಿರದ ಹಾಗೂ ಆದಾಯ ತೆರಿಗೆ ಪಾವತಿ ಮಾಡದ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಅವರು ಸಾಮಾನ್ಯ ಸೇವಾ ಕೇಂದ್ರಗಳ ಮೂಲಕ ಅಥವಾ ಸ್ವಯಂ ಆಗಿ ಇ-ಶ್ರಮ್ ಪೋರ್ಟಲ್‌ನಲ್ಲಿ (eshram.gov.in) ಉಚಿತವಾಗಿ ನೋಂದಾಯಿಸಬಹುದಾಗಿದ್ದು, ಗುರುತಿನ ಚೀಟಿಯನ್ನು ನೋಂದಾಯಿತ ಸ್ಥಳದಲ್ಲೇ ವಿತರಿಸಲಾಗುತ್ತದೆ.<br><br>ಮುಂದುವರೆದು, ಕೇಂದ್ರ ಸರ್ಕಾರದ ಇ-ಶ್ರಮ್‌ಕಾರ್ಯಕ್ರಮದಡಿ ಕೃಷಿ ಕಾರ್ಮಿಕರು ಹಾಗೂ ಮನೆ ಕೆಲಸ ಮಾಡುವ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಕ್ರಮ ಸಂಖ್ಯೆ 133 ಮತ್ತು 168ರಲ್ಲಿ ಗುರುತಿಸಿದ್ದು, ಕಾರ್ಯಕ್ರಮದಡಿ ಉಚಿತ ನೋಂದಣಿಯಾಗಿ ಸ್ಥಳದಲ್ಲೇ ಗುರುತಿನ ಚೀಟಿ ಪಡೆಯಬಹುದಾಗಿದೆ. |
| ಆ) | ಕೃಷಿ ಹಾಗೂ ಮನೆಕೆಲಸ ಮಾಡುವ ಕಾರ್ಮಿಕರನ್ನು ಕಾಯ್ದೆಯಡಿ ತಂದು ಅವರಿಗೆ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ಕೈಗೊಂಡಿರುವ ಯೋಜನೆಗಳಾವುವು (ಸಂಪೂರ್ಣ ಮಾಹಿತಿ ನೀಡುವುದು) | ಕೃಷಿ ಹಾಗೂ ಮನೆಕೆಲಸ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರಿಗೆ ರಾಜ್ಯ ಸರ್ಕಾರದಿಂದ ಯಾವುದೇ ಸೌಲಭ್ಯಗಳನ್ನು ಒದಗಿಸುವ ಯೋಜನೆಯನ್ನು ಜಾರಿಗೊಳಿಸುತ್ತಿರುವುದಿಲ್ಲ. ಆದರೆ, ಕೇಂದ್ರ ಸರ್ಕಾರವು ಜಾರಿಗೊಳಿಸುತ್ತಿರುವ ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಣಿಯಾದ ಕಾರ್ಮಿಕರಿಗೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾಯೋಜನೆ (PM-SBY) ಹಾಗೂ 'ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ (ಪಿಎಂ-ಎಸ್‌ವೈಎಂ) ಯೋಜನೆ' ಯಡಿ ಈ ಕೆಳಕಂಡ ಸೌಲಭ್ಯಗಳನ್ನು ಪಡೆಯಬಹುದಾಗಿದೆ.<br><br>(1) **<u>ಪ್ರಧಾನ ಮಂತ್ರಿ ಸುರಕ್ಷಾ ಬಿಮಾಯೋಜನೆ (PM-SBY):-</u>**<br>ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಾಯಿತ ಎಲ್ಲಾ ಅಸಂಘಟಿತ ಕಾರ್ಮಿಕರು ಒಂದು ವರ್ಷದ ಅವಧಿಗೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾಯೋಜನೆ (PM-SBY) ಪ್ರಯೋಜನ ಪಡೆಯಬಹುದಾಗಿದ್ದು, ಅಪಘಾತದಿಂದ ಮರಣ ಹೊಂದಿದಲ್ಲಿ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷ ಹಾಗೂ ಭಾಗಶಃ ಅಂಗ ವೈಪಲ್ಯಕ್ಕೆ ರೂ.1 ಲಕ್ಷ ಪರಿಹಾರದ ಲಾಭವನ್ನು ಪಡೆಯಬಹುದಾಗಿದೆ. |

| | | (2) **ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ (ಪಿಎಂ–ಎಸ್‌ವೈಎಂ) ಯೋಜನೆ:–**<br>ಕೇಂದ್ರ ಸರ್ಕಾರವು ಅಸಂಘಟಿತ ಕಾರ್ಮಿಕರಿಗೆ ವೃದ್ಧಾಪ್ಯದಲ್ಲಿ ಆರ್ಥಿಕ ಭದ್ರತೆ ಒದಗಿಸುವ ಉದ್ದೇಶದಿಂದ ಜಾರಿಗೆ ತಂದ ವಂತಿಕೆ ಆಧಾರಿತ 'ಪ್ರಧಾನ ಮಂತ್ರಿ ಶ್ರಮಯೋಗಿ ಮಾನ್‌ಧನ್ (ಪಿಎಂ–ಎಸ್‌ವೈಎಂ) ಯೋಜನೆ'ಯಡಿ 60 ವರ್ಷ ಪೂರೈಸಿದ ನಂತರ ಮಾಸಿಕ ನಿಶ್ಚಿತ ರೂ.3,000/–ಗಳ ಪಿಂಚಣಿ ಸೌಲಭ್ಯ ಒದಗಿಸಲಾಗುತ್ತಿದ್ದು, ಈ ಯೋಜನೆಯಡಿ 18–40 ವಯೋಮಾನದ, ಇ.ಎಸ್.ಐ ಮತ್ತು ಪಿ.ಎಫ್ ಸೌಲಭ್ಯ ಹೊಂದಿರದ ಹಾಗೂ ಆದಾಯತೆರಿಗೆ ಪಾವತಿ ಮಾಡದ ಕೃಷಿ ಕಾರ್ಮಿಕರು ಒಳಗೊಂಡಂತೆ ಎಲ್ಲಾ ವರ್ಗದ ಅಸಂಘಟಿತ ಕಾರ್ಮಿಕರು ನೋಂದಾಯಿಸಿಕೊಂಡು ಮಾಸಿಕ ಪಿಂಚಣಿ ಸೌಲಭ್ಯ ಪಡೆಯಬಹುದಾಗಿದೆ. ಮಾಸಿಕ ವಂತಿಕೆಯ ದರವು ವಂತಿಕೆದಾರರ ವಯೋಮಾನಕ್ಕನುಗುಣವಾಗಿ ರೂ.55/– ರಿಂದ ರೂ.200/–ರವರೆಗೆ ಇರುತ್ತಿದ್ದು, ಕೇಂದ್ರ ಸರ್ಕಾರವು ಸದರಿ ನೋಂದಾಯಿತ ಕಾರ್ಮಿಕರಿಗೆ ಸಮಾನಂತರ ವಂತಿಕೆಯನ್ನು ಪಾವತಿಸುತ್ತದೆ. |
|---|---|---|
| ಇ) | ಈ ಕಾರ್ಮಿಕರನ್ನು ಸಹ ರಾಜ್ಯದಲ್ಲಿರುವ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಂತೆ ಪರಿಗಣಿಸಲು ಸರ್ಕಾರಕ್ಕಿರುವ ತೊಂದರೆಗಳೇನು? ಮಾಹಿತಿ ನೀಡುವುದು) | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಸಂಬಂಧಿಸಿದಂತೆ, ಯೋಜನೆಗಳ ಜಾರಿಗಾಗಿ ನಿಯಮಾನುಸಾರ ಸುಂಕ ಸಂಗ್ರಹಣೆಯ ವ್ಯವಸ್ಥೆಯಿರುತ್ತದೆ. ಆದರೆ, ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗೆ ಯಾವುದೇ ಪ್ರತ್ಯೇಕ ಆದಾಯ ಮೂಲಗಳಿರುವುದಿಲ್ಲ. ಆದ್ದರಿಂದ, ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳು ಸರ್ಕಾರವು ಹಂಚಿಕೆ ಮಾಡುವ ಅನುದಾನದ ಮೇಲೆ ಅವಲಂಬಿತವಾಗಿರುತ್ತದೆ. |

**ಕಾಇ 77 ಎಲ್‌ಇಟಿ 2023**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 543

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ರಾಜಾ ವೆಂಕಟಪ್ಪ ನಾಯಕ್ (ಮಾನ್ವಿ)

ಉತ್ತರಿಸುವ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 15.02.2023

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕಳೆದ ಮೂರು ವರ್ಷಗಳ ಅವಧಿಯಲ್ಲಿ ತೋಟಗಾರಿಕೆ ಇಲಾಖೆಗೆ ಹಂಚಿಕೆಯಾದ ಅನುದಾನವೆಷ್ಟು;</td><td>ಕಳೆದ ಮೂರು ವರ್ಷಗಳ ಅವಧಿಯಲ್ಲಿ ಅಂದರೆ 2019-20, 2020-21 ಮತ್ತು 2021-22ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಗೆ ರಾಜ್ಯದಲ್ಲಿ ಒಟ್ಟು ಬಿಡುಗಡೆಯಾದ ಅನುದಾನ ರೂ.2452.25 ಕೋಟಿಗಳು<br><table><tr><th>ಕ್ರ.ಸ</th><th>ವರ್ಷ</th><th>ಬಿಡುಗಡೆ (ರೂ. ಕೋಟಿಗಳಲ್ಲಿ)</th></tr><tr><td>1</td><td>2019-20</td><td>870.40</td></tr><tr><td>2</td><td>2020-21</td><td>823.83</td></tr><tr><td>3</td><td>2021-22</td><td>745.03</td></tr><tr><td colspan="2">ಒಟ್ಟು</td><td>2452.25</td></tr></table></td></tr>
<tr><td>ಆ)</td><td>ಒದಗಿಸಿರುವ ಅನುದಾನದಲ್ಲಿ ಅತ್ಯಂತ ಹಿಂದುಳಿದ ರಾಯಚೂರು ಜಿಲ್ಲೆಯ ತೋಟಗಾರಿಕೆ ಅಭಿವೃದ್ಧಿಗಾಗಿ ಎಷ್ಟು ಅನುದಾನವನ್ನು ನೀಡಲಾಗಿದೆ;</td><td>ಕಳೆದ ಮೂರು ವರ್ಷಗಳಿಗೆ (2019-20 ರಿಂದ 2021-22) ಒದಗಿಸಿರುವ ಅನುದಾನದಲ್ಲಿ ಅತ್ಯಂತ ಹಿಂದುಳಿದ ರಾಯಚೂರು ಜಿಲ್ಲೆಯ ತೋಟಗಾರಿಕೆ ಅಭಿವೃದ್ಧಿಗಾಗಿ ರೂ.5352.06 ಲಕ್ಷಗಳ ಅನುದಾನ ನೀಡಲಾಗಿದೆ.<br>(ರೂ. ಲಕ್ಷಗಳಲ್ಲಿ)<br><table><tr><th>ವರ್ಷ</th><th>ಬಿಡುಗಡೆಯಾದ ಅನುದಾನ</th></tr><tr><td>2019-20</td><td>1671.15</td></tr><tr><td>2020-21</td><td>2031.22</td></tr><tr><td>2021-22</td><td>1706.69</td></tr><tr><td>ಒಟ್ಟು</td><td>5352.06</td></tr></table></td></tr>
<tr><td>ಇ)</td><td>ಇದರಲ್ಲಿ ಯಾವ ಯಾವ ಉದ್ದೇಶಗಳಿಗಾಗಿ ಈ ಹಣವನ್ನು ಬಳಸಿಕೊಳ್ಳಲಾಗಿದೆ; (ಸಂಪೂರ್ಣ ಮಾಹಿತಿಯನ್ನು ನೀಡುವುದು)</td><td>ಇಲಾಖೆಯ ವಿವಿಧ ಯೋಜನೆಗಳಡಿ ತೋಟಗಾರಿಕೆ ಬೆಳೆಗಳ ಪ್ರದೇಶ ವಿಸ್ತರಣೆ, ತೆಂಗು ಪ್ರದೇಶ ವಿಸ್ತರಣೆ,ಹನಿ ನೀರಾವರಿ ಘಟಕ ಅಳವಡಿಕೆ, ತಾಳೆ ಬೆಳೆ ಪ್ರದೇಶ ವಿಸ್ತರಣೆ, ಸಂರಕ್ಷಿತ ಬೇಸಾಯ, ಕೃಷಿಹೊಂಡ, ಪ್ಯಾಕಹೌಸ್, ಈರುಳ್ಳಿ ಶೇಖರಣ ಘಟಕ, ಯಾಂತ್ರಿಕರಣ, ಔಷಧಿ ಖರೀದಿ, ಜೇನು ಪೆಟ್ಟಿಗೆ</td></tr>
</table>

<table>
<tr><td></td><td></td><td>ಮತ್ತು ಕುಟುಂಬ ಇತ್ಯಾದಿ ಘಟಕಗಳನ್ನು ಅಳವಡಿಸಿಕೊಂಡ ರೈತರಿಗೆ ಸಹಾಯಧನ ನೀಡಲಾಗುತ್ತಿದ್ದು ಹಾಗೂ ತೋಟಗಾರಿಕೆ ಕ್ಷೇತ್ರಗಳ ಅಭಿವೃದ್ಧಿ, ಯೋಜನೆಗಳ ಪ್ರಚಾರಕ್ಕಾಗಿ ಕರಪತ್ರ, ಬ್ರೋಚರ್ ತಯಾರಿಕೆ ಹಾಗೂ ರೈತರಿಗೆ ತರಬೇತಿ ನೀಡುವ ಉದ್ದೇಶಕ್ಕಾಗಿ ಅನುದಾನವನ್ನು ಬಳಸಿಕೊಳ್ಳಲಾಗಿದೆ.</td></tr>
<tr><td>ಈ)</td><td>ಮಾನ್ವಿ ವಿಧಾನಸಭಾ ಕ್ಷೇತ್ರದಲ್ಲಿ ಎರಡು ತಾಲ್ಲೂಕುಗಳಿದ್ದು, (ಮಾನ್ವಿ ಮತ್ತು ಸಿರವಾರ) ಎಷ್ಟು ತೋಟಗಾರಿಕೆ ಪ್ರದೇಶಗಳನ್ನು ಅಭಿವೃದ್ಧಿಪಡಿಸಲಾಗಿದೆ;</td><td>ಮಾನ್ವಿ ವಿಧಾನಸಭಾ ಕ್ಷೇತ್ರದ ಮಾನ್ವಿ ತಾಲ್ಲೂಕಿನಲ್ಲಿ 145.11 ಹೆಕ್ಟೇರ್ ಮತ್ತು ಸಿರವಾರ ತಾಲ್ಲೂಕಿನಲ್ಲಿ 179.45 ಹೆಕ್ಟೇರ್ ಪ್ರದೇಶ, ಒಟ್ಟಾರೆ 324.56 ಹೆಕ್ಟೇರ್ ಗಳ ತೋಟಗಾರಿಕೆ ಪ್ರದೇಶಗಳನ್ನು ಅಭಿವೃದ್ಧಿಪಡಿಸಲಾಗಿದೆ.
<table>
<tr><th>ಕ್ರ.ಸ</th><th>ವರ್ಷ</th><th>ಮಾನ್ವಿ</th><th>ಸಿರವಾರ</th><th>ಒಟ್ಟು</th></tr>
<tr><td>1</td><td>2019-20</td><td>44.40</td><td>32.94</td><td>77.34</td></tr>
<tr><td>2</td><td>2020-21</td><td>75.14</td><td>111.45</td><td>186.59</td></tr>
<tr><td>3</td><td>2021-22</td><td>25.57</td><td>35.06</td><td>60.63</td></tr>
<tr><td colspan="2">ಒಟ್ಟು</td><td>145.11</td><td>179.45</td><td>324.56</td></tr>
</table></td></tr>
<tr><td>ಉ)</td><td>ಇಲಾಖೆಯ ಪ್ರತಿಯೊಂದು ಯೋಜನೆಗಳಿಗೆ ಎಷ್ಟು ಅನುದಾನವನ್ನು ಬಿಡುಗಡೆ ಮಾಡಲಾಗಿದೆ? (ಸಂಪೂರ್ಣ ಮಾಹಿತಿಯನ್ನು ನೀಡುವುದು)</td><td>ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ಇಲಾಖೆಯ ಪ್ರತಿಯೊಂದು ಯೋಜನೆಗಳಿಗೆ ಬಿಡುಗಡೆ ಮಾಡಲಾದ ಅನುದಾನದ ಸಂಪೂರ್ಣ ವಿವರವನ್ನು ಅನುಬಂಧದಲ್ಲಿ ಒದಗಿಸಲಾಗಿದೆ.</td></tr>
</table>

No. HORTI 56 HGM 2023

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ,
ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಸಚಿವರು

# ಅನುಬಂಧ

## ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ತೋಟಗಾರಿಕೆ ಕ್ಷೇತ್ರ ಅಭಿವೃದ್ಧಿಗಾಗಿ ತೋಟಗಾರಿಕೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಬಿಡುಗಡೆಯಾದ ಅನುದಾನದ ವಿವರ

(ಅನುದಾನ ರೂ. ಕೋಟಿಗಳಲ್ಲಿ)

| ಕ್ರ.ಸಂ | ಯೋಜನೆ | 2019-20 | 2020-21 | 2021-22 | ಒಟ್ಟಾರೆ |
|---|---|---|---|---|---|
| I | ಕೇಂದ್ರ ಪುರಸ್ಕೃತ ಯೋಜನೆಗಳು | | | | |
| 1 | ಪಿಎಂಕೆಎಸ್ ವೈ- ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ | 338.62 | 386.5248 | 487.46 | 1212.6018 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 183.5124 | 205.0332 | 100.44 | 488.9856 |
| 3 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ | 15.9635 | 21.8315 | 12.31 | 50.105 |
| 4 | ರಾಷ್ಟ್ರೀಯ ಖಾದ್ಯ ತೈಲ ಅಭಿಯಾನ - ಎಣ್ಣೆ ತಾಳೆ | 10.53 | 8.33 | 4.95 | 23.8142 |
| 5 | ಪರಂಪರಗತ ಕೃಷಿ ವಿಕಾಸ ಯೋಜನೆ | 0.00 | 2.65 | 0.00 | 2.65 |
| | ಒಟ್ಟು(I) | 548.63 | 624.37 | 605.16 | 1778.16 |
| II | ರಾಜ್ಯ ವಲಯ ಯೋಜನೆಗಳು | | | | |
| 1 | ಸಮಗ್ರ ತೋಟಗಾರಿಕಾ ಅಭಿವೃದ್ಧಿ ಯೋಜನೆ | 129.70 | 126.45 | 75.22 | 331.37 |
| 2 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ, | 3.29 | 1.30 | 0.73 | 5.32 |
| 4 | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳ ಸಹಾಯಧನ | 10.00 | 8.00 | 1.30 | 19.30 |
| 6 | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆ ಅಭಿವೃದ್ಧಿ ಮತ್ತು ನಿರ್ವಹಣೆ | 13.00 | 7.50 | 7.50 | 28.00 |
| 7 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 7.11 | 7.85 | 7.47 | 22.43 |
| 8 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 12.38 | 7.93 | 5.14 | 25.45 |
| 9 | ತೋಟಗಾರಿಕೆ ಕಟ್ಟಡಗಳು | 10.00 | 2.00 | 2.00 | 14.00 |
| 10 | ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ-II (ಸುಜಲಾ-II) ಇಎಪಿ | 13.07 | 0.00 | 0.00 | 13.07 |
| 11 | ಕೃಷಿ ಭಾಗ್ಯ (ತೋಟಗಾರಿಕೆ) | 60.00 | 0.00 | 0.00 | 60.00 |
| 12 | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು | 22.00 | 15.00 | 15.48 | 52.48 |
| 13 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ | 7.00 | 5.00 | 2.00 | 14.00 |
| 16 | micro irrigation | 1.53 | 0.00 | 0.38 | 1.91 |
| 17 | Horticulture Infrastructure development NABARD | 0.00 | 4.06 | 9.58 | 13.64 |
| 18 | Infrastructure for UHS Bagalkot. RIDF-XXI | 1.66 | 0.76 | 0.22 | 2.64 |

ಅನುಬಂಧ

## ರಾಜ್ಯದಲ್ಲಿ ಕಳೆದ 3 ವರ್ಷಗಳಲ್ಲಿ ತೋಟಗಾರಿಕೆ ಕ್ಷೇತ್ರ ಅಭಿವೃದ್ಧಿಗಾಗಿ ತೋಟಗಾರಿಕೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಬಿಡುಗಡೆಯಾದ ಅನುದಾನದ ವಿವರ

(ಅನುದಾನ ರೂ. ಕೋಟಿಗಳಲ್ಲಿ)

| ಕ್ರ.ಸಂ | ಯೋಜನೆ | 2019-20 | 2020-21 | 2021-22 | ಒಟ್ಟಾರೆ |
|---|---|---|---|---|---|
| | ಒಟ್ಟು(II) | 290.74 | 185.85 | 127.02 | 603.61 |
| III | ಜಿಲ್ಲಾ ವಲಯ ಯೋಜನೆಗಳು | | | | |
| 1 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಭಿಯಾನ ಯೋಜನೆ | 0.55 | 0.00 | 0.00 | 0.55 |
| 2 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | 10.95 | 10.95 | 0.00 | 21.90 |
| 3 | ತೋಟಗಾರಿಕೆ ಕಟ್ಟಡಗಳು | 6.44 | 4.94 | 5.04 | 16.42 |
| 4 | ಕೃಷಿ ಕ್ಷೇತ್ರಗಳ ನಿರ್ವಹಣೆ | 3.12 | 3.12 | 3.12 | 9.36 |
| 5 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | 1.64 | 1.65 | 0.00 | 3.29 |
| 6 | ಪ್ರಚಾರ ಮತ್ತು ಸಾಹಿತ್ಯ, | 2.21 | 2.21 | 2.21 | 6.64 |
| 7 | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ | 0.68 | 0.70 | 0.00 | 1.38 |
| 8 | ರೈತರಿಗೆ ಸಹಾಯ | 2.47 | 0.00 | 0.01 | 2.48 |
| 9 | ಜೇನು ಸಾಕಾಣಿಕೆ | 2.37 | 2.49 | 2.47 | 7.32 |
| 10 | ರೈತರಿಗೆ ತರಬೇತಿ | 0.59 | 0.54 | 0.00 | 1.14 |
| | ಒಟ್ಟು(III) | 31.02 | 26.61 | 12.85 | 70.48 |
| | ಒಟ್ಟಾರೆ(I+II+III) | 870.40 | 836.83 | 745.03 | 2452.25 |

ತೋಟಗಾರಿಕೆ ಜಂಟಿ ನಿರ್ದೇಶಕರು
ಯೋಜನೆ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 544

ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)

ಉತ್ತರಿಸುವ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸುವ ದಿನಾಂಕ 15-02-2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ತೋಟಗಾರಿಕೆ ಇಲಾಖೆಗೆ ವಾರ್ಷಿಕವಾರು ಹಂಚಿಕೆಯಾದ ಅನುದಾನ ಎಷ್ಟು; ಬಿಡುಗಡೆಯಾದ ಅನುದಾನ ಎಷ್ಟು; ಖರ್ಚಾಗದೇ ಉಳಿದಿರುವ ಅನುದಾನದಲ್ಲಿ ವಾಪಸ್ಸು ಮಾಡಿರುವ ಅನುದಾನ ಎಷ್ಟು; ಯಾವ ಯಾವ ಯೋಜನೆಗಳಿಗೆ ಎಷ್ಟು ಅನುದಾನವನ್ನು ಖರ್ಚು ಮಾಡಲಾಗಿದೆ; (ವಿವರ ನೀಡುವುದು) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ಅಂದರೆ 2019-20, 2020-21 ಮತ್ತು 2021-22ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಗೆ ಒಟ್ಟು ರೂ.3733.86 ಕೋಟಿಗಳ ಅನುದಾನ ಹಂಚಿಕೆಯಾಗಿದೆ, ರೂ.3442.29 ಕೋಟಿಗಳ ಅನುದಾನ ಬಿಡುಗಡೆಯಾಗಿದೆ ಹಾಗೂ ರೂ. 3154.56 ಕೋಟಿಗಳ ಅನುದಾನ ವೆಚ್ಚಭರಿಸಲಾಗಿರುತ್ತದೆ. ಮತ್ತು ಖರ್ಚಾಗದೇ ಉಳಿದಿರುವ ರೂ.32.15 ಕೋಟಿಗಳ ಅನುದಾನವನ್ನು ವಾಪಸ್ಸು ಮಾಡಲಾಗಿದೆ.<br>ವಿವರ ಈ ಕೆಳಗಿನಂತಿದೆ.<br>(ರೂ. ಕೋಟಿಗಳಲ್ಲಿ) |

| ವರ್ಷ | ಹಂಚಿಕೆಯಾದ ಅನುದಾನ | ಬಿಡುಗಡೆ | ವೆಚ್ಚ | ಅಧ್ಯರ್ಪಣೆ |
|---|---|---|---|---|
| 2019-20 | 1239.08 | 1182.08 | 1137.08 | 12.22 |
| 2020-21 | 1343.66 | 1168.30 | 1149.34 | 12.19 |
| 2021-22 | 1151.12 | 1091.91 | 868.14 | 7.74 |
| ಒಟ್ಟು | 3733.86 | 3442.29 | 3154.56 | 32.15 |

ಯೋಜನಾವಾರು ವೆಚ್ಚದ ವಿವರವನ್ನು ಅನುಬಂಧ-1ರಲ್ಲಿ ಲಗತ್ತಿಸಿದೆ.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಕಳೆದ ಮೂರು ವರ್ಷಗಳಲ್ಲಿ ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರದಲ್ಲಿ ತೋಟಗಾರಿಕೆ ರೈತರಿಗೆ ವಿವಿಧ ಯೋಜನೆಗಳಲ್ಲಿ ಎಷ್ಟು ಜನರಿಗೆ ಅನುದಾನವನ್ನು ಮಂಜೂರು ಮಾಡಲಾಗಿದೆ; (ವಿವರ ನೀಡುವುದು) | ಕಳೆದ ಮೂರು ವರ್ಷಗಳಿಗೆ (2019-20 ರಿಂದ 2021-22) ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರದಲ್ಲಿ ವಿವಿಧ ಯೋಜನೆಗಳಲ್ಲಿ ಒಟ್ಟು 2995 ಫಲಾನುಭವಿಗಳಿಗೆ ಅನುದಾನವನ್ನು ಮಂಜೂರು ಮಾಡಲಾಗಿದೆ |

| | | ಫಲಾನುಭವಿಗಳ ಸಂಖ್ಯೆ |
|---|---|---|
| | | <table><tr><th>ವರ್ಷ</th><th>ಫಲಾನುಭವಿಗಳ ಸಂಖ್ಯೆ</th></tr><tr><td>2019-20</td><td>762</td></tr><tr><td>2020-21</td><td>965</td></tr><tr><td>2021-22</td><td>1268</td></tr><tr><td>ಒಟ್ಟು</td><td>2995</td></tr></table> ಸಂಪೂರ್ಣ ವಿವರವನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ. |
| ಇ) | ಹಂಚಿಕೆ ಮಾಡಿರುವ ಅನುದಾನವೆಷ್ಟು; ಬಳಸಿದ ಅನುದಾನ ಎಷ್ಟು; ಖರ್ಚಾಗದೆ ವಾಪಸ್ಸು ಮಾಡಲಾದ ಅನುದಾನ ಎಷ್ಟು; ವಾಪಸ್ಸು ಮಾಡಲು ಕಾರಣವೇನು? (ವಿವರ ನೀಡುವುದು) | ಕಳೆದ ಮೂರು ವರ್ಷಗಳಿಗೆ (2019-20 ರಿಂದ 2021-22) ರೂ.611.80 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ, ರೂ.611.32 ಲಕ್ಷಗಳ ಅನುದಾನವನ್ನು ವೆಚ್ಚ ಮಾಡಲಾಗಿದೆ ಮತ್ತು ರೂ.0.47 ಲಕ್ಷಗಳ ಅನುದಾನವು ಖರ್ಚಾಗದೆ ವಾಪಸ್ಸು ಮಾಡಲಾಗಿದೆ.<br>ವಿವರ ಈ ಕೆಳಗಿಂತಿದೆ.<br>(ರೂ. ಲಕ್ಷಗಳಲ್ಲಿ)<table><tr><th>ವರ್ಷ</th><th>ಹಂಚಿಕೆಯಾದ ಅನುದಾನ</th><th>ಬಿಡುಗಡೆ</th><th>ವೆಚ್ಚ</th><th>ಆಧ್ಯರ್ಪಣೆ</th></tr><tr><td>2019-20</td><td>143.65</td><td>143.65</td><td>143.38</td><td>0.27</td></tr><tr><td>2020-21</td><td>280.67</td><td>280.66</td><td>280.47</td><td>0.19</td></tr><tr><td>2021-22</td><td>187.48</td><td>187.48</td><td>187.47</td><td>0.01</td></tr><tr><td>ಒಟ್ಟು</td><td>611.80</td><td>611.80</td><td>611.32</td><td>0.47</td></tr></table>ಸಂಪೂರ್ಣ ವಿವರವನ್ನು ಅನುಬಂಧ-2ರಲ್ಲಿ ಲಗತ್ತಿಸಿದೆ. |

No. HORTI 57 HGM 2023

(ಮುನಿರತ್ನ)
ತೋಟಗಾರಿಕೆ ಹಾಗೂ ಯೋಜನೆ,
ಕಾರ್ಯಕ್ರಮ ಸಂಯೋಜನೆ ಮತ್ತು
ಸಾಂಖ್ಯಿಕ ಸಚಿವರು

LAQ no: 544

# ಅನುಬಂಧ-1

## ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆ.

| ಕ್ರ. ಸಂ | ಯೋಜನೆಗಳು | ಬಂಗಾರಪೇಟೆ | ಕೆ.ಜಿ.ಎಫ್ | ಕೋಲಾರ | ಮಾಲೂರು | ಮುಳಬಾಗಿಲು | ಶ್ರೀನಿವಾಸಪುರ | ಒಟ್ಟಾರೆ |
|---|---|---|---|---|---|---|---|---|
| I | ಕೇಂದ್ರ ಪುರಸ್ಕೃತ ಯೋಜನೆಗಳು | | | | | | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ), (2401-00-108-2-30) | 107 | 54 | 12 | 37 | 26 | 9 | 245 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್, (2401-00-119-4-06) | 40 | 42 | 104 | 47 | 79 | 308 | 620 |
| 3 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (2401-00-800-1-57) | 65 | 42 | 46 | 18 | 43 | 7 | 221 |
| 4 | ಪರಂಪರಾಗತ ಕೃಷಿ ವಿಕಾಸ ಯೋಜನೆ | 0 | 0 | 0 | 89 | 0 | 0 | 89 |
| 5 | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM) (2401-00-113-0-02) | 0 | 2 | 4 | 1 | 6 | 0 | 13 |
| | ಒಟ್ಟು | 212 | 140 | 166 | 192 | 154 | 324 | 1188 |
| II | ರಾಜ್ಯ ವಲಯ ಯೋಜನೆಗಳು | | | | | | | |
| 1 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ (2401-00-119-5-02) | 68 | 36 | 112 | 50 | 35 | 134 | 435 |
| 2 | ಮಧುವನ ಮತ್ತು ಜೇನು ಸಾಕಾಣಿ ಅಭಿವೃದ್ಧಿ, (2851-00-200-0-01) | 3 | 3 | 9 | 6 | 5 | 5 | 31 |
| 4 | ಸಮಗ್ರ ತೋಟಗಾರಿಕಾ ಅಭಿವೃದ್ಧಿ, (2401-00-111-0-08) | 2 | 6 | 10 | 1 | 10 | 10 | 39 |
| | ಒಟ್ಟು | 73 | 45 | 131 | 57 | 50 | 149 | 505 |
| III | ಜಿಲ್ಲಾ ವಲಯ ಯೋಜನೆಗಳು | | | | | | | |
| 1 | ಪ್ರಚಾರ ಮತ್ತು ಸಾಹಿತ್ಯ | 25 | 0 | 85 | 20 | 151 | 85 | 366 |
| | ಒಟ್ಟು | 25 | 0 | 85 | 20 | 151 | 85 | 366 |
| | ಒಟ್ಟಾರೆ(I+II+III) | 310 | 185 | 382 | 269 | 355 | 558 | 2059 |

(ಜಿಲ್ಲಾ ಪಂಚಾಯತ್), ಕೋಲಾರ.

IAO No: 544

# ಅನುಬಂಧ-2

## ಕೋಲಾರ ಜಿಲ್ಲೆಯಲ್ಲಿ ತೋಟಗಾರಿಕೆ ಇಲಾಖೆಯಿಂದ ವಿವಿಧ ಯೋಜನೆಗಳಡಿ ಸೌಲಭ್ಯ ಪಡೆದ ಫಲಾನುಭವಿಗಳ ಸಂಖ್ಯೆಯ ವಿವರ.

| ಕ್ರ. ಸಂ | ಯೋಜನೆಗಳು | ಬಂಗಾರಪೇಟೆ | ಕೆ.ಜಿ.ಎಫ್ | ಕೋಲಾರ | ಮಾಲೂರು | ಮುಳಬಾಗಿಲು | ಶ್ರೀನಿವಾಸಪುರ | ಒಟ್ಟಾರೆ |
|---|---|---|---|---|---|---|---|---|
| I | ಕೇಂದ್ರ ಪುರಸ್ಕೃತ ಯೋಜನೆಗಳು | | | | | | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ), (2401-00-108-2-30) | 107 | 54 | 12 | 37 | 26 | 9 | 245 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್, (2401-00-119-4-06) | 40 | 42 | 104 | 47 | 79 | 308 | 620 |
| 3 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (2401-00-800-1-57) | 65 | 42 | 46 | 18 | 43 | 7 | 221 |
| 4 | ಪರಂಪಾರಾಗತ ಕೃಷಿ ವಿಕಾಸ ಯೋಜನೆ | 0 | 0 | 0 | 89 | 0 | 0 | 89 |
| 5 | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM) (2401-00-113-0-02) | 0 | 2 | 4 | 1 | 6 | 0 | 13 |
| | ಒಟ್ಟು | 212 | 140 | 166 | 192 | 154 | 324 | 1188 |
| II | ರಾಜ್ಯ ವಲಯ ಯೋಜನೆಗಳು | | | | | | | |
| 1 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ (2401-00-119-5-02) | 68 | 36 | 112 | 50 | 35 | 134 | 435 |
| 2 | ಮಧುವನ ಮತ್ತು ಜೇನು ಸಾಕಾಣೆ ಅಭಿವೃದ್ಧಿ, (2851-00-200-0-01) | 3 | 3 | 9 | 6 | 5 | 5 | 31 |
| 4 | ಸಮಗ್ರ ತೋಟಗಾರಿಕಾ ಅಭಿವೃದ್ಧಿ, (2401-00-111-0-08) | 2 | 6 | 10 | 1 | 10 | 10 | 39 |
| | ಒಟ್ಟು | 73 | 45 | 131 | 57 | 50 | 149 | 505 |
| III | ಜಿಲ್ಲಾ ವಲಯ ಯೋಜನೆಗಳು | | | | | | | |
| 1 | ಪ್ರಚಾರ ಮತ್ತು ಸಾಹಿತ್ಯ | 25 | 0 | 85 | 20 | 151 | 85 | 366 |
| | ಒಟ್ಟು | 25 | 0 | 85 | 20 | 151 | 85 | 366 |
| | ಒಟ್ಟಾರೆ(I+II+III) | 310 | 185 | 382 | 269 | 355 | 558 | 2059 |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 545 (ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ವರ್ಗಾಯಿಸಲಾದ ಪ್ರಶ್ನೆ) |
| ಮಾನ್ಯ ವಿಧಾನಸಭೆ ಸದಸ್ಯರ ಹೆಸರು | : | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸುವ ದಿನಾಂಕ | : | 15/02/2023 |
| ಉತ್ತರಿಸುವ ಸಚಿವರು | : | ಮಾನ್ಯ ಸಚಿವರು ಲೋಕೋಪಯೋಗಿ ಇಲಾಖೆ. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರೇಸ್ ಕೋರ್ಸ್ ರಸ್ತೆಯಲ್ಲಿರುವ ಬೆಂಗಳೂರು ಟರ್ಫ್ ಕ್ಲಬ್ ಜಾಗದ ಒಟ್ಟು ವಿಸ್ತರಣೆ ಎಷ್ಟು; ಹಾಗೂ ಇದರ ಮೂಲ ಮಾಲೀಕತ್ವ ಯಾರದ್ದು; | ರೇಸ್‌ಕೋರ್ಸ್ ರಸ್ತೆಯಲ್ಲಿರುವ ಬೆಂಗಳೂರು ಟರ್ಫ್ ಕ್ಲಬ್‌ದ ಒಟ್ಟು ವಿಸ್ತೀರ್ಣ 73 ಎಕರೆ 34.99 ಗುಂಟೆಗಳಾಗಿರುತ್ತದೆ. ಸದರಿ ಜಾಗದ ಮೂಲ/ಮಾಲಿಕತ್ವವು ಲೋಕೋಪಯೋಗಿ ಇಲಾಖೆಯದ್ದಾಗಿರುತ್ತದೆ. |
| ಆ) | ಸದರಿ ಜಾಗವು ಸರ್ಕಾರದ್ದು ಆಗಿದ್ದಲ್ಲಿ, ಬೆಂಗಳೂರು ಟರ್ಫ್ ಕ್ಲಬ್ ನಿಯಮಿತ ಸಂಸ್ಥೆಗೆ ಎಷ್ಟು ವರ್ಷಕ್ಕೆ ಲೀಸ್ ಅಥವಾ ಬಾಡಿಗೆ ಆಧಾರದ ಮೇಲೆ ನೀಡಿದೆ; ಬಾಡಿಗೆ ಅಥವಾ ಲೀಸ್ ಯಾವ ಆಧಾರದ ಮೇಲೆ ವಸೂಲಿ ಮಾಡಲಾಗುವುದು; (ವಿವರ ನೀಡುವುದು) | ಬೆಂಗಳೂರು ಟರ್ಫ್ ಕ್ಲಬ್ ನಿಯಮಿತ ಸಂಸ್ಥೆಗೆ ದಿನಾಂಕ 01.01.1981 ರಿಂದ 30 ವರ್ಷಗಳ ಅವಧಿಗೆ ವಾರ್ಷಿಕ ರೂ.5.00 ಲಕ್ಷಗಳ ಗುತ್ತಿಗೆ ಮೊತ್ತಕ್ಕೆ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಪರಿಷ್ಕರಿಸಿ, ದಿನಾಂಕ:21.12.1983 ರಲ್ಲಿ ಲೀಸ್ ಆಧಾರದ ಮೇಲೆ ನೀಡಿ ಕರಾರು ಒಪ್ಪಂದ ಮಾಡಿಕೊಳ್ಳಲಾಗಿರುತ್ತದೆ.<br><br>ಸರ್ಕಾರದ ಪತ್ರ ಸಂಖ್ಯೆ: ಲೋಇ 86 ಎಂಎಂಡಿ 1988, ದಿನಾಂಕ:11.02.1989 ರಲ್ಲಿ ಹಾಗೂ ಸರ್ಕಾರದ ಆದೇಶದ ಸಂಖ್ಯೆ: ಲೋಇ 86 ಬಿಎಂಎಸ್ 98 ದಿನಾಂಕ: 05.09.2000 ರಲ್ಲಿ ಬಾಡಿಗೆಯನ್ನು ಪರಿಷ್ಕರಿಸಲಾಗಿದ್ದು, ಅದರನ್ವಯ ದಿನಾಂಕ: 01.01.1989ರಿಂದ ಜಾರಿಗೆ ಬರುವಂತೆ 31.12.1999 ರವರೆಗೆ ವಾರ್ಷಿಕ ರೂ.10.00 ಲಕ್ಷಗಳಿಗೆ ಹಾಗೂ ದಿನಾಂಕ: 01.01.2000 ರಿಂದ 31.12.2009ರ ವರೆಗೆ ವಾರ್ಷಿಕ ಶೇಕಡ 10 ಹೆಚ್ಚಳ ದರದಲ್ಲಿ ಬಾಡಿಗೆಯನ್ನು ನಿಗಧಿಪಡಿಸಲಾಗಿರುತ್ತದೆ.<br><br>ಅದರಂತೆ 31.12.2009 ರ ಅಂತ್ಯಕ್ಕೆ ಬೆಂಗಳೂರು ಟರ್ಫ್ ಕ್ಲಬ್‌ರವರು ಪಾವತಿಸುತ್ತಿದ್ದ ಬಾಡಿಗೆ ಮೊತ್ತ ವಾರ್ಷಿಕವಾಗಿ ರೂ.25.94 ಲಕ್ಷಗಳಾಗಿರುತ್ತದೆ.<br><br>ದಿನಾಂಕ:31.12.2009ರಂದು ಗುತ್ತಿಗೆ ಅವಧಿ ಕೊನೆಗೊಳ್ಳುತ್ತಿದ್ದದರಿಂದ, ಆ ದಿನಾಂಕದಿಂದಲೇ ಜಾರಿಗೆ ಬರುವಂತೆ ಗುತ್ತಿಗೆ ಅವಧಿಯನ್ನು ರದ್ದುಗೊಳಿಸಿ ಹಾಗೂ ಗುತ್ತಿಗೆಗೆ ನೀಡಲಾದ ಪೂರ್ಣ ಜಮೀನನ್ನು ಇಲಾಖೆಯ ವಶಕ್ಕೆ ಪಡೆಯಲು ಸರ್ಕಾರದ ಆದೇಶ ಸಂಖ್ಯೆ: ಲೋಇ 211 ಬಿಎಂಎಸ್ 2005, ದಿನಾಂಕ:25.09.2008ರಲ್ಲಿ ಆದೇಶಿಸಲಾಗಿರುತ್ತದೆ. |
| ಇ) | ಇದುವರೆವಿಗೂ ಈ ಸಂಸ್ಥೆಯಿಂದ ಬಾಡಿಗೆ ಅಥವಾ ಲೀಸ್ ಬಾಕಿ ಹಣವನ್ನು ಪೂರ್ಣ ವಸೂಲಿ ಮಾಡಲಾಗಿದೆಯೇ; (ವಿವರ ನೀಡುವುದು) | |

| | | |
|---|---|---|
| | | ಬೆಂಗಳೂರು ಟರ್ಫ್ ಕ್ಲಬ್‌ರವರು ಜಮೀನನ್ನು ಹಸ್ತಾಂತರಿಸದೆ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಎಸ್.ಎಲ್.ಪಿ. ಸಂಖ್ಯೆ: 21157/2010 ರನ್ನು ದಾಖಲಿಸಿರುತ್ತಾರೆ. ಮಾನ್ಯ ಸರ್ವೋಚ್ಚ ನ್ಯಾಯಾಲಯವು ದಿನಾಂಕ:07.09.2010ರ ತನ್ನ ಮದ್ಯಂತರ ಆದೇಶದಲ್ಲಿ "ಯಥಾಸ್ಥಿತಿ ಕಾಪಾಡಲು" ಸೂಚಿಸಿರುತ್ತದೆ.<br>ಈ ಹಿನ್ನೆಲೆಯಲ್ಲಿ ಬೆಂಗಳೂರು ಟರ್ಫ್ ಕ್ಲಬ್ ಸಂಸ್ಥೆಯವರು 2009ರಲ್ಲಿ ಅಂತಿಮವಾಗಿ ಪಾವತಿಸುತ್ತಿದ್ದ ರೂ.25.94 ಲಕ್ಷ ಮೊತ್ತವನ್ನೇ ಮುಂದುವರೆಸಿಕೊಂಡು ಪ್ರತೀ ವರ್ಷವೂ ಪಾವತಿ ಮಾಡುತ್ತಿದ್ದು, ದಿನಾಂಕ:01.01.2010 ರಿಂದ ಗುತ್ತಿಗೆಗೆ ನೀಡಲಾದ ಜಮೀನಿನ ಬಾಡಿಗೆ ಪರಿಷ್ಕರಿಸಲಾಗಿರುವುದಿಲ್ಲ. ಮೇಲಿನ ಬಾಡಿಗೆ ದರಗಳಂತೆ ಬೆಂಗಳೂರು ಟರ್ಫ್ ಕ್ಲಬ್ ಸಂಸ್ಥೆಯಿಂದ 1981 ರಿಂದ 2023 ರವರೆಗೆ ರೂ.696.93 ಲಕ್ಷಗಳನ್ನು ಪಾವತಿಸಿಕೊಳ್ಳಲಾಗಿರುತ್ತದೆ. |
| ಈ) | ಸದರಿ ಜಾಗ ಸರ್ಕಾರದ್ದು ಆಗಿದ್ದಲ್ಲಿ ಅಥವಾ ಖಾಸಗಿ ಮಾಲೀಕತ್ವ ಹೊಂದಿದ್ದರೂ ಸಹ ಈ ಟರ್ಫ್ ಕ್ಲಬ್‌ನಲ್ಲಿ ನಡೆಯುವ ಆಟವನ್ನು ಬೆಂಗಳೂರಿನಿಂದ ಹೊರಗೆ ನಡೆಸಲು ಸರ್ಕಾರಕ್ಕಿರುವ ತೊಂದರೆಯೇನು; | ಮಾನ್ಯ ಸರ್ವೋಚ್ಚ ನ್ಯಾಯಾಲಯವು ಯಥಾಸ್ಥಿತಿ ಕಾಪಾಡುವಂತೆ ತಿಳಿಸಿರುವುದರಿಂದ, ನ್ಯಾಯಾಲಯದ ಅಂತಿಮ ತೀರ್ಪನ್ನು ಕಾಯಲಾಗುತ್ತಿದೆ. |
| ಉ) | ಈ ಕ್ಲಬ್ ನಲ್ಲಿ ಆಟವನ್ನು ಬೆಂಗಳೂರಿನಿಂದ ಹೊರಗಡೆ ನಡೆಸಿದ್ದಲ್ಲಿ ಈ ರಸ್ತೆಯಲ್ಲಿ ಸಂಪೂರ್ಣ ಟ್ರ್ಯಾಫಿಕ್ ತೊಂದರೆ ಕಡಿಮೆಯಾಗುವುದು ಹಾಗೂ ಸಮಾಜದ ಮೇಲೆ ಒಳ್ಳೆಯ ಪರಿಣಾಮ ಉಂಟಾಗುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಊ) | ನಗರದ ಮಧ್ಯಭಾಗದಲ್ಲಿರುವ ಈ ಜಾಗವನ್ನು ಒಳ್ಳೆಯ ಸಾರ್ವಜನಿಕ ಉದ್ದೇಶಕ್ಕೆ ಬಳಸಲು ಸರ್ಕಾರಕ್ಕಿರುವ ತೊಂದರೆಯೇನು? | |

(ಸಂಖ್ಯೆ: ಲೋಇ 04 ಬಿಎಲ್ ಕ್ಯೂ 2023)

**(ಸಿ.ಸಿ ಪಾಟೀಲ)**
ಮಾನ್ಯ ಲೋಕೋಪಯೋಗಿ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 546 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಮಹದೇವ.ಕೆ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸಮಾಜ ಕಲ್ಯಾಣ ಇಲಾಖೆಗೆ ಮಾನ್ಯ ಮುಖ್ಯ ಮಂತ್ರಿಗಳ ವಿಶೇಷ ಅನುದಾನವನ್ನು ಎಷ್ಟು ಮತ ಕ್ಷೇತ್ರಗಳಿಗೆ ಹಂಚಿಕೆ ಮಾಡಲಾಗಿದೆ: ಈ ಕುರಿತು ಯಾವಾಗ ಮುಖ್ಯಮಂತ್ರಿಯವರ ಆದೇಶವಾಗಿದೆ; (ಆದೇಶದೊಂದಿಗೆ ವಿವರ ನೀಡುವುದು) | 2022-23ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ಅನುಷ್ಠಾನ ಮಾಡುತ್ತಿರುವ ಪ್ರಗತಿ ಕಾಲೋನಿ ಯೋಜನೆಯಡಿ ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಅನುದಾನದಡಿ ಒಟ್ಟು ರೂ.98.25 ಕೋಟಿಗಳಿಗೆ ಮಂಜೂರಾತಿ ನೀಡಲಾಗಿದ್ದು, ವಿವರಗಳನ್ನು ಅನುಬಂಧದಲ್ಲಿ ನೀಡಿದೆ. |
| ಆ) | ಸಮಾಜ ಕಲ್ಯಾಣ ಇಲಾಖೆಗೆ ನೀಡಿರುವ ಅನುದಾನವನ್ನು ಮಂಜೂರಾತಿ ಮಾಡಿ ಸರ್ಕಾರಿ ಆದೇಶವಾಗಿದ್ದರೂ ಸಹಾ ಜಿಲ್ಲಾಧಿಕಾರಿಗಳಿಗೆ ಹಣ ನೀಡದೇ ಕಾಮಗಾರಿಗಳಿಗೆ ಟೆಂಡರ್ ಕರೆಯಲು ಸಾಧ್ಯವಾಗಿಲ್ಲವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಸಕಇ 44 ಎಸ್‌ಎಲ್‌ಪಿ 2023, ದಿನಾಂಕ:09-02-2023ರಲ್ಲಿ ಪರಿಶಿಷ್ಟ ಜಾತಿಯವರಿಗೆ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ರೂ.85.00 ಕೋಟಿಗಳ ಹೆಚ್ಚುವರಿ ಅನುದಾನವನ್ನು ಒದಗಿಸಲಾಗಿರುತ್ತದೆ. ಸದರಿ ಅನುದಾನದಲ್ಲಿ ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಅನುದಾನದಡಿ ಮಂಜೂರಾತಿ ನೀಡಿರುವ ಆದೇಶಗಳಿಗೆ ಅನುಗುಣವಾಗಿ ಮೊದಲ ಕಂತಿನ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಗಳಿಗೆ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ. |
| ಇ) | ಬಂದಿದ್ದಲ್ಲಿ, ಈ ವಿಶೇಷ ಅನುದಾನದ ಪ್ರಸ್ತಾವನೆ ಪುನಃ ಆರ್ಥಿಕ ಇಲಾಖೆಯಲ್ಲಿದ್ದು, ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರದ ಕಾಮಗಾರಿಯು ಸೇರಿದಂತೆ ರಾಜ್ಯದ ವಿವಿಧ ಕಾಮಗಾರಿಯು ಪ್ರಾರಂಭವಾಗದೇ ತೊಂದರೆಯಾಗಿರುವುದರಿಂದ ಆರ್ಥಿಕ ಇಲಾಖೆಯವರು ಹಣ ಬಿಡುಗಡೆ ಮಾಡುವಂತೆ ಆದೇಶ ಮಾಡಲು ಸರ್ಕಾರಕ್ಕಿರುವ ತೊಂದರೆಯೇನು; ಈ ಕುರಿತು ಸರ್ಕಾರ ಕೈಗೊಳ್ಳುವ ಕ್ರಮವೇನು? | 2022-23ನೇ ಸಾಲಿನಲ್ಲಿ ಪ್ರಗತಿ ಕಾಲೋನಿ ಯೋಜನೆಯಡಿ ಮಾನ್ಯ ಮುಖ್ಯಮಂತ್ರಿಗಳ ವಿಶೇಷ ಅನುದಾನದಡಿ ಪಿರಿಯಾಪಟ್ಟಣ ವಿಧಾನಸಭಾ ಕ್ಷೇತ್ರಕ್ಕೆ ಸರ್ಕಾರ ಆದೇಶ ಸಂಖ್ಯೆ: ಸಕಇ 400 ಪಕವಿ 2022 (15), ದಿನಾಂಕ:13-12-2022 ರಲ್ಲಿ ರೂ.150.00 ಲಕ್ಷಗಳಿಗೆ ಮಂಜೂರಾತಿ ನೀಡಲಾಗಿದ್ದು, ಮೊದಲ ಕಂತಿನ ಅನುದಾನವನ್ನು ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ರವರಿಗೆ ಬಿಡುಗಡೆ ಮಾಡಲು ಕ್ರಮವಹಿಸಲಾಗುತ್ತಿದೆ. |

**ಸಕಇ 63 ಎಸ್‌ಎಲ್ ಪಿ 2023**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ) ರವರ ಚುಕ್ಕೆ ರಹಿತ ಪ್ರಶ್ನೆ ಸಂ:546 ಕ್ಕೆ ಅನುಬಂಧ

2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಸಂಬಂಧವಾಗಿ ಮಂಜೂರಾತಿ ನೀಡಿ ಬಿಡುಗಡೆ ಮಾಡಿರುವ ಅನುದಾನದ ವಿವರ.

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಜಿಲ್ಲೆ/ ತಾಲ್ಲೂಕು/ ವಿಧಾನಸಭಾ ಕ್ಷೇತ್ರ/ ಲೋಕಸಭಾ ಕ್ಷೇತ್ರ/ ಜಿಲ್ಲಾ ಪಂಚಾಯಿತಿ/ ತಾಲ್ಲೂಕು ಪಂಚಾಯಿತಿಗಳ ವಿವರ | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಮಂಜೂರಾತಿ ಮೊತ್ತ |
|---|---|---|---|
| 1 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಹೊಸಕೋಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-403: ಎಸ್‌ಎಲ್‌ಪಿ-2022(5), ದಿ:20-07-2022 | 500.00 |
| 2 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಉತ್ತರ ಕನ್ನಡ ಜಿಲ್ಲೆ, ಹಳಿಯಾಳ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-403: ಎಸ್‌ಎಲ್‌ಪಿ-2022(2), ದಿ:20-07-2022 | 700.00 |
| 3 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಚಿತ್ರದುರ್ಗ ಜಿಲ್ಲೆ, ಚಳ್ಳಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-403: ಎಸ್‌ಎಲ್‌ಪಿ-2022(1), ದಿ:20-07-2022 ಮತ್ತು 15-09-2022 | 100.00 |
| 4 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಬಾಗಲಕೋಟೆ ಜಿಲ್ಲೆ, ಜಮಖಂಡಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-403: ಎಸ್‌ಎಲ್‌ಪಿ-2022(3), ದಿ:25-07-2022 ಮತ್ತು 17-10-2022 | 100.00 |
| 5 | ಬಾಗಲಕೋಟೆ ಜಿಲ್ಲೆ, ಬಾದಾಮಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-403: ಎಸ್‌ಎಲ್‌ಪಿ-2022 (6), ದಿ:23-08-2022 ಮತ್ತು 17-10-2022 | 680.00 |
| 6 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಕೋಲಾರ ಜಿಲ್ಲೆ, ಕೆ.ಜಿ.ಎಫ್ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-395: ಪಕವಿ-2022, ದಿ:10-08-2022 | 400.00 |
| 7 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಬಾಗಲಕೋಟೆ ಜಿಲ್ಲೆ, ಹುನಗುಂದ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-395: ಪಕವಿ-2022 (1), ದಿ:10-08-2022 | 120.00 |

| ಕ್ರ. ಸಂ. | ಜಿಲ್ಲೆ/ ತಾಲ್ಲೂಕು/ ವಿಧಾನಸಭಾ ಕ್ಷೇತ್ರ/ ಲೋಕಸಭಾ ಕ್ಷೇತ್ರ/ ಜಿಲ್ಲಾ ಪಂಚಾಯಿತಿ/ ತಾಲ್ಲೂಕು ಪಂಚಾಯಿತಿಗಳ ವಿವರ | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಮಂಜೂರಾತಿ ಮೊತ್ತ |
|---|---|---|---|
| 8 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ದಾವಣಗೆರೆ ಜಿಲ್ಲೆ, ಜಗಳೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-395: ಪಕವಿ-2022 (2), ದಿ:10-08-2022 | 450.00 |
| 9 | 2022-23ನೇ ಸಾಲಿನಲ್ಲಿ ಕಾಲೋನಿ ಅಭಿವೃದ್ಧಿ/ ಪ್ರಗತಿ ಕಾಲೋನಿ ಯೋಜನೆಯಡಿ ಹಾಸನ ಜಿಲ್ಲೆ, ಸಕಲೇಶಪುರ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಅನುದಾನ ಬಿಡುಗಡೆ ಮಾಡುವ ಕುರಿತು. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022, ದಿ:23-08-2022 | 200.00 |
| 10 | ದೇವನಹಳ್ಳಿ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (11), ದಿ:13-12-2022 | 400.00 |
| 11 | ಟಿ.ನರಸೀಪುರ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (10), ದಿ:13-12-2022 | 250.00 |
| 12 | ಮಾಗಡಿ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (6), ದಿ:13-12-2022 | 500.00 |
| 13 | ಹೊಸಕೋಟೆ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (14), ದಿ:12-12-2022 | 1200.00 |
| 14 | ಬೀಳಗಿ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (12), ದಿ:13-12-2022 | 450.00 |
| 15 | ಪಿರಿಯಾಪಟ್ಟಣ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (15), ದಿ:13-12-2022 | 150.00 |
| 16 | ನಾಗಠಾಣ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (7), ದಿ:13-12-2022 | 800.00 |

| ಕ್ರ. ಸಂ. | ಜಿಲ್ಲೆ/ ತಾಲ್ಲೂಕು/ ವಿಧಾನಸಭಾ ಕ್ಷೇತ್ರ/ ಲೋಕಸಭಾ ಕ್ಷೇತ್ರ/ ಜಿಲ್ಲಾ ಪಂಚಾಯಿತಿ/ ತಾಲ್ಲೂಕು ಪಂಚಾಯಿತಿಗಳ ವಿವರ | ಸರ್ಕಾರದ ಆದೇಶ ಸಂಖ್ಯೆ ಮತ್ತು ದಿನಾಂಕ | ಮಂಜೂರಾತಿ ಮೊತ್ತ |
|---|---|---|---|
| 17 | ಬೇಲೂರು ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (5), ದಿ:13-12-2022 | 200.00 |
| 18 | ಬೆಳಗಾವಿ ಜಿಲ್ಲೆಯ ಯಮಕನಮರಡಿ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (3), ದಿ:13-12-2022 | 150.00 |
| 19 | ನೆಲಮಂಗಲ ಮತಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (4), ದಿ:13-12-2022 | 500.00 |
| 20 | ಗದಗ ಜಿಲ್ಲೆಯ ನರಗುಂದ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (13), ದಿ:28-12-2022 | 365.00 |
| 21 | ಶಿವಮೊಗ್ಗ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಯೋಜನೆಯಡಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಅನುದಾನ ಮಂಜೂರು ಮಾಡುವ ಬಗ್ಗೆ (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (2), ದಿ:28-12-2022 | 250.00 |
| 22 | ಮಂಡ್ಯ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಯೋಜನೆಯಡಿ ವಿವಿಧ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022(9), ದಿ:28-12-2022 | 1320.00 |
| 23 | ಕೃಷ್ಣರಾಜನಗರ ಮತಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಯೋಜನೆಯಡಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೆತ್ತಿಗೊಳ್ಳಲು ಅನುದಾನ ಮಂಜೂರು ಮಾಡುವ ಬಗ್ಗೆ. (ಆರ್ಥಿಕ ಇಲಾಖೆ) | ಸಕಇ-400: ಪಕವಿ-2022 (8), ದಿ:28-12-2022 | 40.00 |
| | **ಒಟ್ಟು** | | **9825.00** |

ಆಯುಕ್ತರ ಪರವಾಗಿ,
ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು

# ಕರ್ನಾಟಕ ವಿಧಾನ ಸಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 547 |
|---|---|
| ಮಾನ್ಯ ಸದಸ್ಯರ ಹೆಸರು | ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಇರುವಂತೆ ಕೃಷಿ ಕಾರ್ಮಿಕರು ಹಾಗೂ ಮನೆ ಕೆಲಸ ಮಾಡುತ್ತಿರುವ ಕಾರ್ಮಿಕರನ್ನು ಕಾರ್ಮಿಕ ಕಾಯ್ದೆಯನುಸಾರವಾಗಿ ಕಾರ್ಮಿಕ ಇಲಾಖೆಯಡಿ ತರಲು ಸರ್ಕಾರಕ್ಕಿರುವ ತೊಂದರೆಯೇನು; | ಕರ್ನಾಟಕ ರಾಜ್ಯ ಸರ್ಕಾರವು ಅಸಂಘಟಿತ ವಲಯದ ಇತರೆ ವರ್ಗ ಅಂದರೆ, ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಕಲಂ 2(m) ಹಾಗೂ ಕಲಂ 2(l) ರ ವ್ಯಾಖ್ಯಾನಕ್ಕೆ ಒಳಪಡುವ "ಕೃಷಿ ಕಾರ್ಮಿಕರು ಹಾಗೂ ಮನೆ ಕೆಲಸ ಮಾಡುವ" ವರ್ಗ ಸೇರಿದಂತೆ, ಒಟ್ಟು 43 ವರ್ಗಗಳ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಗುರುತಿಸಿದೆ.<br><br>ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯು ಅಸಂಘಟಿತ ವರ್ಗಗಳ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ವಿವರ ಈ ಕೆಳಗಿನಂತಿದೆ.<br><br>**(ಅ) 'ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ':-**<br>ಈ ಯೋಜನೆಯಡಿ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಗೃಹ ಕಾರ್ಮಿಕರು, ಟೈಲರ್ಸ್, ಚಿಂದಿ ಆಯುವವರು, ಮೆಕ್ಯಾನಿಕ್ಸ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ ನೋಂದಾಯಿಸಿ ಗುರುತಿನ ಚೀಟಿ ವಿತರಿಸಲಾಗುತ್ತಿದ್ದು, ಯಾವುದೇ ಆರ್ಥಿಕ ಸೌಲಭ್ಯ ನೀಡುತ್ತಿಲ್ಲ.<br><br>**(ಆ) ಇ-ಶ್ರಮ್ ಕಾರ್ಯಕ್ರಮ:-**<br>ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿದ್ದು, ಯೋಜನೆಯಡಿ 16-59 ವಯೋಮಾನದ ಇ.ಎಸ್.ಐ ಹಾಗೂ ಇ.ಪಿ.ಎಫ್ ಸೌಲಭ್ಯವನ್ನು ಹೊಂದಿರದ ಹಾಗೂ ಆದಾಯ ತೆರಿಗೆ ಪಾವತಿ ಮಾಡದ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಅವರು ಸಾಮಾನ್ಯ ಸೇವಾ ಕೇಂದ್ರಗಳ ಮೂಲಕ ಅಥವಾ ಸ್ವಯಂ ಆಗಿ ಇ-ಶ್ರಮ್ ಪೋರ್ಟಲ್‌ನಲ್ಲಿ (eshram.gov.in) ಉಚಿತವಾಗಿ ನೋಂದಾಯಿಸಬಹುದಾಗಿದ್ದು, ಗುರುತಿನ ಚೀಟಿಯನ್ನು ನೋಂದಾಯಿತ ಸ್ಥಳದಲ್ಲೇ ವಿತರಿಸಲಾಗುತ್ತದೆ. |

| | | |
|---|---|---|
| | | ಈ ಕಾರ್ಯಕ್ರಮದಡಿ ಅಸಂಘಟಿತ ವರ್ಗದ ಕಾರ್ಮಿಕರ ಪಟ್ಟಿಯು 379 ವರ್ಗಗಳ ಕಾರ್ಮಿಕರನ್ನು ಹೊಂದಿದ್ದು, ಕೃಷಿ ಕಾರ್ಮಿಕರು ಹಾಗೂ ಮನೆ ಕೆಲಸ ಮಾಡುವ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಕ್ರಮ ಸಂಖ್ಯೆ 133 ಮತ್ತು 168ರಲ್ಲಿ ಗುರುತಿಸಿದ್ದು, ಕಾರ್ಯಕ್ರಮದಡಿ ಉಚಿತ ನೋಂದಣಿಯಾಗಿ ಸ್ಥಳದಲ್ಲೇ ಗುರುತಿನ ಚೀಟಿ ಪಡೆಯಬಹುದಾಗಿದೆ. |
| ಆ) | ಕಟ್ಟಡ ನಿರ್ಮಾಣ ಕಾರ್ಮಿಕರು ಹಾಗೂ ಇತರೆ ಕಾರ್ಮಿಕರಂತೆ ಕೃಷಿ ಕಾರ್ಮಿಕರ ಪಾತ್ರವು ಸಹ ಸಮಾಜದಲ್ಲಿ ದೊಡ್ಡದಿದೆ ಎಂಬ ಮಾಹಿತಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕೃಷಿ ಕಾರ್ಮಿಕರು ಹಾಗೂ ಇತರೆ ಅಸಂಘಟಿತ ಕಾರ್ಮಿಕರ ಪಾತ್ರವು ಸಹ ಸಮಾಜದಲ್ಲಿ ದೊಡ್ಡದಿದೆ ಎನ್ನುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಇ) | ಬಂದಿದ್ದಲ್ಲಿ, ಈ ಕೃಷಿ ಕಾರ್ಮಿಕರನ್ನು ಸದರಿ ಕಾರ್ಮಿಕರಿಗೆ ಆರೋಗ್ಯ ಸಮಸ್ಯೆ ದೈಹಿಕ ಸಮಸ್ಯೆ ಕಾಡು ಪ್ರಾಣಿಗಳ ದಾಳಿ, ವಿಷ ಜಂತುಗಳ ಸಮಸ್ಯೆ ಇತ್ಯಾದಿ ಸಮಸ್ಯೆಗಳೊಂದಿಗೆ ಕೆಲಸ ಮಾಡಬೇಕಾದ ಪರಿಸ್ಥಿತಿ ಇದ್ದು, ಈ ಕಾರ್ಮಿಕರನ್ನು ಕಾರ್ಮಿಕ ಇಲಾಖೆಯಡಿ ತಂದು ಅವರಿಗೆ ಅನುಕೂಲ ಮಾಡಲು ಸರ್ಕಾರಕ್ಕಿರುವ ತೊಂದರೆಯೇನು; | ಪ್ರಸ್ತುತ, ಕಾರ್ಮಿಕ ಇಲಾಖೆಯಡಿ ಕೃಷಿ ಕಾರ್ಮಿಕರು ಹಾಗೂ ಇತರೆ ಕಾರ್ಮಿಕರಿಗೆ ಆರೋಗ್ಯ ಸಮಸ್ಯೆ ದೈಹಿಕ ಸಮಸ್ಯೆ ಕಾಡು ಪ್ರಾಣಿಗಳ ದಾಳಿ, ವಿಷ ಜಂತುಗಳ ಸಮಸ್ಯೆ ಇತ್ಯಾದಿ ಸಮಸ್ಯೆಗಳೊಂದಿಗೆ ಕೆಲಸ ಮಾಡಬೇಕಾದ ಪರಿಸ್ಥಿತಿ ಇದ್ದು ಈ ಎಲ್ಲಾ ಅಸಂಘಟಿತರನ್ನು ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಾಣಿ ಮಾಡಲು ಅವಕಾಶ ಕಲ್ಪಿಸಲಾಗಿದೆ. ನೋಂದಾಣಿಯಾದ ಕಾರ್ಮಿಕರು ಒಂದು ವರ್ಷದ ಅವಧಿಗೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾ ಯೋಜನೆ ಸೌಲಭ್ಯವನ್ನು ಪಡೆಯಬಹುದಾಗಿದೆ. |
| ಈ) | ಸರ್ಕಾರ ಈ ಕುರಿತು ಕೈಗೊಳ್ಳುವ ಕ್ರಮವೇನು? | ಇ-ಶ್ರಮ್ ಪೋರ್ಟಲ್‌ನಲ್ಲಿ ನೊಂದಾಯಿತರಾದ ಎಲ್ಲಾ ಅಸಂಘಟಿತ ವರ್ಗಗಳ ಕಾರ್ಮಿಕರಿಗೆ, ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ-2008ರ ಪ್ರಾವಧಾನಗಳನ್ವಯ ಕೆಲವು ಸಾಮಾಜಿಕ ಭದ್ರತಾ ಸೌಲಭ್ಯಗಳನ್ನು ಒದಗಿಸುವ ಯೋಜನೆಯ ಪ್ರಸ್ತಾವನೆಯ ಸರ್ಕಾರದ ಪರಿಶೀಲನೆಯಲ್ಲಿದೆ. |

**ಕಾಇ 78 ಎಲ್‌ಇಟಿ 2023**

(ಅರಬೈಲ್ ಶಿವರಾಂ ಹೆಬ್ಬಾರ್)
ಕಾರ್ಮಿಕ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ **548**
ಸದಸ್ಯರ ಹೆಸರು ಡಾ: ಅಜಯ್ ಧರ್ಮಸಿಂಗ್ (ಜೇವರ್ಗೀ)
ಉತ್ತರಿಸುವ ದಿನಾಂಕ 15-02-2023
ಉತ್ತರಿಸುವವರು ಮಾನ್ಯ ರೇಷ್ಮೆ, ಯುವಸಬಲೀಕರಣ ಮತ್ತು ಕ್ರೀಡಾ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ 371 ಜೆ ಅಡಿ ಮೀಸಲಿರಿಸಿದ ಹುದ್ದೆಗಳನ್ನು ಗುರುತಿಸಲಾಗಿದೆಯೇ; ಹಾಗಿದ್ದಲ್ಲಿ, ಸರ್ಕಾರದಿಂದ ಅನುಮೋದನೆ ಪಡೆಯಲಾಗಿದೆಯೇ; | ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ 371(ಜೆ) ಅಡಿ ಮೀಸಲಿರಿಸಿದ ಹುದ್ದೆಗಳನ್ನು ಗುರುತಿಸಲಾಗಿದ್ದು, ಸರ್ಕಾರದ ಪತ್ರ ಸಂಖ್ಯೆ: ರೇಷ್ಮೆ 63 ರೇಕೃವಿ 2019 ರಲ್ಲಿ ಅನುಮೋದನೆ ನೀಡಲಾಗಿರುತ್ತದೆ. |
| ಆ) | ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯು ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ 371 ಜೆ ಅಡಿ ಗುರುತಿಸಿ ಮೀಸಲಿರಿಸುವ ಹುದ್ದೆಗಳನ್ನು ಭರ್ತಿ ಮಾಡಲು ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯ; | ಬಂದಿದೆ. |
| ಇ) | ಬಂದಿದ್ದಲ್ಲಿ, ಈ ನೇಮಕಾತಿಯು ವಿಳಂಬವಾಗಲು ಕಾರಣಗಳೇನು; (ವಿವರ ನೀಡುವುದು) | ಹೈದ್ರಾಬಾದ್ - ಕರ್ನಾಟಕ ಪ್ರದೇಶಕ್ಕೆ 371 (ಜೆ) ಅಡಿ ಗುರುತಿಸಿರುವ ಹುದ್ದೆಗಳನ್ನು ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದ್ದು, ಅಭ್ಯರ್ಥಿಗಳ ಆಯ್ಕೆಯನ್ನು ಅಂತಿಮಗೊಳಿಸಲು ಸಂಸ್ಥೆಯಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸಮಾಲೋಚನೆಗಾಗಿ ಸಲ್ಲಿಸಲಾಗಿದೆ.<br>ಈ ಸಂದರ್ಭದಲ್ಲಿ ಮೇಲ್ಕಂಡ ನೇಮಕಾತಿ ಪ್ರಕ್ರಿಯೆಯಲ್ಲಿ vertical ಮತ್ತು Horizontal ಆಗಿ ಗುರುತಿಸಬೇಕಾಗಿದ್ದ ಹುದ್ದೆಗಳು ಸರಿದೂಗದೆ ಇರುವುದರಿಂದ ಹಾಗೂ ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕು ಕಡಗಂಚಿಯಲ್ಲಿನ ಉಪಸಂಸ್ಥೆಯನ್ನು ರೇಷ್ಮೆ ಇಲಾಖೆಗೆ ಹಸ್ತಾಂತರಿಸುವ ಕುರಿತಂತೆ ವಿವರದೊಂದಿಗೆ ಮತ್ತೊಮ್ಮೆ ಸಂಸ್ಥೆಯಿಂದ ಪ್ರಸ್ತಾವನೆ ಸ್ವೀಕೃತವಾಗಿರುತ್ತದೆ.<br>ಸದರಿ ಉಪ ಸಂಸ್ಥೆಗೆ ಗುರುತಿಸಿದ 02 ಹುದ್ದೆ (ಹಿರಿಯ ಸಂಶೋಧನಾ ಸಹಾಯಕರ-01 ಹುದ್ದೆ ಮತ್ತು ಕ್ಷೇತ್ರ ಪ್ರಯೋಗಶಾಲೆಯ ಸಹಾಯಕರ 01 ಹುದ್ದೆ) ಗಳನ್ನು ರದ್ದುಪಡಿಸಿ, ಉಳಿದ 07 ಹುದ್ದೆಗಳನ್ನು ಮಾತ್ರ ನೇಮಕಾತಿ ಮಾಡಬೇಕಾಗಿರುವ ಕಾರಣದಿಂದ ಸದರಿ ಹುದ್ದೆಗಳಿಗೆ ಮರು ಪ್ರಕಟಣೆ ಹೊರಡಿಸುವಂತೆ ಕೋರಿ ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯಿಂದ ಸ್ವೀಕೃತವಾಗಿರುವ ನೇಮಕಾತಿ ಮರುಪ್ರಕಟಣೆಯ ಪ್ರಸ್ತಾವನೆಯು ಪ್ರಕ್ರಿಯೆಯಲ್ಲಿರುತ್ತದೆ. |
| ಈ) | ಈ ನೇಮಕಾತಿಯನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು? | |

**ಕಡತ ಸಂಖ್ಯೆ: ರೇಷ್ಮೆ 28 ರೇಕೃವಿ 2023**

**(ಡಾ. ನಾರಾಯಣಗೌಡ)**
ರೇಷ್ಮೆ, ಯುವಸಬಲೀಕರಣ ಮತ್ತು
ಕ್ರೀಡಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 549
ಉತ್ತರಿಸಬೇಕಾದ ದಿನಾಂಕ : 15.02.2023
ಸದಸ್ಯರ ಹೆಸರು : ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಿಂದ ಜೇವರ್ಗಿ ತಾಲ್ಲೂಕು ಕ್ರೀಡಾಂಗಣದ ನಿರ್ವಹಣೆಗಾಗಿ ಬಿಡುಗಡೆ ಮಾಡಿರುವ ಅನುದಾನವೆಷ್ಟು; | ಕಳೆದ ಮೂರು ವರ್ಷಗಳಿಂದ ಜೇವರ್ಗಿ ತಾಲ್ಲೂಕು ಕ್ರೀಡಾಂಗಣದ ನಿರ್ವಹಣೆಗಾಗಿ ಬಿಡುಗಡೆ ಮಾಡಿರುವ ಅನುದಾನದ ವಿವರ ಕೆಳಕಂಡಂತಿದೆ.<br>**2018-19 (ರೂ.ಗಳಲ್ಲಿ)**: 1,85,000-00<br>**2019-20 (ರೂ.ಗಳಲ್ಲಿ)**: 2,17,250-00<br>**2020-21 (ರೂ.ಗಳಲ್ಲಿ)**: 2,45,000-00 |
| ಆ) | ಈ ಅನುದಾನದಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; (ವರ್ಷವಾರು ಮಾಹಿತಿ ನೀಡುವುದು) | ಈ ಅನುದಾನದಲ್ಲಿ ಯಾವುದೇ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. |
| ಇ) | ಈ ಕ್ರೀಡಾಂಗಣಕ್ಕೆ ಅಗತ್ಯವಿರುವ ಸಿಬ್ಬಂದಿಗಳನ್ನು ನೇಮಕ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ತಾಲ್ಲೂಕು ಕ್ರೀಡಾಂಗಣಕ್ಕೆ ಹೊರಗುತ್ತಿಗೆ ಆಧಾರದ ಮೇಲೆ ಇಬ್ಬರು ಸಿಬ್ಬಂದಿಗಳ ಸೇವೆ ಪಡೆಯಲಾಗಿದೆ. |
| ಈ) | ಬಂದಿದ್ದಲ್ಲಿ, ಅಗತ್ಯವಿರುವ ಸಿಬ್ಬಂದಿಗಳನ್ನು ನೇಮಕ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; ಯಾವ ಕಾಲಮಿತಿಯಲ್ಲಿ ನೇಮಕ ಮಾಡಲಾಗುವುದು? | ಮೇಲಿನ ಉತ್ತರದಿಂದಾಗಿ ಈ ಪ್ರಶ್ನೆ ಉದ್ಭವಿಸುವುದಿಲ್ಲ. |

ವೈಎಸ್‌ಡಿ-ಇಬಿಬಿ/09/2022

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ : 550

ವಿಧಾನ ಸಭೆಯ ಸದಸ್ಯರ ಹೆಸರು : ಡಾ|| ಅಜಯ್ ಧರ್ಮ ಸಿಂಗ್(ಜೇವರ್ಗಿ)

ಉತ್ತರಿಸುವ ಸಚಿವರು : ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 15.02.2023

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಜೇವರ್ಗಿ ವಿಧಾನಸಭಾ ಕ್ಷೇತ್ರದ ಜೇವರ್ಗಿ ಪಟ್ಟಣದಲ್ಲಿರುವ ಹಿರಿಯ ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ ಕಟ್ಟಡ ಶಿಥಿಲಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು, ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಸದರಿ ಕಟ್ಟಡ ದುರಸ್ತಿ ಅಥವಾ ಹೊಸ ಕಟ್ಟಡ ನಿರ್ಮಾಣಕ್ಕೆ ಸರ್ಕಾರವು ತೆಗೆದುಕೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಅನುದಾನ ಲಭ್ಯತೆಯನ್ನು ಆಧರಿಸಿ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

No. HORTI 58 HGM 2023

(ಮುನಿರತ್ನ)

ತೋಟಗಾರಿಕೆ ಹಾಗೂ ಯೋಜನೆ,

ಕಾರ್ಯಕ್ರಮ ಸಂಯೋಜನೆ ಮತ್ತು

ಸಾಂಖ್ಯಿಕ ಸಚಿವರು

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 551 |
| ಮಾನ್ಯ ಸದಸ್ಯರ ಹೆಸರು | ಶ್ರೀ ಎಸ್. ಎನ್. ನಾರಾಯಣಸ್ವಾಮಿ ಕೆ. ಎಂ. (ಬಂಗಾರಪೇಟೆ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರ್ಮಿಕ ಇಲಾಖೆಯಿಂದ ಕಾರ್ಮಿಕರಿಗೆ ಯಾವ ಯಾವ ಸೌಲಭ್ಯಗಳನ್ನು ನೀಡಲಾಗುತ್ತಿದೆ; | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ಮಂಡಳಿಗಳ ಮೂಲಕ ವಿವಿಧ ವರ್ಗದ ಕಾರ್ಮಿಕರಿಗೆ ಹಲವಾರು ಕಲ್ಯಾಣ ಮತ್ತು ಸಾಮಾಜಿಕ ಭದ್ರಾ ಯೋಜನೆಗಳಡಿ ಸೌಲಭ್ಯಗಳನ್ನು ನೀಡಲಾಗುತ್ತಿದ್ದು ವಿವರ ಈ ಕೆಳಕಂಡಂತಿದೆ.<br><br>**<u>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ</u>**<br><br>ಮಂಡಳಿಯ ವತಿಯಿಂದ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರಿಗೆ ಮತ್ತು ಅವರ ಅವಲಂಬಿತರಿಗಾಗಿ ವಿತರಿಸುತ್ತಿರುವ ವಿವಿಧ ರೀತಿಯ ಕಲ್ಯಾಣ ಮತ್ತು ಸಾಮಾಜಿಕ ಭದ್ರತಾ ಸೌಲಭ್ಯಗಳ ವಿವರವನ್ನು **ಅನುಬಂಧ** ದಲ್ಲಿ ಸಲ್ಲಿಸಿದೆ.<br><br>**<u>ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ</u>**<br><br>(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:- ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಸಂಬಂಧಪಟ್ಟಂತೆ ಯೋಜನೆಯಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>ಅ) ಅಪಘಾತ ಪರಿಹಾರ ಸೌಲಭ್ಯ: ಈ ಯೋಜನೆಯಡಿ, ಅಪಘಾತದಿಂದ ಮರಣ ಹೊಂದಿದ ಪ್ರಕರಣಗಳಲ್ಲಿ ನಾಮನಿರ್ದೇಶಿತರಿಗೆ ರೂ. 5 ಲಕ್ಷದ ಪರಿಹಾರ, ಸಂಪೂರ್ಣ ಶಾಶ್ವತ ದುರ್ಬಲತೆ ಪ್ರಕರಣಗಳಲ್ಲಿ ಫಲಾನುಭವಿಗೆ ರೂ.2 ಲಕ್ಷದ ಪರಿಹಾರ ಮತ್ತು ಒಳರೋಗಿಯಾಗಿ ಚಿಕಿತ್ಸೆ ಪಡೆದಲ್ಲಿ ರೂ.1 ಲಕ್ಷದವರೆಗೆ ಚಿಕಿತ್ಸಾ ವೆಚ್ಚದ ಮರುಪಾವತಿ ನೀಡಲಾಗುತ್ತಿದೆ. |

(ಆ) ಶೈಕ್ಷಣಿಕ ಧನ ಸಹಾಯ: ಅಪಘಾತದಿಂದ ನಿಧನರಾದ ಅಥವಾ ಸಂಪೂರ್ಣ ಶಾಶ್ವತ ದುರ್ಬಲತೆ ಹೊಂದಿದ ಫಲಾನುಭವಿಗಳ ಗರಿಷ್ಠ ಇಬ್ಬರು ಮಕ್ಕಳಿಗೆ ಪದವಿಪೂರ್ವ ವ್ಯಾಸಂಗದವರೆಗೆ ವಾರ್ಷಿಕ ತಲಾ ರೂ.10,000/-ಗಳ ಶೈಕ್ಷಣಿಕ ಸಹಾಯಧನ ನೀಡಲಾಗುತ್ತಿದೆ.

2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-

ಈ ಯೋಜನೆಯಡಿ, 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಗೃಹ ಕಾರ್ಮಿಕರು, ಟೈಲರ್ಸ್, ಚಿಂದಿ ಆಯುವವರು, ಮೆಕ್ಯಾನಿಕ್ಸ್, ಅಗಸರು, ಕ್ಷೌರಿಕರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿ ಕಾರ್ಮಿಕ ರನ್ನು ಆನ್‌ಲೈನ್ ಪೋರ್ಟಲ್ Ksuwssb.karnataka.gov.in ಮೂಲಕ ನೋಂದಾಯಿಸಿ ಗುರುತಿನಚೀಟಿ ನೀಡಲಾಗುತ್ತಿದ್ದು, ಯಾವುದೇ ಆರ್ಥಿಕ ಸೌಲಭ್ಯ ನೀಡುತ್ತಿಲ್ಲ.

3) ಕೋವಿಡ್-19 ರ ವಿಶೇಷ ಪ್ಯಾಕೇಜ್‌ಗಳಡಿ ನೀಡಿರುವ ಸೌಲಭ್ಯ:-

- 2020ನೇ ವರ್ಷದ ಕೋವಿಡ್-19ರ ಮೊದಲನೆ ಅಲೆಯ ಲಾಕ್‌ಡೌನ್ ಸಂದರ್ಭದಲ್ಲಿ, ಅಗಸ ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 124968 ಅಸಂಘಟಿತ ಕಾರ್ಮಿಕರಿಗೆ ತಲಾ ರೂ.5,000/-ಗಳಂತೆ ಒಟ್ಟು ರೂ.62.48 ಕೋಟಿಗಳ ಒಂದು ಬಾರಿಯ ನೆರವನ್ನು ವಿತರಿಸಲಾಗಿದೆ.
- 2021ನೇ ವರ್ಷದ ಕೋವಿಡ್-19ರ ಎರಡನೇ ಅಲೆಯ ಲಾಕ್‌ಡೌನ್ ಸಂದರ್ಭದಲ್ಲಿ, 11 ವರ್ಗಗಳಾದ ಅಸಂಘಟಿತ ಕಾರ್ಮಿಕರಾದ ಅಗಸರು, ಕ್ಷೌರಿಕರು, ಗೃಹಕಾರ್ಮಿಕರು, ಟೈಲರ್‌ಗಳು, ಮೆಕ್ಯಾನಿಕ್, ಚಿಂದಿ ಆಯುವವರು, ಹಮಾಲರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು ಹಾಗೂ ಭಟ್ಟಿಕಾರ್ಮಿಕ ವರ್ಗಕ್ಕೆ ಸೇರಿದ 1221751 ಕಾರ್ಮಿಕರಿಗೆ ತಲಾ ರೂ.2,000/-ಗಳಂತೆ ಒಟ್ಟು ರೂ. 244.35 ಲಕ್ಷಗಳ ಒಂದು ಬಾರಿಯ ನೆರವನ್ನು ವಿತರಿಸಲಾಗಿದೆ.

(4)ಇ-ಶ್ರಮ್ ಕಾರ್ಯಕ್ರಮ (ಅಸಂಘಟಿತ ಕಾರ್ಮಿಕರ ನೋಂದಣಿ):-

ಕೇಂದ್ರ ಸರ್ಕಾರದ ಕಾರ್ಮಿಕ ಮತ್ತು ಉದ್ಯೋಗ ಮಂತ್ರಾಲಯವು ಅಸಂಘಟಿತ ಕಾರ್ಮಿಕರ ದತ್ತಾಂಶವನ್ನು ಸಂಗ್ರಹಿಸುವ ಉದ್ದೇಶದಿಂದ, ಇ-ಶ್ರಮ್ ಪೋರ್ಟಲ್ ಅನ್ನು ಅಭಿವೃದ್ಧಿಪಡಿಸಿದ್ದು, ಯೋಜನೆಯಡಿ 16-59 ವಯೋಮಾನದ ಇ.ಎಸ್.ಐ ಹಾಗೂ ಇ.ಪಿ.ಎಫ್ ಸೌಲಭ್ಯವನ್ನು ಹೊಂದಿರದ ಹಾಗೂ ಆದಾಯ ತೆರಿಗೆ ಪಾವತಿ ಮಾಡದ ಎಲ್ಲಾ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಅವರು ಸಾಮಾನ್ಯ ಸೇವಾ

| | | |
|---|---|---|
| | | ಕೇಂದ್ರಗಳ ಮೂಲಕ ಅಥವಾ ಸ್ವಯಂ ಆಗಿ ಇ-ಶ್ರಮ್ ಪೋರ್ಟಲ್‌ನಲ್ಲಿ (eshram.gov.in) ಉಚಿತವಾಗಿ ನೋಂದಾಯಿಸಬಹುದಾಗಿದ್ದು, ಗುರುತಿನ ಚೀಟಿಯನ್ನು ನೋಂದಾಯಿತ ಸ್ಥಳದಲ್ಲೆ ವಿತರಿಸಲಾಗುತ್ತದೆ.<br><br>ಸದರಿ ಕಾರ್ಮಿಕರು ಒಂದು ವರ್ಷಕ್ಕೆ ಪ್ರಧಾನ ಮಂತ್ರಿ ಸುರಕ್ಷಾ ಬಿಮಾ ಯೋಜನೆ (PM-SBY) ಪ್ರಯೋಜನ ಪಡೆಯಬಹುದು (ಅಪಘಾತ ವಿಮೆಯಾಗಿದ್ದು, ಅಪಘಾತದಿಂದ ಮರಣ ಹೊಂದಿದಲ್ಲಿ ಅಥವಾ ಶಾಶ್ವತ ದುರ್ಬಲತೆ ಹೊಂದಿದಲ್ಲಿ ರೂ.2 ಲಕ್ಷ ಹಾಗೂ ಭಾಗಶಃ ಅಂಗ ವೈಕಲ್ಯಕ್ಕೆ ರೂ.1 ಲಕ್ಷ ಪರಿಹಾರ).<br><br>**ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿ**<br><br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಗೆ 20:40:20 ರ ಅನುಪಾತದಲ್ಲಿ ಒಬ್ಬ ಕಾರ್ಮಿಕನಿಗೆ ಪ್ರತಿ ಕಾರ್ಮಿಕರಿಂದ ರೂ 20/- ಮತ್ತು ಪ್ರತಿ ಕಾರ್ಮಿಕರಿಗೆ ಮಾಲೀಕರಿಂದ ರೂ 40/- ರಂತೆ ಹಾಗೂ ಸರ್ಕಾರದಿಂದ ಪ್ರತಿ ಕಾರ್ಮಿಕರಿಗೆ ರೂ. 20/- ರಂತೆ ಸಹಾಯಾನುದಾನವನ್ನು ವಂತಿಗೆಯಾಗಿ ನೀಡಲಾಗುತ್ತಿದೆ. ಈ ವಂತಿಗೆಯ ಮೊತ್ತವನ್ನು ಸಂಘಟಿತ ಕಾರ್ಮಿಕರಿಗೆ ಕಲ್ಯಾಣ ಯೋಜನೆಗಳಡಿ ಈ ಕೆಳಕಂಡ ಸೌಲಭ್ಯಗಳನ್ನು ನೀಡಲಾಗುತ್ತಿದೆ.<br><br>1) ಕಾರ್ಮಿಕರ ಮಕ್ಕಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಸಹಾಯ<br>2) ಕಾರ್ಮಿಕರಿಗೆ ವೈದ್ಯಕೀಯ ನೆರವು<br>3) ಕಾರ್ಮಿಕರಿಗೆ ಅಪಘಾತ ಧನ ಸಹಾಯ<br>4) ಮಹಿಳಾ ಕಾರ್ಮಿಕರಿಗೆ ಹೆರಿಗೆ ಭತ್ಯೆ ಸೌಲಭ್ಯ<br>5) ಮೃತ ಕಾರ್ಮಿಕನ ಅಂತ್ಯ ಸಂಸ್ಕಾರಕ್ಕೆ ಧನ ಸಹಾಯ<br>6) ವಾರ್ಷಿಕ ವೈದ್ಯಕೀಯ ತಪಾಸಣೆ ಶಿಬಿರ ಹಮ್ಮಿಕೊಳ್ಳುವ ಟ್ರೇಡ್ ಯೂನಿಯನ್/ಸಂಸ್ಥೆಗಳಿಗೆ ಧನಸಹಾಯ<br>ವಾರ್ಷಿಕ ಕ್ರೀಡಾ ಕೂಟ ಹಮ್ಮಿಕೊಳ್ಳುವ ನೊಂದಾಯಿತ ಕಾರ್ಮಿಕ ಸಂಘಗಳಿಗೆ ಧನಸಹಾಯ |
| ಆ) | ಕೋಲಾರ ಜಿಲ್ಲೆಯಲ್ಲಿ ಕಾರ್ಮಿಕ ಇಲಾಖೆ ವತಿಯಿಂದ ಸದಸ್ಯತ್ವವನ್ನು ನೋಂದಣಿ ಮಾಡಿಸಲು ಅನುಸರಿಸಲಾಗುವ ಮಾನದಂಡಗಳೇನು;<br>(ಸಂಪೂರ್ಣ ವಿವರ ನೀಡುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮಂಡಳಿಗಳ ಮೂಲಕ ವಿವಿಧ ವರ್ಗದ ಕಾರ್ಮಿಕರಿಗೆ ಜಾರಿಗೊಳಿಸಲಾಗುತ್ತಿರುವ ವಿವಿಧ ಕಲ್ಯಾಣ ಮತ್ತು ಸಾಮಾಜಿಕ ಭದ್ರತ ಯೋಜನೆಗಳಡಿ ಕೋಲಾರ ಜಿಲ್ಲೆಯು ಸೇರಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯು ಅರ್ಹ ಕಾರ್ಮಿಕರನ್ನು ನಿಯಾಮಾನುಸಾರ ನೋಂದಣಿ ಮಾಡಿಸಲಾಗುತ್ತಿದ್ದು ನೋಂದಣಿಯಾಗಲು ಇರುವ ಮಾನದಂಡಗಳ ವಿವರ ಈ ಕೆಳಕಂಡಂತಿದೆ. |

| | | **ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಲು ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗದ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕಾಯ್ದೆ 1996 ಯ ಕಲಂ 12 ರ ಪ್ರಾವದಾನಗಳನ್ವಯ ನೋಂದಣಿ ಪೂರ್ವದಲ್ಲಿ 12 ತಿಂಗಳ ಅವಧಿಯಲ್ಲಿ (ಒಂದು ವರ್ಷದಲ್ಲಿ) 90 ದಿನ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ 18-60ರ ವಯೋಮಾನದ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಾಣಿಯಾಗಲು ಆರ್ಹರಿರುತ್ತಾರೆ.<br><br>ನೋಂದಣಿಗಾಗಿ ಸಲ್ಲಿಸ ಬೇಕಾದ ಅಗತ್ಯ ದಾಖಲೆಗಳು:<br>ಎ) ನಮೂನೆ-5ರಲ್ಲಿ ಅರ್ಜಿ<br>ಬಿ) ಮಾಲೀಕರ ಪ್ರಮಾಣ ಪತ್ರ: ಕಾಮಗಾರಿ ನಡೆಯುವ ಕಟ್ಟಡದ ಮಾಲೀಕರು/ ಗುತ್ತಿಗೆದಾರರು, CREDAI (Confederation of Real Estate Developers Association of India), BAI (Builders Association of India) ಅಥವಾ ಕರ್ನಾಟಕ ಸ್ಟೇಟ್ ಕಾಂಟ್ರಾಕ್ಟರ್ಸ್ ಅಸೋಸಿಯೇಷನ್ ನವರು ನಮೂನೆ-V(A)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ನೋಂದಾಯಿತ ಕಾರ್ಮಿಕ ಸಂಘಗಳು ನಮೂನೆ-V(B)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಕಾರ್ಮಿಕ ಅಧಿಕಾರಿ/ ಹಿರಿಯ ಕಾರ್ಮಿಕ ನಿರೀಕ್ಷಕರು / ಕಾರ್ಮಿಕ ನಿರೀಕ್ಷಕರು ನಮೂನೆ-V(C)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ' ಅಥವಾ ಪಂಚಾಯತಿ ಅಭಿವೃದ್ಧಿ ಅಧಿಕಾರಿ / ಗ್ರಾಮ ಪಂಚಾಯತಿ ಕಾರ್ಯದರ್ಶಿಗಳು ನಮೂನೆ-V(D)ರಲ್ಲಿ ನೀಡುವಂತಹ 'ಉದ್ಯೋಗದ ದೃಢೀಕರಣ ಪತ್ರ'.<br>ಸಿ) ಪಾಸ್ ಪೋರ್ಟ್ ಅಳತೆಯ ಭಾವಚಿತ್ರ<br>ಡಿ) ವಯಸ್ಸಿನ ದೃಢೀಕರಣ ಪತ್ರ: ಶಾಲಾ ದಾಖಲಾತಿ, ವಾಹನ ಚಾಲನಾ ಪರವಾನಗಿ, ಪಾಸ್‌ಪೋರ್ಟ್, ಎಪಿಕ್ ಕಾರ್ಡ್, ಆಧಾರ್ ಕಾರ್ಡ್, ಎಲ್‌ಐಸಿ ವಿಮೆ ಪಾಲಿಸಿ ಅಥವಾ ಗ್ರಾಮ ಲೆಕ್ಕಿಗರು ಅಥವಾ ಕಂದಾಯ ನಿರೀಕ್ಷಕರು ಅಥವಾ ಸ್ಥಳೀಯ ಸಂಸ್ಥೆಯ ಅಧಿಕಾರಿಗಳು ಅಥವಾಜನನ ಮತ್ತು ಮರಣ ನೋಂದಣಾಧಿಕಾರಿಗಳಿಂದ ವಿತರಿಸಿದ ಪ್ರಮಾಣ ಪತ್ರ ಅಥವಾ |
|---|---|---|

| | | |
|---|---|---|
| | | ಸರ್ಕಾರಿ ಆಸ್ಪತ್ರೆ/ ಇಎಸ್‌ಐ ಆಸ್ಪತ್ರೆ/ ಸ್ಥಳೀಯ ಸಂಸ್ಥೆಗಳ ಆಸ್ಪತ್ರೆ ಅಥವಾ ನೋಂದಾಯಿತ ಎಂಬಿಬಿಎಸ್, ಆಯುರ್ವೇದ, ಯುನಾನಿ ಅಥವಾ ಹೋಮಿಯೋಪತಿ ವೈದ್ಯರು, ನೋಂದಾಯಿತ ಖಾಸಗಿ ಬಿ.ಡಿ.ಎಸ್ ವಿದ್ಯಾರ್ಹತೆ ಹೊಂದಿದದಂತ ವೈದ್ಯರಿಂದ ಪ್ರಮಾಣ ಪತ್ರ ಇವುಗಳಲ್ಲಿ ಯಾವುದಾದರೊಂದು ದಾಖಲೆ.<br><br>**ನೋಂದಣಿ ಮಾಡುವ ಕಛೇರಿಗಳು:**<br>ಕಾರ್ಮಿಕ ಇಲಾಖೆಯ ಹಿರಿಯ ಕಾರ್ಮಿಕ ನಿರೀಕ್ಷಕರು/ ಕಾರ್ಮಿಕ ನಿರೀಕ್ಷಕರುಗಳ ಕಛೇರಿಗೆ ಈ ಮೇಲೆ ನಿಗಧಿಪಡಿಸಿದ ದಾಖಲೆಗಳೊಂದಿಗೆ ಆನ್ ಲೈನ್ ಮೂಲಕ ಸಂಬಂಧಪಟ್ಟ ಕಾರ್ಯ ವ್ಯಾಪ್ತಿಗೆ ಅರ್ಜಿ ಸಲ್ಲಿಸಲು ಅವಕಾಶ ಕಲ್ಪಿಸಲಾಗಿದೆ.<br><br>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ**<br><br>ಮಂಡಳಿಯು ಈ ಕೆಳಕಂಡ ಯೋಜನೆಗಳಡಿ ಅಸಂಘಟಿತ ಕಾರ್ಮಿಕರನ್ನು ನೋಂದಾಯಿಸುತ್ತಿದ್ದು, ಕೋಲಾರ ಜಿಲ್ಲೆ ಒಳಗೊಂಡತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ನೋಂದಣಿಯ ಮಾನದಂಡಗಳು ಈ ಕೆಳಗಿನಂತಿವೆ:<br><br>(1) ಕರ್ನಾಟಕ ರಾಜ್ಯ ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರ ಅಪಘಾತ ಪರಿಹಾರ ಯೋಜನೆ:- ಈ ಯೋಜನೆಯಡಿ ಸಾರಿಗೆ ಇಲಾಖೆಯಿಂದ ಕರ್ನಾಟಕ ರಾಜ್ಯದಲ್ಲಿ ವಾಣಿಜ್ಯ ಸಾರಿಗೆ ವಾಹನ ಚಲಾಯಿಸಲು ಊರ್ಜಿತ ಚಾಲನಾ ಪರವಾನಗಿ ಪಡೆದ ಎಲ್ಲಾ ಚಾಲಕರು ತಕ್ಷಣದಿಂದ ಫಲಾನುಭವಿಯೆಂದು ಪರಿಗಣಿಸುತ್ತಿದ್ದು, ಯೋಜನೆಯಡಿ ಪ್ರತ್ಯೇಕ ನೋಂದಣಿಯ ಅವಶ್ಯಕತೆಯಿರುವುದಿಲ್ಲ.<br><br>ಸದರಿ ವಾಹನಗಳ ನಿರ್ವಾಹಕರು ಹಾಗೂ ಕ್ಲೀನರ್‌ಗಳು ಯೋಜನೆಯಡಿ ನೋಂದಣಾಧಿಕಾರಿಗಳಲ್ಲಿ ನೋಂದಾಯಿಸಬೇಕಾಗುತ್ತಿದ್ದು, ಮಾನದಂಡಗಳು ಹೀಗಿವೆ.<br>ಮಾನದಂಡ:-<br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ಯೋಜನೆಯು ಖಾಸಗಿ ವಾಣಿಜ್ಯ ಸಾರಿಗೆ ಕಾರ್ಮಿಕರಾದ ಚಾಲಕರು, ನಿರ್ವಾಹಕರು ಹಾಗೂ ಕ್ಲೀನರ್‌ಗಳಿಗೆ ಅನ್ವಯಿಸುತ್ತದೆ.<br>• ವಯೋಮಿತಿ 20 ರಿಂದ 70 ವರ್ಷಗಳು.<br>• ನಿರ್ವಾಹಕರು ಸಾರಿಗೆ ಇಲಾಖೆಯಿಂದ ನೀಡಲ್ಪಟ್ಟ ಊರ್ಜಿತ ನಿರ್ವಾಹಕ ಪತ್ರ ಹೊಂದಿರಬೇಕು.<br>• ನಿರ್ವಾಹಕರು ಹಾಗೂ ಕ್ಲೀನರ್‌ಗಳು ಸಾರಿಗೆ ವಾಹನದ ಮಾಲೀಕರಿಂದ ಊರ್ಜಿತ ಉದ್ಯೋಗ ಪ್ರಮಾಣ ಪತ್ರವನ್ನು ಹೊಂದಿರಬೇಕು. |

| | | |
|---|---|---|
| | | (2) ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ:-<br>ಮಾನದಂಡ:-<br>• ಈ ಯೋಜನೆಯು ಕರ್ನಾಟಕ ರಾಜ್ಯಕ್ಕೆ ಮಾತ್ರ ಅನ್ವಯಿಸುತ್ತದೆ.<br>• ವಯೋಮಿತಿ 18 ರಿಂದ 60 ವರ್ಷಗಳು..<br>• ಪ್ರಸ್ತುತ 11 ವರ್ಗಗಳ ಅಸಂಘಟಿತ ಕಾರ್ಮಿಕರಾದ "ಹಮಾಲರು, ಮನೆಗೆಲಸದವರು, ಚಿಂದಿ ಆಯುವವರು, ಟೈಲರ್ಸ್, ಮೆಕ್ಯಾನಿಕ್, ಅಗಸರು, ಅಕ್ಕಸಾಲಿಗರು, ಕಮ್ಮಾರರು, ಕುಂಬಾರರು, ಕ್ಷೌರಿಕರು ಹಾಗೂ ಭಟ್ಟಿ ಕಾರ್ಮಿಕ" ವೃತ್ತಿಯವರಿಗೆ ಮಾತ್ರ ಅನ್ವಯಿಸುತ್ತದೆ.<br>• ಯೋಜನೆಯಡಿ ನೋಂದಣಿಯಾಗಲು ಅರ್ಜಿದಾರರು ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಕಾಯ್ದೆ 2008ರ ಅನುಸೂಚಿ II ರಲ್ಲಿ ನಮೂದಿಸಿರುವ ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರಬಾರದು.<br>(3) ಕೇಂದ್ರ ಸರ್ಕಾರದ ಇ-ಶ್ರಮ್ ಯೋಜನೆ:-<br>ಮಾನದಂಡ:-<br>• ಕೇಂದ್ರ ಸರ್ಕಾರವು ಗುರುತಿಸಿರುವ ಅಸಂಘಟಿತ ವರ್ಗದ ಕಾರ್ಮಿಕನಾಗಿರಬೇಕು.<br>• 16 ರಿಂದ 59 ವರ್ಷ ವಯೋಮಾನ.<br>• ಆದಾಯ ತೆರಿಗೆ ಪಾವತಿದಾರರಾಗಿರಬಾರದು.<br>• ಭವಿಷ್ಯನಿಧಿ ಹಾಗೂ ಇ.ಎಸ್.ಐ ಫಲಾನುಭವಿಯಾಗಿರಬಾರದು. |
| ಇ) | ಕಳೆದ ಮೂರು ವರ್ಷಗಳಿಂದ ಕೋಲಾರ ಜಿಲ್ಲೆಯಲ್ಲಿ ನೋಂದಣಿಯಾಗಿರುವ ಕಾರ್ಮಿಕರ ಸಂಖ್ಯೆ ಎಷ್ಟು; (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ ಮೂರು ವರ್ಷಗಳಿಂದ ಕಾರ್ಮಿಕ ಇಲಾಖೆಯ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಮಂಡಳಿಗಳು ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ನೋಂದಣಿಯಾಗಿರುವ ಕಾರ್ಮಿಕರ ವಿಧಾನ ಸಭಾ ಕ್ಷೇತ್ರವಾರು ಮಾಹಿತಿ ಲಭ್ಯವಿರುವುದಿಲ್ಲ ಆದರೆ ತಾಲ್ಲೂಕುವಾರು ಮಾಹಿತಿ ಲಭ್ಯವಿದ್ದು ವಿವರ ಈ ಕೆಳಕಂಡಂತಿದೆ.<br>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**<br>ಮಂಡಳಿಯು ಕಳೆದ ಮೂರು ವರ್ಷದಲ್ಲಿ ಕೋಲಾರ ಜಿಲ್ಲೆಯಲ್ಲಿ 49,660 ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಮಂಡಳಿಯ ಫಲಾನುಭವಿಗಳಾಗಿ ನೋಂದಣಿಯಾಗಿರುತ್ತಾರೆ. |

ಕೋಲಾರ ಜಿಲ್ಲೆಯಲ್ಲಿ ಕಳೆದ ಮೂರು ವರ್ಷದಲ್ಲಿ ಹಿರಿಯ/ ಕಾರ್ಮಿಕ ನಿರೀಕ್ಷಕರ ವೃತ್ತ/ ತಾಲ್ಲೂಕುವಾರು ನೋಂದಣಿಯಾದ ಕಾರ್ಮಿಕರ ವರ್ಷವಾರು ಮಾಹಿತಿ ಈ ಕೆಳಕಂಡಂತಿದೆ:-

| 2019-2020 | | |
|---|---|---|
| ಕ್ರಮ ಸಂಖ್ಯೆ. | ತಾಲ್ಲೂಕು/ವೃತ್ತವಾರು | ನೋಂದಣಿಯಾದ ಫಲಾನುಭವಿಗಳ ಸಂಖ್ಯೆ |
| 1 | ಬಂಗಾರಪೇಟೆ | 1442 |
| 2 | ಕೋಲಾರ | 338 |
| 3 | ಮಾಲೂರು | 556 |
| 4 | ಮುಳಬಾಗಿಲು | 634 |
| 5 | ಶ್ರೀನಿವಾಸಪುರ | 466 |
| ಒಟ್ಟು | | 3,436 |

| 2020-2021 | | |
|---|---|---|
| ಕ್ರಮ ಸಂಖ್ಯೆ. | ತಾಲ್ಲೂಕು/ವೃತ್ತವಾರು | ನೋಂದಣಿಯಾದ ಫಲಾನುಭವಿಗಳ ಸಂಖ್ಯೆ |
| 1 | ಬಂಗಾರಪೇಟೆ | 4943 |
| 2 | ಕೋಲಾರ | 1913 |
| 3 | ಮಾಲೂರು | 2801 |
| 4 | ಮುಳಬಾಗಿಲು | 2896 |
| 5 | ಶ್ರೀನಿವಾಸಪುರ | 2086 |
| ಒಟ್ಟು | | 14639 |

| 2021-2022 | | |
|---|---|---|
| ಕ್ರಮ ಸಂಖ್ಯೆ. | ತಾಲ್ಲೂಕು/ವೃತ್ತವಾರು | ನೋಂದಣಿಯಾದ ಫಲಾನುಭವಿಗಳ ಸಂಖ್ಯೆ |
| 1 | ಬಂಗಾರಪೇಟೆ | 10060 |
| 2 | ಕೋಲಾರ | 4931 |
| 3 | ಮಾಲೂರು | 3886 |
| 4 | ಮುಳಬಾಗಿಲು | 8166 |
| 5 | ಶ್ರೀನಿವಾಸಪುರ | 4542 |
| ಒಟ್ಟು | | 31585 |

**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**

ಮಂಡಳಿಯು ಜಾರಿಗೊಳಿಸುತ್ತಿರುವ ಮೇಲ್ಕಂಡ ಸಾಮಾಜಿಕ ಭದ್ರತಾ ಯೋಜನೆಗಳು/ ಕೋವಿಡ್-19ರ ವಿಶೇಷ ಪ್ಯಾಕೇಜ್‌ನಡಿ ಹಾಗೂ ಇ-ಶ್ರಮ್ ಪೋರ್ಟಲ್‌ನಲ್ಲಿ ನೋಂದಾಯಿತರಾದ ಅಸಂಘಟಿತ ಕಾರ್ಮಿಕರ ಸಂಖ್ಯೆಯು ಲಭ್ಯವಿದ್ದು, ವಿಧಾನಸಭಾ ಕ್ಷೇತ್ರವಾರು ಮಾಹಿತಿ ಲಭ್ಯವಿರುವುದಿಲ್ಲ. ಆದರೆ, ಕಳೆದ 3

| | | ವರ್ಷಗಳಲ್ಲಿ ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ, ತಾಲ್ಲೂಕುವಾರು ನೋಂದಾಯಿತ ಅಸಂಘಟಿತ ಕಾರ್ಮಿಕರ ವಿವರವು ಈ ಕೆಳಗಿನಂತಿದೆ. |
|---|---|---|

| ತಾಲ್ಲೂಕು | ಅಪಘಾತ ಪರಿಹಾರ ಯೋಜನೆ (ಸಾರಿಗೆ ಇಲಾಖೆ ದತ್ತಾಂಶದ ಪ್ರಕಾರ) | ಅಂಬೇಡ್ಕರ್ ಕಾರ್ಮಿಕ ಸಹಾಯ ಹಸ್ತ ಯೋಜನೆ | ಇ-ಶ್ರಮ್ ಪೋರ್ಟಲ್ | ಕೋವಿಡ್-19ರ ವಿಶೇಷ ಪ್ಯಾಕೇಜ್ |
|---|---|---|---|---|
| ಮಾಲೂರು | - | 300 | 207913 | 3452 |
| ಕೋಲಾರ | 1500000 | 489 | - | 8325 |
| ಬಂಗಾರಪೇಟೆ | 1000000 | 1122 | - | 6641 |
| ಮುಳಬಾಗಿಲು | 1500000 | 131 | - | 3239 |
| ಕೆ.ಜಿ.ಎಫ್ | 500000 | 0 | - | 14433 |
| ಶ್ರೀನಿವಾಸಪುರ | 500000 | 111 | - | 2877 |

| | | |
|---|---|---|
| ಈ) | ಗ್ರಾಮೀಣ ಪ್ರದೇಶದಲ್ಲಿ ಕಾರ್ಮಿಕರು ತಮ್ಮ ಸದಸ್ಯತ್ವವನ್ನು ನೋಂದಣಿ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅರ್ಹ ಕಾರ್ಮಿಕರಿಗೆ ಕಾರ್ಮಿಕ ಇಲಾಖೆಯ ಅಧೀನದಲ್ಲಿರುವ ವಿವಿಧ ಮಂಡಳಿಗಳ ಮೂಲಕ ಜಾರಿಗೊಳಿಸುತ್ತಿರುವ ವಿವಿಧ ಯೋಜನೆಗಳಡಿ ನೋಂದಣಿಯಾಗದಿರುವ ಅರ್ಹ ಕಾರ್ಮಿಕರನ್ನು ಗುರುತಿಸಿ ಯೋಜನೆಗಳ ಕುರಿತಾಗಿ ಮಾಹಿತಿ ನೀಡಿ ನೋಂದಣಿ ಮಾಡಿಸಲಾಗುತ್ತಿದ್ದು ಈ ಸಂಬಂಧ ಕೈಗೊಂಡ ಕ್ರಮಗಳ ಮಾಹಿತಿ ಈ ಕೆಳಕಂಡಂತಿದೆ. |
| ಉ) | ಬಂದಿದ್ದಲ್ಲಿ ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? | <u>**ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿ:**</u><br>ಕಟ್ಟಡ ಮತ್ತು ಇತರೆ ನಿರ್ಮಾಣ ಕೆಲಸದಲ್ಲಿ ತೊಡಗಿರುವ ಆರ್ಹ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರನ್ನು ಮಂಡಳಿಯ ಫಲಾನುಭವಿಗಳಾಗಿ ನೋಂದಣಿ ಮಾಡುವ ನಿಟ್ಟಿನಲ್ಲಿ ಈ ಕೆಳಕಂಡ ಕ್ರಮ ವಹಿಸಲಾಗುತ್ತಿದೆ.<br>1. ನೋಂದಣಿ ಮತ್ತು ನವೀಕರಣಕ್ಕಾಗಿ ಪಾವತಿಸಬೇಕಾಗಿದ್ದ ಶುಲ್ಕವನ್ನು ಕೈಬಿಡಲಾಗಿದೆ.<br>2. ಸ್ವತಃ ಅರ್ಜಿದಾರರೇ ಆನ್ ಲೈನ್ ಮೂಲಕ ಅರ್ಜಿ ಸಲ್ಲಿಸಲು ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲಾಗಿದೆ.<br>3. ಮಂಡಳಿಯ ನೋಂದಣಿ ಹಾಗೂ ಯೋಜನೆಗಳ ಬಗ್ಗೆ ವ್ಯಾಪಕ ಪ್ರಚಾರ ನೀಡಲು ಈ ಕೆಳಕಂಡಂತ ಮಾಹಿತಿ ಶಿಕ್ಷಣ ಸಂವಹನ (ಐಇಸಿ) ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ:<br>ಪೋಸ್ಟರ್ಸ್, ಬ್ರೋಚರ್ಸ್, ಬ್ಯಾನರ್, ಹೋರ್ಡಿಂಗ್ಸ್, ಕಿರುಹೊತ್ತಿಗೆ, ಕ್ಯಾಲೆಂಡರ್ ಮತ್ತು ಲೀಫ್ಲೆಟ್ಸ್/ ಪಾಂಪ್ಲೆಟ್ಸ್ |

ಮುಂತಾದ ಮುದ್ರಣ ಚಟುವಟಿಕೆಗಳು, ಶ್ರಾವ್ಯ ಮಾಧ್ಯಮದ ಮೂಲಕ ಪ್ರಚಾರ, ಆಟೋ ಬ್ರ್ಯಾಂಡಿಂಗ್, ಕಿರುಚಿತ್ರ/ ಸಾಕ್ಷ್ಯಚಿತ್ರಗಳು, ವಾಹನ ಬ್ರ್ಯಾಂಡಿಂಗ್ ಚಟುವಟಿಕೆಗಳು, ರೇಡಿಯೋ ಪ್ರಚಾರ, ಎಲ್.ಇ.ಡಿ ಹೋರ್ಡಿಂಗ್, ಆಟೋಮೇಟೆಡ್‌ಕಾಲ್ಸ್, ಆಟೋಮೇಟೆಡ್ ಮೆಸೇಜಸ್ (ವಾಟ್ಸಾಪ್/ಟೆಕ್ಸ್ಟ್), ಟಿನ್‌ಪ್ಲೇಟ್ಸ್/ಸನ್ ಬೋರ್ಡ್/ ಬಿಲ್ ಬೋರ್ಡ್ ಮುಂತಾದ ಬೋರ್ಡ್‌ಗಳ ಮುದ್ರಣ, ಬಸ್ ಬ್ರ್ಯಾಂಡಿಂಗ್ ಚಟುವಟಿಕೆ, ಬಸ್ ನಿಲ್ದಾಣ, ರೈಲು ನಿಲ್ದಾಣ ಮುಂತಾದ ಕಡೆಗಳಲ್ಲಿ ಶ್ರಾವ್ಯ ಮಾಧ್ಯಮಗಳ ಮೂಲಕ ಪ್ರಚಾರ, ರೈಲು ಬ್ರ್ಯಾಂಡಿಂಗ್, ರೈಲು ನಿಲ್ದಾಣಗಳಲ್ಲಿ ವೀಡಿಯೋ/ ಆಡಿಯೋ ಪ್ರಚಾರ, ಬಸ್ ನಿಲ್ದಾಣ ಬ್ರ್ಯಾಂಡಿಂಗ್ ಮೂಲಕ ಪ್ರಚಾರ, ಎಲ್.ಇ.ಡಿ ವಾಹನ ಬ್ರ್ಯಾಂಡಿಂಗ್ ಚಟುವಟಿಕೆ, ಕಿಯೋಸ್ಕ್‌ನಂತಹ ವಿದ್ಯುನ್ಮಾನ ಇಂಟರಾಕ್ಟೀವ್ ಯಂತ್ರಗಳ ಮೂಲಕ ಪ್ರಚಾರ ಹಾಗೂ ಮಾಹಿತಿ ಬಿತ್ತರಿಕೆ, ಬಸ್ ನಿಲ್ದಾಣ/ ರೈಲು ನಿಲ್ದಾಣ ಮುಂತಾದ ಕಡೆಗಳಲ್ಲಿ ಎಲ್.ಇ.ಡಿ ಡಿಸ್ಪ್ಲೇಗಳ ಮೂಲಕ ಪ್ರಚಾರ, ಗೋಡೆ ಬರಹ, ಸಾಮಾಜಿಕ ಮಾಧ್ಯಮ ಚಟುವಟಿಕೆಗಳು, ಟಿ.ವಿ ಜಾಹೀರಾತು, ದಿನ ಪತ್ರಿಕೆಗಳು, ವಾರ ಪತ್ರಿಕೆಗಳು, ಮಾಸಿಕ ಪತ್ರಿಕೆಗಳು, ವಿಶೇಷ ಸಂಚಿಕೆಗಳು ಮುಂತಾದವುಗಳಲ್ಲಿ ಪ್ರಕಟಣೆ, ಜಾಹೀರಾತು ಮೂಲಕ ಪ್ರಚಾರ, ವೀಡಿಯೋ ಡಿಸ್‌ಪ್ಲೇಗಳ ಅಳವಡಿಕೆ ಮತ್ತು ಜಾಹೀರಾತು, ಹೋರ್ಡಿಂಗ್ ಪ್ಯಾನೆಲ್‌ಗಳ ಅಳವಡಿಕೆ ಮತ್ತು ಜಾಹೀರಾತು, ಬೀದಿ ನಾಟಕ ಮತ್ತುಆಟೋ ಮುಂತಾದ ವಾಹನಗಳ ಮೂಲಕ ಪ್ರಚಾರ.

<u>**ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ:**</u>

ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅಸಂಘಟಿತ ವರ್ಗಗಳ ಕಾರ್ಮಿಕರಿಗೆ ಮಂಡಳಿಯು ಜಾರಿಗೊಳಿಸುತ್ತಿರುವ ಯೋಜನೆಗಳಡಿ ನೋಂದಣಿಯ ಕುರಿತು ಮಾಹಿತಿ ಇಲ್ಲದುದನ್ನು ಮನಗಂಡು, ಅವರಿಗೆ ಅರಿವು ಮೂಡಿಸಲು ಈ ಕೆಳಕಂಡ ಸಂವಹನ ಚಟುವಟಿಕೆಗಳನ್ನು ಕೈಗೊಳ್ಳಲಾಗಿರುತ್ತದೆ.

- ಕರಪತ್ರ, ದಿನ ಪತ್ರಿಕೆ, ಬ್ಯಾನರ್ಸ್, ಹಾಗೂ ಹೋರ್ಡಿಂಗ್ಸ್‌ಗಳ ಮೂಲಕ ಪ್ರಚಾರ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.
- ಕಾರ್ಮಿಕ ಇಲಾಖೆಯ ಅಧಿಕಾರಿಗಳಿಗೆ ಜಿಲ್ಲಾಮಟ್ಟದಲ್ಲಿ ತರಬೇತಿ ಕಾರ್ಯಕ್ರಮವನ್ನು ಏರ್ಪಡಿಸಲಾಗಿದೆ.
- ಕಾರ್ಮಿಕ ಸಹಾಯವಾಣಿ 155214 ಮೂಲಕ ಯೋಜನೆಗಳ ಬಗ್ಗೆ ಮಾಹಿತಿಯನ್ನು ನೀಡಲಾಗುತ್ತಿದೆ.

| SL NO | Taluk Name | SC | ST | TOTAL |
|---|---|---|---|---|
| 1 | Belagavi | 9 | 5 | 14 |
| 2 | Hukkeri | 0 | 0 | 0 |
| | TOTAL | 9 | 5 | 14 |

District Name: UTTARA KANNADA

| SL NO | Taluk Name | SC | ST | TOTAL |
|---|---|---|---|---|
| 1 | Bhatkal | 1 | 0 | 1 |
| 2 | Haliyal | 2 | 0 | 2 |
| 3 | Karwar | 0 | 0 | 0 |
| | TOTAL | 3 | 0 | 3 |

District Name: VIJAYAPURA

| SL NO | Taluk Name | SC | ST | TOTAL |
|---|---|---|---|---|
| 1 | Bijapur | 10 | 1 | 11 |
| | TOTAL | 10 | 1 | 11 |

District Name: CHITRADURGA

| SL NO | Taluk Name | SC | ST | TOTAL |
|---|---|---|---|---|
| 1 | Chitradurga | 7 | 3 | 10 |
| | TOTAL | 7 | 3 | 10 |

District Name: RAMANAGARA

| SL NO | Taluk Name | SC | ST | TOTAL |
|---|---|---|---|---|
| 1 | Channapatna | 0 | 0 | 0 |
| 2 | Ramanagara | 1 | 0 | 1 |
| | TOTAL | 1 | 0 | 1 |

District Name: HASSAN

| SL NO | Taluk Name | SC | ST | TOTAL |
|---|---|---|---|---|
| 1 | Channarayapattana | 0 | 0 | 0 |
| 2 | Hassan | 0 | 1 | 1 |
| | TOTAL | 0 | 1 | 1 |

District Name: CHICKBALLAPUR

| SL NO | Taluk Name | SC | ST | TOTAL |
|---|---|---|---|---|
| 1 | Chikkaballapur | 0 | 2 | 2 |
| 2 | Gudibanda | 2 | 1 | 3 |
| | TOTAL | 2 | 3 | 5 |

District Name: CHICKMAGALUR

| SL NO | Taluk Name | SC | ST | TOTAL |
|---|---|---|---|---|
| 1 | Chikkamagaluru | 5 | 0 | 5 |
| | TOTAL | 5 | 0 | 5 |

| | TOTAL | 4 | 3 | 7 |
|---|---|---|---|---|

District Name: UDUPI

| SL NO | Taluk Name | SC | ST | TOTAL |
|---|---|---|---|---|
| 1 | Karkala | 2 | 0 | 2 |
| 2 | Kundapura | 1 | 2 | 3 |
| 3 | Udupi | 0 | 1 | 1 |
| | TOTAL | 3 | 3 | 6 |

District Name: KOLAR

| SL NO | Taluk Name | SC | ST | TOTAL |
|---|---|---|---|---|
| 1 | Kolara | 13 | 2 | 15 |
| | TOTAL | 13 | 2 | 15 |

District Name: MANDYA

| SL NO | Taluk Name | SC | ST | TOTAL |
|---|---|---|---|---|
| 1 | Maddur | 1 | 0 | 1 |
| 2 | Mandya | 4 | 0 | 4 |
| 3 | Nagamangala | 0 | 0 | 0 |
| 4 | Shrirangapatlana | 5 | 1 | 6 |
| | TOTAL | 10 | 1 | 11 |

District Name: MYSORE

| SL NO | Taluk Name | SC | ST | TOTAL |
|---|---|---|---|---|
| 1 | Mysuru | 27 | 12 | 39 |
| | TOTAL | 27 | 12 | 39 |

District Name: RAICHUR

| SL NO | Taluk Name | SC | ST | TOTAL |
|---|---|---|---|---|
| 1 | Raichur | 5 | 2 | 7 |
| | TOTAL | 5 | 2 | 7 |

District Name: SHIMOGA

| SL NO | Taluk Name | SC | ST | TOTAL |
|---|---|---|---|---|
| 1 | Shimoga | 3 | 1 | 4 |
| | TOTAL | 3 | 1 | 4 |

District Name: YADGIR

| SL NO | Taluk Name | SC | ST | TOTAL |
|---|---|---|---|---|
| 1 | Shorapura | 2 | 1 | 3 |
| | TOTAL | 2 | [illegible] | 3 |

| GRAND TOTAL | 370 | 126 | 496 |
|---|---|---|---|

District Name: DAVANGERE

| SL NO | Taluk Name | SC | ST | TOTAL |
|---|---|---|---|---|
| 1 | Davanagere | 7 | 4 | 11 |
| | TOTAL | 7 | 4 | 11 |

District Name: BANGALORE RURAL

| SL NO | Taluk Name | SC | ST | TOTAL |
|---|---|---|---|---|
| 1 | Devanhalli | 9 | 5 | 14 |
| 2 | Doddaballapura | 1 | 0 | 1 |
| 3 | Nelmangala | 0 | 2 | 2 |
| | TOTAL | 10 | 7 | 17 |

District Name: DHARWAD

| SL NO | Taluk Name | SC | ST | TOTAL |
|---|---|---|---|---|
| 1 | Dharwad | 8 | 1 | 9 |
| 2 | Hubballi (Urban) | 12 | 4 | 16 |
| | TOTAL | 20 | 5 | 25 |

District Name: GADAG

| SL NO | Taluk Name | SC | ST | TOTAL |
|---|---|---|---|---|
| 1 | Gadaga-Betigeri | 2 | 0 | 2 |
| 2 | Shirahatti | 2 | 0 | 2 |
| | TOTAL | 4 | 0 | 4 |

District Name: TUMKUR

| SL NO | Taluk Name | SC | ST | TOTAL |
|---|---|---|---|---|
| 1 | Gubbi | 0 | 2 | 2 |
| 2 | Tiptur | 0 | 0 | 0 |
| 3 | Tumkuru | 12 | 2 | 14 |
| | TOTAL | 12 | 4 | 16 |

District Name: KALABURAGI

| SL NO | Taluk Name | SC | ST | TOTAL |
|---|---|---|---|---|
| 1 | Gulbarga | 6 | 1 | 7 |
| | TOTAL | 6 | 1 | 7 |

District Name: HAVERI

| SL NO | Taluk Name | SC | ST | TOTAL |
|---|---|---|---|---|
| 2 | Ranibennur | 0 | 1 | 1 |
| | TOTAL | 0 | 1 | 1 |

District Name: VIJAYANAGARA

| SL NO | Taluk Name | SC | ST | TOTAL |
|---|---|---|---|---|
| 1 | Hospete | 4 | 3 | 7 |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 565 |
| ಮಾನ್ಯ ಸದಸ್ಯರ ಹೆಸರು | ಶ್ರೀ ಈಶ್ವರ್ ಬಿ. ಖಂಡ್ರೆ (ಭಾಲ್ಕಿ) |
| ಉತ್ತರಿಸಬೇಕಾದ ದಿನಾಂಕ | 15/02/2023 |
| ಉತ್ತರಿಸುವ ಸಚಿವರು | ಮಾನ್ಯ ಕಾರ್ಮಿಕ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಎಷ್ಟು ಜನ ಕಟ್ಟಡ ಕಾರ್ಮಿಕರು ಕಟ್ಟಡ ಕಟ್ಟುವ ಸಮಯದಲ್ಲಿ ಮೃತಪಟ್ಟಿದ್ದಾರೆ; (ತಾಲ್ಲೂಕುವಾರು ವಿವರ ಒದಗಿಸುವುದು) | ಕಾರ್ಮಿಕ ಇಲಾಖೆಯ ಅಧೀನದಲ್ಲಿ ಬರುವ ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಮೃತಪಟ್ಟರೆ ಅವರ ಅವಲಂಬಿತರಿಗೆ ಅಪಘಾತ ಪರಿಹಾರ ಹಾಗೂ ದುರ್ಬಲತೆ ಪಿಂಚಣಿ ನೀಡಲಾಗುತ್ತಿದೆ.<br><br>ಬೀದರ್ ಜಿಲ್ಲೆಯಲ್ಲಿ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುವ ಸಂದರ್ಭದಲ್ಲಿ ಕಾರ್ಮಿಕರು ಮೃತ ಪಟ್ಟಿರುವುದಕ್ಕೆ ಪರಿಹಾರ ಕೋರಿ ಮಂಡಳಿಗೆ 02 ಅರ್ಜಿಗಳು ಸ್ವೀಕೃತವಾಗಿರುತ್ತವೆ.<br><br>ತಾಲ್ಲೂಕುವಾರು ವಿವರ ಈ ಕೆಳಕಂಡಂತಿದೆ:- |

| ಕ್ರ.ಸಂ. | ಕಾರ್ಮಿಕರ ನಿರೀಕ್ಷಕರ ವೃತ್ತ /ತಾಲ್ಲೂಕು | ಕಟ್ಟಡ ನಿರ್ಮಾಣ ಸಮಯದಲ್ಲಿ ಮೃತಪಟ್ಟಿರುವ ಕಟ್ಟಡ ಕಾರ್ಮಿಕರ ಸಂಖ್ಯೆ: | ವಿತರಿಸಿದ ಸಹಾಯಧನ |
|---|---|---|---|
| 1 | ಬೀದರ್ ವೃತ್ತ | 1 | ಮಂಡಳಿಯವತಿಯಿಂದ ಅವರ ಅವಲಂಬಿತರಿಗೆ ತಲಾ ರೂ. 5.00 ಲಕ್ಷ ಸಹಾಯಧನ ಬಿಡುಗಡೆ ಮಾಡಲಾಗಿದೆ. |
| 2 | ಭಾಲ್ಕಿ ವೃತ್ತ | 1 | |

<table>
<tr>
<td>ಆ)</td>
<td>ಇಲ್ಲಿಯವರೆಗೆ ಮೃತ ಪಟ್ಟಂತಹ ಕಟ್ಟಡ ಕಾರ್ಮಿಕರ ಕುಟುಂಬದವರಿಗೆ ಪರಿಹಾರ ಸಿಗದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಮಾಹಿತಿ ನೀಡುವುದು)</td>
<td>ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯ ವತಿಯಿಂದ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರು ಮೃತಪಟ್ಟರೆ ಅವರ ಅವಲಂಬಿತರಿಗೆ ಈ ಕೆಳಕಂಡ ಸಹಾಯಧನ ನೀಡಲಾಗುತ್ತಿದೆ.<br>
1. ಅಪಘಾತ ಪರಿಹಾರ: ಮರಣ ಹೊಂದಿದ್ದಲ್ಲಿ ರೂ.5,00,000/-, ಸಂಪೂರ್ಣ ಶಾಶ್ವತ ದುರ್ಬಲತೆಯಾದಲ್ಲಿ ರೂ.2,00,000/- ಮತ್ತು ಭಾಗಶಃ ಶಾಶ್ವತ ದುರ್ಬಲತೆಯಾದಲ್ಲಿ ರೂ.1,00,000/-<br>
2. ದುರ್ಬಲತೆ ಪಿಂಚಣಿ: ನೋಂದಾಯಿತ ಫಲಾನುಭವಿಯು ಖಾಯಿಲೆಗಳಿಂದ ಅಥವಾ ಕಟ್ಟಡ ಕಾಮಗಾರಿಗಳ ಅಪಘಾತದಿಂದ ಶಾಶ್ವತ/ಭಾಗಶಃ ಅಂಗವಿಕಲತೆ ಹೊಂದಿದ್ದರೆ ಮಾಸಿಕ ರೂ.2,000/- ಪಿಂಚಣಿ ಹಾಗೂ ಶೇಕಡವಾರು ದುರ್ಬಲತೆಯನ್ನಾಧರಿಸಿ ರೂ.2,00,000/- ದವರೆಗೆ ಅನುಗ್ರಹ ರಾಶಿ ಸಹಾಯಧನ.<br>
ರಾಜ್ಯದಾದ್ಯಂತ ಇಲ್ಲಿಯವರೆಗೆ ಕಟ್ಟಡ ಮತ್ತು ಇತರೆ ನಿರ್ಮಾಣ ಕಾಮಗಾರಿಗಳಲ್ಲಿ ಮೃತ ಪಟ್ಟ ಕಾರ್ಮಿಕರ ಅವಲಂಬಿತರಿಗೆ ಮಂಡಳಿಯ ವತಿಯಿಂದ 742 ವರದಿಯಾದಂಥಹ ಅರ್ಹ ಪ್ರಕರಣಗಳಲ್ಲಿ ರೂ. 27.60 ಕೋಟಿ ಸಹಾಯಧನ ವಿತರಿಸಲಾಗಿದೆ.<br>
ಅಲ್ಲದೇ, ಕಾರ್ಮಿಕರ ನೋಂದಣಿ ಹಾಗೂ ಅವರಿಗೆ ನೀಡುತ್ತಿರುವ ಸೌಲಭ್ಯಗಳ ಕುರಿತು ಮಂಡಳಿಯವತಿಯಿಂದ ಐಇಸಿ ಚಟುವಟಿಕೆಗಳ ಮೂಲಕ ವ್ಯಾಪಕ ಪ್ರಚಾರ ನೀಡಲಾಗುತ್ತಿದೆ.</td>
</tr>
<tr>
<td>ಇ)</td>
<td>ಬೀದರ್ ಜಿಲ್ಲೆಯಲ್ಲಿ ಕಾರ್ಮಿಕ ಇಲಾಖೆಯಲ್ಲಿ ಆನೇಕ ಹುದ್ದೆಗಳು ಖಾಲಿ ಇದ್ದು, ಇಲಾಖೆ ನಿಷ್ಕ್ರಿಯಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಬಂದಿದ್ದಲ್ಲಿ, ಸರ್ಕಾರ ಈ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡುತ್ತದೆ? (ಮಾಹಿತಿ ನೀಡುವುದು)</td>
<td>ಬೀದರ್ ಜಿಲ್ಲೆಯಲ್ಲಿ ಕಾರ್ಮಿಕ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಮಾಹಿತಿ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಪ್ರಸ್ತುತ ಕಾರ್ಮಿಕ ಇಲಾಖೆಯಲ್ಲಿ ಬೀದರ್ ಜಿಲ್ಲೆಗೆ ಸಂಬಂಧಿಸಿದಂತೆ, ಮಂಜೂರಾದ, ಭರ್ತಿಯಾದ ಹಾಗೂ ಖಾಲಿಯಿರುವ ಹುದ್ದೆಗಳ ವಿವರಗಳು ಈ ಕೆಳಕಂಡಂತಿರುತ್ತದೆ.
<table>
<tr><th>ಕ್ರ.ಸಂ</th><th>ಹುದ್ದೆಯ ಪದನಾಮ</th><th>ಮಂಜೂರು</th><th>ಭರ್ತಿ</th><th>ಖಾಲಿ</th></tr>
<tr><td>1.</td><td>ಕಾರ್ಮಿಕ ಅಧಿಕಾರಿ</td><td>1</td><td>1</td><td>–</td></tr>
<tr><td>2.</td><td>ಕಾರ್ಮಿಕ ನಿರೀಕ್ಷಕರು</td><td>5</td><td>2</td><td>3</td></tr>
<tr><td>3.</td><td>ಪ್ರಥಮ ದರ್ಜೆ ಸಹಾಯಕರು</td><td>1</td><td>1</td><td>–</td></tr>
<tr><td>4.</td><td>ದ್ವಿತೀಯ ದರ್ಜೆ ಸಹಾಯಕರು</td><td>1</td><td>1</td><td>–</td></tr>
<tr><td>5.</td><td>ಬೆರಳಚ್ಚುಗಾರರು</td><td>1</td><td>–</td><td>1</td></tr>
<tr><td>6.</td><td>ಅಕ್ಷರಸ್ಥ ಸಹಾಯಕರು</td><td>2</td><td>–</td><td>2</td></tr>
<tr><td>7.</td><td>ಜವಾನರು</td><td>3</td><td>1</td><td>2</td></tr>
<tr><td colspan="2">ಒಟ್ಟು</td><td>14</td><td>06</td><td>08</td></tr>
</table>
** 01 ಬೆರಳಚ್ಚುಗಾರರು ಮತ್ತು 03 ಗ್ರೂಪ್ 'ಡಿ' ಹುದ್ದೆಗಳನ್ನು ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲಾಗಿದೆ.</td>
</tr>
</table>

| | | |
|---|---|---|
| | | ಉಳಿಕೆ ಮೂಲ ವೃಂದದ 20 ಕಾರ್ಮಿಕ ನಿರೀಕ್ಷಕರು ಮತ್ತು ಕಲ್ಯಾಣ ಕರ್ನಾಟಕ ವೃಂದದ 05 ಕಾರ್ಮಿಕ ನಿರೀಕ್ಷಕರ ಹುದ್ದೆಗಳ ಭರ್ತಿಗಾಗಿ ಕರ್ನಾಟಕ ಲೋಕ ಸೇವಾ ಆಯೋಗವು ಅಧಿಸೂಚನೆ ಹೊರಡಿಸಿರುತ್ತದೆ.<br><br>ಅಲ್ಲದೇ, ಉಳಿಕೆ ಮೂಲ ವೃಂದದ 21 ಹುದ್ದೆಗಳು ಮತ್ತು ಕಲ್ಯಾಣ ಕರ್ನಾಟಕ ಪ್ರಾದೇಶಿಕ ವೃಂದದ 05 ಕಾರ್ಮಿಕ ನಿರೀಕ್ಷಕರ ಹುದ್ದೆಗಳ ಭರ್ತಿಗಾಗಿ ಕರ್ನಾಟಕ ಲೋಕಸೇವಾ ಆಯೋಗವು ದಿನಾಂಕ: 05.12.2021 ರಂದು ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸಿದ್ದು, ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ನಿರೀಕ್ಷಿಸಲಾಗಿದೆ. |

**ಕಾಇ 80 ಎಲ್‌ಇಟಿ 2023**

*(ಅರಬೈಲ್ ಶಿವರಾಂ ಹೆಬ್ಬಾರ್)*
*ಕಾರ್ಮಿಕ ಸಚಿವರು*

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 566 |
| ಸದಸ್ಯರ ಹೆಸರು | : | ಡಾ|| ದೇವಾನಂದ್ ಫುಲಸಿಂಗ್ ಚವಾಣ್ |
| ಉತ್ತರಿಸುವ ದಿನಾಂಕ | : | 15.02.2023 |
| ಉತ್ತರಿಸುವ ಸಚಿವರು | : | ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ನಾಲ್ಕು ವರ್ಷಗಳಿಂದ ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಿಂದ ಮಂಜೂರು ಮಾಡಿದ ಅನುದಾನವೆಷ್ಟು; | 2018-19ನೇ ಸಾಲಿನಿಂದ 2021-22ನೇ ಸಾಲಿನವರೆಗೆ ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ರಾಜ್ಯವಲಯ, ಕೇಂದ್ರವಲಯ ಮತ್ತು ಜಿಲ್ಲಾವಲಯ ಕಾರ್ಯಕ್ರಮಗಳಡಿ ಒಟ್ಟಾರೆ ರೂ.196.30 ಲಕ್ಷಗಳ ಮಂಜೂರಾತಿ ನೀಡಲಾಗಿದ್ದು ವರ್ಷವಾರು ವಿವರ ಅನುಬಂಧ-1ರಲ್ಲಿ ನೀಡಿದೆ. |
| ಆ) | ಪ್ರಸ್ತಕ ಸಾಲಿನಲ್ಲಿ ಪರಿಶಿಷ್ಟ ಪಂಗಡದ ಜನಾಂಗದ ಅಭಿವೃದ್ಧಿಗೆ ಮೀಸಲಿಟ್ಟಿರುವ ಅನುದಾನದಲ್ಲಿ ಯಾವ ಯಾವ ಕಾರ್ಯಕ್ರಮಗಳಿಗೆ ಅನುದಾನ ಬಿಡುಗಡೆ ಗೊಳಿಸಲಾಗಿದೆ; (ವಿವರ ನೀಡುವುದು) | 2022-23ನೇ ಸಾಲಿನಲ್ಲಿ ಜಿಲ್ಲಾ/ತಾಲ್ಲೂಕು ವಲಯ ಕಾರ್ಯಕ್ರಮಗಳಡಿ ರೂ.37.42 ಲಕ್ಷಗಳು ಹಂಚಿಕೆಯಾಗಿ ಬಿಡುಗಡೆಯಾಗಿರುತ್ತದೆ. ಕಾರ್ಯಕ್ರಮ / ಲೆಕ್ಕಶೀರ್ಷಿಕೆವಾರು ವಿವರ ಅನುಬಂಧ-2ರಲ್ಲಿ ನೀಡಿದೆ. |
| ಇ) | ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ಪರಿಶಿಷ್ಟ ಪಂಗಡಗಳ ಇಲಾಖೆಯಿಂದ ಪ್ರಸ್ತಕ ಸಾಲಿನಲ್ಲಿ ಅನುದಾನ ಮಂಜೂರು ಮಾಡದಿರಲು ಕಾರಣವೇನು; | 2022-23ನೇ ಸಾಲಿನಲ್ಲಿ ಜಿಲ್ಲಾ/ತಾಲ್ಲೂಕು ವಲಯ ಕಾರ್ಯಕ್ರಮಗಳಡಿ ನಾಗಠಾಣ ವಿಧಾನಸಭಾ ಮತಕ್ಷೇತ್ರಕ್ಕೆ ರೂ.37.42 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ. |
| ಈ) | ಪರಿಶಿಷ್ಟ ಪಂಗಡಗಳ ಇಲಾಖೆಯಲ್ಲಿರುವ ಯೋಜನೆಗಳಾವುವು; ಇದರ ಅನುಷ್ಠಾನಕ್ಕೆ ಇರುವ ಮಾನದಂಡಗಳೇನು? | ಪರಿಶಿಷ್ಟ ಪಂಗಡದ ಜನಾಂಗದ ಅಭಿವೃದ್ಧಿಗಾಗಿ ಪರಿಶಿಷ್ಟ ಪಂಗಡದ ಕಲ್ಯಾಣ ಇಲಾಖಾ ವತಿಯಿಂದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿರುತ್ತದೆ.<br>1.ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು.<br>2. ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು.<br>3. ಮೂಲಭೂತ ಸೌಕರ್ಯಗಳು.<br>4. ತರಬೇತಿ & ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳು<br>5. ಸಾಮಾಜಿಕ ಸಬಲೀಕರಣ ಕಾರ್ಯಕ್ರಮಗಳು.<br>ಸದರಿ ಯೋಜನೆಗಳ ಮಾನದಂಡ ವಿವರಗಳನ್ನು ಅನುಬಂಧ-3ರಲ್ಲಿ ನೀಡಿದೆ. |

ಸಕಇ 15 ಎಸ್‌ಟಿಪಿ 2023

(ಬಿ. ಶ್ರೀರಾಮುಲು)
ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

<u>ಅನುಬಂಧ-1</u>

ಡಾ॥ ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) ವಿಧಾನ ಸಭೆಯ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 566ಕ್ಕೆ ಉತ್ತರ

(ರೂ.ಲಕ್ಷಗಳಲ್ಲಿ)

| ಕ್ರಸಂ. | ಕಾರ್ಯಕ್ರಮ / ಲೆಕ್ಕ ಶೀರ್ಷಿಕೆ | 2018-19 | | | 2019-20 | | | 2020-21 | | | 2021-22 | | |
|---|---|---|---|---|---|---|---|---|---|---|---|---|---|
| | | ನಿಗದಿ | ಬಿಡುಗಡೆ | ವೆಚ್ಚ | ನಿಗದಿ | ಬಿಡುಗಡೆ | ವೆಚ್ಚ | ನಿಗದಿ | ಬಿಡುಗಡೆ | ವೆಚ್ಚ | ನಿಗದಿ | ಬಿಡುಗಡೆ | ವೆಚ್ಚ |
| 1 | ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ 2225-00-102-0-31 | 0.00 | 0.00 | 0.00 | 6.18 | 6.18 | 6.18 | 6.18 | 6.18 | 6.18 | 4.95 | 4.95 | 4.95 |
| 2 | ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿವೇತನ ಮತ್ತು ಧನಸಹಾಯ 2225-00-102-0-38 | 6.25 | 6.25 | 6.23 | 7.56 | 7.56 | 7.50 | 7.50 | 7.26 | 7.26 | 7.56 | 7.56 | 7.50 |
| 3 | ಪರಿಶಿಷ್ಟ ವರ್ಗದವರಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ (ಕೇ.ಪು.ಯೋ-ಕೇಂದ್ರದ ಪಾಲು) 2225-00-102-0-07 | 3.75 | 3.75 | 3.72 | 12.28 | 12.28 | 12.28 | 13.50 | 8.37 | 8.30 | 13.64 | 13.64 | 13.64 |
| 4 | ಪರಿಶಿಷ್ಟ ವರ್ಗದವರಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ(ಕೇ.ಪು.ಯೋ) (9&10ನೇ ತರಗತಿಗಳಿಗೆ) 2225-00-102-0-09 | 0.48 | 0.48 | 0.48 | 0.54 | 0.54 | 0.54 | 0.56 | 0.56 | 0.52 | 0.60 | 0.60 | 0.60 |
| 5 | ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ 2225-00-102-0-68 | 3.20 | 3.20 | 3.20 | 3.68 | 3.68 | 3.68 | 6.25 | 6.25 | 6.25 | 5.68 | 5.68 | 5.68 |
| 6 | ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ 2225-00-102-0-69 | 0.87 | 0.87 | 0.87 | 0.87 | 0.87 | 0.87 | 0.87 | 0.87 | 0.87 | 0.87 | 0.87 | 0.87 |
| 7 | ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಸಹಾಯಧನ 2225-00-102-0-70 | 0.62 | 0.62 | 0.62 | 0.62 | 0.62 | 0.62 | 0.62 | 0.62 | 0.62 | 0.62 | 0.62 | 0.62 |
| 8 | ರಾಜ್ಯ ವಲಯ ಕಾರ್ಯಕ್ರಮವಾದ ಪ್ರಗತಿ ಕಾಲೋನಿ ಯೋಜನೆ | 60.00 | 60.00 | 60.00 | 0.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| 9 | ರಾಜ್ಯ ವಲಯ ಕಾರ್ಯಕ್ರಮವಾದ ವಾಲ್ಮೀಕಿ/ಸಮುದಾಯಭವನ | 0.00 | 0.00 | 0.00 | 20.00 | 0.00 | 0.00 | 0.00 | 0.00 | 0.00 | 0.00 | 0.00 | 0.00 |
| ಒಟ್ಟು | | 75.17 | 75.17 | 75.12 | 51.73 | 31.73 | 31.67 | 35.48 | 30.11 | 30 | 33.92 | 33.92 | 33.86 |

# ಅನುಬಂಧ-2

**ಡಾ|| ದೇವಾನಚಿದ್ ಫುಲಸಿಂಗ್ ಚವಾಣ್ (ನಾಗಠಾಣ) ವಿಧಾನ ಸಭೆಯ ಸದಸ್ಯರು ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 566ಕ್ಕೆ ಉತ್ತರ**

(ರೂ.ಲಕ್ಷಗಳಲ್ಲಿ)

| ಕ್ರಸಂ. | ಕಾರ್ಯಕ್ರಮ / ಲೆಕ್ಕ ಶೀರ್ಷಿಕೆ | 2022-23 | | |
|---|---|---|---|---|
| | | ನಿಗದಿ | ಬಿಡುಗಡೆ | ವೆಚ್ಚ |
| 1 | ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿವೇತನ ಮತ್ತು ಧನಸಹಾಯ 2225-00-102-0-38 | 11.00 | 11.00 | 11.00 |
| 2 | ಪರಿಶಿಷ್ಟ ವರ್ಗದವರಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ (ಕೇ.ಪು.ಯೋ-ಕೇಂದ್ರದ ಪಾಲು) 2225-00-102-0-07 | 13.64 | 13.64 | 13.64 |
| 3 | ಪರಿಶಿಷ್ಟ ವರ್ಗದವರಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ(ಕೇ.ಪು.ಯೋ)(9&10ನೇ ತರಗತಿಗಳಿಗೆ) 2225-00-102-0-09 | 0.60 | 0.60 | 0.60 |
| 4 | ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ 2225-00-102-0-68 | 5.68 | 5.68 | 4.50 |
| 5 | ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ 2225-00-102-0-69 | 5.88 | 5.88 | 3.88 |
| 6 | ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಸಹಾಯಧನ 2225-00-102-0-70 | 0.62 | 0.62 | 0.62 |
| **ಒಟ್ಟು** | | 37.42 | 37.42 | 34.24 |

# ಅನುಬಂಧ-3

## ಮಾನ್ಯ ವಿಧಾನಸಭಾ ಸದಸ್ಯರಾದ ಡಾ||ದೇವಾನಂದ್ ಫುಲಸಿಂಗ್ ಚವಾಣ್ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:566ಗೆ ಉತ್ತರ

- ಅನುಷ್ಠಾನಗೊಳಿಸುತ್ತಿರುವ ಪ್ರಮುಖ ಕಾರ್ಯಕ್ರಮಗಳ ವಿವರ:
  1. ಶೈಕ್ಷಣಿಕ ಅಭಿವೃದ್ಧಿ
  2. ಮೂಲಭೂತ ಸೌಕರ್ಯ ಒದಗಿಸುವುದು
  3. ಆರ್ಥಿಕ ಅಭಿವೃದ್ಧಿ
  4. ತರಬೇತಿ ಮತ್ತು ಕೌಶಲ್ಯಾಭಿವೃದ್ಧಿ
  5. ಸಾಮಾಜಿಕ ಸಬಲೀಕರಣ

### 1. ಶೈಕ್ಷಣಿಕ ಅಭಿವೃದ್ಧಿ ಕಾರ್ಯಕ್ರಮಗಳು:

#### ಅ) ವಿದ್ಯಾರ್ಥಿನಿಲಯಗಳು/ವಸತಿ ಶಾಲೆಗಳ ನಿರ್ವಹಣೆ:

ಪ.ಪಂಗಡ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರೋತ್ಸಾಹ ನೀಡಲು ವಾಲ್ಮೀಕಿ ಆಶ್ರಮ ಶಾಲೆ/ವಸತಿ ಶಾಲೆ/ವಿದ್ಯಾರ್ಥಿನಿಲಯಗಳನ್ನು ನಿರ್ವಹಣೆ ಮಾಡಲಾಗುತ್ತಿದೆ. ವಿವರ ಈ ಕೆಳಕಂಡಂತಿದೆ.

| ಕ್ರ.ಸಂ | ಸಂಸ್ಥೆಗಳ ವಿವರ | ಪ.ಪಂಗಡ |
|---|---|---|
| 1. | ವಾಲ್ಮೀಕಿ ಆಶ್ರಮ ಶಾಲೆ (1 ರಿಂದ 5ನೇ ತರಗತಿ) | 119 |
| 2. | ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯ | 136 |
| 3. | ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ | 134 |
| 4. | ಅನುದಾನಿತ ವಿದ್ಯಾರ್ಥಿನಿಲಯ | 30 |
| | ಒಟ್ಟು: | 419 |

- 39868 ಪ.ಪಂಗಡದ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸಿದೆ.

### ನಿಲಯಾರ್ಥಿಗಳಿಗೆ ಒದಗಿಸುತ್ತಿರುವ ಸೌಲಭ್ಯಗಳ ವಿವರ

(ರೂ.ಲಕ್ಷಗಳಲ್ಲಿ)

| ವಿವರ | ವಾಲ್ಮೀಕಿ ಆಶ್ರಮ ಶಾಲೆ | ಮೆ.ಪೂರ್ವ ವಿ.ನಿಲಯ | ಮೆ.ನಂತರ ವಿ.ನಿಲಯ | ವಸತಿ ಶಾಲೆ/ಕಾಲೇಜು |
|---|---|---|---|---|
| ಭೋಜನ ವೆಚ್ಚ (ಮಾಸಿಕ) | 1,450/- | 1,650/- | 1,750/- | 1,750/- |

ಇತರೆ ಸೌಲಭ್ಯಗಳು

ಸಮವಸ್ತ್ರ (2ಜೊತೆ).ಪಠ್ಯ/ನೋಟ್ ಪುಸ್ತಕ, ಶುಚಿ ಸಂಭ್ರಮ ಕಿಟ್, ಶೂ, ಕ್ಷೌರ ವೆಚ, ದಿನಪತ್ರಿಕೆ/Magazine, ವೈದ್ಯಕೀಯ ವೆಚ್ಚ, ಸ್ವಚ್ಚತೆ ವೆಚ್ಚ, ಮಂಚ, ಹಾಸಿಗೆ, ಹೊದಿಕೆ, ದಿಂಬು, ಜಮಖಾನ, ಕ್ರೀಡಾ ಸಾಮಗ್ರಿಗಳು ಹಾಗೂ ಇತರೆ ಮೂಲಭೂತ ಸೌಲಭ್ಯಗಳು.

**ವಿದ್ಯಾರ್ಥಿನಿಲಯ ಕಟ್ಟಡಗಳ ವಿವರ**

| ಕ್ರ.ಸಂ | ವಿವರ | ಪ.ಪಂಗಡ |
|---|---|---|
| 1. | ಒಟ್ಟು ವಿದ್ಯಾರ್ಥಿನಿಲಯಗಳ ಸಂಖ್ಯೆ | 389 |
| 2. | ಸ್ವಂತ ಕಟ್ಟಡಗಳ ಸಂಖ್ಯೆ | 298 |
| 3. | ಬಾಡಿಗೆ ಕಟ್ಟಡಗಳ ಸಂಖ್ಯೆ | 91 |
| 4. | ನಿರ್ಮಾಣ ಹಂತದಲ್ಲಿರುವ ಕಟ್ಟಡಗಳ ಸಂಖ್ಯೆ | 56 |
| 5. | ನಿವೇಶನ ಲಭ್ಯತೆ | 33 |
| 6. | ನಿವೇಶನ ರಹಿತ ವಿ.ನಿ ಸಂಖ್ಯೆ | 02 |

**ಆ) ವಿದ್ಯಾರ್ಥಿವೇತನ:**

**ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ (ಡೇ ಸ್ಕಾಲರ್)**

ವಿದ್ಯಾರ್ಥಿನಿಲಯಗಳಲ್ಲಿ ಇಲ್ಲದೇ ಇರುವ ಪರಿಶಿಷ್ಟ ಪಂಗಡದ 1 ರಿಂದ 8ನೇ ತರಗತಿಯವರೆಗಿನ ವಿದ್ಯಾರ್ಥಿಗಳು ತಮ್ಮ ವ್ಯಾಸಂಗವನ್ನು ಮುಂದುವರೆಸುವಂತೆ ಪ್ರೋತ್ಸಾಹಿಸಲು ಹಾಗೂ ವಿದ್ಯಾಭ್ಯಾಸದ ನಡುವೆ ಶಾಲೆ ಬಿಡುವುದನ್ನು ತಪ್ಪಿಸಲು ಮತ್ತು ಪಾಲಕರು ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಉತ್ತೇಜಿಸಲು ಮೆಟ್ರಿಕ್‌ಪೂರ್ವ ವಿದ್ಯಾರ್ಥಿವೇತನ ಮಂಜೂರು ಮಾಡಲಾಗುತ್ತಿದೆ.

| ತರಗತಿ | ಬಾಲಕರು | ಬಾಲಕಿಯರು |
|---|---|---|
| 1 ರಿಂದ 5 | 1000/- | 1100/- |
| 6 ರಿಂದ 7 | 1150/- | 1250/- |
| 8ನೇ ತರಗತಿ | 1250/- | 1350/- |

**ಮೆಟ್ರಿಕ್ ಪೂರ್ವ 9 ಮತ್ತು 10ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ – ಕೇಂದ್ರ ಪುರಸ್ಕೃತ ಯೋಜನೆ**

| ತರಗತಿ | ಬಾಲಕರು | ಬಾಲಕಿಯರು |
|---|---|---|
| 9 ರಿಂದ 10 | 3000/- | 3000/- |

- ಸರ್ಕಾರಿ ಶಾಲೆಗಳಲ್ಲಿ ಮತ್ತು ಮಾನ್ಯತೆ ಪಡೆದ ಅನುದಾನಿತ/ಖಾಸಗಿ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳು ವಿದ್ಯಾರ್ಥಿವೇತನಕ್ಕೆ ಅರ್ಹರಾಗಿರುತ್ತಾರೆ.

- ರಾಜ್ಯ ಸರ್ಕಾರ 1 ರಿಂದ 8ನೇ ತರಗತಿ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.6.00 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.
- ಕೇಂದ್ರ ಸರ್ಕಾರ 9 ರಿಂದ 10ನೇ ತರಗತಿ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.2.50 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.
- ಎಸ್.ಎಸ್.ಪಿ ಪೋರ್ಟಲ್‌ನಲ್ಲಿ ಆನ್‌ಲೈನ್ ಮೂಲಕ ಸ್ವೀಕರಿಸುವ ಅರ್ಜಿಗಳನ್ನು ಪರಿಶೀಲಿಸಿ, ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ಜಮೆ ಮಾಡಲಾಗುತ್ತದೆ.
- 2021-22ನೇ ಸಾಲಿನಲ್ಲಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನವನ್ನು 3,14,609 ವಿದ್ಯಾರ್ಥಿಗಳಿಗೆ ರೂ.38.74 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿನಲ್ಲಿ ರೂ.73.82 ಕೋಟಿ ಅನುದಾನ ನಿಗದಿಪಡಿಸಿಕೊಳ್ಳಲಾಗಿದೆ.

## ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ (ವಾರ್ಷಿಕ)

| ಗುಂಪು | ಕೋರ್ಸ್‌ಗಳು | ಮಾಹೆಯಾನ | ನಿಲಯಾರ್ಥಿಗಳು | | | ಡೇಸ್ಕಾಲರ್ಸ್ | |
|---|---|---|---|---|---|---|---|
| | | | ಕೇಂದ್ರ | ರಾಜ್ಯ | ಒಟ್ಟು | ಮಾಹೆಯಾನ | ವಾರ್ಷಿಕ |
| I. | MBBS/BE/ALL PG courses/M.Phil/Phd etc | 1200 | 14400/- | 6,600/- | 21,000/- | 550 | 6600/- |
| II. | LLB/Paramedical Nursing Course/B.Pharm/Nursing Etc | 820 | 9840/- | 11,160/- | 21,000/- | 530 | 6360/- |
| III. | BA/B.Sc.B.Com and all Degree courses | 570 | 6840/- | 14,160/- | 21,000/- | 300 | 3600/- |
| IV. | PUC/ITI/DIPLOMA etc | 380 | 4560/- | 16,440/- | 21,000/- | 230 | 2760/- |

- ಈ ವಿದ್ಯಾರ್ಥಿವೇತನದಲ್ಲಿ ಬೋಧನಾ ಶುಲ್ಕ ಮತ್ತು ಇತರೆ ಕಡ್ಡಾಯ ಶುಲ್ಕಗಳ ಪಾವತಿ, ಡೇ ಸ್ಕಾಲರ್ ವಿದ್ಯಾರ್ಥಿಗಳ ಮತ್ತು ಹಾಸ್ಟೆಲ್ ವಿದ್ಯಾರ್ಥಿಗಳ ಭೋಜನಾ ವೆಚ್ಚ ಸೇರಿರುತ್ತದೆ.
- ಕೇಂದ್ರ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನಕ್ಕಾಗಿ ಅರ್ಜಿ ಸಲ್ಲಿಸಲು ಕುಟುಂಬದ ವಾರ್ಷಿಕ ಆದಾಯ ಮಿತಿಯನ್ನು ರೂ.2.50 ಲಕ್ಷಗಳಿಗೆ ನಿಗಧಿಪಡಿಸಲಾಗಿದೆ.
- ರೂ.2.50 ಲಕ್ಷ ಆದಾಯ ಮಿತಿಯಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿಯನ್ನು ಇಲಾಖೆಯಿಂದ ಭರಿಸಲಾಗುತ್ತಿದೆ.
- ರೂ.2.50 ಲಕ್ಷದಿಂದ ರೂ.10.00 ಲಕ್ಷವರೆಗಿನ ಪೋಷಕರ ವಾರ್ಷಿಕ ಆದಾಯ ಮಿತಿಯೊಳಗಿನ ವೃತ್ತಿಪರ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಶೇಕಡ 50% ರಷ್ಟು ಶುಲ್ಕ ವಿನಾಯಿತಿ ಮಾಡಲಾಗುತ್ತಿದೆ.

- ವಿದ್ಯಾರ್ಥಿವೇತನ ಪಡೆಯಲು State Scholarship Portal (SSP)ನಲ್ಲಿ ವಿದ್ಯಾರ್ಥಿಗಳು ಆನ್‌ಲೈನ್ ಅರ್ಜಿಯನ್ನು ಸಲ್ಲಿಸುವುದು.
- 2021-22ನೇ ಸಾಲಿನ ಮೆಟ್ರಿಕ್ ನಂತರದ 1,28,631 ವಿದ್ಯಾರ್ಥಿಗಳಿಗೆ ರೂ.133.43 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿನಲ್ಲಿ ರೂ.151.24 ಕೋಟಿ ಅನುದಾನ ನಿಗದಿಪಡಿಸಿಕೊಳ್ಳಲಾಗಿದೆ.

### ಅ) ಪ್ರೋತ್ಸಾಹಧನ ಯೋಜನೆ: ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆ:

ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಈ ಕೆಳಗಿನಂತೆ ಪ್ರೋತ್ಸಾಹಧನ ನೀಡಲಾಗುತ್ತಿದೆ.

| ಕೋರ್ಸಿನ ವಿವರ | | ಪ್ರೋತ್ಸಾಹಧನ(ರೂ.ಗಳಲ್ಲಿ) |
|---|---|---|
| ಎಸ್.ಎಸ್.ಎಲ್.ಸಿ | ಶೇ 60 ರಿಂದ ಶೇ 75 | 7500/- |
| | ಶೇ 75 ಕ್ಕಿಂತ ಮೇಲ್ಪಟ್ಟು | 15,000/ |
| ಪಿ.ಯು.ಸಿ/ ಡಿಪ್ಲೊಮ | | 20,000/- |
| ಪದವಿ | | 25,000/- |
| ಸ್ನಾತಕೋತ್ತರ ಪದವಿ | | 30,000/- |
| ವೃತ್ತಿಪರ ಪದವಿ (ವೈದ್ಯಕೀಯ/ತಾಂತ್ರಿಕ/ಕೃಷಿ/ಪಶುವೈದ್ಯಕೀಯ) | | 35,000/- |
| ವಿಶ್ವವಿದ್ಯಾಲಯ ಮಟ್ಟದಲ್ಲಿ PG Courses ವಿವಿಧ ವಿಷಯಗಳಲ್ಲಿ ಗಳಲ್ಲಿ 1 ರಿಂದ 5 ರ್‍ಯಾಂಕ್ ಪಡೆದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ | | 50,000/- |

- ವಿದ್ಯಾರ್ಥಿಗಳು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.
- ವಿದ್ಯಾರ್ಥಿಗಳು ಪ್ರಥಮ ಪ್ರಯತ್ನ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾಗಿರಬೇಕು.
- ವಿದ್ಯಾರ್ಥಿಗಳು ಹೊರ ರಾಜ್ಯದಲ್ಲಿ ವ್ಯಾಸಾಂಗ ಮಾಡಿದ್ದರು ಸಹ ಪ್ರೋತ್ಸಾಹಧನಕ್ಕೆ ಅರ್ಹರಿರುತ್ತಾರೆ.
- ರಾಜ್ಯ/ ಕೇಂದ್ರ ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವ ವಿದ್ಯಾಲಯ/ ಶೈಕ್ಷಣಿಕ ಸಂಸ್ಥೆಗಳಲ್ಲಿ ವ್ಯಾಸಾಂಗ ಮಾಡಿದ ವಿದ್ಯಾರ್ಥಿಗಳು ಅರ್ಹರಿರುತ್ತಾರೆ.
- ಆದಾಯದ ಮಿತಿ ಇರುವುದಿಲ್ಲ.
- ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವುದು
- ಪ್ರೋತ್ಸಾಹ ಧನವನ್ನು ಒಂದೇ ಕಂತಿನಲ್ಲಿ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಜಮೆ RTGS/NEFT ಮಾಡಲಾಗುವುದು.
- 2021-22ನೇ ಸಾಲಿನಲ್ಲಿ ಪ್ರೋತ್ಸಾಹಧನವನ್ನು 64292 ವಿದ್ಯಾರ್ಥಿಗಳಿಗೆ ರೂ.85.38 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿನಲ್ಲಿ 4992 ವಿದ್ಯಾರ್ಥಿಗಳಿಗೆ ರೂ.7.48 ಕೋಟಿ ವೆಚ್ಚ ಭರಿಸಲಾಗಿದೆ.

### ಆ) ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದ ವಿದ್ಯಾರ್ಥಿಗಳಿಗೆ ನಗದು ಪ್ರಶಸ್ತಿ:

ಸ್ವಾತಾಂತ್ರ್ಯ ಹೋರಟದ ಭಾಗವಾದ ಹಲಗಲಿ ಬೇಡರ ಬಂಡಾಯದಲ್ಲಿ ಹುತಾತ್ಮರಾದ ಜಡಗ ಮತ್ತು ಬಾಲ ಇವರ ಹೆಸರಿನಲ್ಲಿ ಪ್ರತಿ ಜಿಲ್ಲೆಯಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದ ಎಸ್.ಟಿ ವಿದ್ಯಾರ್ಥಿಗಳಿಗೆ ರೂ.1.00 ಲಕ್ಷ ನಗದು ಪ್ರಶಸ್ತಿ ನೀಡಲಾಗುತ್ತಿದೆ.

- 2021-22ನೇ ಸಾಲಿನಲ್ಲಿ 38 ವಿದ್ಯಾರ್ಥಿಗಳಿಗೆ ರೂ.38.00 ಲಕ್ಷಗಳ ವೆಚ್ಚ ಭರಿಸಲಾಗಿದೆ.

### ಇ) ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶಾವಕಾಶ:

ರಾಜ್ಯ ಮಟ್ಟದ ಸಮಿತಿಯಿಂದ ಆಯ್ಕೆ ಮಾಡಲಾದ ಪ್ರತಿಷ್ಠಿತ ಶಾಲೆಗಳಿಗೆ ಪ್ರತಿಭಾವಂತ ಪ.ಪಂಗಡ ವಿದ್ಯಾರ್ಥಿಗಳನ್ನು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿ ಮೂಲಕ ಆಯ್ಕೆಗೊಂಡು ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ನೀಡಲಾಗುತ್ತಿದೆ.

- ತಾಲ್ಲೂಕು ಮಟ್ಟ: ರೂ.50.000/-: ಜಿಲ್ಲಾ ಮಟ್ಟ: ರೂ.75,000/-; ಬೆಂಗಳೂರು(ನ): ರೂ.1.00ಲಕ್ಷ
- ಪ್ರತಿ ವರ್ಷ 748 ವಿದ್ಯಾರ್ಥಿಗಳಿಗೆ ಪ್ರವೇಶ ಕಲ್ಪಿಸಲು ಗುರಿ ನಿಗದಿಪಡಿಸಿಕೊಳ್ಳಲಾಗಿದೆ.
- ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯ ಮಿತಿ ರೂ.2.00 ಲಕ್ಷ.
- 2021-22ನೇ ಸಾಲಿನಲ್ಲಿ 748 ನವೀನ ಹಾಗೂ 1848 ನವೀಕರಣ ವಿದ್ಯಾರ್ಥಿಗಳಿಗೆ ರೂ.8.20 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿನಲ್ಲಿ 244 ವಿದ್ಯಾರ್ಥಿಗಳಿಗೆ ರೂ.1.20 ಕೋಟಿ ವೆಚ್ಚ ಭರಿಸಲಾಗಿದೆ.

### ಈ) "ಪ್ರಬುದ್ಧ"-ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಧನಸಹಾಯ:

ಈ ಯೋಜನೆಯಡಿ ಸರ್ಕಾರದಿಂದ ಅನುಮೋದಿಸಿರುವ ವಿದೇಶದಲ್ಲಿರುವ ವಿಶ್ವವಿದ್ಯಾಲಯಗಳು/ ಶಿಕ್ಷಣ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿ.ಹೆಚ್.ಡಿ ಪದವಿಗಳಲ್ಲಿನ ವಿಷಯಗಳನ್ನು ವ್ಯಾಸಾಂಗ ಮಾಡಲು ಆಯ್ಕೆಯಾದವರಿಗೆ ಆರ್ಥಿಕ ಸಹಾಯವನ್ನು ಒದಗಿಸಲಾಗವುದು.

- ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿಹೆಚ್‌ಡಿ ವ್ಯಾಸಂಗ ಮಾಡುವ ಅರ್ಹ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ ಕೋರ್ಸ್ ಶುಲ್ಕ, ನಿರ್ವಹಣಾ ಭತ್ಯೆ, ಒಂದು ಭಾರಿಯ ಪ್ರಮಾಣ ವೆಚ್ಚ, ಪುಸ್ತಕಗಳ ವೆಚ್ಚ, ವೀಸಾ ವೆಚ್ಚ ಇತ್ಯಾಧಿಗಳನ್ನು ಇಲಾಖೆಯಿಂದ ಭರಿಸಲಾಗುತ್ತಿದೆ.
- ವಾರ್ಷಿಕ ರೂ.8.00 ಲಕ್ಷ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳಿಗೆ ಶಿಕ್ಷಣದ ಪೂರ್ಣ ವೆಚ್ಚ ಭರಿಸಲಾಗುತ್ತಿದೆ.
- ವಾರ್ಷಿಕ ರೂ.8.00 ಲಕ್ಷದಿಂದ ರೂ.15.00 ಲಕ್ಷಗಳ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳ 50% ವೆಚ್ಚವನ್ನು ಸರ್ಕಾರ ಭರಿಸುತ್ತಿದೆ.
- ವಾರ್ಷಿಕ ರೂ.15.00 ಲಕ್ಷದಿಂದ ರೂ.25.00 ಲಕ್ಷಗಳ ಆದಾಯ ಮಿತಿಯೊಳಗಿರುವ ವಿದ್ಯಾರ್ಥಿಗಳಿಗೆ ಶೇ.33% ವೆಚ್ಚವನ್ನು ಸರ್ಕಾರ ಭರಿಸುತ್ತದೆ.
- ವಾರ್ಷಿಕ ಸರಾಸರಿ ರೂ.2.50 ಕೋಟಿ ವೆಚ್ಚ ಮಾಡಲಾಗುತ್ತಿದೆ.

- 2021-22ನೇ ಸಾಲಿನಲ್ಲಿ 31 ವಿದ್ಯಾರ್ಥಿಗಳಿಗೆ ರೂ.4.41 ಕೋಟಿ ಸಹಾಯಧನ ಭರಿಸಲಾಗಿದೆ.
- 2022-23ನೇ ಸಾಲಿನಲ್ಲಿ 41 ವಿದ್ಯಾರ್ಥಿಗಳಿಗೆ ರೂ.5.57 ಕೋಟಿ ಸಹಾಯಧನ ಭರಿಸಲಾಗಿದೆ.

## ಉ) ರಾಷ್ಟ್ರೀಯ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಾದ ಐ.ಐ.ಟಿ/ಐ.ಐ.ಎಂ/ಐ.ಎಂ.ಐ/ಎನ್.ಐ.ಟಿ/ಇತ್ಯಾದಿ ಸಂಸ್ಥೆಗಳಲ್ಲಿ ಪ್ರವೇಶ ಪಡೆಯುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಒಂದು ಭಾರಿಗೆ ರೂ.2.00 ಲಕ್ಷ ಸಹಾಯಧನವನ್ನು ನೀಡಲಾಗುತ್ತಿದೆ.

ಸಿ.ಎ/ಐ.ಸಿ.ಡಬ್ಲ್ಯೂಎ/ಕಂಪನಿ ಸೆಕ್ರೆಟರಿ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಕ್ರಮವಾಗಿ ರೂ.50,000/- ಮತ್ತು ರೂ.1.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.

- ವಿದ್ಯಾರ್ಥಿಗಳು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.
- ಕರ್ನಾಟಕ ರಾಜ್ಯದ ಮೂಲ ನಿವಾಸಿಯಾಗಿರ ಬೇಕು.
- ಸಂಬಂಧಪಟ್ಟ ಶಿಕ್ಷಣ ಸಂಸ್ಥೆಯಲ್ಲಿ ವ್ಯಾಸಾಂಗಕ್ಕೆ ಆಯ್ಕೆಯಾಗಿರಬೇಕು.
- ಮೆಟ್ರಿಕ್ ನಂತರ ವಿದ್ಯಾರ್ಥಿವೇತನದಲ್ಲಾಗಲಿ ಅಥವಾ ಇತರೆ ಮೂಲಗಳಿಂದ ವ್ಯಾಸಾಂಗಕ್ಕೆ ಶುಲ್ಕಗಳ ಮರು ಪಾವತಿಯನ್ನು ಪಡೆದಿರಬಾರದು.
- ಆದಾಯದ ಮಿತಿ ಇರುವುದಿಲ್ಲ.

2021-22ನೇ ಸಾಲಿನಲ್ಲಿ 14 ವಿದ್ಯಾರ್ಥಿಗಳಿಗೆ ರೂ.14.00 ಲಕ್ಷ ಸಹಾಯಧನ ಭರಿಸಲಾಗಿದೆ.

2022-23ನೇ ಸಾಲಿನಲ್ಲಿ 18 ವಿದ್ಯಾರ್ಥಿಗಳಿಗೆ ರೂ.18.00 ಲಕ್ಷ ಸಹಾಯಧನ ಭರಿಸಲಾಗಿದೆ.

## ಋ) ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿ ಜೀವನ ಭತ್ಯೆ:-

ಪರಿಶಿಷ್ಟ ಪಂಗಡದವರಾದ ಜೇನು ಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿ ಜೀವನ ಭತ್ಯೆಯನ್ನು, ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿಗಳಾದ ಪರಿಶಿಷ್ಟ ಪಂಗಡಗಳಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿಗಳಿಗೆ ಜೀವನ ಭತ್ಯೆಗಳನ್ನು ನೀಡಲಾಗುತ್ತಿದೆ. ವಿವರ ಈ ಕೆಳಕಂಡಂತಿದೆ.

| ಕ್ರ. ಸಂ | ವಿದ್ಯಾರ್ಹತೆ | ಶೈಕ್ಷಣಿಕ ಪ್ರೋತ್ಸಾಹ ಧನ ವಾರ್ಷಿಕ ರೂ.ಗಳಲ್ಲಿ | ಮಾಸಿಕ ನಿರುದ್ಯೋಗಿ ಜೀವನ ಭತ್ಯೆ |
|---|---|---|---|
| 1 | ಎಸ್.ಎಸ್.ಎಲ್.ಸಿ | 10,000/- | 2,000/- |

| 2 | ಪಿ.ಯು.ಸಿ ಮತ್ತು ತತ್ಸಮಾನ ಕೋರ್ಸುಗಳಿಗೆ ಪ್ರತಿ ವರ್ಷಕ್ಕೆ | 12,000/- | 2,500/- |
|---|---|---|---|
| 3 | ಎಲ್ಲಾ ಪದವಿ ಕೋರ್ಸುಗಳ ಪ್ರತಿ ವರ್ಷಕ್ಕೆ | 15,000/- | 3,500/- |
| 4 | ಎಲ್ಲಾ ಸ್ನಾತಕೋತರ ಕೋರ್ಸ್‌ಗಳ ಪ್ರತಿ ವರ್ಷಕ್ಕೆ | 18,000/- | 4,500/- |

## 1. ಶೈಕ್ಷಣಿಕ ಪ್ರೋತ್ಸಾಹಧನ

- ಮೂಲ ನಿವಾಸಿಗಳಾದ ಜೇನುಕುರುಬ ಮತ್ತು ಕೊರಗ ವಿದ್ಯಾರ್ಥಿಗಳಿಗೆ ವರ್ಷದಲ್ಲಿ 2 ಭಾರಿ ಶೈಕ್ಷಣಿಕ ಪ್ರೋತ್ಸಾಹಧನ ನೀಡಲಾಗುವುದು.
- ಅಭ್ಯರ್ಥಿಗಳು ವ್ಯಾಸಾಂಗ ಮಾಡುತ್ತಿರುವ ಬಗ್ಗೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರಿಂದ ದೃಢೀಕರಣ ಪತ್ರ ಪಡೆದು ಶೈಕ್ಷಣಿಕ ಪ್ರೋತ್ಸಾಹ ಧನವನ್ನು ಮಂಜೂರು ಮಾಡುವುದು.
- ಮೇಲ್ಕಂಡ ಕೋರ್ಸುಗಳಲ್ಲಿ ಅಭ್ಯರ್ಥಿಗಳು ವ್ಯಾಸಾಂಗವನ್ನು ಮುಂದುವರಿಸದೆ ನಿಲ್ಲಿಸಿದಲ್ಲಿ, ಅಂತಹ ಅಭ್ಯರ್ಥಿಗಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ರದ್ದುಪಡಿಸುವುದು. ಆದರೆ, ನಿರುದ್ಯೋಗಿ ಭತ್ಯೆಗೆ ಅರ್ಹರಿದ್ದಲ್ಲಿ ಅದರಲ್ಲಿ ಜೀವನ ಭತ್ಯೆ ನೀಡುವುದು.

## 2. ಮಾಸಿಕ ನಿರುದ್ಯೋಗಿ ಜೀವನ ಭತ್ಯೆ

- ನಿರುದ್ಯೋಗಿ ಜೀವನ ಭತ್ಯೆಗೆ ಗರಿಷ್ಟ ವಯೋಮಿತಿ -40 ವರ್ಷದ ಒಳಗಿರತಕ್ಕದ್ದು.
- ಸದರಿ ಜೀವನ ಭತ್ಯೆಯನ್ನು ಸರ್ಕಾರ/ಖಾಸಗಿ/ಸ್ವಯಂ ಉದ್ಯೋಗಗಳಡಿ ಉದ್ಯೋಗ ದೊರಕಿದ ಅಥವಾ 3 ವರ್ಷಗಳ ಅವಧಿಗೆ ಯಾವುದು ಮೊದಲು ಅಲ್ಲಿಯವರೆಗೆ ಮಾತ್ರ ಸೀಮಿತಗೊಳಿಸತಕ್ಕದ್ದು.
- ಸದರಿ ಜೀವನ ಭತ್ಯೆಯನ್ನು ಪಡೆಯುವ ಅಭ್ಯರ್ಥಿಗಳು ಮೇಲ್ಕಂಡ ಅವಧಿಯಲ್ಲಿ ಕೌಶಲ್ಯಾಭಿವೃದ್ಧಿ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕಡ್ಡಾಯವಾಗಿ ತರಬೇತಿ ಪಡೆಯತಕ್ಕದ್ದು.
- ನಿರುದ್ಯೋಗಿ ಅಭ್ಯರ್ಥಿಗಳಿಗೆ ಮಾಸಿಕ ಜೀವನ ಭತ್ಯೆ ಮಂಜೂರು ಮಾಡಲು ಮತ್ತು ತರಬೇತಿಗಳಿಗೆ ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿ ಆಯ್ಕೆ ಮಾಡತಕ್ಕದ್ದು.
- ನಿರುದ್ಯೋಗಿ ಜೀವನ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳ ವಿವರಗಳಾದ ಶೈಕ್ಷಣಿಕ ವಿದ್ಯಾರ್ಹತೆ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ ಇತರೆ ದಾಖಲೆಗಳನ್ನು ಪಡೆದು ಜಿಲ್ಲಾ ಮಟ್ಟದ ಸಮಿತಿ ಮಂಜೂರು ಮಾಡುವುದು.
- ನಿರುದ್ಯೋಗಿ ಜೀವನ ಭತ್ಯೆಯನ್ನು ಅಭ್ಯರ್ಥಿಗಳ ಬ್ಯಾಂಕ್ ಖಾತೆಗೆ ನೇರವಾಗಿ ಜಮಾ ಮಾಡತಕ್ಕದ್ದು.

➢ 2022-23ನೇ ಸಾಲಿನಲ್ಲಿ ರೂ.4.00 ಕೋಟಿಗಳ ಅನುದಾನ ನಿಗದಿಪಡಿಸಿಕೊಳ್ಳಲಾಗಿದ್ದು, 997 ವಿದ್ಯಾರ್ಥಿಗಳಿಗೆ ರೂ.2.00 ಕೋಟಿ ವೆಚ್ಚ ಭರಿಸಲಾಗಿದೆ.

## ಎ)ಕೇಂದ್ರಿಯ ಅನುದಾನದಲ್ಲಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು:- (ಕೇಂದ್ರ ಸರ್ಕಾರದ ಯೋಜನೆ)

ಕೇಂದ್ರ ಸರ್ಕಾರದ ಅನುದಾನದಿಂದ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಸಲಾಗುತ್ತಿದೆ. 1) ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಸತಿ ಶಾಲೆಗಳು, 2) ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಸತಿ ರಹಿತ ಶಾಲೆಗಳು, 3) 10 ಹಾಸಿಗೆಗಳ ಆಸ್ಪತ್ರೆ/ಡಿಸ್ಪೆನ್ಸ್‌ರಿ, 4) ಸಂಚಾರಿ ಆರೋಗ್ಯ ಘಟಕ. 5) ವಿವಿಧ ವೃತ್ತಿಗಳಲ್ಲಿ ತರಬೇತಿ. ಸ್ವಯಂ ಸೇವಾ ಸಂಸ್ಥೆಗಳು ಮೇಲ್ಕಾಣಿಸಿದ ಯಾವುದೇ ಯೋಜನೆ ಹಮ್ಮಿಕೊಳ್ಳಬಯಸಿದ್ದಲ್ಲಿ, ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗುವುದು. ಕೇಂದ್ರ ಸರ್ಕಾರವು ಹಣ ಲಭ್ಯತೆಗನುಗುಣವಾಗಿ ಪ್ರಸ್ತಾವನೆಗಳಿಗೆ ಮಂಜೂರಾತಿ ನೀಡಲಾಗುವುದು.

## ಏ)ಪರಿಶಿಷ್ಟ ಪಂಗಡದ ಆದಿವಾಸಿ ಪಂಗಡಕ್ಕೆ ಸೇರಿದ ಜೇನುಕುರುಬ ಮತ್ತು ಕೊರಗ ವಿದ್ಯಾರ್ಥಿಗಳಿಗೆ ಪ್ರೋತ್ಸಾಹ ಧನ:-

ಪರಿಶಿಷ್ಟ ಪಂಗಡದ ಆದಿವಾಸಿ ಪಂಗಡಕ್ಕೆ ಸೇರಿದ ಜೇನುಕುರುಬ ಮತ್ತು ಕೊರಗ ಜನಾಂಗಕ್ಕೆ ಸೇರಿದ 7ನೇ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ರೂ.2,500/- ಮತ್ತು 10ನೇ ತರಗತಿಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ರೂ.5,000/- ಗಳ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ. 2021-22ನೇ ಸಾಲಿಗೆ 122 ವಿದ್ಯಾರ್ಥಿಗಳಿಗೆ ರೂ.5.00 ಲಕ್ಷ ಪ್ರೋತ್ಸಾಹಧನ ಭರಿಸಲಾಗಿದೆ.

- ಪರಿಶಿಷ್ಟ ಪಂಗಡಕ್ಕೆ ಸೇರಿದ ಜೇನುಕುರುಬ ಮತ್ತು ಕೊರಗ ಜನಾಂಗದ ವಿದ್ಯಾರ್ಥಿಗಳಾಗಿರಬೇಕು.
- 7ನೇ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
- 10ನೇ ತರಗತಿಯ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

## 2. ಮೂಲಭೂತ ಸೌಕರ್ಯ ಒದಗಿಸುವ ಕಾರ್ಯಕ್ರಮಗಳು:

### ಪ್ರಗತಿ ಕಾಲೋನಿ

ಪ್ರಗತಿ ಕಾಲೋನಿ ಯೋಜನೆ ರೂಪಿಸಿ ಪರಿಶಿಷ್ಟ ಪಂಗಡದ ಜನರು ಹೆಚ್ಚಿನ ಸಂಖ್ಯೆ ಯಲ್ಲಿ ವಾಸಿಸುತ್ತಿರುವ ಕಾಲೋನಿಗಳಲ್ಲಿ ಮೂಲಭೂತ ಸೌಲಭ್ಯ ಹಂತ ಹಂತವಾಗಿ ಸಮಗ್ರವಾಗಿ ಅಭಿವೃದ್ಧಿ ಪಡಿಸಲು ಸರ್ಕಾರದ ಆದೇಶವಾಗಿದ್ದು, ಅದರಂತೆ ಕಾರ್ಯಕ್ರಮ ಅನುಷ್ಠಾನಗೊಳಸಲಾಗುತ್ತಿದೆ.

- 2021-22ನೇ ಸಾಲಿನಲ್ಲಿ ರೂ.190.29 ಕೋಟಿಗಳಿಗೆ ಮಂಜೂರಾತಿ ನೀಡಿ ರೂ.69.53 ಕೋಟಿ ಬಿಡುಗಡೆಗೊಳಿಸಲಾಗಿದೆ.
- 2022-23ನೇ ಸಾಲಿನಲ್ಲಿ ರೂ.27.09 ಕೋಟಿಗಳ ಅನುದಾನ ನಿಗದಿಪಡಿಸಿಕೊಳ್ಳಲಾಗಿದ್ದು, ರೂ.20.32 ಕೋಟಿಗಳ ಮುಂದುವರೆದ ಕಾಮಗಾರಿಗಳಿಗೆ 2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

## ಅ) ಮೂಲನಿವಾಸಿ ಜನಾಂಗದ ಅಭಿವೃದ್ಧಿ ಯೋಜನೆ:- (ಕೇಂದ್ರ ಸರ್ಕಾರದ ಯೋಜನೆ)

ರಾಜ್ಯದ ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕೊರಗ ಮತ್ತು ಜೇನುಕುರುಬ ಜನಾಂಗವನ್ನು ಮೂಲನಿವಾಸಿ ಜನಾಂಗದವರೆಂದು ಗುರುತಿಸಲಾಗಿದೆ. ರಾಜ್ಯದಲ್ಲಿ ಕೊರಗ ಜನಾಂಗದವರ ಒಟ್ಟು ಸಂಖ್ಯೆ:14794 ಇದ್ದು, 3436 ಕುಟುಂಬಗಳು ಇರುತ್ತವೆ. ಅದೇ ರೀತಿ ಜೇನುಕುರುಬರ ಜನಸಂಖ್ಯೆ 36076 ಇದ್ದು, 8767 ಕುಟುಂಬಗಳು ಇರುತ್ತವೆ. ಈ ಮೂಲನಿವಾಸಿ ಜನಾಂಗದವರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರ ಮಂಜೂರು ಮಾಡುವ ಅನುದಾನದಲ್ಲಿ 1) ವಸತಿ ರಹಿತರಿಗೆ ವಾಸದ ಮನೆಗಳ ನಿರ್ಮಾಣ. 2) ಆರ್ಥಿಕ ಉನ್ನತಿ ಕಾರ್ಯಕ್ರಮಗಳನ್ನು ಕೈಗೊಳ್ಳಲಾಗುವುದು.

## ಆ) ಮೂಲನಿವಾಸಿ ಜನಾಂಗದವರಿಗೆ ವಸತಿ ಸೌಕರ್ಯ ಯೋಜನೆ:-

ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಮೂಲನಿವಾಸಿ ಜನಾಂಗದವರಾದ ಕೊರಗ ಮತ್ತು ಜೇನುಕುರುಬ ಜನಾಂಗದವರಲ್ಲಿ ಮನೆ ಇಲ್ಲದವರಿಗೆ ಪ್ರತಿ ಮನೆಗೆ ರೂ.3.50 ಲಕ್ಷಗಳಲ್ಲಿ ಮನೆ ನಿರ್ಮಿಸಿ ಕೊಡುವ ಯೋಜನೆ ಹಮ್ಮಿಕೊಳ್ಳಲಾಗಿದೆ.

## ಇ) ಅನುಸೂಚಿತ ಬುಡಕಟ್ಟು ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳ (ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ) ಅಧಿನಿಯಮ 2006 ಮತ್ತು ನಿಯಮಗಳು 2008 - ಅನುಷ್ಠಾನಗೊಳಿಸುವ ಬಗ್ಗೆ:-

ತಲಾತಲಾಂತರದಿಂದ ಅರಣ್ಯಗಳಲ್ಲಿ ವಾಸಿಸುತ್ತಿರುವ ಅನುಸೂಚಿತ ಬುಡಕಟ್ಟು ಮತ್ತು ಇತರೆ ಪಾರಂಪರಿಕ ಅರಣ್ಯ ವಾಸಿಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡಲು ಈ ಕಾಯ್ದೆಯನ್ನು ಕೇಂದ್ರ ಸರ್ಕಾರವು ಜಾರಿಗೆ ತಂದಿರುತ್ತದೆ. ಈ ಕಾಯ್ದೆಯ ಪ್ರಕಾರ ನಿಗದಿಪಡಿಸಿದ ನಿಯಮಗಳ ಪ್ರಕಾರ ಅರ್ಹರಾದವರಿಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಜಿಲ್ಲಾ ಮಟ್ಟದ ಸಮಿತಿಯಲ್ಲಿ ಪರಿಶೀಲಿಸಿ ಅರ್ಹ ಅರಣ್ಯ ವಾಸಿಗಳಿಗೆ ಅರಣ್ಯ ಹಕ್ಕುಗಳನ್ನು ಮಾನ್ಯ ಮಾಡುವ ಹಕ್ಕು ಪತ್ರಗಳನ್ನು ನೀಡಲಾಗುತ್ತಿದೆ. ಇದುವರೆವಿಗೂ 16039 ಹಕ್ಕು ಪತ್ರಗಳನ್ನು ನೀಡಲಾಗಿದೆ. ಈ ಪೈಕಿ ಆರ್‌ಟಿಸಿ ಕಲಂ 11ರಲ್ಲಿ 10072 ನಮೂದಿಸಲಾಗಿರುತ್ತದೆ.

## 3. <u>ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳು</u>

## ಅ)ವಾಲ್ಮೀಕಿ/ಸಮುದಾಯ ಭವನಗಳು

ಪರಿಶಿಷ್ಟ ಪಂಗಡದ ಸಮುದಾಯದ ಉಪಯೋಗಕ್ಕಾಗಿ ಅಂದರೆ ಸದರಿ ಸಮುದಾಯದ ಸಭೆ ಸಮಾರಂಭಗಳಿಗೆ ಮತ್ತು ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳಿಗಾಗಿ ಸಮುದಾಯದ ಸದುಪಯೋಗಕ್ಕಾಗಿ ಬಳಸಿಕೊಳ್ಳಲು ಗ್ರಾಮ, ಹೋಬಳಿ, ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ

ವಾಲ್ಮೀಕಿ/ಸಮುದಾಯ ಭವನಗಳನ್ನು ಈ ಕೆಳಗಿನ ಘಟಕ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.

- ಗ್ರಾಮ ಮಟ್ಟ (ರೂ.20.00 ಲಕ್ಷ)
- ಹೋಬಳಿ ಮಟ್ಟ (ರೂ.75.00 ಲಕ್ಷ)
- ತಾಲ್ಲೂಕು ಮಟ್ಟ (ರೂ.200.00 ಲಕ್ಷ)
- ಜಿಲ್ಲಾ ಮಟ್ಟ (ರೂ.400.00 ಲಕ್ಷ)
- ರಾಜ್ಯ ಮಟ್ಟ (ರೂ.500.00 ಲಕ್ಷ)

- ಭವನಗಳನ್ನು ಸಮುದಾಯದ ಸಭೆ ಸಮಾರಂಭಗಳಿಗೆ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಬಳಸತಕ್ಕದ್ದು.
- ತಾಲ್ಲೂಕು ಮಟ್ಟ ಮತ್ತು ಜಿಲ್ಲಾ ಮಟ್ಟದ ಭವನ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆ ಸರ್ಕಾರವು ನೀಡುವುದು ಮತ್ತು ಗ್ರಾಮ/ಹೋಬಳಿ ಮತ್ತು ಪಟ್ಟಣ ಪಂಚಾಯತಿ ವ್ಯಾಪ್ತಿಯ ಭವನಗಳಿಗೆ ಜಿಲ್ಲಾ ಅನುಷ್ಠಾನದ ಸಮಿತಿ ಅನುಮೋದನೆಯನ್ನು ನೀಡಲಾಗುತ್ತದೆ.
- ಪ್ರಸ್ತಾಪಿತ ಅನುದಾನವನ್ನು ಸರ್ಕಾರಿ ಸಂಸ್ಥೆಗಳಿಗೆ ಸರ್ಕಾರದ ಆದೇಶದನುಸಾರ ಜಿಲ್ಲಾಧಿಕಾರಿ/ ನಿರ್ದೇಶಕರಿಂದ ಬಿಡುಗಡೆಗೊಳಿಸುವುದು.
- ಕಟ್ಟಡ ಕಾಮಗಾರಿಯ ಉಸ್ತುವಾರಿ ಮತ್ತು ಮೇಲ್ವಿಚಾರಣೆಯನ್ನು ಜಿಲ್ಲಾ ಅನುಷ್ಠಾನ ಸಮಿತಿ ಮತ್ತು ಇಲಾಖಾ ಮುಖ್ಯಸ್ಥರಿಂದ ಕೈಗೊಳ್ಳುವುದು.
- ಕಟ್ಟಡ ಕಾಮಗಾರಿಗಳ ಕಾರ್ಯವನ್ನು ಅನುಮೋದಿತ ನಕ್ಷೆ ಹಾಗೂ ವೆಚ್ಚದನ್ವಯ ಕೆ.ಟಿ.ಪಿ.ಪಿ ಕಾಯ್ದೆಯನ್ವಯ ಕಾಮಗಾರಿ ಸಂಸ್ಥೆಯು ನಿಯಮಾನುಸಾರ ಕೈಗೊಳ್ಳುವುದು.
- ಸರ್ಕಾರಿ ನಿವೇಶನ/ಸ್ಥಳೀಯ ಸಂಸ್ಥೆಗಳಿಗೆ ಮೀಸಲಿರಿಸಿದ ಸರ್ಕಾರಿ ನಿವೇಶನ ಕಟ್ಟಡ ಕಾಮಗಾರಿಯು ಪ್ರಾರಂಭವಾಗುವ ಮುನ್ನ ಸದರಿ ನಿವೇಶನವನ್ನು ಇಲಾಖಾ ಹೆಸರಿನಲ್ಲಿ ವರ್ಗಾಯಿಸತಕ್ಕದ್ದು.
- ಜಿಲ್ಲೆಯ ಜಿಲ್ಲಾಧಿಕಾರಿ/ ಇಲಾಖಾ ಮುಖ್ಯಸ್ಥರು ಮತ್ತು ಸರ್ಕಾರ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಕಾಮಗಾರಿ ವೆಚ್ಚದ ಆಡಳಿತಾತ್ಮಕ ಮತ್ತು ತಾಂತ್ರಿಕ ಅನುಮೋದನೆಗೆ ಅನುಷ್ಠಾನ ಸಮಿತಿ ರಚಿಸುವುದು.
- 2021-22ನೇ ಸಾಲಿನಲ್ಲಿ ವಾಲ್ಮೀಕಿ/ ಸಮುದಾಯ ಭವನಗಳ ನಿರ್ಮಾಣ ಮಾಡಲು ರೂ.35.00 ಕೋಟಿ ಅನುದಾನ ಹಂಚಿಕೆಯಾಗಿದ್ದು, ಬಿಡುಗಡೆಯಾದ ಮೊತ್ತದಲ್ಲಿ ಮುಂದುವರೆದ ಹಾಗೂ ಹೊಸ 125 ಭವನಗಳಿಗೆ ರೂ.35.00 ಕೋಟಿ ವೆಚ್ಚ ಮಾಡಲಾಗಿದೆ.
- 2022-23ನೇ ಸಾಲಿನಲ್ಲಿ ವಾಲ್ಮೀಕಿ/ಸಮುದಾಯ ಭವನಗಳ ನಿರ್ಮಾಣ ಮಾಡಲು ರೂ.20.00 ಕೋಟಿ ಅನುದಾನ ಹಂಚಿಕೆಯಾಗಿದ್ದು, 96 ವಾಲ್ಮೀಕಿ/ ಸಮುದಾಯ ಭವನಗಳನಿರ್ಮಾಣಕ್ಕೆ ರೂ.14.28 ಕೋಟಿ ವೆಚ್ಚ ಭರಿಸಲಾಗಿದೆ.

**ಆ)ಪರಿಶಿಷ್ಟ ಪಂಗಡದ ಸಂಘ-ಸಂಸ್ಥೆಗಳು/ಧಾರ್ಮಿಕ ಸಂಸ್ಥೆಗಳ ವತಿಯಿಂದ ನಡೆಸಲಾಗುತ್ತಿರುವ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಶಾಲಾ/ ಕಾಲೇಜು/ ವಿದ್ಯಾರ್ಥಿನಿಲಯ/ ಸಮುದಾಯ ಭವನಗಳನ್ನು ನಿರ್ಮಿಸಲು ಧನಸಹಾಯ ನೀಡಲಾಗುತ್ತಿದೆ.**

- ಧನಸಹಾಯ ಪಡೆಯುವ ಸಂಸ್ಥೆಯು ಕರ್ನಾಟಕ ಸಹಕಾರ ಸಂಘಗಳ ನೊಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ ನೊಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆ ನೊಂದಣಿಯಾಗಿ 3 ವರ್ಷಗಳಾಗಿರಬೇಕು.
- ಟ್ರಸ್ಟ್ ಸದಸ್ಯರು ಒಂದೇ ಕುಟುಂಬದವರಾಗಿರಬಾರದು.
- ಸಹಾಯಧನ ಬಯಸುವ ಸಂಸ್ಥೆ/ಟ್ರಸ್ಟ್‌ಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ಸಂಸ್ಥೆ ಹೆಸರಿನಲ್ಲಿ ಜಮೀನು/ನಿವೇಶನ ಹೊಂದಿರಬೇಕು ಅಥವಾ ಸರ್ಕಾರಿ/ಸರ್ಕಾರಿಯೇತರ ಸಂಸ್ಥೆಗಳಿಂದ ಕನಿಷ್ಠ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆ (ಲೀಸ್) ಪಡೆದಿರಬೇಕು.
- ಸಂಘ/ಸಂಸ್ಥೆಯು ಈ ಕಾರ್ಯಕ್ರಮದಡಿ ಒಂದು ಭಾರಿ ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತವೆ.
  - ➢ ಪಟ್ಟಣ ಪಂಚಾಯಿತಿ/ಗ್ರಾಮ ಪಂಚಾಯಿತಿ – ರೂ.10.00 ಲಕ್ಷ
  - ➢ ತಾಲ್ಲೂಕು ಕೇಂದ್ರ ಸ್ಥಾನ – ರೂ.25.00 ಲಕ್ಷ
  - ➢ ಜಿಲ್ಲಾ ಕೇಂದ್ರ ಸ್ಥಾನ – ರೂ.50.00 ಲಕ್ಷ
- 2021-22ನೇ ಸಾಲಿನಲ್ಲಿ 98 ಸಂಘ ಸಂಸ್ಥೆಗಳಿಗೆ ರೂ.22.50 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ.
- 2022-23ನೇ ಸಾಲಿನಲ್ಲಿ 05 ಮಠಗಳು/ಸಂಘ ಸಂಸ್ಥೆಗಳಿಗೆ ಒಟ್ಟು ರೂ.10.50 ಕೋಟಿಗಳ ವೆಚ್ಚ ಭರಿಸಲಾಗಿದೆ.

## ಇ)ಪರಿಶಿಷ್ಟ ಪಂಗಡದ ಉದ್ಯಮಿಗಳಿಗೆ ಬಡ್ಡಿ ಸಹಾಯಧನ ಕಾರ್ಯಕ್ರಮ

ಪರಿಶಿಷ್ಟ ಪಂಗಡದ ಉದ್ದಿಮೆದಾರರು ಎಂ.ಸ್.ಎಂ.ಇ ಘಟಕಗಳನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಹಾಗೂ ರಾಷ್ಟ್ರೀಕೃತ/ ಜಿಲ್ಲಾ ಸಹಕಾರಿ ಬ್ಯಾಂಕ್/ಅಪೆಕ್ಸ್ ಸಹಕಾರಿ ಬ್ಯಾಂಕ್‌ಗಳಿಂದ ಪಡೆಯುವ ಸಾಲಕ್ಕೆ 4% ಬಡ್ಡಿ ಸಹಾಯಧನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.

- ➢ ಕನಿಷ್ಟ ಸಾಲದ ಮೊತ್ತ:ರೂ.10.00 ಲಕ್ಷದಿಂದ ಗರಿಷ್ಟ ರೂ.10.00 ಕೋಟಿಗಳವರೆಗೆ
- ➢ ಸಾಲದ ಮರುಪಾವತಿ ಅವಧಿ: 10 ವರ್ಷ

- 2021-22ನೇ ಸಾಲಿನಿಂದ ವಾಣಿಜ್ಯ ಮತ್ತು ವ್ಯಾಪಾರ ಚಟುವಟಿಕೆಗಳಾದ ಮಳಿಗೆ/ಡೀಲರ್ ಶಿಪ್/ ಫ್ರಾಂಚೈಸಿ ಮತ್ತು ಹೋಟೆಲ್ ಉದ್ಯಮಗಳನ್ನು ಪ್ರಾರಂಭಿಸಲು ಸಹ 4% ಬಡ್ಡಿ ಸಹಾಯಧನ ಯೋಜನೆಯನ್ನು ವಿಸ್ತರಿಸಿದ್ದು, ಈ ಯೋಜನೆಯಡಿ ಗರಿಷ್ಟ ರೂ.1.00 ಕೋಟಿವರೆಗೆ ರಾಷ್ಟ್ರೀಕೃತ ಮತ್ತು ವಾಣಿಜ್ಯ ಶೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಸಾಲ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಗರಿಷ್ಠ ಸಾಲದ ಮರುಪಾವತಿ ಅವಧಿ 5 ವರ್ಷ.

- 2021-22ನೇ ಸಾಲಿನಲ್ಲಿ ಪರಿಶಿಷ್ಟ ಪಂಗಡದ 318 ಉದ್ಯಮಿಗಳಿಗೆ 4% ಬಡ್ಡಿ ಸಹಾಯಧನ ಯೋಜನೆಯಡಿ ರೂ.17.00 ಕೋಟಿ ಸಹಾಯಧನ ನೀಡಲಾಗಿದೆ.
- 2022-23ನೇ ಸಾಲಿನಲ್ಲಿ ಪರಿಶಿಷ್ಟ ವರ್ಗದ 27 ಉದ್ದಿಮೆದಾರರಿಗೆ ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ವತಿಯಿಂದ ರೂ.26.51 ಕೋಟಿ ಸಾಲವನ್ನು ಮಂಜೂರಾತಿ ನೀಡಲಾಗಿದೆ.

## ಈ) ಪರಿಶಿಷ್ಟ ಪಂಗಡದ ಉದ್ಯಮಿಗಳಿಗೆ ಸಾಲ ಮಂಜೂರಾತಿಗೆ ಸಮಾನಾಂತರ ಖಾತ್ರಿ (Collateral Security) ಒದಗಿಸುವುದು.

ಕೆ.ಎಸ್.ಎಫ್.ಸಿ ಯಿಂದ ಪ.ಪಂಗಡದವರಿಗೆ ಮಂಜೂರು ಮಾಡಲು ಸಾಲಕ್ಕೆ ಗರಿಷ್ಠ ರೂ.2.00 ಕೋಟಿಗಳವರೆಗೆ (Collateral Security) ಸಮಾನಾಂತರ ಖಾತ್ರಿಯನ್ನು ಸರ್ಕಾರದಿಂದ ಒದಗಿಸಲಾಗುತ್ತಿದೆ. ಈ ಸೌಲಭ್ಯವನ್ನು ಕೆ.ಎಸ್.ಎಫ್.ಸಿ Collateral Security ನಿಯಮಗಳಂತೆ ಸರ್ಕಾರದಿಂದ ಒದಗಿಸಲಾಗುತ್ತಿದೆ. ಉಳಿದ ಮೊತ್ತಕ್ಕೆ ಫಲಾನುಭವಿಗಳು ಸಮಾನಾಂತರ ಖಾತ್ರಿಯನ್ನು ಒದಗಿಸಬೇಕಾಗುತ್ತದೆ.

- ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾಲ ಪಡೆಯುವವರಿಗೆ ಭಾರತ ಸರ್ಕಾರದ ನಿಯಮಗಳಂತೆ Collateral Security ಒದಗಿಸಲು ವಿನಾಯಿತಿ ನೀಡಲಾಗಿದೆ.
- 2021-22ನೇ ಸಾಲಿನಲ್ಲಿ 5 ಉದ್ಯಮಿಗಳಿಗೆ ಈ ಯೋಜನೆಯಡಿ ರೂ.2.06 ಕೋಟಿ ಮೊತ್ತಕ್ಕೆ ಸಮಾನಾಂತರ ಖಾತ್ರಿ ಒದಗಿಸಲಾಗಿದೆ.
- 2022-23ನೇ ಸಾಲಿನಲ್ಲಿ 3 ಉದ್ಯಮಿಗಳಿಗೆ ಈ ಯೋಜನೆಯಡಿ ರೂ.1.75 ಕೋಟಿ ಮೊತ್ತಕ್ಕೆ ಸಮಾನಾಂತರ ಖಾತ್ರಿ ಒದಗಿಸಲಾಗಿದೆ.

## ಉ) ಪ್ರಧಾನ ಮಂತ್ರಿ ಆದಿ ಆದರ್ಶ ಗ್ರಾಮ ಯೋಜನೆ:-

2021-22ನೇ ಸಾಲಿನ ಪ್ರಧಾನ ಮಂತ್ರಿ ಆದಿ ಆದರ್ಶ ಗ್ರಾಮ ಯೋಜನೆ (ಪಿ.ಎಂ.ಎ.ಎ.ಜಿ.ವೈ) ಯಡಿ ಮುಂದಿನ 5 ವರ್ಷಗಳಲ್ಲಿ (2021-22ನೇ ಸಾಲಿನಿಂದ 2025-26) ರವರೆಗೆ 2011ರ ಜನಗಣತಿಯ ದತ್ತಾಂಶಗಳ ಆಧಾರದಲ್ಲಿ 500 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿದ್ದು, ಆ ಪೈಕಿ ಶೇ.50 ರಷ್ಟು ಪರಿಶಿಷ್ಟ ಪಂಗಡದವರನ್ನು ಹೊಂದಿರುವ 36,428 ಗ್ರಾಮಗಳನ್ನು ದೇಶದಲ್ಲಿ ಮಾದರಿ ಗ್ರಾಮವನ್ನಾಗಿ ಮಾಡಲು "ಆದಿ ಆದರ್ಶ ಗ್ರಾಮ" ಯೋಜನೆಯನ್ನು ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ. ರಾಜ್ಯದಲ್ಲಿನ 24 ಜಿಲ್ಲೆಗಳಲ್ಲಿ 500 ಕ್ಕಿಂತ ಹೆಚ್ಚು ಜನಸಂಖ್ಯೆ ಹೊಂದಿದ್ದು, ಈ ಪೈಕಿ ಶೇ.50 ರಷ್ಟು ಪರಿಶಿಷ್ಟ ಪಂಗಡದವರನ್ನು ಹೊಂದಿರುವ 507 ಗ್ರಾಮಗಳನ್ನು ಗುರುತಿಸಲಾಗಿದೆ. ಈ ಸಂಬಂಧ 2021-22ನೇ ಸಾಲಿನ ಪ್ರಧಾನಮಂತ್ರಿ ಆದಿ ಆದರ್ಶಗ್ರಾಮ ಯೋಜನೆಯಡಿ ಕೇಂದ್ರ ಬುಡಕಟ್ಟು ವ್ಯವಹಾರಗಳ ಮಂತ್ರಾಲಯವು 105 ಗ್ರಾಮಗಳನ್ನು ನಿಗಧಿಪಡಿಸಿ, ಪ್ರತಿ ಗ್ರಾಮಕ್ಕೆ ರೂ.20.38 ಲಕ್ಷಗಳಂತೆ 2022-23ನೇ ಸಾಲಿನಲ್ಲಿ ರೂ.9.37 ಕೋಟಿಗಳನ್ನು ಬಿಡುಗಡೆಗೊಳಿಸಲಾಗಿದೆ.

## ಊ) ಪೌಷ್ಠಿಕ ಆಹಾರ ಯೋಜನೆ:-

ರಾಜ್ಯದ ದಕ್ಷಿಣ ಕನ್ನಡ, ಉಡುಪಿ, ಕೊಡಗು, ಮೈಸೂರು, ಉತ್ತರ ಕನ್ನಡ, ಚಾಮರಾಜನಗರ, ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ವಾಸಿಸುವ ಮೂಲನಿವಾಸಿ ಪಂಗಡವಾದ ಕೊರಗ ಮತ್ತು ಜೇನುಕುರುಬ ಹಾಗೂ ಇತರೆ ಪರಿಶಿಷ್ಟ ಪಂಗಡದವರಾದ ಕಾಡುಕುರುಬ, ಸೋಲಿಗ, ಯರವ, ಮಲೆಕುಡಿಯ, ಕುಡಿಯ, ಸಿದ್ಧಿ, ಗೌಡಲು, ಗೊಂಡ ಮತ್ತು ಹಸಲರು ಜನಾಂಗದವರು ಅರಣ್ಯ ಮತ್ತು ಅರಣ್ಯದ ಅಂಚಿನಲ್ಲಿ ವಾಸಿಸುತ್ತಿದ್ದು, ಅವರಿಗೆ ಮಳೆಗಾಲದಲ್ಲಿ ಜೀವನ ನಿರ್ವಹಣೆಗೆ ತೊಂದರೆಯಾಗಿ, ಅಪೌಷ್ಠಿಕತೆಯಿಂದ ಬಳಲುವುದನ್ನು ತಪ್ಪಿಸಲು 45 ದಿನಗಳಿಗೊಮ್ಮೆ ವಾರ್ಷಿಕ ಆರು ಬಾರಿ ಪ್ರತಿ ಕುಟುಂಬಕ್ಕೆ 1)ಅಕ್ಕಿ/ರಾಗಿ/ಗೋಧಿ 8 ಕೆ.ಜಿ., 2) ತೊಗರಿಬೇಳೆ 3 ಕೆ.ಜಿ., 3) ಕಡಳೆಬೀಜ 1 ಕೆ.ಜಿ., 4) ಹೆಸರುಕಾಳು/ಹುರಳಿಕಾಳು/ಹಲಸಂದೆ ಕಾಳು 2 ಕೆ.ಜಿ., 5) ಎಣ್ಣೆ 2 ಲೀಟರ್., 6) ಸಕ್ಕರೆ/ಬೆಲ್ಲ 2 ಕೆ.ಜಿ., 7) ಮೊಟ್ಟೆ ತಿಂಗಳಿಗೆ 30 ನ್ನು ಹಾಗೂ 8) 1/2 ಕೆ.ಜಿ ನಂದಿನಿ ತುಪ್ಪ ಕೊಡಲಾಗುವುದು. ಈ ಆಹಾರ ಪದಾರ್ಥಗಳನ್ನು ಪಡಿತರ ಆಹಾರ ಧಾನ್ಯದ ಜೊತೆಗೆ ಹೆಚ್ಚುವರಿಯಾಗಿ ಉಚಿತವಾಗಿ ನೀಡಲಾಗುತ್ತಿದೆ.

- ಈ ಕಾರ್ಯಕ್ರಮದಡಿ 46711 ಕುಟುಂಬಗಳು ಪ್ರಯೋಜನ ಪಡೆಯುತ್ತಿದ್ದು, 2021-22ನೇ ಸಾಲಿನಲ್ಲಿ ರೂ.50.00 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿಗೆ ರೂ.52.00 ಕೋಟಿ ಅನುದಾನ ನಿಗದಿಪಡಿಸಿಕೊಳ್ಳಲಾಗಿದೆ. ಇದುವರೆವಿಗೂ 39.00 ಕೋಟಿ ವೆಚ್ಚ ಭರಿಸಲಾಗಿದೆ.

## ಋ) ಸ್ಮಶಾನ ಭೂಮಿ ಅಭಿವೃದ್ಧಿ:

ಪರಿಶಿಷ್ಟ ಪಂಗಡದವರ ಜನಸಂಖ್ಯೆ ಆಧಾರದ ಮೇಲೆ ಪರಿಶಿಷ್ಟ ಪಂಗಡದವರ ಸ್ಮಶಾನ ಭೂಮಿ ಅಭಿವೃದ್ಧಿ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಸ್ಮಶಾನ ಭೂಮಿ ಉದ್ದೇಶಕ್ಕಾಗಿ ಹೊಸದಾಗಿ ಜಮೀನು ಖರೀದಿಸಿ ಮೂಲಭೂತ ಸೌಲಭ್ಯ ಒದಗಿಸುವ ಜೊತೆಗೆ ಅಸ್ಥಿತ್ವದಲ್ಲಿರುವ/ ಹಾಲಿ ಇರುವ ಸ್ಮಶಾನ ಭೂಮಿಗಳಿಗೆ ಮೂಲಭೂತ ಸೌಕರ್ಯ ಒದಗಿಸಲಾಗುವುದು.

- ಸ್ಮಶಾನ ಜಾಗ ಇಲ್ಲದ ಕಡೆ, ಸರ್ಕಾರಿ ಜಮೀನನ್ನು ಗುರುತಿಸಿ ಆ ಊರಿನ ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಆಧಾರದ ಮೇಲೆ ಬೇಕಾಗುವ ಜಮೀನಿನ ಪ್ರಮಾಣವನ್ನು ನಿಗಧಿಪಡಿಸುವುದು.
- ಕಂದಾಯ ಇಲಾಖೆ ವತಿಯಿಂದ ಸ್ಮಶಾನ ಉದ್ದೇಶಕ್ಕಾಗಿ ಎರಡು ಎಕರೆ ಸರ್ಕಾರಿ ಜಮೀನನ್ನು ಕಾಯ್ದಿರಿಸುವುದು.
- ಸರ್ಕಾರಿ ಜಮೀನು ಲಭ್ಯವಿಲ್ಲದೇ ಇದ್ದಲ್ಲಿ, ಖಾಸಗಿ ಜಮೀನನ್ನು ಭೂಸ್ವಾಧೀನ ಕಾಯಿದೆ ಅಡಿಯಲ್ಲಿ ಅಥವಾ ಖಾಸಗಿಯವರಿಂದ ಖರೀದಿಸುವುದು.
- ಜಿಲ್ಲಾಧಿಕಾರಿಗಳು ಖಾಸಗಿ ಜಮೀನನ್ನು ಸಂಬಂಧಿಸಿದ ಪ್ರಾದೇಶಿಕ ಆಯುಕ್ತರಿಂದ ಅನುಮೋದನೆ ಪಡೆದು ಜಮೀನನ್ನು ಖರೀದಿಸುವುದು.
- ಖರೀದಿಸುವಾಗ ಪ್ರಚಲಿತ ಮಾರ್ಗಸೂಚಿ ಬೆಲೆಯನ್ನು ಗಮನದಲ್ಲಿಟ್ಟುಕೊಂಡು ಜನಸಂಖ್ಯೆ ಆಧಾರದ ಮೇಲೆ ಒಂದು ಅಥವಾ ಎರಡು ಎಕರೆ ಜಮೀನನ್ನು ಖರೀದಿಸುವುದು.

- ಖಾಸಗಿ ಜಮೀನಿನ ಮಾಲೀಕರಿಂದ ಖರೀದಿಸುವ ಜಮೀನನ್ನು ಸ್ವಾಧೀನ ಪಡಿಸಿಕೊಂಡು ಸಮಾಜ ಕಲ್ಯಾಣ ಇಲಾಖೆಯ ಹೆಸರಲ್ಲಿ ನೊಂದಣಿ ಮಾಡಿ ಭೂ ದಾಖಲೆಗಳಲ್ಲಿ ನಮೂದಿಸುವುದು.
- ಸ್ಮಶಾನಕ್ಕಾಗಿ ಸರ್ಕಾರಿ ಜಮೀನು ಅಥವಾ ಖಾಸಗಿಯವರಿಂದ ಖರೀದಿಸಿದ ಜಮೀನುಗಳಲ್ಲಿ ನೀರಿನ ವ್ಯವಸ್ಥೆಗಾಗಿ ಕೊಳವೆ ಬಾವಿ, ಸ್ಮಶಾನದಲ್ಲಿ ಅಂತ್ಯ ಕ್ರಿಯೆಗಾಗಿ ಒಂದು ಮಂಟಪ ನಿರ್ಮಾಣ, ಸ್ಮಶಾನ ಜಮೀನಿನ ರಕ್ಷಣೆಗಾಗಿ ಸುತ್ತಲೂ ತಂತಿ ಬೇಲಿ ಅಥವಾ ಕಾಂಪೌಂಡು ಗೋಡೆ ನಿರ್ಮಾಣ.

## 4) ತರಬೇತಿ ಕಾರ್ಯಕ್ರಮಗಳು.

### ಅ) ಸ್ವರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ:

ಯು.ಪಿ.ಎಸ್.ಸಿ/ಕೆ.ಪಿ.ಎಸ್.ಸಿ/ ಬ್ಯಾಂಕಿಂಗ್ ಮುಂತಾದ ಸ್ವರ್ಧಾತ್ಮಕ ಪರೀಕ್ಷೆಗಳಿಗೆ ಹಾಜರಾಗುವ ಪ.ಪಂ ಅಭ್ಯರ್ಥಿಗಳಿಗೆ ನವದೆಹಲಿ, ಹೈದರಾಬಾದ್ ಹಾಗೂ ಕರ್ನಾಟಕದ ಪ್ರತಿಷ್ಠಿತ ತರಬೇತಿ ಸಂಸ್ಥೆಗಳ ಮೂಲಕ 3 ರಿಂದ 9 ತಿಂಗಳವರೆಗೆ ತರಬೇತಿ ನೀಡಲಾಗುತ್ತಿದೆ.

- ವಾರ್ಷಿಕ ಆದಾಯದ ಮಿತಿ ರೂ.5.00 ಲಕ್ಷ.
- ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಿ ಮೆರಿಟ್ ಆಧಾರದಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುತ್ತಿದ್ದು, ತರಬೇತಿ ಸಂಸ್ಥೆಯನ್ನು ಅಭ್ಯರ್ಥಿಗಳೆ ಕೌನ್ಸಲಿಂಗ್ ಮೂಲಕ ಆಯ್ಕೆ ಮಾಡಿಕೊಳ್ಳಬಹುದಾಗಿದೆ.
- ತರಬೇತಿ ಶುಲ್ಕ ರೂ.50,000/-ದಿಂದ ರೂ.1.60 ಲಕ್ಷದವರಿಗೆ ಸಂಸ್ಥೆಗೆ ಪಾವತಿಸಲಾಗುತ್ತಿದೆ.
- ಮಾಸಿಕ ಶಿಷ್ಯವೇತನ ರೂ.6,000/- ದಿಂದ ರೂ.10,000/- ದವರಿಗೆ ಪಾವತಿಸಲಾಗುತ್ತಿದೆ.
- ತರಬೇತಿ ಸಂಸ್ಥೆಗಳಿಗೆ ಕಾಲ ಕಾಲಕ್ಕೆ ನಿಗದಿಪಡಿಸಲಾಗದ ತರಬೇತಿ ಶುಲ್ಕವನ್ನು ನೀಡಲಾಗುತ್ತಿದೆ.
- 2021-22ನೇ ಸಾಲಿನಲ್ಲಿ 860 ಅಭ್ಯರ್ಥಿಗಳಿಗೆ ರೂ.6.39 ಕೋಟಿ ವೆಚ್ಚ ಭರಿಸಲಾಗಿದೆ.
- 2022-23ನೇ ಸಾಲಿನ ಆಯವ್ಯಯ ಘೋಷಣೆಯಂತೆ ಪರಿಶಿಷ್ಟ ಪಂಗಡದ 2250 ವಿದ್ಯಾರ್ಥಿಗಳಿಗೆ ವಿವಿಧ ಸ್ವರ್ಧಾತ್ಮಕ ತರಬೇತಿ ನೀಡಲು ಕ್ರಮವಹಿಸಲಾಗಿದೆ.

### ಆ) ಕಾನೂನು ಪದವೀಧರರಿಗೆ ಶಿಷ್ಯವೇತನ:

ಪರಿಶಿಷ್ಟ ಪಂಗಡದ ಕಾನೂನು ಪದವೀಧರರು ಹಿರಿಯ ವಕೀಲರಿಂದ ಪ್ರಾಯೋಗಿಕ ತರಬೇತಿ ಪಡೆದು ಸ್ವತಂತ್ರವಾಗಿ ವಕೀಲ ವೃತ್ತಿ ನಡೆಸಲು ಅನುಕೂಲವಾಗುವಂತೆ ಶಿಷ್ಯ ವೇತನವನ್ನು ನೀಡಲಾಗುತ್ತದೆ.

- ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ.
- ತರಬೇತಿ ಅವಧಿ – 2 ವರ್ಷ
- ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.10,000/- ಶಿಷ್ಯವೇತನ ನೀಡಲಾಗುತ್ತಿದೆ.

- ಆನ್‌ಲೈನ್ ಮೂಲಕ ಸ್ವೀಕರಿಸಿದ ಅರ್ಜಿಗಳನ್ನು ಆಯ್ಕೆ ಸಮಿತಿ ಮೂಲಕ ಆಯ್ಕೆ ಮಾಡಲಾಗುತ್ತದೆ.
- ತರಬೇತಿಯ ಅವಧಿಯಲ್ಲಿ ಮಾಸಿಕ ವರದಿ ಮತ್ತು ಹಾಜರಾತಿ ಸಲ್ಲಿಸಬೇಕಾಗಿದ್ದು, ಅದರನ್ವಯ ಶಿಷ್ಯವೇತನವನ್ನು ಪಾವತಿಸಲಾಗುತ್ತದೆ.
- 2021-22ನೇ ಸಾಲಿನಲ್ಲಿ 50 ಪದವೀಧರರಿಗೆ ರೂ.5.00 ಲಕ್ಷಗಳ ಶಿಷ್ಯವೇತನ ಭರಿಸಲಾಗಿದೆ.
- 2022-23ನೇ ಸಾಲಿನ ಶಿಷ್ಯವೇತನಕ್ಕಾಗಿ ಆನ್‌ಲೈನ್ ಮೂಲಕ 2690ಅರ್ಜಿಗಳು ಸ್ವೀಕೃತವಾಗಿರುತ್ತವೆ.

## 5) ಸಾಮಾಜಿಕ ಸಬಲೀಕರಣ ಕಾರ್ಯಕ್ರಮಗಳು

### ಅ) ಸರಳ ವಿವಾಹ:

ಈ ಯೋಜನೆಯನ್ವಯ ನೊಂದಾಯಿತ ಸಂಘ-ಸಂಸ್ಥೆಗಳು, ಧಾರ್ಮಿಕ ಸಂಸ್ಥೆಗಳು ವ್ಯವಸ್ಥೆ ಮಾಡುವ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ವಿವಾಹವಾಗುವ ಪರಿಶಿಷ್ಟ ಪಂಗಡದ ದಂಪತಿಗಳಿಗೆ ಆರ್ಥಿಕ ನೆರವು ನೀಡಲಾಗುತ್ತದೆ.

- ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ವಿವಾಹವಾಗಿರಬೇಕು, ವಿವಾಹವಾದ 1 ವರ್ಷದೊಳಗೆ ಅರ್ಜಿಸಲ್ಲಿಸಬೇಕು.
- ಇಂತಹ ಸಾಮೂಹಿಕ ಕಾರ್ಯಕ್ರಮಗಳಲ್ಲಿ ಕನಿಷ್ಟ 10 ಜೋಡಿಗಳು ವಿವಾಹವಾಗಿರತಕ್ಕದ್ದು.
- ಸರಳವಾಗಿ ವಿವಾಹದ ದಂಪತಿಗಳಿಗೆ ರೂ.50,000/- ಸಾವಿರ ಪ್ರೋತ್ಸಾಹಧನ ನೀಡಲಾಗುವುದು.
- ಇಂತಹ ಕುಟುಂಬದ ವಾರ್ಷಿಕ ವರಮಾನ ರೂ.2.00 ಲಕ್ಷಗಳಿಗೆ ಮೀರಿರಬಾರದು.
- ಸರಳ ವಿವಾಹವಾಗುವ ದಂಪತಿಗಳಲ್ಲಿ ಯುವಕನ ವಯಸ್ಸು 21 ರಿಂದ 45 ವರ್ಷ, ಯುವತಿಯ ವಯಸ್ಸು 18 ರಿಂದ 42 ವರ್ಷ.
- ಸಾಮೂಹಿಕ ವಿವಾಹ ಕಾರ್ಯಕ್ರಮಗಳನ್ನು ಏರ್ಪಡಿಸುವ ಆಯೋಜಕರುಗಳಿಗೆ ಪ್ರೋತ್ಸಾಹಧನ ಹಾಗೂ ವಿವಾಹದ ಖರ್ಚು-ವೆಚ್ಚಗಳಿಗಾಗಿ ಪ್ರತಿ ಜೋಡಿಗೆ ರೂ.2,000/- ಗಳನ್ನು ನೀಡಲಾಗುವುದು.
- ಅಂತರ್‌ಜಾತಿ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.
- 2021-22ನೇ ಸಾಲಿನಲ್ಲಿ 57 ಫಲಾನುಭವಿಗಳಿಗೆ ರೂ.29.28 ಲಕ್ಷ ಪ್ರೋತ್ಸಾಹಧನ ನೀಡಲಾಗಿರುತ್ತದೆ.
- 2022-23ನೇ ಸಾಲಿನಲ್ಲಿ 88 ಫಲಾನುಭವಿಗಳಿಗೆ ರೂ.45.48 ಲಕ್ಷ ಪ್ರೋತ್ಸಾಹಧನ ನೀಡಲಾಗಿರುತ್ತದೆ.

### ಆ) ವಿಧವಾ ವಿವಾಹ:

ಪರಿಶಿಷ್ಟ ಪಂಗಡದ ವಿಧವೆಯರು ಹೊಸ ಬದುಕನ್ನು ರೂಪಿಸಲು ಅನುಕೂಲವಾಗುವಂತೆ ಅವರು ಮರು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

- ವಿಧವೆ ವಯೋಮಿತಿ 18 ರಿಂದ ಗರಿಷ್ಠ 42 ವರ್ಷ
- ವಿವಾಹವಾಗುವ ವರನ ವಯೋಮಿತಿ 21 ರಿಂದ 45 ವರ್ಷ
- ಮರು ವಿವಾಹದ ಬಗ್ಗೆ ನೊಂದಾಯಿಸತಕ್ಕದ್ದು.
- ವಿವಾಹವಾದ 1 ವರ್ಷದೊಳಗೆ ಅರ್ಜಿ ಸಲ್ಲಿಸಬೇಕು.
- ಅಂತರ್‌ಜಾತಿ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.
- 2022-23ನೇ ಸಾಲಿನಲ್ಲಿ 1 ಫಲಾನುಭವಿಗೆ ರೂ.3.00 ಲಕ್ಷ ಪ್ರೋತ್ಸಾಹಧನ ಭರಿಸಲಾಗಿದೆ.

### ಇ) ಒಳ ಪಂಗಡ ವಿವಾಹ:

ಪರಿಶಿಷ್ಟ ಪಂಗಡದ ಯುವಕ/ಯುವತಿಯರು ಪರಿಶಿಷ್ಟ ಪಂಗಡದ ಒಳಗೆ ಅಂತರ್ಜಾತಿ ವಿವಾಹವಾದಲ್ಲಿ ಅಂತಹವರಿಗೆ ರೂ.2.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

- ವಯೋಮಿತಿ-ಯುವಕ 21 ರಿಂದ 45 ವರ್ಷ ಹಾಗೂ ಯುವತಿ 18 ರಿಂದ 42 ವರ್ಷ.
- ದಂಪತಿಗಳ ವಾರ್ಷಿಕ ಆದಾಯ ರೂ.2.00 ಲಕ್ಷ ಮೀರಿರಬಾರದು.
- ಅಂತರ್‌ಜಾತಿ ವಿವಾಹ/ವಿಧವಾ ಮರು ವಿವಾಹ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.
- ಮದುವೆಯಾದ ನಂತರ 1 ವರ್ಷದ ಒಳಗಾಗಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕು.
- ಈ ಸೌಲಭ್ಯವನ್ನು ಒಮ್ಮೆ ಮಾತ್ರ ಪಡೆಯಬಹುದು.

### ಈ) ದೇವದಾಸಿ ವಿವಾಹ:

ಪರಿಶಿಷ್ಟ ಪಂಗಡದ ದೇವದಾಸಿಯರ ಗಂಡು ಮಕ್ಕಳು ಇತರೆ ಜಾತಿಯ ಹುಡುಗಿಯನ್ನು ವಿವಾಹವಾದಲ್ಲಿ 3.00 ಲಕ್ಷ ಹಾಗೂ ದೇವದಾಸಿಯರ ಹೆಣ್ಣು ಮಕ್ಕಳು ಇತರೆ ಜಾತಿಯ ಹುಡುಗನನ್ನು ವಿವಾಹವಾದಲ್ಲಿ ರೂ.5.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುವುದು.

- ವಿವಾಹವಾದ 18 ತಿಂಗಳೊಳಗೆ ವಿವಾಹವಾದ ಬಗ್ಗೆ ನೊಂದಣಾಧಿಕಾರಿಗಳ ಕಛೇರಿಯಲ್ಲಿ ನೊಂದಾಯಿಸಿ ಅರ್ಜಿ ಸಲ್ಲಿಸಿರಬೇಕು.
- ಯುವತಿಯ ವಯಸ್ಸು 18 ರಿಂದ 42 ವರ್ಷ.
- ಯುವಕನ ವಯಸ್ಸು 21 ರಿಂದ 45 ವರ್ಷ.
- ಆದಾಯ ಮಿತಿ ರೂ.5.00 ಲಕ್ಷಗಳು.
- ಗುರ್ತಿಸಲ್ಪಟ್ಟ ದೇವದಾಸಿಯವರ ಮಕ್ಕಳನ್ನು ಗುರ್ತಿಸಲ್ಪಟ್ಟ ಇನ್ನೊಬ್ಬ ದೇವದಾಸಿಯವರ ಮಕ್ಕಳನ್ನು ಮದುವೆ ಮಾಡಿಕೊಂಡರೆ ಪ್ರೋತ್ಸಾಹಧನ ಪಡೆಯಲು ಅರ್ಹರಿರುವುದಿಲ್ಲ.
- 2021-22ನೇ ಸಾಲಿನಲ್ಲಿ 44 ಫಲಾನುಭವಿಗಳಿಗೆ ರೂ.169.00 ಲಕ್ಷಗಳ ಪ್ರೋತ್ಸಾಹಧನ ಭರಿಸಲಾಗಿದೆ.

## ಉ) ಅಂತರಜಾತಿ ವಿವಾಹ:

ಅಸ್ಪೃಶ್ಯತಾ ನಿವಾರಣೆ ಉದ್ದೇಶದಿಂದ ಅಂತರ್‌ಜಾತಿ ವಿವಾಹಿತ ದಂಪತಿಗಳಿಗೆ ಪ್ರೋತ್ಸಾಹಧನ ನೀಡಲಾಗುತ್ತಿದೆ.

- ಪರಿಶಿಷ್ಟ ಪಂಗಡದ ಯುವಕರು ಇತರೆ ಪಂಗಡದ ಯುವತಿಯರನ್ನು ವಿವಾಹದಲ್ಲಿ ಅಂತಹ ದಂಪತಿಗಳಿಗೆ ರೂ.2.50 ಲಕ್ಷಗಳ ಪ್ರೋತ್ಸಾಹಧನ
- ಪರಿಶಿಷ್ಟ ಪಂಗಡದ ಯುವತಿಯರು ಇತರೆ ಜಾತಿಯ ಯುವಕರನ್ನು ವಿವಾಹದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ.
- ಅಂತರ್‌ಜಾತಿ ವಿವಾಹವನ್ನು ನೊಂದಾಯಿಸತಕ್ಕದ್ದು.
- ಮದುವೆಯಾದ ನಂತರ 18 ತಿಂಗಳೊಳಗೆ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕು.
- ಯುವತಿಯ ವಯಸ್ಸು 18 ರಿಂದ 42 ವರ್ಷ
- ಯುವಕನ ವಯಸ್ಸು 21 ರಿಂದ 45 ವರ್ಷ
- ವಾರ್ಷಿಕ ಆದಾಯ ಮಿತಿ ರೂ.5.00 ಲಕ್ಷಗಳು.
- 2021-22ನೇ ಸಾಲಿನಲ್ಲಿ 812 ಪರಿಶಿಷ್ಟ ಪಂಗಡದ ಯುವಕ/ಯುವತಿಯರು ರೂ.14.48 ಕೋಟಿ ಪ್ರೋತ್ಸಾಹಧನ ಪಡೆದಿರುತ್ತಾರೆ.
- 2022-23ನೇ ಸಾಲಿನಲ್ಲಿ 151 ಪರಿಶಿಷ್ಟ ಪಂಗಡದ ಯುವಕ/ಯುವತಿಯರು ರೂ.4.56 ಕೋಟಿ ಪ್ರೋತ್ಸಾಹಧನ ಪಡೆದಿರುತ್ತಾರೆ.

*****

DFA/1064729

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 567

ಸದಸ್ಯರ ಹೆಸರು : ಡಾ|| ದೇವಾನಂದ್ ಫುಲಸಿಂಗ್ ಚವಾಣ್

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಲ್ಯಾಣ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಅಧೀನದಲ್ಲಿ ಬರುವ ವಿಜಯಪುರ ವಿಭಾಗದಲ್ಲಿ ಸಿಬ್ಬಂದಿಗಳ ಕೊರತೆಯಿಂದಾಗಿ ನಾಗಠಾಣ ಮತಕ್ಷೇತ್ರದ ವಿಜಯಪುರ ಹಾಗೂ ಚಡಚಣ ತಾಲ್ಲೂಕಿನ ಗ್ರಾಮೀಣ ಪ್ರದೇಶದ ಹಳ್ಳಿಗಳಿಗೆ ಬಸ್ ಸಂಚಾರ ಇಲ್ಲದೆ ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕರಿಗೆ ತೊಂದರೆ ಉಂಟಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಲ್ಯಾಣ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಅಧೀನದಲ್ಲಿ ಬರುವ ವಿಜಯಪುರ ವಿಭಾಗದಲ್ಲಿ ಸಿಬ್ಬಂದಿಗಳ ಕೊರತೆ ಇದ್ದಾಗ್ಯೂ ಕೂಡ, ವಿಜಯಪುರ ತಾಲ್ಲೂಕಿನ ನಾಗಠಾಣ ಮತಕ್ಷೇತ್ರದ 19 ಗ್ರಾಮಗಳು ಒಳಗೊಂಡಂತೆ ತಾಲ್ಲೂಕಿನ ಒಟ್ಟು 40 ಗ್ರಾಮಗಳು ಹಾಗೂ ಚಡಚಣ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ 42 ಗ್ರಾಮಗಳಲ್ಲಿನ ಶಾಲಾ-ಕಾಲೇಜು ವಿದ್ಯಾರ್ಥಿಗಳಿಗೆ ಹಾಗೂ ಸಾರ್ವಜನಿಕ ಪ್ರಯಾಣಿಕರಿಗೆ ಅನಾನುಕೂಲ ವಾಗದಂತೆ, ಅನುಸೂಚಿ/ಸರತಿಗಳನ್ನು ಕಾರ್ಯಾಚರಣೆ ಮಾಡಲಾಗುತ್ತಿದೆ. |
| ಆ. | ಬಂದಿದ್ದಲ್ಲಿ, ವಿಜಯಪುರ ವಿಭಾಗದ ಘಟಕಗಳಲ್ಲಿ ಖಾಲಿಯಿರುವ ಸಿಬ್ಬಂದಿಗಳ ನೇಮಕಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರವಾದ ಮಾಹಿತಿ ನೀಡುವುದು) | ವಿಜಯಪುರ ವಿಭಾಗದ ಘಟಕಗಳಲ್ಲಿನ ಸಿಬ್ಬಂದಿ ಕೊರತೆ ಒಳಗೊಂಡಂತೆ ಕ.ಕ.ರ.ಸಾ.ನಿಗಮದಲ್ಲಿ ಖಾಲಿ ಇರುವ 925-ಚಾಲಕ, 694-ಚಾಲಕ-ಕಂ-ನಿರ್ವಾಹಕ, 16-ಸಹಾಯಕ ಲೆಕ್ಕಿಗ ಮತ್ತು 300-ನಿರ್ವಾಹಕ ಹುದ್ದೆಗಳನ್ನು ನೇರ ನೇಮಕಾತಿ ಮತ್ತು 59 ಹುದ್ದೆಗಳನ್ನು ಹೊರಗುತ್ತಿಗೆ ಮೂಲಕ ಭರ್ತಿ ಮಾಡಿಕೊಳ್ಳಲು ಹಾಗೂ 36 ಹಿಂಬಾಕಿ ಹುದ್ದೆಗಳ ನೇಮಕಾತಿಗೂ ಅನುಮತಿ ನೀಡಲಾಗಿದ್ದು, ಪ್ರಸ್ತುತ ನೇಮಕಾತಿ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ.<br><br>ಸದರಿ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳಲು ಸುಮಾರು 9 ತಿಂಗಳುಗಳಿಂದ 1 ವರ್ಷದ ವರೆಗೆ ಸಮಯ ಬೇಕಾಗುತ್ತದೆ. ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡ ನಂತರ ಸಿಬ್ಬಂದಿಗಳನ್ನು ವಿಜಯಪುರ ವಿಭಾಗದ ಘಟಕಗಳು ಸೇರಿದಂತೆ ಅವಶ್ಯಕ ಇರುವ ನಿಗಮದ ಎಲ್ಲಾ ಘಟಕಗಳಿಗೆ |



Generated from eOffice by B SREERAMULU, TD-MIN(BS), TRANSPORT MINISTER, Trans on 14/02/2023 06:43 PM

| | | |
|---|---|---|
| | | ಹಂಚಿಕೆ ಮಾಡಲಾಗುವುದು.<br><br>ಮುಂದುವರೆದು, ನಿಗಮದ ವಯೋನಿವೃತ್ತಿ ಹೊಂದಿದ ಚಾಲನಾ ಸಿಬ್ಬಂದಿಗಳ ಸೇವೆಯನ್ನು (ಚಾಲಕ ಮತ್ತು ನಿರ್ವಾಹಕ) ತಾತ್ಕಾಲಿಕವಾಗಿ ಬಳಸಲಾಗುತ್ತಿದ್ದು, ಪ್ರಸ್ತುತ 112 ನಿವೃತ್ತ ಚಾಲನಾ ಸಿಬ್ಬಂದಿಗಳನ್ನು ನಿಯೋಜಿಸಕೊಳ್ಳಲಾಗಿದೆ.<br><br>ಅಧಿಕಾರಿ ಮತ್ತು ಮೇಲ್ವಿಚಾರಕ ಹುದ್ದೆಗಳ ನೇಮಕಕ್ಕೆ ಸಂಬಂಧಪಟ್ಟಂತೆ, ವೃಂದ ನಿರ್ವಹಣೆಯು ಕ.ರಾ.ರ.ಸಾ.ನಿಗಮದ ವ್ಯಾಪ್ತಿಗೆ ಒಳಪಡುತ್ತಿದ್ದು, 371-ಜೆ ಮೀಸಲಾತಿ ಅಡಿ ಖಾಲಿ ಹುದ್ದೆಗಳ ನೇಮಕಾತಿ ಪ್ರಕ್ರಿಯೆ ಚಾಲ್ತಿಯಲ್ಲಿದ್ದ ಸಂದರ್ಭದಲ್ಲಿ, ಈ ಕೆಳಕಂಡ ಕಾರಣಗಳಿಂದಾಗಿ ಭರ್ತಿ ಮಾಡಲಾಗಿರುವುದಿಲ್ಲ:<br><br>1. ಪರಿಶಿಷ್ಟ ಜಾತಿ/ ಪಂಗಡದ ಮೀಸಲಾತಿ ಪ್ರಮಾಣದಲ್ಲಿ ಏರಿಕೆಯಾಗಿ ಪರಿಷ್ಕೃತ ರೋಸ್ಟರ್ ಬಿಂದುಗಳ ನಿಗದಿಪಡಿಸುವಿಕೆಯಿಂದಾಗಿ ನೇಮಕಾತಿ ಬಾಕಿ ಇರುತ್ತದೆ.<br>2. ಅಲ್ಲದೇ, ಪ್ರಸ್ತುತ ಸರ್ಕಾರದ ಆದೇಶದಂತೆ ನಿಗಮದ ದರ್ಜೆ-3 ಮೇಲ್ವಿಚಾರ ವೃಂದದಿಂದ ದರ್ಜೆ-1 (ಕಿರಯ) ವೃಂದದವರೆಗಿನ ಹುದ್ದೆಗಳನ್ನು ಆಯಾ ಸಾರಿಗೆ ಸಂಸ್ಥೆಗಳಿಗೆ ಶಾಶ್ವತವಾಗಿ ಹಂಚಿಕೆ ಮಾಡುವ ಪ್ರಕ್ರಿಯೆಗೆ ಚಾಲನೆ ನೀಡಿದ್ದು, ಪ್ರಕ್ರಿಯೆ ಪೂರ್ಣಗೊಂಡ ನಂತರ ಆಯಾ ಸಾರಿಗೆ ನಿಗಮದ ಪ್ರಾಧಿಕಾರಸ್ಥರ ವ್ಯಾಪ್ತಿಯಡಿ ನೇಮಕಾತಿ ಪ್ರಕ್ರಿಯೆಗಳನ್ನು ಕೈಗೊಳ್ಳಬೇಕಾಗುತ್ತದೆ. |
| ಇ. | ಉತ್ತಮ ಆಡಳಿತ ಹಾಗೂ ಸಾರ್ವಜನಿಕರಿಗೆ ಉತ್ತಮ ಸೇವೆ ದೊರೆಕಿಸಿಕೊಡುವ ಹಿನ್ನೆಲೆಯಲ್ಲಿ ವಿಜಯಪುರ ವಿಭಾಗವನ್ನು ವಿಂಗಡಿಸಿ ಎರಡು ವಿಭಾಗಗಳಾಗಿ ರಚನೆ ಮಾಡುವ ಉದ್ದೇಶ ಸರ್ಕಾರದ ಮುಂದಿದೆಯೇ? | ಪ್ರಸ್ತುತ ಅಂತಹ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಟಿಡಿ 19 ಟಿಸಿಕ್ಯೂ 2023

ಬಿ. ಶ್ರೀರಾಮುಲು
ಸಾರಿಗೆ ಮತ್ತು ...

# ಕರ್ನಾಟಕ ವಿಧಾನಭೆ

| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 568 |
|---|---|
| ಸದಸ್ಯರ ಹೆಸರು : | ಶ್ರೀ ಡಾ|| ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| ಉತ್ತರಿಸಬೇಕಾದ ದಿನಾಂಕ : | 15.02.2023 |
| ಉತ್ತರಿಸುವ ಸಚಿವರು : | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹಿಂದುಳಿದ ವರ್ಗಗಳ ಕಲ್ಯಾಣ ಹಾಗೂ ಸಮಾಜ ಕಲ್ಯಾಣ ಇಲಾಖೆಯಡಿ ಬರುವ ನಿಗಮಗಳಲ್ಲಿ ವಿವಿಧ ಯೋಜನೆಗಳಿಗೆ ವಾರ್ಷಿಕವಾಗಿ ತೀರಾ ಕನಿಷ್ಠ ಗುರಿಗಳನ್ನು ನಿಗಧಿಪಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಸದರಿ ಗುರಿಗಳನ್ನು ನಿಗಧಿಪಡಿಸಲು ಇರುವ ಮಾನದಂಡಗಳೇನು: (ನಿಗಮವಾರು ಮಾಹಿತಿ ನೀಡುವುದು) | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಸಮಾಜ ಕಲ್ಯಾಣ ಇಲಾಖೆಯಡಿ ಬರುವ ನಿಗಮಗಳಿಗೆ ಪ್ರತೀ ವರ್ಷ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಯನುಸಾರ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ನಿಗಧಿಪಡಿಸಲಾಗುವುದು. ಯೋಜನೆಗಳ ಗುರಿಯನ್ನು ನಿಗಧಿಪಡಿಸಲು ಇರುವ ಮಾನದಂಡಗಳನ್ನು **ಅನುಬಂಧದ**ಲ್ಲಿ ನೀಡಲಾಗಿದೆ. |
| ಆ) | ನಿಗಧಿಪಡಿಸಿರುವ ಗುರಿಗಳಿಗನುಗುಣವಾಗಿ ಫಲಾನುಭವಿಗಳನ್ನು ಆಯ್ಕೆ ಮಾಡಲು ಜನಸಾಮಾನ್ಯರು ಹಾಗೂ ಜನಪ್ರತಿನಿಧಿಗಳಿಂದ ಶಾಸಕರಿಗೆ ತೀವ್ರವಾದ ಒತ್ತಡ ತರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಈ ಯೋಜನೆಗಳಡಿ ಗುರಿಗಳನ್ನು ಹೆಚ್ಚಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ: ಹಾಗಿದ್ದಲ್ಲಿ, ಯಾವ ರೀತಿ ಕ್ರಮ ಕೈಗೊಳ್ಳಲಾಗುವುದು: (ನಿಗಮವಾರು ಮಾಹಿತಿ ನೀಡುವುದು) | ಬಂದಿದೆ.<br><br>ಪ್ರತೀ ವರ್ಷ ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ನಿಗಧಿಪಡಿಸಿ, ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತಿರುತ್ತದೆ ಹಾಗೂ 2023-24ನೇ ಸಾಲಿನ ಆಯವ್ಯಯದಲ್ಲಿ ಒದಗಿಸುವ ಅನುದಾನದ ಲಭ್ಯತೆಯನ್ನಾಧರಿಸಿ ಗುರಿಗಳನ್ನು ಹೆಚ್ಚಿಸಲು ಕ್ರಮಕೈಗೊಳ್ಳಲಾಗುವುದು. |
| ಇ) | ಗುರಿಗಳನ್ನು ಹೆಚ್ಚಿಸಲು ಸಾಧ್ಯವಾಗದೇ ಇದ್ದಲ್ಲಿ ಕಾರಣಗಳೇನು: (ನಿಗಮವಾರು ಮಾಹಿತಿ ನೀಡುವುದು) | |
| ಈ) | ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೆಚ್ಚಾಗಿ ವಾಸಿಸುತ್ತಿರುವ ಜನಸಂಖ್ಯಾಧಾರಿತ ಜಾತಿಗನುಗುಣವಾಗಿ ಆಯಾ ನಿಗಮಗಳಲ್ಲಿ ಗುರಿಗಳನ್ನು ನಿಗಧಿ ಪಡಿಸುವ ಕುರಿತು ಸರ್ಕಾರದ ನಿಲುವೇನು: (ಮಾಹಿತಿ ನೀಡುವುದು) | |
| ಉ) | ಜನಸಂಖ್ಯಾಧಾರಿತ ಜಾತಿಗನುಗುಣವಾಗಿ ಆಯಾ ನಿಗಮಗಳಲ್ಲಿ ಗುರಿಗಳನ್ನು ಹೆಚ್ಚಿಸಲು ಸಾಧ್ಯವಾಗದೇ ಇದ್ದಲ್ಲಿ ಆ ಯೋಜನೆಗಳನ್ನು ಕೈಬಿಡುವ ಕುರಿತು ಸರ್ಕಾರದ ನಿಲುವೇನು: (ಮಾಹಿತಿ ನೀಡುವುದು) | ಜನಸಂಖ್ಯಾಧಾರಿತ ಜಾತಿಗನುಗುಣವಾಗಿ ಆಯಾ ನಿಗಮಗಳಲ್ಲಿ ಆಯವ್ಯಯದಲ್ಲಿ ಒದಗಿಸುವ ಅನುದಾನಕ್ಕೆ ಅನುಗುಣವಾಗಿ ಭೌತಿಕ ಮತ್ತು ಆರ್ಥಿಕ ಗುರಿಗಳನ್ನು ನಿಗಧಿಪಡಿಸಲಾಗುತ್ತಿದ್ದು, ಪ್ರಸ್ತುತ ಯಾವುದೇ ಯೋಜನೆಗಳನ್ನು ಕೈಬಿಡುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಊ) ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಪ್ರಸಕ್ತ ಸಾಲಿಗೆ ನಿಗಧಿಪಡಿಸಿರುವ ಭೌತಿಕ ಮತ್ತು ಆರ್ಥಿಕ ಗುರಿಗಳು ಎಷ್ಟು; ಪ್ರಸಕ್ತ ಸಾಲಿನಲ್ಲಿ ಸ್ವೀಕರಿಸಿರುವ ಅರ್ಜಿಗಳೆಷ್ಟು; ನಿಗಧಿಪಡಿಸಿದ ಗುರಿ ಮತ್ತು ಸ್ವೀಕರಿಸಿದ ಅರ್ಜಿಗಳಿಗೆ ಅನುಗುಣವಾಗಿ ಹೇಗೆ ಆಯ್ಕೆ ಮಾಡಲಾಗುವುದು; ಆಯ್ಕೆ ಮಾಡಲು ಇರುವ ಮಾನದಂಡಗಳೇನು? (ನಿಗಮವಾರು ಸಂಪೂರ್ಣ ಮಾಹಿತಿ ನೀಡುವುದು)

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಹಾಗೂ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಯ ನಿಗಮಗಳಿಂದ ನಾಗಠಾಣ ವಿಧಾನಸಭಾ ಕ್ಷೇತ್ರವು ಒಳಗೊಂಡಂತೆ ಒಟ್ಟಾರೆ ವಿಜಯಪುರ ಜಿಲ್ಲೆಗೆ ನಿಗಧಿಪಡಿಸಿದ ಭೌತಿಕ ಮತ್ತು ಆರ್ಥಿಕ ಗುರಿ ಈ ಕೆಳಕಂಡಂತಿದೆ.

**ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ**

| ಕ್ರ. ಸಂ. | ಯೋಜನೆಗಳ ಹೆಸರು | ಗುರಿ | | ಸ್ವೀಕರಿಸಿದ ಅರ್ಜಿ |
|---|---|---|---|---|
| | | ಭೌತಿಕ | ಆರ್ಥಿಕ | |
| 1 | ಸ್ವಯಂ ಉದ್ಯೋಗ ಸಾಲ ಯೋಜನೆ | 72 | 36.00 | 153 |
| 2 | ಗಂಗಾ ಕಲ್ಯಾಣ ನೀರಾವರಿ ಯೋಜನೆ | 25 | 50.00 | 48 |
| 3 | ಅರಿವು ಶೈಕ್ಷಣಿಕ ಸಾಲ ಯೋಜನೆ (ನವೀಕರಣ ಸೇರಿದೆ) | 3 | 3.00 | 3 |
| | **ಒಟ್ಟು** | **100** | **89.00** | **204** |

**ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ**

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಗಳು | ಒಟ್ಟು ಗುರಿ | | ಸ್ವೀಕರಿಸಿದ ಅರ್ಜಿ |
|---|---|---|---|---|
| | | ಆರ್ಥಿಕ | ಭೌತಿಕ | |
| 1 | ಸ್ವಯಂ ಉದ್ಯೋಗ ಸಾಲ ಯೋಜನೆ | 280.79 | 562 | 505 |
| 2 | ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ | 250.00 | 500 | 1054 |
| 3 | ಅರಿವು ಶೈಕ್ಷಣಿಕ ಸಾಲ ಯೋಜನೆ (ಹೊಸತು) | 25.00 | 50 | 30 |
| 4 | ಅರಿವು ಶೈಕ್ಷಣಿಕ ಸಾಲ ಯೋಜನೆ (ನವೀಕರಣ) | 29.00 | 29 | 21 |
| | **ಒಟ್ಟು** | **584.79** | **1141** | **1610** |

**ಕರ್ನಾಟಕ ಸವಿತಾ ಸಮಾಜ ಅಭಿವೃದ್ಧಿ ನಿಗಮ**

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಗಳು | ಒಟ್ಟು ಗುರಿ | | ಸ್ವೀಕರಿಸಿದ ಅರ್ಜಿ |
|---|---|---|---|---|
| | | ಆರ್ಥಿಕ | ಭೌತಿಕ | |
| 1 | ಸ್ವಯಂ ಉದ್ಯೋಗ ಸಾಲ ಯೋಜನೆ | 190.00 | 380 | 2698 |
| 2 | ಸಾಂಪ್ರದಾಯಿಕ ವೃತ್ತಿದಾರರ ಸಾಲ ಯೋಜನೆ | 211.39 | 423 | 659 |
| | **ಒಟ್ಟು** | **401.39** | **803** | **3357** |

**ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ**

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆಗಳು | ಒಟ್ಟು ಗುರಿ | | ಸ್ವೀಕರಿಸಿದ ಅರ್ಜಿ |
|---|---|---|---|---|
| | | ಆರ್ಥಿಕ | ಭೌತಿಕ | |
| 1 | ಸ್ವಯಂ ಉದ್ಯೋಗ ಸಾಲ ಯೋಜನೆ | 313.08 | 638 | 5129 |
| 2 | ಅರಿವು ಶೈಕ್ಷಣಿಕ ಸಾಲ ಯೋಜನೆ (ಹೊಸತು) | 29.00 | 29 | 18 |
| 3 | ಅರಿವು ಶೈಕ್ಷಣಿಕ ಸಾಲ ಯೋಜನೆ (ನವೀಕರಣ) | 25.00 | 35 | 20 |
| 4 | ಗಂಗಾ ಕಲ್ಯಾಣ ನೀರಾವರಿ ಯೋಜನೆ | 240.00 | 97 | 631 |
| | **ಒಟ್ಟು** | **607.08** | **799** | **5798** |

## ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮ

| ಕ್ರ. ಸಂ | ಯೋಜನೆಗಳ ಹೆಸರು | ಭೌತಿಕ ಗುರಿ | ಆರ್ಥಿಕ ಗುರಿ |
|---|---|---|---|
| 1 | ಪಂಚವೃತ್ತಿ ಅಭಿವೃದ್ಧಿಗಾಗಿ ಆರ್ಥಿಕ ನೆರವು ಯೋಜನೆ. | 10 | 10.00 |
| 2 | ಸ್ವಯಂ ಉದ್ಯೋಗ ಸಾಲ ಯೋಜನೆ | 24 | 16.00 |
| 3 | ಅಮೃತ ಮುನ್ನಡೆ ಯೋಜನೆ. | 8 | 4.00 |
| 4 | ಅರಿವು ಶೈಕ್ಷಣಿಕ ನೇರಸಾಲ ಯೋಜನೆ | 1 | 1.00 |
| 5 | ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಯೋಜನೆ. | 8 | 20.00 |
| | ಒಟ್ಟು: | **51** | **51.00** |

## ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮ

(ರೂ.ಲಕ್ಷಗಳಲ್ಲಿ)

| ಕ್ರ .ಸಂ | ಯೋಜನೆಯ ಹೆಸರು | ನಿಗಧಿಪಡಿಸಿದ ಗುರಿ | |
|---|---|---|---|
| | | ಭೌತಿಕ | ಆರ್ಥಿಕ |
| 1 | ಸ್ವಯಂ ಉದ್ಯೋಗ ನೇರ ಸಾಲ ಯೋಜನೆ | 21 | 10.50 |
| 2 | ಅರಿವು ಶೈಕ್ಷಣಿಕ ಸಾಲ ಯೋಜನೆ | 2 | 2.00 |
| 3 | ಗಂಗಾ ಕಲ್ಯಾಣ ನೀರಾವರಿ ಯೋನೆ | 5 | 10.00 |
| 4 | ಸ್ವಾತಂತ್ರ್ಯ ಅಮೃತ ಮುನ್ನಡೆ ಕೌಶಲ್ಯಾಭಿವೃದ್ಧಿ ಯೋಜನೆ | 6 | 1.20 |

## ಕರ್ನಾಟಕ ಮರಾಠ ಸಮುದಾಯಗಳ ಅಭಿವೃದ್ಧಿ ನಿಗಮ

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆ | ಭೌತಿಕಗುರಿ | ಆರ್ಥಿಕ ಗುರಿ (ಲಕ್ಷಗಳಲ್ಲಿ) |
|---|---|---|---|
| 1 | ಸ್ವಯಂ ಉದ್ಯೋಗ | 19 | 9.50 |
| 2 | ಗಂಗಾ ಕಲ್ಯಾಣ | 9 | 31.50 |

## ಕರ್ನಾಟಕ ಒಕ್ಕಲಿಗ ಸಮುದಾಯ ಅಭಿವೃದ್ಧಿ ನಿಗಮ

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಯೋಜನೆ | ಸ್ವೀಕರಿಸಿದ ಅರ್ಜಿ | ಭೌತಿಕ | ಆರ್ಥಿಕ (ರೂ.ಲಕ್ಷಗಳಲ್ಲಿ) |
|---|---|---|---|---|
| 1 | ಸ್ವಯಂ ಉದ್ಯೋಗ ಸಾಲ ಯೋಜನೆ | 03 | 03 | 1.50 |
| 2 | ಗಂಗಾ ಕಲ್ಯಾಣ ಯೋಜನೆ | 03 | 02 | 4.00 |
| 3 | ಟೂರಿಸ್ಟ್ ಟ್ಯಾಕ್ಸಿ | 02 | 01 | 3.00 |

## ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ

(ರೂ.ಲಕ್ಷಗಳಲ್ಲಿ)

| ಕ್ರ. ಸಂ. | ಯೋಜನೆಯ ಹೆಸರು | ಗುರಿ | |
|---|---|---|---|
| | | ಭೌತಿಕ | ಆರ್ಥಿಕ |
| 1 | ಗಂಗಾ ಕಲ್ಯಾಣ ನೀರಾವರಿ ಯೋಜನೆ | 8 | 16.00 |
| 2 | ಸ್ವಯಂ ಉದ್ಯೋಗ ಸಾಲ ಮತ್ತು ಸಹಾಯಧನ ಯೋಜನೆ | 3 | 1.50 |
| 3 | "ಅರಿವು" ಶೈಕ್ಷಣಿಕ ಸಾಲ ಯೋಜನೆ (ಹೊಸತು ಮತ್ತು ನವೀಕರಣ) | 2 | 2.00 |

## ಡಾ.ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮ

(ರೂ.ಲಕ್ಷಗಳಲ್ಲಿ)

| ಕ್ರ ಸಂ | ಯೋಜನ | ಸ್ವೀಕರಿಸಿದ ಅರ್ಜಿ | ಭೌತಿಕ | ಆರ್ಥಿಕ |
|---|---|---|---|---|
| 1 | ಸ್ವಯಂಉದ್ಯೋಗ (ನೇರಸಾಲಯೋಜನೆ) | 258 | 6 | 6.00 |
| 2 | ಉದ್ಯಮಶೀಲತಾಅಭಿವೃದ್ಧಿಯೋಜನೆ | 142 | 2 | 5.50 |
| 3 | ಉದ್ಯಮಶೀಲತಾಅಭಿವೃದ್ಧಿಯೋಜನೆ( ದ್ವಿ/ತ್ರಿ ಚಕ್ರ ವಾಹನ) | 22 | 20 | 14.00 |
| 3 | ಮೈಕ್ರೋಕ್ರೆಡಿಟ್ ಯೋಜನೆ | 20 | 40 | 10.00 |
| 4 | ಗಂಗಾಕಲ್ಯಾಣಯೋಜನೆ | 18 | 8 | 25.59 |
| | ಒಟ್ಟು | 460 | 76 | 61.09 |

## ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ

2022-23ನೇ ಸಾಲಿಗೆ ನಾಗಠಾಣ ವಿಧಾನಸಭಾ ಕ್ಷೇತ್ರಕ್ಕೆ ನಿಗಧಿಪಡಿಸಿರುವ ಗುರಿಗಳ ವಿವರ ಈ ಕೆಳಕಂಡಂತಿದೆ.

**(ರೂ.ಲಕ್ಷಗಳಲ್ಲಿ)**

| ಕ್ರ. ಸಂ | ಯೋಜನೆಯಹೆಸರು | ಭೌತಿಕ | ಆರ್ಥಿಕ |
|---|---|---|---|
| 1 | ಸ್ವಯಂಉದ್ಯೋಗನೇರಸಾಲ | 32 | 32.00 |
| 2 | ಉದ್ಯಮಶೀಲತಾ | 11 | 22.00 |
| 3 | 4 ಚಕ್ರಗಳಸರಕುಸಾಗಾಣಿಕೆವಾಹನ | 5 | 17.50 |
| 4 | ದ್ವೀ/ತ್ರಿಚಕ್ರವಾಹನ | 10 | 7.00 |
| 5 | ಮೈಕ್ರೋಕ್ರೆಡಿಟ್ | 5 | 12.50 |
| 6 | ಭೂಒಡೆತನ | 3 | 60.00 |
| 7 | ಗಂಗಾಕಲ್ಯಾಣ | 9 | 31.50 |
| | ಒಟ್ಟು | **75** | **182.5** |

ಮೇಲ್ಕಂಡ ಯೋಜನೆಗಳ ಮಾರ್ಗಸೂಚಿಗಳನ್ವಯ ಹಾಗೂ ಭೂ ಒಡೆತನ ಯೋಜನೆಯನ್ನು ಹೊರತುಪಡಿಸಿ ಆಯಾ ಕ್ಷೇತ್ರದ ಮಾನ್ಯ ವಿಧಾನಸಭಾ ಶಾಸಕರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗುವ ಆಯ್ಕೆ ಸಮಿತಿ ಸಭೆಯ ತೀರ್ಮಾನದನ್ವಯ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು. ಹಾಗೂ ಯೋಜನೆಯ ಫಲಾನುಭವಿಗಳನ್ನು ಆಯ್ಕೆ ಮಾಡಲು ಇರುವ ಮಾನದಂಡಗಳ ವಿವರವನ್ನು **ಅನುಬಂಧ**ದಲ್ಲಿ ನೀಡಲಾಗಿದೆ.

**ಸಂಖ್ಯೆ:**ಹಿಂವಕ 93 ಬಿಂಎಂಎಸ್ 2023

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

## ಅನುಬಂಧ-1

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾ ವ್ಯಾಪ್ತಿಯ ನಿಗಮಗಳಾದ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ, ಸವಿತಾ ಸಮಾಜ ಅಭಿವೃದ್ಧಿ ನಿಗಮ ಹಾಗೂ ಅಲೆಮಾರಿ/ಅರೆಅಲೆಮಾರಿ ಅಭಿವೃದ್ಧಿ ನಿಗಮಗಳಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅನುಸರಿಸುವ ಮಾನದಂಡಗಳು ಈ ಕೆಳಕಂಡಂತಿವೆ. ಹಾಗೂ ಇಲಾಖಾ ವ್ಯಾಪ್ತಿಯ ಉಳಿದ ನಿಗಮಗಳು ಸಹ ಯೋಜನೆಗಳಿಗೆ ಸಂಬಂಧಿಸಿದಂತೆ ಡಿ.ದೇವರಾಜ ಅರಸು ಅಭಿವೃದ್ಧಿ ನಿಗಮಗಳಲ್ಲಿ ಅನುಸರಿಸುವ ಮಾನದಂಡಗಳನ್ನು ಅಳವಡಿಸಿಕೊಂಡು ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿರುತ್ತದೆ.

1. ಮಹಿಳೆಯರಿಗೆ ಶೇ.33ರಷ್ಟು ಮೀಸಲು ನಿಗಧಿಪಡಿಸಲಾಗಿರುತ್ತದೆ.
2. ಶೇ.5ರಷ್ಟು ಅಂಗವಿಕಲರಿಗೆ ಅದರಲ್ಲಿ ಕಡ್ಡಾಯವಾಗಿ ಶೇ.2.5ರಷ್ಟು ಮಹಿಳಾ ಅಂಗವಿಲರನ್ನು ಆಯ್ಕೆ ಮಾಡಲಾಗುವುದು.
3. ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿಗಳು ಸ್ವೀಕೃತವಾಗಿದ್ದಲ್ಲಿ ಲಾಟರಿ ಮುಖಾಂತರ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ.
4. ಕುಟುಂಬದ ವಾರ್ಷಿಕ ವರಮಾನ ಗ್ರಾಮಾಂತರ ಪ್ರದೇಶದವರಿಗೆ ರೂ.98,000/-ಗಳು, ಪಟ್ಟಣ ಪ್ರದೇಶದವರಿಗೆ ರೂ.1,20,000/-ಗಳ ಒಳಗಿರಬೇಕು
5. ಅರ್ಜಿದಾರರ ವಯಸ್ಸು 18 ರಿಂದ 55 ವರ್ಷದೊಳಗಿರಬೇಕು.

### ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದಲ್ಲಿ

1. ಅರ್ಜಿದಾರರು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 228 ಬಿಸಿಎ 2000 ದಿನಾಂಕ:30.03.2002 ರನ್ವಯ ಹಿಂದುಳಿದ ವರ್ಗಗಳ ಪ್ರವರ್ಗ 2ರಡಿ ಬರುವ ವಿಶ್ವಕರ್ಮ ಹಾಗೂ ಅದರ ಉಪಜಾತಿಗಳಿಗೆ ಸೇರಿದವರಾಗಿರಬೇಕು.
2. ರಾಜ್ಯ ಸರ್ಕಾರದ ಯೋಜನೆಗಳಲ್ಲಿ ಸೌಲಭ್ಯ ಪಡೆಯಲು ಅರ್ಜಿದಾರರ ಮತ್ತು ಅವರ ಕುಟುಂಬ ವಾರ್ಷಿಕ ಆದಾಯ ಮಿತಿಯನ್ನು ಗ್ರಾಮಾಂತರ ಪ್ರದೇಶದವರಿಗೆ ರೂ.98.000/- ಹಾಗೂ ನಗರ ಪ್ರದೇಶದವರಿಗೆ ರೂ.1,20,000/- ನಿಗಧಿಪಡಿಸಿದೆ (ಅರಿವು ಶೈಕ್ಷಣಿಕ ಯೋಜನೆ ಹೊರತುಪಡಿಸಿ).
3. ವಯೋಮಿತಿ 18 ವರ್ಷಗಳಿಂದ 55 ವರ್ಷಗಳ ಮಿತಿಯಲ್ಲಿರಬೇಕು.
4. ಗಂಗಾ ಕಲ್ಯಾಣ ಯೋಜನೆ ಸೌಲಭ್ಯ ಪಡೆಯಲು ಸಣ್ಣ ಮತ್ತು ಅತಿ ಸಣ್ಣ ರೈತರಾಗಿದ್ದು ಜಮೀನಿಗೆ ನೀರಾವರಿ ಸೌಲಭ್ಯ ಹೊಂದಿರಬಾರದು.
5. ಪಂಚವೃತ್ತಿ ಸಾಲ ಯೋಜನೆಯಡಿ ಸೌಲಭ್ಯ ಪಡೆಯಲು ಯೋಜನೆಯಲ್ಲಿ ಗುರಿತಿಸಿರುವ ವೃತ್ತಿಗಳನ್ನು ನಿರ್ವಹಿಸುತ್ತಿರಬೇಕು.
6. ಅರ್ಜಿದಾರರು ಮತ್ತು ಅವರ ಕುಟುಂಬದ ಸದಸ್ಯರು ಕಳೆದ ಯಾವುದೇ ವರ್ಷಗಳಲ್ಲಿ ಕರ್ನಾಟಕ ವಿಶ್ವಕರ್ಮ ಸುಮುದಾಯಗಳ ಅಭಿವೃದ್ಧಿ ನಿಗಮದಿಂದ/ ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ(ನಿ).ದಿಂದ ಯಾವುದೇ ಸಾಲ ಮತ್ತು ಸೌಲಭ್ಯಗಳನ್ನು ಪಡೆದಿರಬಾರದು.

## ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ.

1. ದಿನಾಂಕ 30.03.2002ರ ಸಂಖ್ಯೆ ಸಕಿ 225 ಬಿಸಿಎ 2000 ಆದೇಶದಲ್ಲಿ ಗುರ್ತಿಸಿದ ಪ್ರವರ್ಗ-1 ರಲ್ಲಿ 6(a) ಯಿಂದ 6(ak) ಬರುವ ಬೆಸ್ತ, ಕೋಳಿ, ಕಬ್ಬಲಿಗ ಮೊಗವೀರ, ಗಂಗಾಮತ ಮತ್ತು ಇದರ ಉಪಜಾತಿಗಳಿಗೆ ಸೇರಿದವರಾಗಿರಬೇಕು.
2. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ ಗ್ರಾಮೀಣ ಪ್ರದೇಶದವರಾದರೆ ರೂ 98,000/-ಗಳ ಹಾಗೂ ನಗರ ಪ್ರದೇಶದವರಿಗೆ ರೂ 1,20,000/-ಗಳನ್ನು ಮೀರಿರಬಾರದು.
3. ಕರ್ನಾಟಕ ರಾಜ್ಯದ ಖಾಯಂ ನಿವಾಸಿಯಾಗಿರಬೇಕು.
4. ಅರ್ಜಿದಾರರ ವಯಸ್ಸು 18 ರಿಂದ 55 ವರ್ಷಗಳ ಮಿತಿಯೊಳಗಿರಬೇಕು.
5. ಸರ್ಕಾರದ/ನಿಗಮದ ಬೇರೆ ಯಾವುದಾದರೂ ಯೋಜನೆಗಳಲ್ಲಿ ಸಾಲ ಅಥವಾ ಇತರೆ ಆರ್ಥಿಕ ಸವಲತ್ತು ಪಡೆದಿರಬಾರದು.
6. ಮಹಿಳೆಯರಿಗೆ ಈ ಯೋಜನೆಯಲ್ಲಿ ಶೇ.33ರಷ್ಟು ಮೀಸಲು ನಿಗದಿಪಡಿಸಿದೆ.
7. ವಿಕಲಚೇತನರಿಗೆ ಈ ಯೋಜನೆಯಲ್ಲಿ ಶೇ.5ರಷ್ಟು ಮೀಸಲು ನಿಗದಿಪಡಿಸಿದೆ.
8. ಒಂದು ಕುಟುಂಬದ ಒಬ್ಬ ಸದಸ್ಯರಿಗೆ ಮಾತ್ರ ಸೌಲಭ್ಯ ಒದಗಿಸಲಾಗುವುದು.
9. ನಿಗಮದ ನಿರ್ದೇಶಕ ಮಂಡಳಿಯು ಕಾಲಕಾಲಕ್ಕೆ ವಿಧಿಸುವ ಇನ್ನಿತರ ಅರ್ಹತೆಗಳನ್ನು ಹೊಂದಿದವರಾಗಿರಬೇಕು.
10. ಅರ್ಜಿದಾರರು ಕಡ್ಡಾಯವಾಗಿ ರಾಷ್ಟ್ರೀಯಕೃತ ಬ್ಯಾಂಕ್‌ಗಳಲ್ಲಿ ಉಳಿತಾಯ ಖಾತೆ ಹೊಂದಿರಬೇಕು.
11. ಫಲಾನುಭವಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಮಾಡುವುದು.
12. ಆಯಾ ಜಿಲ್ಲೆಗೆ ನಿಗದಿಪಡಿಸಿದ ಗುರಿಯನ್ವಯ ಆಯ್ಕೆ ಮಾಡಲಾಗುವುದು.

## ಸಮಾಜ ಕಲ್ಯಾಣ ವ್ಯಾಪ್ತಿಯ ನಿಗಮನಗಳಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಅನುಸರಿಸುವ ಮಾನದಂಡಗಳ ವಿವರ ಈ ಕೆಳಕಂಡಂತಿದೆ.

1. ಅರ್ಜಿದಾರರು ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.
2. ಅರ್ಜಿದಾರರ 18 ವರ್ಷ ಮೇಲ್ಪಟ್ಟ ವಯೋಮಾನದವರಾಗಿರಬೇಕು.
3. ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನವು ಗ್ರಾಮೀಣ ಪ್ರದೇಶವಾದಲ್ಲಿ ರೂ. 150 ಲಕ್ಷ ಹಾಗೂ ನಗರ ಪ್ರದೇಶವಾದಲ್ಲಿ ರೂ. 2.00 ಲಕ್ಷದ ಮಿತಿಯೊಳಗಿರಬೇಕು.
4. ವಸತಿ ಯೋಜನೆಗೆ ಅರ್ಜಿದಾರರ ಕುಟುಂಬದ ವಾರ್ಷಿಕ ವರಮಾನ ಗ್ರಾಮೀಣ ಪ್ರದೇಶದಲ್ಲಿ ರೂ. 32,400/- ಮತ್ತು ನಗರ ಪ್ರದೇಶದವರಿಗೆ ರೂ. 87,600/-ಗಳ ಮಿತಿ ಒಳಗಿರಬೇಕು.
5. ಅರ್ಜಿದಾರರ ಕುಟುಂಬದ ಯಾವುದೇ ಸದಸ್ಯರು ಸರ್ಕಾರಿ/ಅರೆ ಸರ್ಕಾರಿ ಸಂಸ್ಥೆಯಲ್ಲಿ ನೌಕರಿಯಲ್ಲಿರಬಾರದು.
6. ಅರ್ಜಿದಾರರು ಅಥವಾ ಕುಟುಂಬದವರು ಈ ನಿಗಮದಿಂದ ಯಾವುದೇ ಸೌಲಭ್ಯ ಪಡೆದಿರಬಾರದು (ತರಬೇತಿ | ಕುಟೀರ ಹೊರತುಪಡಿಸಿ)
7. ಕಾಯಕ ಸ್ಫೂರ್ತಿ ಯೋಜನೆಯಡಿ ಸೌಲಭ್ಯ ಪಡೆಯಲು ತರಬೇತಿ ಪಡೆದ 10 ಮಹಿಳಾ ಕುಶಲಕರ್ಮಿಗಳು ಸ್ವಸಹಾಯ ಸಂಘ ರಚಿಸಿಕೊಂಡಿರಬೇಕು.
8. ಎಲ್ಲಾ ಯೋಜನೆಗಳಲ್ಲಿ ಮಹಿಳೆಯರಿಗೆ ಶೇ. 33 ರಷ್ಟು ಮೀಸಲಾತಿ ನೀಡಿ ಸೌಲಭ್ಯ ಕಲ್ಪಿಸಲಾಗುವುದು.
9. ವಿಕಲಚೇತನರಿಗೆ ಶೇಕಡ 5 ರಷ್ಟು ಆಧ್ಯತೆ ನೀಡಲಾಗುವುದು.
10. ಆಯಾ ಯೋಜನೆಗಳ ಅನುಷ್ಠಾನ ಸರ್ಕಾರದಿಂದ ಹೊರಡಿಸಿರುವ ಆದೇಶಗಳಲ್ಲಿನಷರತ್ತುಗಳು ಅನ್ವಯವಾಗುತ್ತವೆ.

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 569 |
| ಸದಸ್ಯರ ಹೆಸರು | : | ಡಾ|| ದೇವಾನಂದ್ ಫುಲಸಿಂಗ್ ಚವಾಣ್ (ನಾಗಠಾಣ) |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | 2016-17 ಮತ್ತು 2018-19ನೇ ಸಾಲಿನ ಪರಿಶಿಷ್ಟ ಜಾತಿ ಉಪಯೋಜನೆ ಕ್ರೋಢೀಕೃತ ಅನುದಾನದಲ್ಲಿ, ನಾಗಠಾಣ ಮತಕ್ಷೇತ್ರ ವ್ಯಾಪ್ತಿಯ ಚಡಚಣ ತಾಲ್ಲೂಕಿನ ಜೀರಂಕಲಗಿ ಗ್ರಾಮದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಭವನ, ಲೋಣೀ ಬಿ.ಕೆ ಗ್ರಾಮದಲ್ಲಿ ಡಾ:ಬಿ.ಆರ್. ಅಂಬೇಡ್ಕರ್ ಭವನ ಮತ್ತು ಡಾ: ಬಾಬು ಜಗಜೀವನರಾಂ ಭವನ, ನಂದ್ರಾಳ ಗ್ರಾಮದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಭವನ, ಶಿಗಣಾಪೂರ ಗ್ರಾಮದಲ್ಲಿ ಡಾ: ಬಿ.ಆರ್. ಅಂಬೇಡ್ಕರ್ ಭವನ ಹಾಗೂ ಜಿಗಜೇವಣಗಿ ಗ್ರಾಮದಲ್ಲಿ ಡಾ: ಬಾಬು ಜಗಜೀವನರಾಂ ಭವನ ಕಾಮಗಾರಿಗಳಿಗೆ ಪ್ರತಿ ಭವನಕ್ಕೆ ಮಂಜೂರಾದ 12.00 ಲಕ್ಷ ರೂಪಾಯಿಗಳಲ್ಲಿ ರೂ.3.60 ಲಕ್ಷ ರೂಪಾಯಿಗಳನ್ನು ಮಾತ್ರ ಬಿಡುಗಡೆ ಮಾಡಿ ಉಳಿದ ಅನುದಾನವನ್ನು ಬಿಡುಗಡೆ ಮಾಡದೇ ಇರುವುದರಿಂದ ಕಾಮಗಾರಿಗಳು ಪೂರ್ಣಗೊಳ್ಳದೇ ಅರ್ಧಕ್ಕೆ ನಿಂತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br><br>ವಿಜಯಪುರ ಜಿಲ್ಲೆ, ನಾಗಠಾಣ ಮತಕ್ಷೇತ್ರ ವ್ಯಾಪ್ತಿಯ ಜೀರಂಕಲಗಿ, ಲೋಣಿ ಬಿ.ಕೆ, ನಂದ್ರಾಳ, ಶಿಗಣಾಪೂರ ಮತ್ತು ಜಿಗಜಿಣಗಿ ಗ್ರಾಮಗಳಲ್ಲಿ ಡಾ||ಬಿ.ಆರ್ ಅಂಬೇಡ್ಕರ್ / ಡಾ|| ಬಾಬು ಜಗಜೀವನರಾಮ್ ಭವನಗಳ ನಿರ್ಮಾಣ ಮಾಡಲು ತಲಾ ರೂ.12.00 ಲಕ್ಷಗಳಂತೆ ಒಟ್ಟು ರೂ.60.00 ಲಕ್ಷಗಳಿಗೆ ಮಂಜೂರಾತಿ ನೀಡಿ, ಮೊದಲ ಕಂತಿನಲ್ಲಿ ತಲಾ ರೂ.3.60 ಲಕ್ಷಗಳಂತೆ ಒಟ್ಟು ರೂ.18.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ವಿಜಯಪುರ ಜಿಲ್ಲೆ ರವರಿಗೆ ಬಿಡುಗಡೆ ಮಾಡಲಾಗಿರುತ್ತದೆ. ಮೇಲ್ಕಂಡ 05 ಭವನಗಳ ಪೈಕಿ ಜಿಗಜಿಣಗಿ ಗ್ರಾಮದ ಡಾ|| ಬಾಬು ಜಗಜೀವನರಾಮ್ ಭವನ ಹೊರತುಪಡಿಸಿ ಬಾಕಿ ಉಳಿದ 04 ಭವನಗಳ ಕಟ್ಟಡ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿದ್ದು, ಬಾಕಿ ಅನುದಾನ ರೂ.33.60 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿ ಜಿಲ್ಲೆಯಿಂದ ಪ್ರಸ್ತಾವನೆ ಸ್ವೀಕೃತಗೊಂಡಿರುತ್ತದೆ.<br><br>ಸದರಿ ಯೋಜನೆಯಡಿ ಇದುವರೆವಿಗೂ ಮಂಜೂರಾತಿ ನೀಡಿರುವ ಭವನಗಳ ನಿರ್ಮಾಣ ಸಂಬಂಧವಾಗಿ ರೂ.437.47 ಕೋಟಿಗಳ ಅನುದಾನದ ಅಗತ್ಯವಿರುತ್ತದೆ. 2022-23 ನೇ ಸಾಲಿನಲ್ಲಿ ಭವನಗಳ ನಿರ್ಮಾಣ ಸಂಬಂಧವಾಗಿ ಪರಿಶಿಷ್ಟ ಜಾತಿಯ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕ ಶೀರ್ಷಿಕೆ 4225-01-796-0-01 ರಡಿ ರೂ.30.00 ಕೋಟಿಗಳನ್ನು ಮಾತ್ರ ನಿಗದಿಪಡಿಸಲಾಗಿದ್ದು, ಅನುದಾನದ ಕೊರತೆ ಇರುತ್ತದೆ. ಅನುದಾನ ಲಭ್ಯತೆಗೆ ಅನುಗುಣವಾಗಿ ಬಾಕಿ ಅನುದಾನ ಬಿಡುಗಡೆ ಮಾಡಲು ಕ್ರಮವಹಿಸಲಾಗುವುದು. |
| (ಆ) | ಬಂದಿದ್ದಲ್ಲಿ, ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ವಿಳಂಬವಾಗಿರುವುದಕ್ಕೆ ಕಾರಣಗಳೇನು; (ವಿವರವಾದ ಮಾಹಿತಿ ನೀಡುವುದು) | |
| (ಇ) | ಸಮುದಾಯ ಭವನ ಕಾಮಗಾರಿಗಳ ಅನುಷ್ಠಾನ ಸಂಸ್ಥೆಯಾದ ಕೆ.ಆರ್.ಐ.ಡಿ.ಎಲ್ ವಿಜಯಪುರ ರವರು ಸಮುದಾಯ ಭವನಗಳ ನಿರ್ಮಾಣಕ್ಕಾಗಿ ಬಿಡುಗಡೆಯಾದ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಬಳಕೆ ಮಾಡಿಕೊಂಡಿರುವ ಬಗ್ಗೆ ಹಾಗೂ ಬಿಡುಗಡೆಯಾಗಬೇಕಿರುವ ಉಳಿದ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿ ದಿನಾಂಕ:03-08-2022 ರಂದು ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ, ವಿಜಯಪುರ ರವರ ಮೂಲಕ ಪ್ರಸ್ತಾವನೆ ಸಲ್ಲಿಸಿದ್ದು, ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರವಾದ ಮಾಹಿತಿ ನೀಡುವುದು) | |

ಸಕಇ 47 ಎಸ್‌ಎಲ್‌ಪಿ 2023

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : | 570 |
| ಸದಸ್ಯರ ಹೆಸರು : | ಶ್ರೀ ಲಿಂಗೇಶ್ ಕೆ.ಎಸ್ (ಬೇಲೂರು) |
| ಉತ್ತರಿಸಬೇಕಾದ ದಿನಾಂಕ : | 15.02.2023 |
| ಉತ್ತರಿಸುವ ಸಚಿವರು : | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಡಿ.ದೇವರಾಜ ಅರಸು ನಿಗಮದಿಂದ ಅನುಷ್ಠಾನಗೊಳಿಸುತ್ತಿರುವ ಗಂಗಾ ಕಲ್ಯಾಣ ಘಟಕದ ವೆಚ್ಚ ರೂ.2.50 ಲಕ್ಷಗಳು ಮಂಜೂರು ಆಗಿದ್ದು, ಬಡವರು ಹಾಗೂ ಮಧ್ಯಮ ವರ್ಗದ ಬಡ ರೈತರು ಇದ್ದು, ನಿಗಮಗಳಲ್ಲಿ ತಾರತಮ್ಯ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಆ) | ಬಂದಿದ್ದಲ್ಲಿ, ಎಷ್ಟು ಕಾಲಮಿತಿಯೊಳಗೆ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಘಟಕ ವೆಚ್ಚವನ್ನು ಪರಿಷ್ಕರಿಸಿ, ಹೆಚ್ಚಿಸುವಂತೆ ಯಾವ ಕಾಲ ಮಿತಿಯೊಳಗೆ ಆದೇಶ ಹೊರಡಿಸಲಾಗುವುದು? (ವಿವರ ನೀಡುವುದು) | ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಗಂಗಾ ಕಲ್ಯಾಣ ಯೋಜನೆಯಡಿ ವೈಯಕ್ತಿಕ ಕೊಳವೆ ಬಾವಿ ಘಟಕಕ್ಕೆ 24 ಜಿಲ್ಲೆಗಳಿಗೆ ಪ್ರಸ್ತುತ ನಿಗಧಿಪಡಿಸಿರುವ ಘಟಕ ವೆಚ್ಚವನ್ನು ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |

**ಸಂಖ್ಯೆ**:ಹಿಂವಕ 74 ಬಿಂಎಂಎಸ್ 2023

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 571 |
| ಸದಸ್ಯರ ಹೆಸರು | : | ಶ್ರೀ ಲಿಂಗೇಶ ಕೆ.ಎಸ್ |
| ಉತ್ತರಿಸುವ ದಿನಾಂಕ | : | 15.02.2023. |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೇಲೂರು ತಾಲೂಕು ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಬರುವ ಡಾ. ಬಿ.ಆರ್. ಅಂಬೇಡ್ಕರ್ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸಿರುವ ಗಂಗಾ ಕಲ್ಯಾಣ ಘಟಕ ವೆಚ್ಚ ರೂ 3.50 ಲಕ್ಷಗಳಾಗಿದ್ದು, ಬಡವರು ಹಾಗೂ ಮಧ್ಯಮ ವರ್ಗದ ಬಡ ರೈತರು ಇದ್ದು, ನಿಗಮಗಳಲ್ಲಿ ತಾರತಮ್ಯ ಮಾಡುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ದಿನಾಂಕ 05.09.2018 ರಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕೋಲಾರ, ಚಿಕ್ಕಬಳ್ಳಾಪುರ, ರಾಮನಗರ ಮತ್ತು ತುಮಕೂರು ಜಿಲ್ಲೆಗಳಿಗೆ ಘಟಕ ವೆಚ್ಚ ರೂ 4.50 ಲಕ್ಷಗಳನ್ನು ನಿಗಧಿಪಡಿಸಿದ್ದು, ಉಳಿದ ಜಿಲ್ಲೆಗಳಲ್ಲಿ ರೂ 3.50 ಲಕ್ಷ ನಿಗಧಿಪಡಿಸಲಾಗಿರುತ್ತದೆ. ಘಟಕ ವೆಚ್ಚವನ್ನು ಹೆಚ್ಚಿಸುವ ಪ್ರಸ್ತಾವನೆಯು ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಬಂದಿದ್ದಲ್ಲಿ ಎಷ್ಟು ಕಾಲಮಿತಿಯೊಳಗೆ ಘಟಕ ವೆಚ್ಚವನ್ನು ಪರಿಷ್ಕರಿಸಿ ಹೆಚ್ಚಿಸಲು ಸಮಾಜ ಕಲ್ಯಾಣ ಇಲಾಖೆಯಿಂದ ಆದೇಶ ಹೊರಡಿಸಲಾಗುವುದು? | |

ಸಂಖ್ಯೆ: ಸಕಇ 49 ಎಸ್‌ಡಿಸಿ 2023

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು
ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 572 |
| ಸದಸ್ಯರ ಹೆಸರು | : | ಶ್ರೀ ಸತೀಶ್ ಎಲ್. ಜಾರಕಿಹೊಳಿ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಗಂಗಾ ಕಲ್ಯಾಣ ಯೋಜನೆಯಡಿ ಆಯ್ಕೆಯಾದ ಪ್ರತಿ ಫಲಾನುಭವಿಗೆ ರೂ.2.50 ಲಕ್ಷ ಸಹಾಯಧನ ನಿಗದಿಪಡಿಸಲಾಗಿದ್ದು, ಇದರಲ್ಲಿ 18% ಜಿ.ಎಸ್.ಟಿ ಕಡಿತವಾಗಿ ಕೇವಲ ರೂ.2.05 ಲಕ್ಷ ಮಾತ್ರ ಉಳಿಯುತ್ತಿದ್ದು, ಈ ಹಣದಲ್ಲಿ ಟೆಂಡರ್ ಪಡೆದ ಗುತ್ತಿಗೆದಾರರು ಸಮರ್ಪಕವಾಗಿ ಸಾಮಗ್ರಿಗಳನ್ನು ಪೂರೈಕೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ.<br><br>ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮದ ವತಿಯಿಂದ ರಾಜ್ಯದ 06 ಜಿಲ್ಲೆಗಳಾದ ಬೆಂಗಳೂರು ನಗರ & ಗ್ರಾಮೀಣ, ಚಿಕ್ಕಬಳ್ಳಾಪುರ, ತುಮಕೂರು, ಕೋಲಾರ ಮತ್ತು ರಾಮನಗರದಲ್ಲಿ ಘಟಕ ವೆಚ್ಚವಾದ 4.50 ಲಕ್ಷಗಳಲ್ಲಿ ಸಹಾಯಧನ ರೂ. 4.00 ಲಕ್ಷ ಇದ್ದು ರಾಜ್ಯದ ಉಳಿದ ಜಿಲ್ಲೆಗಳಲ್ಲಿ ಘಟಕ ವೆಚ್ಚವಾದ 3.50 ಲಕ್ಷಗಳಲ್ಲಿ ಸಹಾಯಧನ ರೂ. 3.00 ಲಕ್ಷಗಳು ಇರುತ್ತದೆ. 18% ಜಿ.ಎಸ್.ಟಿ ಯಲ್ಲಿ ವಿನಾಯಿತಿ ನೀಡುವುದು ರಾಜ್ಯ ಸರ್ಕಾರದ ವ್ಯಾಪ್ತಿಗೆ ಬರುವುದಿಲ್ಲ. |
| ಆ) | 18% ಜಿ.ಎಸ್.ಟಿ. ಯಲ್ಲಿ ವಿನಾಯಿತಿ ನೀಡುವಂತೆ ಅಥವಾ ಸಹಾಯಧನದ ಮೊತ್ತವನ್ನು ರೂ.2.50 ಲಕ್ಷಗಳಿಂದ ರೂ.4.00 ಲಕ್ಷಗಳಿಗೆ ಹೆಚ್ಚಿಸಲು ಫಲಾನುಭವಿಗಳು ಒತ್ತಾಯಿಸುತ್ತಿದ್ದು, ಈ ಕುರಿತು ಸರ್ಕಾರ ಕೈಗೊಳ್ಳಬಹುದಾದ ಕ್ರಮಗಳೇನು? | |

ಸಕಇ 55 ಎಸ್‌ಡಿಸಿ 2023

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು

## ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 573 |
| ಮಾನ್ಯ ವಿಧಾನ ಸಭಾ ಸದಸ್ಯರ ಹೆಸರು | ಶ್ರೀ ಮಸಾಲ ಜಯರಾಮ್ |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ತುರುವೇಕೆರೆ ತಾಲ್ಲೂಕು, ದಂಡಿನಶಿವರ ಹೋಬಳಿ, ಚಾಕೋವಳ್ಳಿ ಗ್ರಾಮದ ಸರ್ವೆ ನಂ.8 ಮತ್ತು 9 ರಲ್ಲಿ ಒಟ್ಟು 8 ಎಕರೆ ಜಮೀನನ್ನು ಡಾ:ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ (ದಂಡಿನಶಿವರ) ನಿರ್ಮಾಣಕ್ಕೆ ಮಂಜೂರು ಮಾಡಲಾಗಿದ್ದು, ಕಟ್ಟಡ ನಿರ್ಮಾಣದ ಪ್ರಸ್ತಾವನೆ ಪ್ರಸ್ತುತ ಯಾವ ಹಂತದಲ್ಲಿದೆ; ಈ ಪ್ರಸ್ತಾವನೆಗೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ತುಮಕೂರು ಜಿಲ್ಲೆ, ತುರುವೇಕೆರೆ ವಿಧಾನಸಭಾ ಕ್ಷೇತ್ರದ ದಂಡಿನ ಶಿವಾರ ಹೋಬಳಿ ಚಾಕೋಹಳ್ಳಿ ಗ್ರಾಮದಲ್ಲಿ ಡಾ॥ ಬಿ.ಆರ್. ಅಂಬೇಡ್ಕರ್ ವಸತಿ ಶಾಲೆ ನಿರ್ಮಾಣ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಲೋಕೋಪಯೋಗಿ ಇಲಾಖೆಗೆ ವಹಿಸಲಾಗಿತ್ತು.<br>ಆದರೆ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಲೋಕೋಪಯೋಗಿ ಇಲಾಖೆ ರವರ ಅನಧಿಕೃತ ಟಿಪ್ಪಣಿ ಸಂಖ್ಯೆ:ಲೋಇ 22 ಆರ್ ಡಿಎಫ್ 2020 ದಿ:12.10.2021. ಯಲ್ಲಿ ಲೋಕೋಪಯೋಗಿ ಇಲಾಖೆಗೆ ವಹಿಸಿರುವ ಲೆಕ್ಕಶೀರ್ಷಿಕೆಯಡಿ ಕಟ್ಟಡ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಅವಕಾಶ ಇಲ್ಲವೆಂದು ಆರ್ಥಿಕ ಇಲಾಖೆ ಅಭಿಪ್ರಾಯ ನೀಡಿರುವುದಾಗಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆಗೆ ರವರಿಗೆ ತಿಳಿಸಲಾಗಿದೆ.<br>ಸದರಿ ವಸತಿ ಶಾಲಾ ಕಟ್ಟಡ ನಿರ್ಮಾಣ ಕಾಮಗಾರಿಗೆ ಅಂದಾಜು ತಯಾರಿಸಿ ಆಡಳಿತ್ಮಾತಕ ಅನುಮೋದನೆ ಕೋರಿರಲಾಗಿತ್ತು. ಅನುದಾನದ ಕೊರತೆಯಿಂದ ಬಾಕಿ ಉಳಿದಿರುವ ಕಾಮಗಾರಿಗಳನ್ನು ಪೂರ್ಣಗೊಳಿಸದ ಹೊರತು ಹಾಗೂ ಬಾಕಿ ಬಿಲ್ಲುಗಳನ್ನು ಪೂರ್ಣವಾಗಿ ಪಾವತಿಸದ ಹೊರತು ಯಾವುದೇ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳದಂತೆ ಆರ್ಥಿಕ ಇಲಾಖೆಯ ನಿರ್ದೇಶನವಿರುತ್ತದೆ. |
| ಆ | ಹಲವಾರು ವರ್ಷಗಳಿಂದ ಈ ವಸತಿ ಶಾಲೆಗೆ ಸ್ವಂತ ಕಟ್ಟಡವಿಲ್ಲದೇ ವಿದ್ಯಾರ್ಥಿಗಳು ಬಾಡಿಗೆ ಕಟ್ಟಡದಲ್ಲಿ ಯಾವುದೇ ಮೂಲ ಸೌಕರ್ಯಗಳಿಲ್ಲದೇ ವಿದ್ಯಾಭ್ಯಾಸ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |

| ಇ | ಬಂದಿದ್ದಲ್ಲಿ, ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಡಾ: ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಯಾವಾಗ ಕೈಗೊಳ್ಳಲಾಗುವುದು ಹಾಗೂ ವಿಳಂಬಕ್ಕೆ ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | ಅನುದಾನದ ಲಭ್ಯತೆ ಆಧಾರದ ಮೇಲೆ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಕ್ರಮವಹಿಸಲಾಗುವುದು. |
|---|---|---|

ಸಕಇ 16 ಎಂಡಿಎಸ್ 2023

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **574** |
| ಮಾನ್ಯ ಸದಸ್ಯರ ಹೆಸರು | ಶ್ರೀ ಮಸಾಲ ಜಯರಾಮ್ (ತುರುವೇಕೆರೆ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ |

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ತುಮಕೂರು ಜಿಲ್ಲೆಯಲ್ಲಿ ಹಿಂದುಳಿದ ವರ್ಗದ ವಿದ್ಯಾರ್ಥಿಗಳ ಬಾಲಕರ ಹಾಗೂ ಬಾಲಕಿಯರ ವಸತಿನಿಲಯಗಳ ಸಂಖ್ಯೆ ಎಷ್ಟು ಹಾಗೂ ಪ್ರಸಕ್ತ ಸಾಲಿನಲ್ಲಿ ದಾಖಲಾಗಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಗ್ರಾಮವಾರು ಸಂಪೂರ್ಣ ಮಾಹಿತಿ ನೀಡುವುದು)</td><td rowspan="2">ತುಮಕೂರು ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ 72 ಬಾಲಕರ ಮತ್ತು 41 ಬಾಲಕಿಯರ ಹೀಗೆ ಒಟ್ಟು 113 ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ಇವುಗಳಲ್ಲಿ 62 ಮೆಟ್ರಿಕ್-ಪೂರ್ವ ಮತ್ತು 51 ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳು ಇವೆ. ಪ್ರಸಕ್ತ ಸಾಲಿನಲ್ಲಿ 9412 ವಿದ್ಯಾರ್ಥಿಗಳು ನಿಲಯಕ್ಕೆ ದಾಖಲಾಗಿರುತ್ತಾರೆ. ತಾಲ್ಲೂಕುವಾರು ಗ್ರಾಮವಾರು ವಿವರಗಳನ್ನು ಅನುಬಂಧ ದಲ್ಲಿ ಒದಗಿಸಿದೆ.</td></tr>
<tr><td>ಆ)</td><td>ಸದರಿ ಜಿಲ್ಲೆಯಲ್ಲಿ ಹಿಂದುಳಿದ ವರ್ಗದ ಮೆಟ್ರಿಕ್-ಪೂರ್ವ ಮತ್ತು ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಸಂಖ್ಯೆ ಎಷ್ಟು ಹಾಗೂ ಪ್ರಸಕ್ತ ಸಾಲಿನಲ್ಲಿ ದಾಖಲಾಗಿರುವ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ಗ್ರಾಮವಾರು ಸಂಪೂರ್ಣ ಮಾಹಿತಿ ನೀಡುವುದು)</td></tr>
<tr><td>ಇ)</td><td>ಈ ಎಲ್ಲಾ ವಿದ್ಯಾರ್ಥಿನಿಲಯಗಳಲ್ಲಿ ಎಷ್ಟು ವಿದ್ಯಾರ್ಥಿಗಳಿಗೆ ಬೇಡಿಕೆಗೆ ಅನುಗುಣವಾಗಿ ವಸತಿ ಹಾಗೂ ಆಹಾರ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ ಮತ್ತು ಬೇಡಿಕೆಗೆ ಅನುಗುಣವಾಗಿ ವಿದ್ಯಾರ್ಥಿ ನಿಲಯಗಳಿವೆಯೇ; (ಸಂಪೂರ್ಣ ಮಾಹಿತಿ ನೀಡುವುದು)</td><td rowspan="2">ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ 113 ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆದಿರುವ 9412 ನಿಲಯಾರ್ಥಿಗಳಿಗೂ ವಸತಿ ಹಾಗೂ ಆಹಾರ ಸೌಲಭ್ಯಗಳನ್ನು ಕಲ್ಪಿಸಲಾಗಿರುತ್ತದೆ.<br><br>ಮುಂದುವರೆದು, ಜಿಲ್ಲೆಯ ತುಮಕೂರು ಹಾಗೂ ತಿಪಟೂರು ತಾಲ್ಲೂಕಿಗೆ ಮೆಟ್ರಿಕ್-ನಂತರದ ವಿದ್ಯಾರ್ಥಿನಿಲಯಗಳ ಮಂಜೂರಾತಿಗೆ ಬೇಡಿಕೆ ಇದ್ದು, ಅನುದಾನದ ಲಭ್ಯತೆಯ ಆಧಾರದ ಮೇಲೆ ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಗೆ ಪರಿಶೀಲಿಸಲಾಗುವುದು.</td></tr>
<tr><td>ಈ)</td><td>ಇಲ್ಲದಿದ್ದಲ್ಲಿ, ಹೊಸ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು)</td></tr>
</table>

| ಈ) | ಇಲ್ಲದಿದ್ದಲ್ಲಿ, ಹೊಸ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸಲು ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | ಹೊಸ ವಿದ್ಯಾರ್ಥಿನಿಲಯಗಳ ಮಂಜೂರಾತಿಯು ರಾಜ್ಯದ ಒಟ್ಟಾರೆ ಬೇಡಿಕೆ ಹಾಗೂ ಅನುದಾನದ ಲಭ್ಯತೆಯನ್ನು ಆಧರಿಸಿರುತ್ತದೆ. |
|---|---|---|

**ಸಂಖ್ಯೆ: ಹಿಂವಕ 80 ಬಿಎಂಎಸ್ 2023**

**(ಕೋಟ ಶ್ರೀನಿವಾಸ ಪೂಜಾರಿ)**
ಸಮಾಜ ಕಲ್ಯಾಣ ಹಾಗೂ ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು

ಅನುಬಂಧ - 1

ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಸಾಲ ಜಯರಾಮ್ (ತುರುವೇಕೆರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 574ಕ್ಕೆ ಅನುಬಂಧ-

ತುಮಕೂರು ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯಾರ್ಥಿನಿಲಯಗಳ ಹಾಗೂ ಪ್ರವೇಶಾತಿಯ ವಿವರಗಳು

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾತಿ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| | | **ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು** | | | | |
| 1 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಗೊಡ್ರಹಳ್ಳಿ, ಸರ್ಕಾರಿ ಪ್ರೌಢಶಾಲೆ ಮುಂಭಾಗ ಗೊಡ್ರಹಳ್ಳಿ, ಹೊಳವನಹಳ್ಳಿ ಹೋಬಳಿ, ತೊಗರಿಘಟ್ಟ ಅಂಚೆ- 572121 | BCWD-1105 | 25 | ಬಾಲಕ | 19 |
| 2 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೋಳಾಲ, ಪೊಲೀಸ್ ಸ್ಟೇಷನ್ ಮುಂಭಾಗ, ಕೋಳಾಲ ಹೋಬಳಿ, ಕೋಳಾಲ ಅಂಚೆ -572140 | BCWD-1106 | 30 | ಬಾಲಕ | 19 |
| 3 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೊರಟಗೆರೆ ಟೌನ್, ಗೌರಿಬಿದನೂರು ರಸ್ತೆ, ಕಸಬಾ ಹೋಬಳಿ, ಕೊರಟಗೆರೆ ಅಂಚೆ -572129 | BCWD-1107 | 50 | ಬಾಲಕ | 44 |
| 4 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ತೋವಿನಕೆರೆ, ಸಂತೇ ಮೈದಾನ, ತೋವಿನಕೆರೆ ಹೋಬಳಿ, ತೋವಿನಕೆರೆ ಅಂಚೆ-572138 | BCWD-1108 | 30 | ಬಾಲಕ | 55 |
| 5 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ವಡ್ಡಗೆರೆ, ಅಮ್ಮನವರ ದೇವಸ್ಥಾನದ ಆವರಣ, ಕಸಬಾ ಹೋಬಳಿ, ವಡ್ಡಗೆರೆ ಅಂಚೆ-572129 | BCWD-1109 | 45 | ಬಾಲಕ | 19 |
| 6 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕ್ಯಾಮೇನಹಳ್ಳಿ, ಗ್ರಾಮ ಪಂಚಾಯಿತಿ ಪಕ್ಕ, ಹೊಳವನಹಳ್ಳಿ ಹೋಬಳಿ, ಹೊಳವನಹಳ್ಳಿ ಅಂಚೆ-572121 | BCWD-1110 | 100 | ಬಾಲಕ | 16 |
| 7 | ಕೊರಟಗೆರೆ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಕೊರಟಗೆರೆ ಟೌನ್, ಮಾರುತಿ ಆಸ್ಪತ್ರೆ ಪಕ್ಕ, ಕಸಬಾ ಹೋಬಳಿ, ಕೊರಟಗೆರೆ ಅಂಚೆ -572129 | BCWD-1111 | 50 | ಬಾಲಕಿ | 47 |
| 8 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಚಿಕ್ಕನಾಯಕನಹಳ್ಳಿ ಟೌನ್ ತಾಲ್ಲೂಕು ಪಂಚಾಯಿತ್ ಹಿಂಭಾಗ ಚಿಕ್ಕನಾಯಕನಹಳ್ಳಿ ಅಂಚೆ-572214 | BCWD-1095 | 50 | ಬಾಲಕ | 41 |
| 9 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಹೊಯ್ಸಳಕಟ್ಟೆ ಸರ್ಕಾರಿ ಪದವಿ ಪೂರ್ವ ಕಾಲೇಜು ಪಕ್ಕ ಹೊಯ್ಸಳಕಟ್ಟೆ ಅಂಚೆ-572218 | BCWD-1096 | 100 | ಬಾಲಕ | 63 |
| 10 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಹುಳಿಯಾರು,ಅಂಬೇಡ್ಕರ್ ಭವನ ಕನಕದಾಸ ಸರ್ಕಲ್, ಹುಳಿಯಾರು ಅಂಚೆ-572218 | BCWD-1097 | 45 | ಬಾಲಕ | 40 |
| 11 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕಂದಿಕೆರೆ, ಪ್ರಾಥಮಿಕ ಆರೋಗ್ಯ ಕೇಂದ್ರದ ಪಕ್ಕ ಕಂದಿಕೆರೆ ಅಂಚೆ-572228 | BCWD-1098 | 45 | ಬಾಲಕ | 31 |
| 12 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ತಿಮ್ಮನಹಳ್ಳಿ, ಪ್ರಾಥಮಿಕ ಆರೋಗ್ಯ ಕೇಂದ್ರದ ಪಕ್ಕ ತಿಮ್ಮನಹಳ್ಳಿ ಅಂಚೆ-572228 | BCWD-1099 | 50 | ಬಾಲಕ | 50 |
| 13 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ದೊಡ್ಡರಾಂಪುರ ಸರ್ಕಾರಿ ಹಿರಿಯ ಪ್ರಾಥಮಿಕ ಪಾಠಶಾಲೆ ಮುಂಭಾಗ ದೊಡ್ಡರಾಂಪುರ ಅಂಚೆ-572214 | BCWD-1361 | 50 | ಬಾಲಕ | 42 |
| 14 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಚಿಕ್ಕನಾಯಕನಹಳ್ಳಿ ಟೌನ್ ಅಂಬೇಡ್ಕರ್ ಭವನ ಮುಂಭಾಗ ಚಿಕ್ಕನಾಯಕನಹಳ್ಳಿ ಅಂಚೆ-572214 | BCWD-1100 | 50 | ಬಾಲಕಿ | 62 |
| 15 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ರಂಗಸಮುದ್ರ,ರಂಗಸಮುದ್ರ ಅಂಚೆ | BCWD-1122 | 45 | ಬಾಲಕ | 45 |
| 16 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕಿಲಾರ್ಲಹಳ್ಳಿ,ಕಿಲಾರ್ಲಹಳ್ಳಿ ಅಂಚೆ | BCWD-1124 | 50 | ಬಾಲಕ | 36 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾತಿಯಾದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 17 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಮಂಳವಾಡ, ಮಂಗಳವಾಡ ಅಂಚೆ | BCWD-1125 | 50 | ಬಾಲಕ | 50 |
| 18 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಮರಿದಾಸನಹಳ್ಳಿ, ಮರಿದಾಸನಹಳ್ಳಿ ಅಂಚೆ | BCWD-1126 | 45 | ಬಾಲಕ | 45 |
| 19 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಪಾವಗಡ ಟೌನ್ ಪತಂಜಲಿ ನಗರ ಪಾವಗಡ ಅಂಚೆ-561202 | BCWD-1127 | 50 | ಬಾಲಕ | 80 |
| 20 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸಾಸಲಕುಂಟ, ಸಾಸಲಕುಂಟೆ ಅಂಚೆ -572141 | BCWD-1128 | 50 | ಬಾಲಕ | 50 |
| 21 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಬಿಎಸ್‌ಎನ್‌ಎಲ್ ಆಫೀಸ್ ಹತ್ತಿರ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-1129 | 50 | ಬಾಲಕಿ | 80 |
| 22 | ಪಾವಗಡ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ವಳ್ಳೂರು,ವಳ್ಳೂರು ಅಂಚೆ-572136 | BCWD1123 | 45 | ಬಾಲಕ | 0 |
| 23 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಬುಕ್ಕಾಪಟ್ಟಣ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572115 | BCWD1130 | 25 | ಬಾಲಕ | 40 |
| 24 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ದ್ವಾರನಕುಂಟೆ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572135 | BCWD1131 | 35 | ಬಾಲಕ | 50 |
| 25 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಗೊಲ್ಲಹಳ್ಳಿ, (ರಾಜ್ಯವಲಯ), ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ 572135 | BCWD1132 | 50 | ಬಾಲಕ | 45 |
| 26 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಹೊಸೂರು. ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572139 | BCWD1133 | 35 | ಬಾಲಕ | 34 |
| 27 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಕಠಾವೀರನಹಳ್ಳಿ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572125 | BCWD1134 | 40 | ಬಾಲಕ | 56 |
| 28 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಚಿಕ್ಕನಹಳ್ಳಿ, ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572125 | BCWD1135 | 50 | ಬಾಲಕ | 65 |
| 29 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಶಿರಾ ಟೌನ್ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD1136 | 50 | ಬಾಲಕ | 35 |
| 30 | ಶಿರಾ | ಮೆಟ್ರಿಕ್ ಪೂರ್ವ ಬಾಲಕಿಯರ ವಿ.ನಿ. ಶಿರಾ ಟೌನ್ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD1137 | 45 | ಬಾಲಕಿ | 80 |
| 31 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಹೊನ್ನಗೊಂಡನಹಳ್ಳಿ. ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD1355 | 50 | ಬಾಲಕ | 55 |
| 32 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಬೇವಿನಹಳ್ಳಿ. ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ 572135 | BCWD1356 | 50 | ಬಾಲಕ | 33 |
| 33 | ಶಿರಾ | ಮೆಟ್ರಿಕ್ ಪೂರ್ವ ಬಾಲಕರ ವಿ.ನಿ. ಗುಳಿಗೇನಹಳ್ಳಿ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD1357 | 50 | ಬಾಲಕ | 49 |
| 34 | ಶಿರಾ | ಮೆಟ್ರಿಕ್ ಪೂರ್ವ ಬಾಲಕಿಯರ ವಿ.ನಿ. ಬರಗೂರು ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572113 | BCWD1364 | 100 | ಬಾಲಕಿ | 99 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾತಿ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 35 | ಗುಬ್ಬಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಸಿ ಎಸ್ ಪುರ. ನಾಡಕಚೇರಿ ಹಿಂಬಾಗ ಸಿ ಎಸ್ ಪುರ ಹೋಬಳಿ ಗುಬ್ಬಿ ತಾಲ್ಲೂಕು ತುಮಕೂರು ಜಿಲ್ಲೆ-572213 | BCWD1101 | 35 | ಬಾಲಕ | 35 |
| 36 | ಗುಬ್ಬಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಚೇಳೂರು. ದೃಷ್ಟೇಶ್ವರ ಬಡಾವಣೆ ಚೇಳೂರು ಹೋಬಳಿ ಗುಬ್ಬಿ ತಾಲ್ಲೂಕು ತುಮಕೂರು ಜಿಲ್ಲೆ- 572117 | BCWD1102 | 45 | ಬಾಲಕ | 32 |
| 37 | ಗುಬ್ಬಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಗುಬ್ಬಿ ಟೌನ್. 6 ನೇ ಅಡ್ಡ ರಸ್ತೆ ಮಾರುತಿ ನಗರ ಗುಬ್ಬಿ, ತುಮಕೂರು ಜಿಲ್ಲೆ-572216 | BCWD1103 | 55 | ಬಾಲಕ | 27 |
| 38 | ಗುಬ್ಬಿ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಗುಬ್ಬಿ ಟೌನ್. 4 ನೇ ಅಡ್ಡ ರಸ್ತೆ ವಿನಾಯಕ ನಗರ ತುಮಕೂರು ಜಿಲ್ಲೆ-572216 | BCWD1104 | 40 | ಬಾಲಕಿ | 35 |
| 39 | ತುಮಕೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಊರ್ಡಿಗೆರೆ ತುಮಕೂರು ತಾ\|\| ತುಮಕೂರು | BCWD-1143 | 100 | ಬಾಲಕ | 15 |
| 40 | ತುಮಕೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಎಂ.ಜಿ ರಸ್ತೆ, ತುಮಕೂರು | BCWD-1144 | 55 | ಬಾಲಕ | 30 |
| 41 | ತುಮಕೂರು | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ರೈಲ್ವೇಸ್ಟೇಷನ್ ರಸ್ತೆ, ತುಮಕೂರು | BCWD-1145 | 60 | ಬಾಲಕಿ | 50 |
| 42 | ತಿಪಟೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಹಾಲ್ಕುರಿಕೆ ರಸ್ತೆ, ತಿಪಟೂರು 572202 | BCWD1138 | 55 | ಬಾಲಕ | 49 |
| 43 | ತಿಪಟೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಬಳುವನೇರಲು. ಗ್ರಾಮ ಪಂಚಾಯಿತಿ ಕಾರ್ಯಾಲಯದ ಹತ್ತಿರ, ಬಳುವನೇರಲು, ತಿಪಟೂರು ತಾ. | BCWD1139 | 50 | ಬಾಲಕ | 35 |
| 44 | ತಿಪಟೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಬಿಳಿಗೆರೆ, ಸರ್ಕಾರಿ ಪ್ರೌಢಶಾಲೆ ಪಕ್ಕ, ಬಿ.ಹೆಚ್. ರಸ್ತೆ, ಬಿಳಿಗೆರೆ, ತಿಪಟೂರು ತಾ | BCWD1140 | 45 | ಬಾಲಕ | 21 |
| 45 | ತಿಪಟೂರು | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೋಟೆನಾಯಕನಹಳ್ಳಿ. ಸ.ಹಿ.ಪ್ರಾ.ಪಾಠಶಾಲ ಹಿಂಭಾಗ, ಕೋಟೆನಾಯಕನಹಳ್ಳಿ ತಿಪಟೂರು ತಾಲ್ಲೂಕು. | BCWD1141 | 45 | ಬಾಲಕ | 27 |
| 46 | ಕುಣಿಗಲ್ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಹುಲಿಯೂರಮ್ಮ ದೇವಸ್ಥಾನದ ಹತ್ತಿರ, ಹುಲಿಯೂರುದುರ್ಗ,ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ-572123 | BCWD1112 | 40 | ಬಾಲಕ | 40 |
| 47 | ಕುಣಿಗಲ್ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಪತಾಂಜಲಿ ನಗರ, ಕುಣಿಗಲ್ ಟೌನ್ ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ-572130 | BCWD1113 | 100 | ಬಾಲಕ | 100 |
| 48 | ಕುಣಿಗಲ್ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಮದ್ದೂರು ರಸ್ತೆ, ನಿಡಸಾಲೆ,ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ-572123 | BCWD1114 | 50 | ಬಾಲಕ | 50 |
| 49 | ಕುಣಿಗಲ್ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಚನ್ನಪಟ್ಟಣ ರಸ್ತೆ, ಉಜ್ಜನಿ,ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ-572123 | BCWD1115 | 50 | ಬಾಲಕ | 50 |
| 50 | ಕುಣಿಗಲ್ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಜಿ.ಕೆ.ಬಿ ಎಂ.ಎಸ್ ಶಾಲಾ ಮೈದಾನ, ಕುಣಿಗಲ್ ಟೌನ್,ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ-572130 | BCWD1116 | 100 | ಬಾಲಕಿ | 100 |
| 51 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, V.S.S ಸಂಯುಕ್ತ ಪದವಿ ಪೂರ್ವ ಕಾಲೇಜು ಆವರಣ ಬಾಣಸಂದ್ರ, ತುರುವೇಕೆರೆ ತಾ. | BCWD1146 | 50 | ಬಾಲಕ | 50 |
| 52 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, K.E.B Office ಮುಂಭಾಗ, ದಂಡಿನಶಿವರ, ತುರುವೇಕೆರೆ ತಾ. | BCWD1147 | 50 | ಬಾಲಕ | 50 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾಗಿದ್ದರ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 53 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಪಶು ವೈದ್ಯಕೀಯ ಆಸ್ಪತ್ರೆ, ದಬ್ಬೇಘಟ್ಟ, ತುರುವೇಕೆರೆ ತಾ. | BCWD1148 | 50 | ಬಾಲಕ | 54 |
| 54 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ನೆಹರೂ ವಿದ್ಯಾಶಾಲಾ ಪಕ್ಕ, ಮಾಯಸಂದ್ರ, ತುರುವೇಕರ ತಾ. | BCWD1149 | 50 | ಬಾಲಕ | 42 |
| 55 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ಗ್ರಾಮ ಪಂಚಾಯಿತಿ ಕಾರ್ಯಾಲಯದ ಎದರು, ಶಟ್ಟಿಗೊಂಡನಹಳ್ಳಿ, ತುರುವೇಕೆರ ತಾ. | BCWD1150 | 50 | ಬಾಲಕ | 41 |
| 56 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ, ನೆಹರೂ ವಿದ್ಯಾಶಾಲಾ ಹಿಂಭಾಗ, ಸೀಗೇಹಳ್ಳಿ , ತುರುವೇಕರ ತಾ. | BCWD1151 | 100 | ಬಾಲಕ | 56 |
| 57 | ತುರುವೇಕೆರೆ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ, ಬಸವೇಶ್ವರ ಛತ್ರ ಮುಂಭಾಗ, ಹೊರಪೇಟೆ ಬೀದಿ, ಬಸವೇಶ್ವರ ನಗರ ತುರುವೇಕೆರೆ ಟೌನ್ | BCWD1153 | 50 | ಬಾಲಕಿ | 33 |
| 58 | ಮಧುಗಿರಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಮಧುಗಿರಿಟೌನ್. ರಿಲಿಯನ್ಸ್ ಪೆಟ್ರೋಲ್ ಬಂಕ್ ಮಧುಗಿರಿ 572132 | BCWD1118 | 50 | ಬಾಲಕ | 49 |
| 59 | ಮಧುಗಿರಿ | ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿನಿಲಯ ಮಧುಗಿರಿಟೌನ್ ವಿದ್ಯಾನಗರ ಮಧುಗಿರಿ 572132 | BCWD1121 | 55 | ಬಾಲಕಿ | 53 |
| 60 | ಮಧುಗಿರಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಬಡವನಹಳ್ಳಿ. ರಂಗಾಪುರ ರಸ್ತೆ ಬಡವನಹಳ್ಳಿ 572112 | BCWD1117 | 50 | ಬಾಲಕ | 47 |
| 61 | ಮಧುಗಿರಿ | ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿನಿಲಯ ಕೊಡಿಗೇನಹಳ್ಳಿ. ಸರ್ವೋದಯಕಾಲೇಜು ಕೊಡಿಗೇನಹಳ್ಳಿ. 572127 | BCWD1119 | 50 | ಬಾಲಕ | 45 |
| 62 | ಮಧುಗಿರಿ | ಕೊಡಿಗೇನಹಳ್ಳಿ. ಪೋಲಿಸ್ ಠಾಣೆ ಹಿಂಭಾಗ ಕೊಡಿಗೇನಹಳ್ಳಿ. 572127 | BCWD1120 | 50 | ಬಾಲಕಿ | 36 |
| | | ಒಟ್ಟು | | 3265 | | 2827 |
| | | | | | | |
| | | ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು | | | | |
| 1 | ಕೊರಟಗೆರೆ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಕೊರಟಗೆರ ಟೌನ್, ಮೂಡ್ಲಪಣ್ಣೆ ಕೋರ್ಟ್ ಹಿಂಭಾಗ, ಕಸಬಾ ಹೋಬಳಿ, ಕೊರಟಗೆರೆ ಅಂಚೆ -572129 | BCWD-2410 | 125 | ಬಾಲಕಿ | 76 |
| 2 | ಕೊರಟಗೆರೆ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಕೊರಟಗೆರ ಟೌನ್, ಮಾರುತಿ ಆಸ್ಪತ್ರೆ ಪಕ್ಕ, ಕಸಬಾ ಹೋಬಳಿ, ಕೊರಟಗೆರ ಅಂಚೆ -572129 | BCWD-2411 | 125 | ಬಾಲಕಿ | 69 |
| 3 | ಕೊರಟಗೆರೆ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಕೊರಟಗೆರ ಟೌನ್, ಯೂನಿಯನ್ ಬ್ಯಾಂಕ್ ಕಟ್ಟಡ, ತುಮಕೂರು ಮಧುಗಿರಿ ರಸ್ತೆ, ಕಸಬಾ ಹೋಬಳಿ, ಕೊರಟಗೆರೆ ಅಂಚೆ -572129 | BCWD-2571 | 125 | ಬಾಲಕ | 112 |
| 4 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಚಿಕ್ಕನಾಯಕನಹಳ್ಳಿ ಟೌನ್ ಅಂಬೇಡ್ಕರ್ ಭವನ ಮುಂಭಾಗ ಚಿಕ್ಕನಾಯಕನಹಳ್ಳಿ ಅಂಚೆ-572215 | BCWD-2406 | 125 | ಬಾಲಕಿ | 83 |
| 5 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಚಿಕ್ಕನಾಯಕನಹಳ್ಳಿ ಟೌನ್ ಅಂಬೇಡ್ಕರ್ ಭವನ ಮುಂಭಾಗ ಚಿಕ್ಕನಾಯಕನಹಳ್ಳಿ ಅಂಚೆ-572216 | BCWD-2407 | 125 | ಬಾಲಕಿ | 75 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾತಿ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 6 | ಚಿಕ್ಕನಾಯಕನಹಳ್ಳಿ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಹುಳಿಯಾರು ಸಂತೆ ಬೀದಿ ರಸ್ತೆ ಹುಳಿಯಾರು ಅಂಚೆ-572228 | BCWD-2408 | 125 | ಬಾಲಕಿ | 37 |
| 7 | ಪಾವಗಡ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಬನಶಂಕರಿ ಬಡಾವಣೆ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-2418 | 187 | ಬಾಲಕ | 187 |
| 8 | ಪಾವಗಡ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಗುರುಭವನ ಹತ್ತೀರ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-2419 | 125 | ಬಾಲಕ | 125 |
| 9 | ಪಾವಗಡ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಕುರುಬರಹಳ್ಳಿ ಗೇಟ್ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-2420 | 156 | ಬಾಲಕಿ | 117 |
| 10 | ಪಾವಗಡ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಶ್ರೀನಿವಾಸ ನಗರ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-2421 | 125 | ಬಾಲಕಿ | 125 |
| 11 | ಪಾವಗಡ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಕುರುಬರಹಳ್ಳಿ ಗೇಟ್ ಪಾವಗಡ ಟೌನ್ ,ಪಾವಗಡ ಅಂಚೆ-561202 | BCWD-2422 | 125 | ಬಾಲಕಿ | 52 |
| 12 | ಶಿರಾ | ಮೆಟ್ರಿಕ್ ನಂತರದ ಬಾಲಕರ ವಿ.ನಿ ಶಿರಾ ಟೌನ್ ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ 572139 | BCWD2423 | 187 | ಬಾಲಕ | 158 |
| 13 | ಶಿರಾ | ಮೆಟ್ರಿಕ್ ನಂತರದ ಬಾಲಕರ ವಿ.ನಿ. ಶಿರಾ ಟೌನ್. (ವಿಭಜಿತ1) ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ 572137 | BCWD2424 | 144 | ಬಾಲಕ | 121 |
| 14 | ಶಿರಾ | ಮೆಟ್ರಿಕ್ ನಂತರದ ಬಾಲಕರ ವಿ.ನಿ ವಿದ್ಯಾನಗರ, ಶಿರಾ ಟೌನ್. (ವಿಭಜಿತ02) ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 573127 | BCWD2425 | 125 | ಬಾಲಕ | 125 |
| 15 | ಶಿರಾ | ಮೆಟ್ರಿಕ್ ನಂತರದ ಬಾಲಕಿಯರ ವಿ.ನಿ. ಶಿರಾ ಟೌನ್. (ರಾಜ್ಯವಲಯ) ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD2426 | 125 | ಬಾಲಕಿ | 122 |
| 16 | ಶಿರಾ | ಮೆಟ್ರಿಕ್ ನಂತರದ ಬಾಲಕಿಯರ ವಿ.ನಿ. ಶಿರಾ ಟೌನ್. (ಮೂಲ) ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD2427 | 250 | ಬಾಲಕಿ | 237 |
| 17 | ಶಿರಾ | ಮೆಟ್ರಿಕ್ ನಂತರದ ಬಾಲಕಿಯರ ವಿ.ನಿ.ಶಿರಾ ಟೌನ್. (ವಿಭಜಿತ01) ಶಿರಾ ತಾಲ್ಲೂಕು, ತುಮಕೂರು ಜಿಲ್ಲೆ, 572137 | BCWD2428 | 125 | ಬಾಲಕಿ | 125 |
| 18 | ಗುಬ್ಬಿ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಗುಬ್ಬಿ ಟೌನ್, ಅಗ್ನಿಶಾಮಕ ಠಾಣೆ ಹಿಂಬಾಗ ಹೇರೂರು, ತುಮಕೂರು ಜಿಲ್ಲೆ-572216 | BCWD2409 | 125 | ಬಾಲಕಿ | 108 |
| 19 | ತುಮಕೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಸೋಮೇಶ್ವರ ಬಡಾವಣೆ, ತುಮಕೂರು | BCWD-2439 | 125 | ಬಾಲಕ | 124 |
| 20 | ತುಮಕೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ದಿಬ್ಬೂರು ತುಮಕೂರು | BCWD-2440 | 181 | ಬಾಲಕ | 179 |
| 21 | ತುಮಕೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಗಾರ್ಡನ್ ರಸ್ತೆ ತುಮಕೂರು | BCWD-2441 | 169 | ಬಾಲಕ | 131 |
| 22 | ತುಮಕೂರು | ಇಂಜಿನಿಯರಿಂಗ್ ಮತ್ತು ಮೆಡಿಕಲ್ ಬಾಲಕರ ವಿದ್ಯಾರ್ಥಿನಿಲಯ ದೇವನೂರು ರಸ್ತೆ ಉಪ್ಪಾರಹಳ್ಳಿ ತುಮಕೂರು | BCWD-2436 | 125 | ಬಾಲಕ | 123 |
| 23 | ತುಮಕೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಕುಣಿಗಲ್ ರಸ್ತೆ ತುಮಕೂರು | BCWD-1719 | 125 | ಬಾಲಕ | 124 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಐ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 24 | ತುಮಕೂರು | ಸಾರ್ವಜನಿಕ ಮಾದರಿ ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಸತ್ಯಮಂಗಲ ತುಮಕೂರು | BCWD-2437 | 163 | ಬಾಲಕ | 149 |
| 25 | ತುಮಕೂರು | ಮೆಟ್ರಿಕ್ ನಂತರ ವೃತ್ತಿಪರ ಬಾಲಕರ ವಿದ್ಯಾರ್ಥಿನಿಲಯ ಕುಣಿಗಲ್ ರಸ್ತೆ ತುಮಕೂರು | BCWD-2438 | 144 | ಬಾಲಕ | 144 |
| 26 | ತುಮಕೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ರೈಲ್ವೇಸ್ಟೇಷನ್ ರಸ್ತೆ ತುಮಕೂರು | BCWD-2444 | 169 | ಬಾಲಕಿ | 160 |
| 27 | ತುಮಕೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ರೈಲ್ವೇಸ್ಟೇಷನ್ ರಸ್ತೆ ತುಮಕೂರು | BCWD-2445 | 169 | ಬಾಲಕಿ | 176 |
| 28 | ತುಮಕೂರು | ಮೆಟ್ರಿಕ್ ನಂತರ ವೃತ್ತಿಪರ ಬಾಲಕಿಯರ ವಿದ್ಯಾರ್ಥಿನಿಲಯ ರೈಲ್ವೇಸ್ಟೇಷನ್ ರಸ್ತೆ ತುಮಕೂರು | BCWD-2447 | 125 | ಬಾಲಕಿ | 125 |
| 29 | ತುಮಕೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಸಾಯಿ ಬಡಾವಣೆ, ಶಿರಾಗೇಟ್ ರಸ್ತೆ ತುಮಕೂರು | BCWD-2446 | 150 | ಬಾಲಕಿ | 151 |
| 30 | ತುಮಕೂರು | ಮೆಟ್ರಿಕ್ ನಂತರ ವೃತ್ತಿಪರ ಬಾಲಕಿಯರ ವಿದ್ಯಾರ್ಥಿನಿಲಯ ಕುಣಿಗಲ್ ರಸ್ತೆ ತುಮಕೂರು | BCWD-2448 | 150 | ಬಾಲಕಿ | 141 |
| 31 | ತುಮಕೂರು | ಇಂಜಿನಿಯರಿಂಗ್ ಮತ್ತು ಮೆಡಿಕಲ್ ಬಾಲಕಿಯರ ವಿದ್ಯಾರ್ಥಿನಿಲಯ ಅಂತರಸನಹಳ್ಳಿ ತುಮಕೂರು | BCWD-2442 | 162 | ಬಾಲಕಿ | 156 |
| 32 | ತುಮಕೂರು | ಸ್ನಾತಕೋತ್ತರ ಮಹಿಳಾ ವಿದ್ಯಾರ್ಥಿನಿಲಯ ಮೈದಾಳ ರಸ್ತೆ . ಕ್ಯಾತ್ಸಂದ್ರ ತುಮಕೂರು | BCWD-2443 | 150 | ಬಾಲಕಿ | 112 |
| 33 | ತುಮಕೂರು | ಶ್ರೀಮತಿ ಇಂದಿರಾ ಗಾಂಧಿ ನರ್ಸಿಂಗ್ ಬಾಲಕಿಯರ ವಿದ್ಯಾರ್ಥಿನಿಲಯ ಕುಣಿಗಲ್ ರಸ್ತೆ ತುಮಕೂರು | BCWD-2449 | 150 | ಬಾಲಕಿ | 148 |
| 34 | ತುಮಕೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಗಂಗೋತ್ರಿನಗರ ತುಮಕೂರು | BCWD-2450 | 125 | ಬಾಲಕಿ | 95 |
| 35 | ತುಮಕೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಸರಸ್ವತಿಪುರಂ ತುಮಕೂರು | BCWD-2451 | 150 | ಬಾಲಕಿ | 159 |
| 36 | ತಿಪಟೂರು | ಮೆಟ್ರಿಕ್ ನಂತರ ಬಾಲಕಿಯರ ವೃತ್ತಿಪರ ವಿದ್ಯಾರ್ಥಿನಿಲಯ ತಿಪಟೂರು ಟೌನ್ (ಬಿಸಿಡಬ್ಲ್ಯು ಡಿ-1142) ರಂಗಾಪುರ ರಸ್ತೆ, ಗಾಂಧೀನಗರ, ತಿಪಟೂರು. | BCWD1142 | 63 | ಬಾಲಕಿ | 63 |
| 37 | ತಿಪಟೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ತಿಪಟೂರು ಟೌನ್, ಬಲಿಜ ಸಮುದಾಯ ಭವನ ಕಟ್ಟಡ, ಜನರಲ್ ಆಸ್ಪತ್ರೆ ಹಿಂಭಾಗ, ವಿದ್ಯಾನಗರ, ತಿಪಟೂರು | BCWD2429 | 125 | ಬಾಲಕ | 125 |
| 38 | ತಿಪಟೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಹಾಲ್ಕುರಿಕೆ ರಸ್ತೆ, ತಿಪಟೂರು | BCWD2430 | 168 | ಬಾಲಕ | 168 |
| 39 | ತಿಪಟೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ತಿಪಟೂರು ಟೌನ್, ಕಲ್ಪತರು ಕಾಲೇಜು ಹಿಂಭಾಗ, ವಿದ್ಯಾನಗರ, ತಿಪಟೂರು | BCWD2431 | 125 | ಬಾಲಕ | 125 |
| 40 | ತಿಪಟೂರು | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಬಲಿಜ ಸಮುದಾಯ ಭವನ ಕಟ್ಟಡ, ಜನರಲ್ ಆಸ್ಪತ್ರೆ ಹಿಂಭಾಗ, ವಿದ್ಯಾನಗರ, ತಿಪಟೂರು | BCWD2432 | 125 | ಬಾಲಕ | 125 |
| 41 | ತಿಪಟೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಹಾಲ್ಕುರಿಕೆ ರಸ್ತೆ, ತಿಪಟೂರು | BCWD2433 | 125 | ಬಾಲಕಿ | 165 |

| ಕ್ರ. ಸಂ. | ತಾಲ್ಲೂಕು | ವಿದ್ಯಾರ್ಥಿನಿಲಯದ ಹೆಸರು ಮತ್ತು ವಿಳಾಸ | ಹೆಚ್.ಎ.ಸಿ ಸಂಖ್ಯೆ | ಮಂಜೂರಾತಿ ಸಂಖ್ಯೆ | ಬಾಲಕ / ಬಾಲಕಿ | ದಾಖಲಾತಿ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ನವೀಕರಣ +ಹೊಸದು) |
|---|---|---|---|---|---|---|
| 42 | ತಿಪಟೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಉದಯ ಭಾರತಿ ಕಾಲೇಜು ಹತ್ತಿರ, ಇಂದಿರಾ ನಗರ, ತಿಪಟೂರು | BCWD2434 | 181 | ಬಾಲಕಿ | 251 |
| 43 | ತಿಪಟೂರು | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ತಿಪಟೂರು ಟೌನ್ ಹಾಲ್ಕುರಿಕೆ ರಸ್ತೆ, ತಿಪಟೂರು | BCWD2435 | 125 | ಬಾಲಕಿ | 165 |
| 44 | ಕುಣಿಗಲ್ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ ಕುಣಿಗಲ್ ಟೌನ್, ಆಶ್ರಯ ಕಾಲೋನಿ ಬಿ.ಜಿ.ನಗರ ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ 572130 | BCWD2412 | 125 | ಬಾಲಕ | 125 |
| 45 | ಕುಣಿಗಲ್ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ(ವಿಭಜಿತ) ತಾಲ್ಲೂಕು ಒಕ್ಕಲಿಗರ ಸಂಘದ ಕಟ್ಟಡ ಹಾಸನ ರಸ್ತೆ, ಕುಣಿಗಲ್ ಟೌನ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ 572130 | BCWD2413 | 125 | ಬಾಲಕ | 125 |
| 46 | ಕುಣಿಗಲ್ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ ಜಿ.ಕೆ.ಬಿ.ಎಂ.ಎಸ್. ಶಾಲಾ ಮೈದಾನ, ಕುಣಿಗಲ್ ಟೌನ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ 572130 | BCWD2414 | 125 | ಬಾಲಕಿ | 125 |
| 47 | ತುರುವೇಕೆರೆ | ಮೆಟ್ರಿಕ್ ನಂತರ ಬಾಲಕರ ವಿದ್ಯಾರ್ಥಿನಿಲಯ, ಬಸವೇಶ್ವರ ಛತ್ರ ಮುಂಭಾಗ, ಹೊರಪೇಟೆ ಬೀದಿ, ಬಸವೇಶ್ವರ ನಗರ ತುರುವೇಕೆರೆ ಟೌನ್ | BCWD1152 | 125 | ಬಾಲಕ | 112 |
| 48 | ತುರುವೇಕೆರೆ | ಮೆಟ್ರಿಕ್ ನಂತರ ಬಾಲಕಿಯರ ವಿದ್ಯಾರ್ಥಿನಿಲಯ, ಬಸವೇಶ್ವರ ಛತ್ರ ಮುಂಭಾಗ, ಹೊರಪೇಟೆ ಬೀದಿ, ಬಸವೇಶ್ವರ ನಗರ ತುರುವೇಕೆರೆ ಟೌನ್ | BCWD2452 | 125 | ಬಾಲಕಿ | 117 |
| 49 | ಮಧುಗಿರಿ | ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿನಿಲಯ ಮಧುಗಿರಿಟೌನ್. ಸಿದ್ದಾಪುರ ಗೇಟ್ ಮಧುಗಿರಿ 572132 | BCWD2415 | 188 | ಬಾಲಕ | 140 |
| 50 | ಮಧುಗಿರಿ | ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯ ಮಧುಗಿರಿಟೌನ್ ವಿದ್ಯಾನಗರ ಮಧುಗಿರಿ 572132 | BCWD2416 | 125 | ಬಾಲಕಿ | 125 |
| 51 | ಮಧುಗಿರಿ | ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿನಿಲಯ (ರಾಜ್ಯವಲಯ) ಮಧುಗಿರಿಟೌನ್ ಕೆ.ಆರ್ ಬಡಾವಣೆ ಮಧುಗಿರಿ 572132 | BCWD2417 | 140 | ಬಾಲಕಿ | 78 |
| ಒಟ್ಟು | | | | 7196 | | 6585 |
| ಒಟ್ಟಾರೆ | | | | 10461 | | 9412 |

ಆಯುಕ್ತರು
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ
ಬೆಂಗಳೂರು.

Click here for Annexures

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **575** |
| 2 | ಸದಸ್ಯರ ಹೆಸರು | : | **ಶ್ರೀ ಮಸಾಲ ಜಯರಾಮ್** (ತುರುವೇಕೆರೆ), |
| 3 | ಉತ್ತರಿಸುವ ದಿನಾಂಕ | : | 15.02.2023 |
| 4 | ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ ಮೂರು ವರ್ಷಗಳಿಂದ ಬಯಲು ಸೀಮೆ ಪ್ರದೇಶಾಭಿವೃದ್ಧಿ ಮಂಡಳಿ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳಿಗೆ ಎಷ್ಟು ಅನುದಾನ ಹಂಚಿಕೆ ಮಾಡಲಾಗಿದೆ; (ವರ್ಷವಾರು, ವಿಧಾನಸಭಾ ಕ್ಷೇತ್ರವಾರು, ಯೋಜನೆವಾರು ಹಂಚಿಕೆ ಮಾಡಲಾದ ಅನುದಾನದ ಸಂಪೂರ್ಣ ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳಿಗೆ ಒಟ್ಟು **ರೂ.259.19** ಕೋಟಿಗಳನ್ನು ಹಂಚಿಕೆ ಮಾಡಲಾಗಿದೆ.<br>ವರ್ಷವಾರು, ವಿಧಾನಸಭಾ ಕ್ಷೇತ್ರವಾರು, ಯೋಜನೆವಾರು ಹಂಚಿಕೆ ಮಾಡಲಾದ ಅನುದಾನದ ಸಂಪೂರ್ಣ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| (ಆ) | ಬಿಡುಗಡೆಯಾದ ಅನುದಾನದಲ್ಲಿ ಯಾವ ಯಾವ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದೆ ; ಗುತ್ತಿಗೆ ನೀಡಿದ ಎಜೆನ್ಸಿಗಳು ಯಾವುವು; ಪ್ರಸ್ತುತ ಕಾಮಗಾರಿಗಳು ಯಾವ ಹಂತದಲ್ಲಿದೆ? (ವಿಧಾನಸಭಾ ಕ್ಷೇತ್ರವಾರು ಸಂಪೂರ್ಣ ಮಾಹಿತಿ ನೀಡುವುದು) | ಬಿಡುಗಡೆಯಾದ ಅನುದಾನದಲ್ಲಿ ರಸ್ತೆ, ಸಿ.ಸಿ ರಸ್ತೆ, ಚರಂಡಿ, ಕೃಷಿಹೊಂಡ,ಚೆಕ್ ಡ್ಯಾಂ, ಶುಧ್ಧ ಕುಡಿಯುವ ನೀರಿನ ಘಟಕ, ಸಮುದಾಯ ಭವನ, ಜಮೀನಿಗೆ ತಡೆಗೋಡೆ, ಕೆರೆ ಅಭಿವೃದ್ಧಿ ಹಾಗೂ ಶಾಲಾ ಕೊಠಡಿ ನಿರ್ಮಾಣ ಮುಂತಾದ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ. ಕೈಗೊಂಡ ಕಾಮಗಾರಿಗಳ ಅನುಷ್ಠಾನ ಏಜೆನ್ಸಿಗಳ ವಿವರ ಈ ಕೆಳಕಂಡಂತಿದೆ:-<br>1.PRED 2.RWS 3.KRIDL<br>4.PWD 5.AGRI 6.Nirmithi Kendra<br>ವಿಧಾನಸಭಾ ಕ್ಷೇತ್ರವಾರು ಕಾಮಗಾರಿಗಳ ಪ್ರಗತಿಯನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |

ಸಂಖ್ಯೆ: ಪಿಡಿಎಸ್ **14** ಪಿಟಿಪಿ **2023**

(ಮುನಿರತ್ನ)
**ತೋಟಗಾರಿಕೆ ಹಾಗೂ**
**ಯೋಜನೆ, ಕಾರ್ಯಕ್ರಮ ಸಂಯೋಜನೆ**
**ಮತ್ತು ಸಾಂಖ್ಯಿಕ ಸಚಿವರು**

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 576

ಸದಸ್ಯರ ಹೆಸರು : ಶ್ರೀ ಶರತ್ ಕುಮಾರ್ ಬಚ್ಚೇಗೌಡ (ಹೊಸಕೋಟೆ)

ಉತ್ತರಿಸುವ ದಿನಾಂಕ : 15-02-2023

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕೃಷಿ ಇಲಾಖೆವತಿಯಿಂದ ಯಾವ ಯಾವ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ; ಸದರಿ ಯೋಜನೆಗಳಿಂದ ಕೃಷಿಕರಿಗೆ ಆಗುವ ಪ್ರಯೋಜನೆಗಳೇನು; (ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಕೃಷಿ ಇಲಾಖೆ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಹಾಗೂ ಸದರಿ ಯೋಜನೆಗಳಿಂದ ಕೃಷಿಕರಿಗೆ ಆಗುವ ಪ್ರಯೋಜನಗಳ ಮಾಹಿತಿಯನ್ನು ಅನುಬಂಧ-1ರಲ್ಲಿ ಹಾಗೂ ಜಲಾನಯನ ಅಭಿವೃದ್ಧಿ ಇಲಾಖೆಯ ವಿವರಗಳನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ.<br><br>ಆಹಾರ ಕರ್ನಾಟಕ ನಿಯಮಿತ ವತಿಯಿಂದ 2022-23ನೇ ಸಾಲಿನಿಂದ "ಕೃಷಿ / ತೋಟಗಾರಿಕೆ ಉತ್ಪನ್ನಗಳು ಪೋಲಾಗುವುದನ್ನು ತಪ್ಪಿಸಿ, ಮೌಲ್ಯವರ್ಧನೆಯನ್ನು ಉತ್ತೇಜಿಸಲು ಮತ್ತು ಸರಬರಾಜು ಸರಪಳಿಯನ್ನು ಸದೃಢಗೊಳಿಸಲು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಮಿನಿ ಆಹಾರ ಪಾರ್ಕುಗಳನ್ನು ಹಂತ ಹಂತವಾಗಿ ಖಾಸಗಿ-ಸಾರ್ವಜನಿಕ ಸಹಭಾಗಿತ್ವದಲ್ಲಿ ಸ್ಥಾಪಿಸುವ ಯೋಜನೆಯನ್ನು" ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಕಾರ್ಯಕ್ರಮವು ರಾಜ್ಯದಲ್ಲಿ ಕೃಷಿ ಕ್ಷೇತ್ರದಲ್ಲಿ ಆಹಾರ ಸಂಸ್ಕರಣೆಯಿಂದ ರೈತರ ಆದಾಯ ದ್ವಿಗುಣಗೊಳಿಸುವ ನಿಟ್ಟಿನಲ್ಲಿ ಸಹಕಾರಿಯಾಗುತ್ತದೆ. |
| ಆ) | ಇಲ್ಲಿಯವರೆಗೆ ಎಷ್ಟು ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) | ಕೃಷಿ ಇಲಾಖೆಯ ವತಿಯಿಂದ ಕೃಷಿ ಭಾಗ್ಯ ಯೋಜನೆಯಡಿ 2014-15ನೇ ಸಾಲಿನಿಂದ 2020-21ನೇ ಸಾಲಿನ ವರೆಗೆ ಒಟ್ಟು 2,89,827 ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದೆ. ಜಿಲ್ಲಾವಾರು ವಿವರಗಳನ್ನು ಅನುಬಂಧ-3ರಲ್ಲಿ ಹಾಗೂ ಜಲಾನಯನ ಅಭಿವೃದ್ಧಿ ಇಲಾಖೆಯ ವಿವರಗಳನ್ನು ಅನುಬಂಧ-4ರಲ್ಲಿ ಒದಗಿಸಲಾಗಿದೆ. |

<table>
<tr>
<td>ಇ)</td>
<td>ರಾಜ್ಯದಲ್ಲಿ ಸುರಿದ ಅತಿವೃಷ್ಟಿ ಮಳೆಯಿಂದಾಗಿ ಎಷ್ಟು ಹೆಕ್ಟೇರ್ ಪ್ರದೇಶದಲ್ಲಿ ಬೆಳೆ ಹಾನಿಯಾಗಿದೆ;<br>ಹಾನಿಗೊಳಗಾದ ರೈತರಿಗೆ ಪ್ರತಿ ಹೆಕ್ಟೇರ್ ಗೆ ನೀಡಿರುವ ಸಹಾಯಧನವೆಷ್ಟು (ಜಿಲ್ಲಾವಾರು ಮಾಹಿತಿ ನೀಡುವುದು)</td>
<td>2022-23ನೇ ಸಾಲಿನಲ್ಲಿ ರಾಜ್ಯದಲ್ಲಿ ಸುರಿದ ಹೆಚ್ಚಿನ ಮಳೆಯಿಂದಾಗಿ 13.09 ಲಕ್ಷ ಹೆಕ್ಟೇರ್ ಕೃಷಿ ಬೆಳೆಗಳು ಹಾನಿಯಾಗಿರುತ್ತದೆ. ರಾಜ್ಯದಲ್ಲಿ ಸುರಿದ ಅತಿವೃಷ್ಠಿ/ಪ್ರವಾಹದಿಂದ ಉಂಟಾದ ಬೆಳೆ ಹಾನಿಗೆ ಸಹಾಯಧನವನ್ನು ಈ ಕೆಳಕಂಡ ಪರಿಷ್ಕೃತ ದರದಲ್ಲಿ ಇನ್‌ಪುಟ್ ಸಬ್ಸಿಡಿ ಪಾವತಿಸಲಾಗಿದೆ.
<table>
<tr><th>ಬೆಳೆ ವಿವರ</th><th>SDRF/NDRF ಮಾರ್ಗಸೂಚಿ ದರ (ಪ್ರತಿ ಹೆಕ್ಟೇರ್)ಗೆ</th><th>ಹೆಚ್ಚುವರಿ ದರ (ಪ್ರತಿ ಹೆಕ್ಟೇರ್)ಗೆ</th><th>ಪರಿಷ್ಕೃತ ದರ (ಪ್ರತಿ ಹೆಕ್ಟೇರ್)ಗೆ</th></tr>
<tr><td>ಮಳೆಯಾಶ್ರಿತ ಬೆಳೆ</td><td>ರೂ.8,500/-</td><td>ರೂ.5,100/-</td><td>ರೂ.13.600/-</td></tr>
<tr><td>ನೀರಾವರಿ ಬೆಳೆ</td><td>ರೂ.17,000/-</td><td>ರೂ.8,000/-</td><td>ರೂ.25.000/-</td></tr>
<tr><td>ಬಹುವಾರ್ಷಿಕ ಬೆಳೆ</td><td>ರೂ.22,500/-</td><td>ರೂ.5,500/-</td><td>ರೂ.28,000/-</td></tr>
</table>
2022ನೇ ಸಾಲಿನ ರಾಜ್ಯದಲ್ಲಿ ಒಟ್ಟು 13.09 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಅತಿವೃಷ್ಠಿ/ಪ್ರವಾಹದಿಂದ ಬೆಳೆ ಹಾನಿಯಾದ 14.62 ಲಕ್ಷ ರೈತರ ಬ್ಯಾಂಕ್ ಖಾತೆಗೆ ರೂ.2031.15 ಕೋಟಿಗಳನ್ನು ಪರಿಹಾರ ತಂತ್ರಾಂಶದ ಮೂಲಕ ಇನ್‌ಪುಟ್ ಸಬ್ಸಿಡಿಯನ್ನು ನೇರವಾಗಿ ಜಮೆ ಮಾಡಲಾಗಿದೆ (ಜಿಲ್ಲಾವಾರು ವಿವರಗಳನ್ನು ಅನುಬಂಧ-5ರಲ್ಲಿ ಒದಗಿಸಲಾಗಿದೆ.</td>
</tr>
<tr>
<td>ಈ)</td>
<td>ರಾಜ್ಯದಲ್ಲಿ ರಾಸಾಯನಿಕ ಗೊಬ್ಬರ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಕೊರತೆ ನೀಗಿಸಲು ತೆಗೆದುಕೊಂಡಿರುವ ಕ್ರಮಗಳೇನು;</td>
<td>ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಆದಾಗ್ಯೂ, ರಾಜ್ಯದಲ್ಲಿ ರಸಗೊಬ್ಬರಗಳ ಕೊರತೆಯನ್ನು ನೀಗಿಸಲು ಇಲಾಖೆ ವಹಿಸುತ್ತಿರುವ ಕ್ರಮಗಳು ಈ ಕೆಳಕಂಡಂತಿವೆ;<br>1. ಪ್ರತಿ ಹಂಗಾಮಿನ ಪೂರ್ವದಲ್ಲಿಯೇ ರಸಗೊಬ್ಬರಗಳನ್ನು ಜಿಲ್ಲೆಗಳಲ್ಲಿ ಆವರಿಸಬಹುದಾದ ಬೆಳೆಗಳ ವಿಸ್ತೀರ್ಣದ ಆಧಾರದ ಮೇಲೆ ರಸಗೊಬ್ಬರದ ಬೇಡಿಕೆಯನ್ನು ಅಂದಾಜಿಸಿ ಕೇಂದ್ರ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಲಾಗುತ್ತದೆ. ಕೇಂದ್ರ ಸರ್ಕಾರದಿಂದ ಮಾಹೆವಾರು, ಸಂಸ್ಥೆವಾರು ಹಂಚಿಕೆ ಮಾಡಲಾಗುವ ವಿವಿಧ ರಸಗೊಬ್ಬರಗಳನ್ನು ಜಿಲ್ಲಾವಾರು ಬೇಡಿಕೆಗನುಗುಣವಾಗಿ ನಿಗಧಿಪಡಿಸಿ, ರಸಗೊಬ್ಬರ ತಯಾರಕಾ ಸಂಸ್ಥೆಯವರಿಂದ ನೇರವಾಗಿ ಸಹಕಾರ ಸಂಘಗಳು ಹಾಗು ಅಧಿಕೃತ ಪರವಾನಗಿ ಹೊಂದಿರುವ ಖಾಸಗಿ ಮಾರಾಟಗಾರರ ಮುಖಾಂತರ ಸಮರ್ಪಕ ರೀತಿಯಲ್ಲಿ ರೈತರಿಗೆ ವಿತರಿಸಲು ಕ್ರಮ ವಹಿಸಲಾಗುತ್ತಿದೆ.<br>2. ರಾಜ್ಯದಲ್ಲಿ ಮುಂಗಾರು ಹಂಗಾಮಿಗೆ ಕಾಪು ದಾಸ್ತಾನು ಯೋಜನೆಯಡಿ ಕರ್ನಾಟಕ ರಾಜ್ಯ ಸಹಕಾರ ಮಾರಾಟ ಮಹಾಮಂಡಳಿ ಮತ್ತು ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತರವರ ಮುಖಾಂತರ ಅವಶ್ಯವಿರುವ</td>
</tr>
</table>

|  |  |  |
|---|---|---|
|  |  | ರಸಗೊಬ್ಬರವನ್ನು ದಾಸ್ತಾನು ಮಾಡಿ ಸಮರ್ಪಕವಾಗಿ ವಿತರಣೆ ಮಾಡಲಾಗುತ್ತಿದೆ.<br><br>3. ರಸಗೊಬ್ಬರ ತಯಾರಕ ಸಂಸ್ಥೆಗಳ ಪ್ರತಿನಿಧಿಗಳೊಡನೆ ಪ್ರತಿ ವಾರ ವಿಡಿಯೋ ಕಾನ್ಫರೆನ್ಸ್ ಮುಖಾಂತರ ಸಭೆ ನಡೆಸಿ ರಾಜ್ಯಕ್ಕೆ ರಸಗೊಬ್ಬರದ ಸಮರ್ಪಕ ನಿರ್ವಹಣೆಗೆ ಕ್ರಮವಹಿಸಲಾಗುತ್ತಿದೆ.<br>4. ಹಾಗೆಯೇ ಪ್ರತಿ ಮಂಗಳವಾರ ಕೇಂದ್ರ ರಸಗೊಬ್ಬರ ಮಂತ್ರಾಲಯವು ಸಹ ರಸಗೊಬ್ಬರದ ಸಮರ್ಪಕ ಪೂರೈಕೆ ಮತ್ತು ವಿತರಣೆ ಕುರಿತು ರಾಜ್ಯಗಳೊಂದಿಗೆ ದಿನಾಂಕ 01.04.2022 ರಿಂದ ಇಲ್ಲಿಯವರೆಗೆ ಒಟ್ಟು 38 ವಿಡಿಯೋ ಸಂವಾದ ನಡೆಸಿ ಸಮರ್ಪಕ ವಿತರಣೆಗೆ ಕ್ರಮವಹಿಸಲಾಗಿದೆ. ಸಭೆಯಲ್ಲಿ ಚರ್ಚಿಸಿದ ನಂತರ ರಸಗೊಬ್ಬರದ ರೇಕುಗಳು ನಿಲುಗಡೆಯಾಗಿದ್ದಲ್ಲಿ ರೈಲ್ವೆ ಇಲಾಖಾಧಿಕಾರಿಗಳ ಸಹಕಾರದಿಂದಿಗೆ ರಾಜ್ಯಕ್ಕೆ ಸಕಾಲದಲ್ಲಿ ರಸಗೊಬ್ಬರ ಸರಬರಾಜಾಗಲು ಕ್ರಮವಹಿಸಲಾಗುತ್ತಿದೆ.<br>5. ರಸಗೊಬ್ಬರವು ಅಗತ್ಯ ವಸ್ತುಗಳ ಕಾಯ್ದೆ, 1955ರಡಿ ಸೇರ್ಪಡೆಯಾಗಿರುವುದರಿಂದ ಜಿಲ್ಲಾಧಿಕಾರಿಗಳು/ ಜಿಲ್ಲಾ ದಂಡಾಧಿಕಾರಿಗಳು ಜಿಲ್ಲೆಗಳಿಗೆ ಹಂಚಿಕೆಯಾಗಿರುವ ರಸಗೊಬ್ಬರಗಳ ಸರಬರಾಜು, ಮತ್ತು ನಿರ್ವಹಣೆಯ ಉಸ್ತುವಾರಿ ವಹಿಸಿರುತ್ತಾರೆ.<br>6. ಸಹಕಾರ ಸಂಘಗಳು ಹಾಗು ಖಾಸಗಿ ರಸಗೊಬ್ಬರ ಮಾರಾಟಗಾರರ ಮುಖಾಂತರ ಸಮರ್ಪಕ ರೀತಿಯಲ್ಲಿ ಇಲಾಖೆಯ ಅಧಿಕಾರಿಗಳ ನೇತೃತ್ವದಲ್ಲಿ ಅಗತ್ಯತೆಗೆ ಅನುಗುಣವಾಗಿ ರೈತರಿಗೆ ವಿತರಿಸಲಾಗುತ್ತಿದೆ. |
| ಉ) | ರಾಜ್ಯದಲ್ಲಿ ಸರ್ಕಾರ ರೈತರಿಂದ ರಾಗಿ ಖರೀದಿಸಲು ನಿಗಧಿಪಡಿಸಿರುವ ಬೆಂಬಲ ಬೆಲೆ ಎಷ್ಟು; ಇಲ್ಲಿಯವರಿಗೆ ಎಷ್ಟು ಟನ್ ರಾಗಿಯನ್ನು ರೈತರಿಂದ ಖರೀದಿಸಲಾಗಿದೆ? (ಜಿಲ್ಲಾವಾರು ಮಾಹಿತಿ ನೀಡುವುದು) | 2022-23ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಪ್ರತಿ ಕ್ವಿಂಟಾಲ್ ರಾಗಿಗೆ ರೂ.3578/- ನ್ನು ನಿಗಧಿಪಡಿಸಿದೆ. ಈವರೆವಿಗೆ 4.85 ಲಕ್ಷ ಮೆಟ್ರಿಕ್ ಟನ್ ರಾಗಿಯನ್ನು ಮಾರಾಟ ಮಾಡಲು ನೋಂದಣಿ ಮಾಡಿಕೊಂಡಿದ್ದು, ಜಿಲ್ಲಾವಾರು ಮಾಹಿತಿಯನ್ನು ಅನುಬಂಧ-6ರಲ್ಲಿ ಒದಗಿಸಲಾಗಿದೆ. |

ಸಂಖ್ಯೆ: AGRI-AML/41/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## LAQ 576 ಅನುಬಂಧ-1

## ರಾಜ್ಯದಲ್ಲಿ ಕೃಷಿ ಇಲಾಖಾ ವತಿಯಿಂದ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು ಹಾಗೂ ಸದರಿ ಯೋಜನೆಗಳಿಂದ ಕೃಷಿಕರಿಗೆ ಆಗುವ ಪ್ರಯೋಜನೆಗಳ ವಿವರ

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 1. | ಬಿತ್ತನೆ ಬೀಜಗಳ ಪೂರೈಕೆ | ಈ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75 ರ ರಿಯಾಯಿತಿ ದರದಲ್ಲಿ ವಿವಿಧ ಬೆಳೆಗಳ ಪ್ರಮಾಣಿತ/ ನಿಜ ಚೀಟಿ ಬಿತ್ತನೆ ಬೀಜಗಳನ್ನು ಒಟ್ಟಾರೆ ಗರಿಷ್ಟ 2.00 ಹೆಕ್ಟೇರ್ ಅಥವಾ ಅವರ ವಾಸ್ತವಿಕ ಹಿಡುವಳಿ (Actual holding) ಯಾವುದು ಕಡಿಮೆಯೋ ಆ ವಿಸ್ತೀರ್ಣಕ್ಕೆ ಮಾತ್ರ ವಿತರಣೆ ಮಾಡಲಾಗುತ್ತದೆ. |
| 2. | ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನ | ಈ ಯೋಜನೆಯಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ನೀಡಲಾಗುವುದು. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯಿತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಲಾಗುತ್ತದೆ. |
| 3. | ಬೆಳೆ ಸಮೀಕ್ಷೆ ಕಾರ್ಯಕ್ರಮ | ರಾಜ್ಯದ ಎಲ್ಲಾ ರೈತರ ಜಮೀನುಗಳಲ್ಲಿ ಸರ್ವೇ ಮತ್ತು ಹಿಸ್ಸಾ ನಂಬರ್ ವಾರು ಬೆಳೆದಿರುವ ಬೆಳೆಗಳ ಮಾಹಿತಿಯನ್ನು ಮೊಬೈಲ್ ಆಪ್ ಮೂಲಕ ಜಿಪಿಎಸ್ ನಿಖರತೆಯೊಂದಿಗೆ ಸಂಗ್ರಹಿಸುವುದು ಮತ್ತು ಸಂಗ್ರಹಿಸಿದ ಬೆಳೆ ಸಮೀಕ್ಷೆ ದತ್ತಾಂಶವನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ವಿವಿಧ ಇಲಾಖೆಗಳ ಮೂಲಕ ವಿವಿಧ ಯೋಜನೆಗಳ ಅನುಷ್ಠಾನದಲ್ಲಿ ಉಪಯೋಗಿಸಲಾಗುತ್ತಿದೆ. ಅದೇ ರೀತಿ ಬೆಳೆ ಸಮೀಕ್ಷೆ ದತ್ತಾಂಶವು ಎಲ್ಲಾ ರೈತರಿಗೂ ಸಹ ಲಭ್ಯವಿರುತ್ತದೆ. |
| 4. | ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನ (PMKISAN) | ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕ ರೂ.6000/-ಗಳ ನಗದನ್ನು ರೂ.2000/-ಗಳಂತೆ ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುತ್ತದೆ. ಇದರ ಜೊತೆಗೆ ಕರ್ನಾಟಕ ರಾಜ್ಯ ಸರ್ಕಾರದಿಂದ ರೂ.4000/-ಗಳನ್ನು ಎರಡು ಕಂತುಗಳಲ್ಲಿ ನೀಡಲಾಗುತ್ತದೆ. |
| 5. | ಮುಖ್ಯಮಂತ್ರಿ ರೈತ ವಿದ್ಯಾ ನಿಧಿ ಕಾರ್ಯಕ್ರಮ | ರೈತರ ಮಕ್ಕಳು ಸ್ನಾತಕೋತ್ತರ ಶಿಕ್ಷಣದವರೆಗೆ ವಿದ್ಯಾಭ್ಯಾಸ ಪಡೆಯುವುದನ್ನು ಪ್ರೋತ್ಸಾಹಿಸಲು 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಕಾರ್ಯಕ್ರಮವನ್ನು ಅನುಷ್ಠಾನ ಮಾಡಲಾಗಿದೆ. 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ವಿದ್ಯಾರ್ಥಿವೇತನವನ್ನು ವಿತರಿಸುವ ಉದ್ದೇಶಕ್ಕೆ ರಾಜ್ಯದ ವಿವಿಧ ಇಲಾಖೆಗಳು ನಿರ್ವಹಿಸುತ್ತಿರುವ ಶೈಕ್ಷಣಿಕ ಹಾಗೂ ಇತರೆ ದತ್ತಾಂಶದ ಆಧಾರದ ಮೇಲೆ ಅರ್ಹ ಫಲಾನುಭವಿಗಳನ್ನು ಗುರುತಿಸಿ (On entitlement basis) ವಿದ್ಯಾರ್ಥಿ ವೇತನವನ್ನು ವಿತರಿಸುವುದು ಹಾಗೂ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದಲ್ಲಿ, ಅಂತಹ ಪ್ರಕರಣಗಳನ್ನು ಸಹ ಪರಿಗಣಿಸಿ ಅರ್ಹರಿಗೆ ವಿದ್ಯಾರ್ಥಿ ವೇತನವನ್ನು ನೇರ ನಗದು ವರ್ಗಾವಣೆ (Direct Benefit Transfer) ಮೂಲಕ ವರ್ಗಾಯಿಸಲಾಗುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| | | 2022-23ನೇ ಶೈಕ್ಷಣಿಕ ಸಾಲಿನಿಂದ ವಿದ್ಯಾಭ್ಯಾಸ ಮಾಡುತ್ತಿರುವ ಭೂರಹಿತ ಕೃಷಿ ಕಾರ್ಮಿಕರ ಮಕ್ಕಳಿಗೆ ಹೆಚ್ಚಿನ ಪ್ರೋತ್ಸಾಹ ನೀಡುವ ಉದ್ದೇಶದಿಂದ ಮುಖ್ಯಮಂತ್ರಿ ರೈತ ವಿದ್ಯಾ ನಿಧಿ ಕಾರ್ಯಕ್ರಮವನ್ನು ವಿಸ್ತರಿಸಲಾಗಿರುತ್ತದೆ. |
| 6. | ಸಾವಯವ ಕೃಷಿ | ಸಾವಯವ ಕೃಷಿ ಅಳವಡಿಕೆ ಮತ್ತು ದೃಡೀಕರಣ ಕಾರ್ಯಕ್ರಮದಡಿ ರಾಜ್ಯದ ಸಾವಯವ ಪ್ರಮಾಣೀಕೃತ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ ಆಸಕ್ತ ಗುಂಪು ಮತ್ತು ವ್ಯಕ್ತಿಗತ ಪ್ರಸ್ತಾವನೆಗಳ ಪ್ರಮಾಣೀಕರಣಕ್ಕಾಗಿ ಅನುದಾನ ಬಳಕೆ ಮಾಡಲಾಗುತ್ತದೆ. |
| 7. | ರೈತ ಸಿರಿ | ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10,000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹಧನವನ್ನು ಫಲಾನುಭವಿಗಳಿಗೆ ನೇರ ನಗದು ವರ್ಗಾವಣೆ ಮೂಲಕ ನೀಡಲಾಗುವುದು. ಸಿರಿಧಾನ್ಯಗಳನ್ನು ಬೆಳೆದ ರೈತರುಗಳಿಗೆ ಬೆಳೆ ಸಮೀಕ್ಷೆ ಆಧಾರದಂತೆ ಪ್ರೋತ್ಸಾಹಧನವನ್ನು ವಿತರಿಸಲಾಗುತ್ತದೆ. |
| 8. | ಸೂಕ್ಷ್ಮ ನೀರಾವರಿ | ಹನಿ / ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಎಲ್ಲಾ ವರ್ಗದ ರೈತರಿಗೆ ಶೇ.90 ರಷ್ಟು ಸಹಾಯಧನ (2.00 ಹೆಕ್ಟೇರ್ ವರೆಗೆ) ಒದಗಿಸಲಾಗುತ್ತದೆ. |
| 9. | ಕೃಷಿ ಯಾಂತ್ರೀಕರಣ ಹಾಗೂ ಕೃಷಿ ಉತ್ಪನ್ನಗಳ ಸಂಸ್ಕರಣೆ | ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ / ಬಿತ್ತನೆ ಉಪಕರಣಗಳು, ಟ್ರ್ಯಾಕ್ಟರ್ / ಶಕ್ತಿಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಣಗಳು, ಕೊಯಿಲು ಮತ್ತು ಒಕ್ಕಣೆ ಮಾಡುವ ಉಪಕರಣಗಳು ಕೃಷಿ ಸಂಸ್ಕರಣಾ ಘಟಕಗಳು ಹಾಗೂ ಡೀಸಲ್ ಪಂಪ್ ಸೆಟ್‌ಗಳನ್ನು ಸಾಮಾನ್ಯ ರೈತರಿಗೆ ಶೇ.50 ರಷ್ಟು ಸಹಾಯಧನ ಹಾಗು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ. ಒಂದು ಲಕ್ಷದವರೆಗೆ ನೀಡಲಾಗುತ್ತಿದೆ. ಸಣ್ಣ ಟ್ರ್ಯಾಕ್ಟರ್‌ಗಳ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ರೂ.3.00ಲಕ್ಷ ಹಾಗು ಸಾಮಾನ್ಯ ರೈತರಿಗೆ ರೂ.0.75ಲಕ್ಷಗಳಂತೆ ಗರಿಷ್ಠ ಸಹಾಯಧನವನ್ನು ನೀಡಲಾಗುತ್ತದೆ. |
| 10. | ಕೃಷಿ ಯಂತ್ರಧಾರೆ | ರಾಜ್ಯದಲ್ಲಿಸಣ್ಣ ಮತ್ತು ಅತಿಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ, ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆಉಪಯೋಗಿಸಲು ಅವಕಾಶ ಕಲ್ಪಿಸಲು ಹೋಬಳಿ ಕೇಂದ್ರಗಳಲ್ಲಿ ಆಯ್ದ ಸಂಸ್ಥೆಗಳ ಸಹಯೋಗದೊಂದಿಗೆ ಕೃಷಿ ಯಂತ್ರಧಾರೆ (ಕೃಷಿ ಯಂತ್ರೋಪಕರಣಗಳ ಬಾಡಿಗೆ ಆಧಾರಿತ ಸೇವಾ )ಕೇಂದ್ರಗಳನ್ನು ತೆರೆಯಲಾಗಿರುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 11. | ತರಬೇತಿ ಕಾರ್ಯಕ್ರಮಗಳು | ಈ ಯೋಜನೆಯಡಿ ಕೃಷಿ ವಿಸ್ತರಣಾ ಅಧಿಕಾರಿಗಳ ನಿರ್ವಹಣಾ ಸಾಮರ್ಥ್ಯ ಮತ್ತು ರೈತರ/ ರೈತ ಮಹಿಳೆಯರ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಲು ಕೃಷಿ ತಾಂತ್ರಿಕತೆಗಳಿಗೆ ಸಂಬಂಧಿಸಿದಂತೆ ವಿಶೇಷ ತರಬೇತಿಗಳನ್ನು ಹಾಗೂ ಅಧ್ಯಯನ ಪ್ರವಾಸಗಳನ್ನು ಆಯೋಜಿಸಲಾಗುತ್ತದೆ. |
| 12. | ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನ | ಈ ಯೋಜನೆಯಡಿ ಬತ್ತ, ದ್ವಿದಳಧಾನ್ಯ, ನೂಟ್ರಿ ಸಿರಿಧಾನ್ಯ, ಎಣ್ಣೆಕಾಳು, ಕಬ್ಬು ಮತ್ತು ಹತ್ತಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಆಧುನಿಕ ತಾಂತ್ರಿಕತೆಗಳ ಗುಚ್ಛ ಪ್ರಾತ್ಯಕ್ಷಿಕೆಗಳನ್ನು ಆಯೋಜಿಸುವುದರ ಜೊತೆಗೆ ಬಿತ್ತನೆ ಬೀಜ, ಲಘುಪೋಷಕಾಂಶಗಳು, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಜಿಪ್ಸಂ/ ಕೃಷಿ ಸುಣ್ಣ, ಕೃಷಿ ಉಪಕರಣಗಳು, ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತದೆ. |
| 13. | ಸಸ್ಯ ಸಂರಕ್ಷಣೆ | ಶೇ.50ರ ರಿಯಾಯಿತಿಯಲ್ಲಿ ಸಸ್ಯ ಸಂರಕ್ಷಣಾ ಪೀಡೆನಾಶಕಗಳನ್ನು ವಿತರಣೆ ಮಾಡಲಾಗುತ್ತದೆ. |
| 14. | ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ | ಎರೆಹುಳು ಗೊಬ್ಬರ, ಸಾವಯವ ಗೊಬ್ಬರ, ರಂಜಕಯುಕ್ತ ಸಾವಯವ ಗೊಬ್ಬರ, ಸಿಟಿ ಕಾಂಪೋಸ್ಟ್ ರಿಯಾಯತಿ ದರದಲ್ಲಿ ವಿತರಣೆ ಮಾಡುವುದು. ಸಾಮಾನ್ಯ ವರ್ಗದ ರೈತರಿಗೆ ಶೇ.50ರ ಸಹಾಯಧನ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತದೆ. |
| 15. | ಸಾವಯವ ಇಂಗಾಲ ಹೆಚ್ಚಿಸುವ ಅಭಿಯಾನ | ವಿವಿಧ ದ್ವಿದಳ ಧಾನ್ಯ ಬೀಜಗಳು ಮತ್ತು ಹಸಿರೆಲೆ ಗೊಬ್ಬರ ಬೀಜಗಳನ್ನು ಸಾಮಾನ್ಯ ವರ್ಗ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತದೆ. |
| 16. | ಕೃಷಿ ವಿಸ್ತರಣಾ ಉಪ ಅಭಿಯಾನ (SAME-ATMA) | ಯೋಜನೆಯಡಿ ಆಯೋಜಿಸುವ ವಿಸ್ತರಣಾ ಕಾರ್ಯಕ್ರಮಗಳ ಚಟುವಟಿಕೆಗಳಲ್ಲಿ ಎಲ್ಲಾ ವರ್ಗದ ರೈತರು / ರೈತ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಅವಕಾಶ ಕಲ್ಪಿಸಲಾಗಿದೆ. |
| 17. | ಮಣ್ಣಿನ ಫಲವತ್ತತೆ ಯೋಜನೆ | ಮಣ್ಣು ಆರೋಗ್ಯ ಚೀಟಿ ಶಿಫಾರಸ್ಸಿನ ಅನ್ವಯ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲು ರಿಯಾಯಿತಿ ದರದಲ್ಲಿ ರಸಗೊಬ್ಬರ, ಸಾವಯವ ಗೊಬ್ಬರ, ಜೈವಿಕ ಗೊಬ್ಬರ, ಲಘುಪೋಷಕಾಂಶ ಮಣ್ಣು ಸುಧಾರಕಗಳನ್ನು ಪ್ರತಿ ಹೆಕ್ಟೇರಿಗೆ ಗರಿಷ್ಟ ರೂ.2500/- ಸಹಾಯಧನ ನೀಡಲಾಗುತ್ತದೆ. |
| 18. | ರಾಷ್ಟ್ರೀಯ ಕೃಷಿ ವಿಕಾಸ್ ಯೋಜನೆಯಡಿ ಸಮಗ್ರ ಕೃಷಿ ಪದ್ಧತಿಯ ವಿಸ್ತರಣೆ ಹಾಗೂ ಜನಪ್ರಿಯಗೊಳಿಸುವ ಕಾರ್ಯಕ್ರಮ | ಕೃಷಿ ಮತ್ತು ಕೃಷಿ ಸಂಬಂಧಿತ ಚಟುವಟಿಕೆಗಳಾದ ತೋಟಗಾರಿಕೆ ಹಾಗೂ ಪಶುಸಂಗೋಪನೆಗಳನ್ನು ಒಗ್ಗೂಡಿಸಿ "ಸಮಗ್ರ ಕೃಷಿ ಪದ್ಧತಿ "ಮೂಲಕ ರೈತನ ಆದಾಯ ಹೆಚ್ಚಳ ಮಾಡುವುದು ಹಾಗೂ ಅಳವಡಿಸಿದ ಪ್ರದೇಶದಲ್ಲಿ/ ಜಮೀನಿನಲ್ಲಿ ಬೆಳೆ ಉತ್ಪಾದಕತೆ, ಸುಸ್ಥಿರತೆ, ಸಮತೋಲನಾ ಆಹಾರ ಉತ್ಪಾದನೆ, ತ್ಯಾಜ್ಯಗಳ ಮರುಬಳಕೆ ಹಾಗೂ ವರ್ಷಪೂರ್ತಿ ಆದಾಯ ಹೆಚ್ಚಿಸುವ ಉದ್ದೇಶದಿಂದ ಸಮಗ್ರ ಕೃಷಿ ಪದ್ಧತಿ ಮಾದರಿಗಳ ಅನುಷ್ಠಾನಕ್ಕೆ ಸಹಾಯಧನ ನೀಡಲಾಗುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 19. | ಪ್ರಧಾನ ಮಂತ್ರಿ ಕಿರು ಆಹಾರ ಸಂಸ್ಕರಣಾ ಉದ್ದಿಮೆಗಳ ನಿಯಮಬದ್ಧಗೊಳಿಸುವಿಕೆ ಯೋಜನೆ | ಅಸಂಘಟಿತ ವಲಯದಲ್ಲಿರುವ ಸೂಕ್ಷ್ಮ/ ಕಿರು ಆಹಾರ ಸಂಸ್ಕರಣ ಉದ್ದಿಮೆಗಳಿಗಳನ್ನು ಪ್ರೋತ್ಸಾಹಿಸಿ ಅವುಗಳ ಸ್ಪರ್ಧಾತ್ಮಕತೆಯನ್ನು ಹೆಚ್ಚಿಸುವುದು ಮತ್ತು ಅವುಗಳನ್ನು ಸಂಘಟಿತ ವಲಯಕ್ಕೆ ತರುವುದು ಹಾಗೂ ರೈತ ಉತ್ಪಾದಕ ಸಂಸ್ಥೆಗಳು, ಸ್ವಸಹಾಯ ಸಂಘಗಳು ಹಾಗೂ ಉತ್ಪಾದಕ ಸಹಕಾರಿ ಸಂಘಗಳಿಗೆ ಅವುಗಳ ಸರಪಳಿಕೊಂಡಿಯೊಂದಿಗೆ ಉತ್ತೇಜನ ನೀಡಲು ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನವನ್ನು ಒದಗಿಸಲಾಗುತ್ತದೆ. |
| 20. | ರೈತ ಶಕ್ತಿ ಕಾರ್ಯಕ್ರಮ | ರೈತರಿಗೆ ಕೃಷಿ ಯಂತ್ರೋಪಕರಣಗಳ ಬಳಕೆಯನ್ನು ಪ್ರೋತ್ಸಾಹಿಸಲು ಹಾಗೂ ಇಂಧನ ವೆಚ್ಚದ ಭಾರವನ್ನು ಕಡಿಮೆ ಮಾಡಲು ರಾಜ್ಯದಲ್ಲಿಯೇ ಮೊಟ್ಟಮೊದಲ ಬಾರಿಗೆ ಪ್ರತಿ ಎಕರೆಗೆ 250/- ರೂ.ಗಳಂತೆ ಗರಿಷ್ಠ ಐದು ಎಕರೆಗೆ ಡಿ.ಬಿ.ಟಿ ಮೂಲಕ ಡೀಸಲ್‌ಗೆ ಸಹಾಯಧನವನ್ನು ನೀಡಲಾಗುತ್ತದೆ. |

ಕೃಷಿ ನಿರ್ದೇಶಕರು

## ಅನುಬಂಧ-2

**1. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ-2.0 Pradhan Mantri Krishi Sinchayi Yojana- Watershed Development Component-2.0 (PMKSY-WDC 2.0):**

ಈ ಯೋಜನೆಯು ಕೇಂದ್ರ ಪ್ರಾಯೋಜಿತ ಯೋಜನೆಯಾಗಿದ್ದು, ಸದರಿ ಯೋಜನೆಯನ್ನು 2021-22ನೇ ಸಾಲಿನಿಂದ ರಾಜ್ಯದ 30 ಜಿಲ್ಲೆಗಳ ಆಯ್ದ 57 ತಾಲ್ಲೂಕುಗಳ 2.75 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಅನುಷ್ಠಾನ ಮಾಡಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಮೋದನೆ ನೀಡಿರುತ್ತದೆ. ಈ ಯೋಜನೆಯನ್ನು ಸಹ ದಿಬ್ಬದಿಂದ ಕಣಿವೆ ಮಾದರಿಯಲ್ಲಿ ಅನುಷ್ಠಾನ ಮಾಡಲು ವಿವರವಾದ ಯೋಜನಾ ವರದಿಯನ್ನು ತಯಾರಿಸಿ ಕಾರ್ಯಕ್ರಮದ ಅನುಷ್ಠಾನವನ್ನು ಪ್ರಾರಂಭಿಸಲಾಗಿದೆ. ಈ ಯೋಜನೆಯಡಿ ಸಮರ್ಥ ನೀರು ಕೊಯ್ಲು, ಮಣ್ಣಿನ ತೇವಾಂಶ ಸಂರಕ್ಷಣೆ, ಪರ್ಯಾಯ ಬೆಳೆ ವ್ಯವಸ್ಥೆಗಳು, ಕೃಷಿ ಅರಣ್ಯ, ಖುಷ್ಕಿ ತೋಟಗಾರಿಕೆ, ಪಶುಸಂಗೋಪನೆಯ ಮೂಲಕ ಹವಾಮಾನ/ವೈಪರೀತ್ಯ ಮತ್ತು ಬರಗಾಲದ ಅಪಾಯಗಳನ್ನು ಎದುರಿಸುವುದು ಮತ್ತು ರೈತರ ಆದಾಯವನ್ನು ಭದ್ರಪಡಿಸುವುದು; ಯೋಜನಾ ಪ್ರದೇಶಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳ ಸಮರ್ಥನೀಯ ಬಳಕೆಯ ಮೂಲಕ ಬೆಳೆಗಳು, ಜಾನುವಾರು, ಮೀನುಗಾರಿಕೆ, ಹಾಗೂ ಉತ್ಪಾದನಾ ವ್ಯವಸ್ಥೆಗಳ ಮೂಲಕ ಉತ್ಪಾದಕತೆಯನ್ನು ಸುಧಾರಿಸುವುದು; ಆಸ್ತಿ ರಹಿತ ರೈತರನ್ನು ಗುರುತಿಸುವುದು ಮತ್ತು ಪರ್ಯಾಯ ಜೀವನೋಪಾಯದ ಅವಕಾಶಗಳನ್ನು ಉತ್ತೇಜಿಸುವುದು; ಸುಲಭವಾದ ಕೈಗೆಟುಕುವ ತಂತ್ರಜ್ಞಾನಗಳ ಉತ್ತೇಜನ ಮಾಡುವುದು; ಆದಾಯವನ್ನು ಉತ್ಪಾದಿಸುವ ಅವಕಾಶಗಳಿಗೆ ಹೆಚ್ಚಿನ ಉತ್ತೇಜನ ನೀಡುವುದು ಹಾಗೂ ರೈತ ಉತ್ಪಾದಕರ ಸಂಸ್ಥೆಗಳನ್ನು ರಚಿಸುವುದು/ಬಲವರ್ಧಿಸಲು ಕಾರ್ಯಕ್ರಮವನ್ನು ರೂಪಿಸಲಾಗಿದೆ.

**2. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ - ಪರ್ ಡ್ರಾಪ್ ಮೋರ್ ಕ್ರಾಪ್-ಇತರೆ ಉಪಚಾರಗಳು (Pradhan Mantri Krishi Sinchayi Yojana- PDMC-OI):**

ಈ ಯೋಜನೆಯಡಿ ವೈಯಕ್ತಿಕ ನೀರಿನ ಮೂಲಗಳ/ನೀರು ಸಂಗ್ರಹಣಾ ವಿನ್ಯಾಸಗಳ ರಚನೆ, ಸಣ್ಣ ನೀರು ಸಂಗ್ರಹಣಾ ವಿನ್ಯಾಸಗಳ ಮರುಸ್ಥಾಪನೆ/ನವೀಕರಣ, ಅಂತರ್ಜಲ ಶೋಷಿತವಲ್ಲದ ತಾಲ್ಲೂಕುಗಳಲ್ಲಿ ಕೊಳವೆ ಬಾವಿ ನಿರ್ಮಾಣ, ಪೂರ್ವ ಎರಕಹೊಯ್ದ ನೀರು ವಿತರಣಾ ವ್ಯವಸ್ಥೆ, ನೀರು ಎತ್ತುವ ಸಾಧನಗಳನ್ನು ಒದಗಿಸುವುದರ ಮೂಲಕ ಸೂಕ್ಷ್ಮ ನೀರಾವರಿ ಘಟಕಗಳೊಂದಿಗೆ ಜೋಡಿಸುವುದು.

**3. ಜಲಾನಯನ ಅಭಿವೃದ್ಧಿ ಮೂಲಕ ಬರಗಾಲವನ್ನು ತಡೆಯುವಿಕೆ ಯೋಜನೆ(Watershed Development to Prevent Drought):**

ರಾಜ್ಯದಲ್ಲಿ ಜಲಾನಯನ ಉಪಚಾರಕ್ಕೆ ಬಾಕಿ ಲಭ್ಯವಿರುವ ಮಳೆಯಾಶ್ರಿತ ಪ್ರದೇಶದಲ್ಲಿ 2019-20ನೇ ಸಾಲಿನಿಂದ 2023-24ನೇ ಸಾಲಿನವರೆಗೆ, ಆಯ್ದ 100 ಬರಪೀಡಿತ ಮತ್ತು ಅತೀ ಹೆಚ್ಚು ಅಂತರ್ಜಲ ಶೋಷಿತ ತಾಲ್ಲೂಕುಗಳಲ್ಲಿ, ಪ್ರತಿ ತಾಲ್ಲೂಕಿನಲ್ಲಿ 3,000 ರಿಂದ 5,000 ಹೆಕ್ಟೇರ್ ಪ್ರದೇಶವನ್ನು ಭೂ ಸಂಪನ್ಮೂಲ ಹಾಗೂ ಜಲಸಂಪನ್ಮೂಲ ಸಮೀಕ್ಷೆಯ ಮಾಹಿತಿಗಳನ್ನಾಧರಿಸಿ ಜಲಾನಯನ ಅಭಿವೃದ್ಧಿ ಯೋಜನೆಗಳನ್ನು ಸಂಪೂರ್ಣ ಜಲಾನಯನ ಉಪಚಾರದ ವಿಧಾನದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣಾ ಉದ್ಯೋಗ ಖಾತ್ರಿ ಯೋಜನೆ, ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ ಕಾರ್ಯಕ್ರಮದೊಡನೆ ಹಾಗೂ ಇತರೆ ಇಲಾಖೆಗಳ ಯೋಜನೆಗಳೊಂದಿಗೆ ಒಗ್ಗೂಡಿಸಿ ಬರ ನಿರೋಧಕ ಜಲಾನಯನ ಚಟುವಟಿಕೆಗಳನ್ನು ಅನುಷ್ಠಾನ ಮಾಡಲಾಗುತ್ತಿದೆ.

**4. ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ - ಮಳೆ ಆಧಾರಿತ ಪ್ರದೇಶ ಅಭಿವೃದ್ಧಿ (RKVY-RAFTAAR ಮೂಲಕ) ಯೋಜನೆ :**

ಈ ಯೋಜನೆಯನ್ನು ವಿಶೇಷವಾಗಿ ರಾಜ್ಯದ ಮಳೆಯಾಶ್ರಿತ ಪ್ರದೇಶದಲ್ಲಿ ಅನುಷ್ಠಾನ ಮಾಡಲಾಗುತ್ತಿದೆ. ಈ ಕಾರ್ಯಕ್ರಮದಡಿ ರೈತರಿಗೆ ಸಮಗ್ರ ಕೃಷಿ ಪದ್ಧತಿಗಳ ಅಳವಡಿಕೆಯನ್ನು ಪ್ರೋತ್ಸಾಹಿಸುವುದು, ಅದರಲ್ಲೂ ಬಹು-ಬೆಳೆಪದ್ಧತಿ, ಮಿಶ್ರ-ಬೆಳೆ, ಅಂತರ-ಬೆಳೆ, ಬೆಳೆ-ಪರಿವರ್ತನೆ, ತೋಟಗಾರಿಕೆ, ಕೃಷಿ ಅರಣ್ಯ, ಪಶುಸಂಗೋಪನೆ ಘಟಕಗಳನ್ನೊಳಗೊಂಡ ರೈತರ ಆದಾಯವನ್ನು ಹೆಚ್ಚಿಸುವುದಲ್ಲದೆ, ಫಲಾನುಭವಿಗಳಿಗೆ ಮೌಲ್ಯವರ್ಧನೆ ಹಾಗೂ ಸಂಪನ್ಮೂಲ ಸಂರಕ್ಷಣೆಯಡಿ ವಿವಿಧ ಚಟುವಟಿಕೆಗಳಾದ ಜೇನು ಕೃಷಿ, ಸೈಲೇಜ್ ಘಟಕ, ಎರೆಹುಳು ತಯಾರಿಕಾ ಘಟಕಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## 5. ವಿಶ್ವಬ್ಯಾಂಕ್ ಅನುದಾನಿತ ಹೊಸ REWARD ಯೋಜನೆ:

ವಿಶ್ವಬ್ಯಾಂಕ್ ನೆರವಿನ ಸುಜಲ-III (ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ-II) ಯೋಜನೆಯನ್ನು 2013-14 ದ 2019-20 ನೇ ಸಾಲಿನವರೆಗೆ ಅನುಷ್ಠಾನಗೊಳಿಸಿದ್ದು, ರಾಜ್ಯದ 12 ಜಿಲ್ಲೆಗಳ 2534 ಕಿರುಜಲಾನಯನಗಳಲ್ಲಿ 14.07 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ವಿವಿಧ ವೈಜ್ಞಾನಿಕ ಸಂಸ್ಥೆಗಳ ಮೂಲಕ ಯೋಜನಾ ಪ್ರದೇಶದ ಜಲಾನಯನಗಳಲ್ಲಿ ಭೂ-ಸಂಪನ್ಮೂಲ ಸಮೀಕ್ಷೆ (Land Resource Inventory-LRI) ಕೈಗೊಂಡು ಮಣ್ಣಿನ ಭೌತಿಕ ಹಾಗೂ ರಸಾಯನಿಕ ಗುಣಧರ್ಮಗಳ ದತ್ತಾಂಶ ಸಂಗ್ರಹಿಸಲಾಗಿರುತ್ತದೆ. ಈ ತಾಂತ್ರಿಕ ಮಾಹಿತಿ ಬಳಸಿಕೊಂಡು ಪೈಲಟ್ ಮಾದರಿಯಲ್ಲಿ 11 ಮಾದರಿ ಜಲಾನಯನಗಳ ಯೋಜನಾ ವರದಿ ತಯಾರಿಸಿ ಸಂಪೂರ್ಣ ಜಲಾನಯನ ಉಪಚಾರ ವಿಧಾನದಲ್ಲಿ ಜಲಾನಯನ ಕಾಮಗಾರಿಗಳನ್ನು ಕೈಗೊಂಡು ಉಪಚರಿಸಲಾಗಿದೆ.

ಸುಜಲ-III ಯೋಜನೆ ಮಾದರಿಯಲ್ಲಿ ವಿಶ್ವಬ್ಯಾಂಕ್ ಅನುದಾನದೊಂದಿಗೆ ಹೊಸ REWARD ಯೋಜನೆಯನ್ನು ರೂಪಿಸಲಾಗಿದ್ದು, ರಾಜ್ಯದ 21 ಜಿಲ್ಲೆಗಳಲ್ಲಿ ಸುಮಾರು 19.9 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ಸುಜಲ-III ಪಾಲುದಾರ ಸಂಸ್ಥೆಗಳ ಮೂಲಕ ಭೂ-ಸಂಪನ್ಮೂಲ ಸಮೀಕ್ಷೆ ಕೈಗೊಂಡು ದತ್ತಾಂಶ ಸಂಗ್ರಹಿಸಲು ಮತ್ತು ಅಂದಾಜು 1.00 ಲಕ್ಷ ಹೆ. ಪ್ರದೇಶದಲ್ಲಿ (20 ಉಪ ಜಲಾನಯನಗಳು) ಜಲಾನಯನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡು ಸಂಪೂರ್ಣ ಜಲಾನಯನಗಳನ್ನು ಉಪಚರಿಸಲು ಯೋಜಿಸಲಾಗಿರುತ್ತದೆ.

ಭೂ ಸಂಪನ್ಮೂಲ ಮಾಹಿತಿಯನ್ನು ಬಳಸಿಕೊಂಡು ಜಲಾನಯನ ಪ್ರದೇಶಗಳಲ್ಲಿ ಸೂಕ್ತವಾದ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಜಲಾನಯನ ಅಭಿವೃದ್ಧಿ ಯೋಜನೆಗಳನ್ನು ಹೆಚ್ಚು ನಿಖರವಾಗಿ ಹಾಗೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಆದ್ಯತೆ ನೀಡಲಾಗುತ್ತಿದೆ.

## 6. ನಬಾರ್ಡ್ ಆರ್.ಐ.ಡಿ.ಎಫ್ (ಟ್ರಾಂಚಿ-27) ನೆರವಿನ ಜಲಾನಯನ ಅಭಿವೃದ್ಧಿ ಯೋಜನೆಗಳು:

ನಬಾರ್ಡ್–RIDF Tranche -27 ಯೋಜನೆಯು 2021-22 ರಿಂದ 2023-24 ನೇ ಸಾಲಿನ ವರೆಗೆ 3 ವರ್ಷಗಳಲ್ಲಿ ಅನುಷ್ಠಾನಗೊಳಿಸಲು ರೂ.2500.00 ಲಕ್ಷ (ನಬಾರ್ಡ್ ಸಾಲ ರೂ. 2375.00 ಲಕ್ಷ ಮತ್ತು ರಾಜ್ಯ ಸರ್ಕಾರ ಪಾಲು ರೂ.125.00 ಲಕ್ಷ) ಗಳ ಆಡಳಿತಾತ್ಮಕ ಮಂಜೂರಾತಿ ದೊರೆತಿರುತ್ತದೆ.

ಈ ಯೋಜನೆ ಮೂಲಕ ಮಣ್ಣು ಮತ್ತು ನೀರು ಸಂರಕ್ಷಣೆಗಾಗಿ ಉಪಜಲಾನಯನ ಪ್ರದೇಶಗಳಲ್ಲಿ ಮೇಲ್ ಸ್ತರ ಉಪಚಾರಗಳು ರಬಲ್ ತಡೆ & ಬೊಲ್ಡರ್ ತಡೆ ಮತ್ತು ನಾಲಾ ಪ್ರದೇಶ ಉಪಚಾರಕ್ಕಾಗಿ ತಡೆಅಣೆಗಳು, ನಾಲಾಬದುಗಳು, ಗೋಕಟ್ಟೆ ಹಾಗೂ ವಿವಿಧ ನೀರು ಸಂಗ್ರಹಣಾ ವಿನ್ಯಾಸಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## 7. ರೈತ ಉತ್ಪಾದಕರ ಸಂಸ್ಥೆಗಳು (FPOs):

ರೈತ ಉತ್ಪಾದಕರ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಸಣ್ಣ ಹಾಗೂ ಅತಿ ಸಣ್ಣ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಮಾಡುವಲ್ಲಿ ಒಬ್ಬಂಟಿಯಾಗಿ ಎದುರಿಸುವ ಹಲವಾರು ಸವಾಲುಗಳನ್ನು ಪರಿಹರಿಸಬಹುದು. ಉತ್ಪಾದಕರ ಸಂಸ್ಥೆಯಾಗಿ ರೈತ ಉತ್ಪಾದಕರ ಸಂಸ್ಥೆಯು ಸ್ಥಳೀಯ ರೈತ ಸಮುದಾಯದ ಸಂಧಾನ ಸಾಮರ್ಥ್ಯವನ್ನು ಹಾಗೂ ವ್ಯವಹಾರಿಕ ಪಾಲುದಾರಿಕೆಯನ್ನು ಅಭಿವೃದ್ಧಿಗೊಳಿಸುವ ಮೂಲಕ ರೈತರ ಆರ್ಥಿಕ ಹಾಗೂ ಔದ್ಯಮಿಕ ಸಂಭಾವ್ಯ ಶಕ್ತಿಯನ್ನು ಸಡಿಲಿಸುವಂತೆ ಮಾಡಬಹುದಾಗಿದೆ. ಈ ಸಂಸ್ಥೆಗಳಿಂದ ಉತ್ಪಾದಕರ ಬೇಡಿಕೆಗೆ ಅನುಗುಣವಾಗಿ ಹಾಗೂ ಮೌಲ್ಯ ಸರಪಳಿಯ ಪದ್ಧತಿಯನ್ನು ಅಳವಡಿಸುವ ಮೂಲಕ ಉತ್ಪಾದಕರ ಆರ್ಥಿಕ ಹಾಗೂ ಸಾಮಾಜಿಕ ಲಾಭಗಳನ್ನು ಹೆಚ್ಚಿಸುವ ಉದ್ದೇಶವನ್ನು ಹೊಂದಿದೆ.

ಇಲಾಖೆಯು ರೈತ ಉತ್ಪಾದಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನವನ್ನು ಈ ಕೆಳಕಂಡ ಯೋಜನೆಗಳಡಿ ಅನುಷ್ಠಾನಗೊಳಿಸಲಾಗುತ್ತಿದೆ.

- ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ
- ಕೇಂದ್ರ ಪುರಸ್ಕೃತ ಯೋಜನೆ-10000 ರೈತ ಉತ್ಪಾದಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನೆ
- ಅಮೃತ ರೈತ ಉತ್ಪಾದಕರ ಸ್ಥಾಪನೆ ಮತ್ತು ಪ್ರೋತ್ಸಾಹ ಯೋಜನೆ.

ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಕ್ಕಿಂತ ಮೇಲ್ಪಟ್ಟು ರೂ.10.00 ಲಕ್ಷದ ಒಳಗೆ ಇರುವ ವೈದ್ಯಕೀಯ, ಇಂಜಿನಿಯರಿಂಗ್/ಪಾಲಿಟೆಕ್ನಿಕ್ ವಿದ್ಯಾರ್ಥಿಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆಗಳಿಂದ ಸರ್ಕಾರ ನಿಗದಿಪಡಿಸಿದ 100% ಬೋಧನಾ ಶುಲ್ಕವನ್ನು ಮರುಪಾವತಿ ಮಾಡಲಾಗುತ್ತದೆ. ಇತರೆ ಕೋರ್ಸ್‌ಗಳಿಗೆ 50% ಬೋಧನಾ ಶುಲ್ಕವನ್ನು ಮರುಪಾವತಿ ಮಾಡಲಾಗುತ್ತದೆ.

7. **ರಾಷ್ಟ್ರ ಮಟ್ಟದ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:**

- IIT/IIM/AIMS/IISc/NIT/IIIT/National Law University/college ಇತ್ಯಾದಿ ರಾಷ್ಟ್ರ ಮಟ್ಟದ ಸಂಸ್ಥೆಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷ ಪ್ರೋತ್ಸಾಹಧನ ನೀಡಲಾಗುತ್ತಿದೆ.
- ಸಿ.ಎ / ಐ.ಸಿ.ಡಬ್ಲ್ಯೂ.ಎ / ಕಂಪನಿ ಸೆಕ್ರೆಟರಿ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಕ್ರಮವಾಗಿ ಇಂಟರ್ ಕೋರ್ಸಿಗೆ ರೂ.1.00 ಲಕ್ಷ ಮತ್ತು ಫೈನಲ್ ಪರೀಕ್ಷೆಗೆ ರೂ.1.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.
- ಆದಾಯ ಮಿತಿ ಇರುವುದಿಲ್ಲ.

8. **ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ**

ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪ.ಜಾತಿ/ಪ.ವರ್ಗದ ವಿದ್ಯಾರ್ಥಿಗಳಿಗೆ ಈ ಕೆಳಗಿನಂತೆ ಪ್ರೋತ್ಸಾಹಧನ ನೀಡಲಾಗುತ್ತದೆ.

| ಕೋರ್ಸ್ | | ಪ್ರೋತ್ಸಾಹಧನ (ರೂ.ಗಳಲ್ಲಿ) |
|---|---|---|
| ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ | 60-74.99% ಅಂಕ ಪಡೆದವರಿಗೆ | 7000/- |
| | 75%ಕ್ಕಿಂತ ಮೇಲ್ಪಟ್ಟು ಅಂಕ ಪಡೆದವರಿಗೆ | 15000/- |
| ದ್ವಿತೀಯ ಪಿ.ಯು.ಸಿ ಅಂತಿಮ ಪರೀಕ್ಷೆ | | 20,000/- |
| ಪದವಿ ಅಂತಿಮ ಪರೀಕ್ಷೆ | | 25,000/- |
| ಸ್ನಾತಕೋತ್ತರ ಪದವಿ ಅಂತಿಮ ಪರೀಕ್ಷೆ | | 30,000/- |
| ವೃತ್ತಿಪರ ಕೋರ್ಸ್ ಅಂತಿಮ ಪರೀಕ್ಷೆ – ವೈದ್ಯಕೀಯ, ಇಂಜಿನಿಯರಿಂಗ್ ಇತ್ಯಾದಿ | | 35,000/- |
| ಸ್ನಾತಕೋತ್ತರ ಪದವಿಯಲ್ಲಿ ವಿಶ್ವವಿದ್ಯಾಲಯದಲ್ಲಿ 1 ರಿಂದ 5 ರ‍್ಯಾಂಕ್ ವಿಜೇತರಿಗೆ | | 50,000/- |

- ಆದಾಯಮಿತಿ ಇರುವುದಿಲ್ಲ.
- ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವುದು.

9. **ಕಾನೂನು ಪದವೀಧರರಿಗೆ ಪ್ರಾಯೋಗಿಕ ತರಬೇತಿ ಅವಧಿಯಲ್ಲಿ ಶಿಷ್ಯವೇತನ**

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾನೂನು ಪದವೀಧರರು ಹಿರಿಯ ವಕೀಲರಿಂದ ಪ್ರಾಯೋಗಿಕ ತರಬೇತಿ ಪಡೆದು ಸ್ವತಂತ್ರವಾಗಿ ವಕೀಲ ವೃತ್ತಿ ನಡೆಸಲು ಅನುಕೂಲವಾಗುವಂತೆ ಶಿಷ್ಯ ವೇತನವನ್ನು ನೀಡಲಾಗುತ್ತದೆ. ಸದರಿ ಸೌಲಭ್ಯವನ್ನು ಪಡೆಯಲು ನಿಗದಿಪಡಿಸಿರುವ ಗರಿಷ್ಠ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ.

- ತರಬೇತಿ ಅವಧಿ – 2 ವರ್ಷ
- ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.10,000/- ಶಿಷ್ಯವೇತನ ನೀಡಲಾಗುತ್ತದೆ.
- ಆನ್‌ಲೈನ್ ಮೂಲಕ ಸ್ವೀಕರಿಸಿದ ಅರ್ಜಿಗಳನ್ನು ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಲಾಗುತ್ತದೆ.
- ತರಬೇತಿಯ ಅವಧಿಯಲ್ಲಿ ಮಾಸಿಕ ವರದಿ ಮತ್ತು ಹಾಜರಾತಿ ಸಲ್ಲಿಸಬೇಕಾಗಿದ್ದು, ಅದರನ್ವಯ ಶಿಷ್ಯವೇತನವನ್ನು ಪಾವತಿಸಲಾಗುತ್ತದೆ.
- ತರಬೇತಿ ಪಡೆದ ಕಾನೂನು ಪದವೀಧರರಿಗೆ ಕಛೇರಿ ಸ್ಥಾಪನೆಗೆ ತಾಲ್ಲೂಕು ಮಟ್ಟದಲ್ಲಿ ರೂ.50000/-. ನಗರ ಪಾಲಿಕೆ/ ಮಹಾನಗರ ಪಾಲಿಕೆ/ಬಿ.ಬಿಎಂ.ಪಿ ವ್ಯಾಪ್ತಿಯಲ್ಲಿ ರೂ.1,00,000/- ಧನಸಹಾಯ ನೀಡಲಾಗುತ್ತದೆ.

10. "ಪ್ರಬುದ್ಧ" – ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಧನಸಹಾಯ:

ಈ ಯೋಜನೆಯಡಿ ಸರ್ಕಾರದಿಂದ ಅನುಮೋದಿಸಿರುವ ವಿದೇಶದಲ್ಲಿರುವ ವಿಶ್ವವಿದ್ಯಾಲಯಗಳು / ಶಿಕ್ಷಣ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿ.ಹೆಚ್.ಡಿ ಪದವಿಗಳನ್ನು ಕೆಳಕಂಡ ನಿಗದಿತ ವಿಷಯಗಳಲ್ಲಿ ವ್ಯಾಸಂಗ ಮಾಡಲು ಆಯ್ಕೆಯಾದವರಿಗೆ ಆರ್ಥಿಕ ಸಹಾಯವನ್ನು ಒದಗಿಸಲಾಗುವುದು. ಈ ಯೋಜನೆಯಡಿ www.sw.kar.nic.in ರಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸತಕ್ಕದ್ದು.

ವಿಷಯಗಳು

- Engineering and Management
- Pure Sciences and Applied Sciences
- Agriculture Sciences & Medicine
- International Commerce, Economics, Accounting Finance
- Humanities, Social Science, Fine Arts and Law

ವಾರ್ಷಿಕ ಆದಾಯ ಮಿತಿ

- ರೂ.8.00 ಲಕ್ಷಗಳು – 100% ವೆಚ್ಚ ಭರಿಸುವುದು.
- ರೂ.8.00 ಲಕ್ಷಗಳಿಂದ ರೂ.15.00 ಲಕ್ಷಗಳು – 50% ವೆಚ್ಚ ಭರಿಸುವುದು
- ರೂ.15.00 ಲಕ್ಷಗಳಿಂದ ರೂ.25.00 ಲಕ್ಷಗಳು – 33% ವೆಚ್ಚ ಭರಿಸುವುದು

ಧನ ಸಹಾಯದ ವಿವರ

- ನಿರ್ವಹಣಾ ವೆಚ್ಚ – ವಾರ್ಷಿಕ ನಿರ್ವಹಣೆ, ಊಟ ಮತ್ತು ವಸತಿ ವೆಚ್ಚಕ್ಕಾಗಿ ಪ್ರತಿ ಅಭ್ಯರ್ಥಿಗೆ ರೂ. 8.00 ಲಕ್ಷಗಳು ಅಥವಾ ವಿಶ್ವವಿದ್ಯಾಲಯಗಳು ನೀಡುವ ಅಂದಾಜು ವೆಚ್ಚದ ಶೇ.75 ರಷ್ಟು, ಇವುಗಳೆರಡರಲ್ಲಿ ಯಾವುದೋ ಕಡಿಮೆಯೋ ಅದನ್ನು ಪ್ರತಿ ಒಂದು ವರ್ಷದ ಕೋರ್ಸಿಗೆ ನೀಡಲಾಗುವುದು.
- ಬೋಧನಾ ಶುಲ್ಕ–ನಿಗದಿಪಡಿಸಿದ ವಾಸ್ತವ ಶುಲ್ಕ(ಒಂದು ವೇಳೆ ಅಭ್ಯರ್ಥಿಗೆ ವಿದ್ಯಾರ್ಥಿವೇತನ ಮಂಜೂರಾಗಿದ್ದಲ್ಲಿ ವಾಸ್ತವ ಶುಲ್ಕದಲ್ಲಿ ವಿದ್ಯಾರ್ಥಿವೇತನದ ಮೊತ್ತವನ್ನು ಕಳೆದು ಬಾಕಿ ಉಳಿದ ಮೊತ್ತವನ್ನು ಪಾವತಿಸಲಾಗುವುದು).
- ಸ್ನಾತಕೋತ್ತರ ಪದವಿಗೆ – ಗರಿಷ್ಟ 2 ವರ್ಷ ಅವಧಿ
- ಪಿ.ಎಚ್.ಡಿ – ಗರಿಷ್ಟ 4 ವರ್ಷ
- ವೈದ್ಯಕೀಯ ವಿಮೆಗೆ–ನಿಗದಿಪಡಿಸಿದ ವಾಸ್ತವ ಶುಲ್ಕ
- ಪುಸ್ತಕಗಳು ಮತ್ತು ಇನ್ನಿತರ ವಿವಿಧ ಭತ್ಯೆಗಳಿಗೆ–ವಾರ್ಷಿಕ ರೂ.1.00 ಲಕ್ಷ
- ವೀಸಾ ಶುಲ್ಕ–ವಾಸ್ತವ ಶುಲ್ಕವನ್ನು Indian currency ಮೂಲಕ ಪಾವತಿಸಲಾಗುವುದು.
- ವಿಮಾನಯಾನ ಭತ್ಯೆ Economy class ticket by shortest route – ಭಾರತ ದೇಶದಿಂದ ವಿದೇಶಿ ವಿಶ್ವವಿದ್ಯಾಲಯದ (ಶಿಕ್ಷಣ ಸಂಸ್ಥೆ) ಹತ್ತಿರದ ವಿಮಾನ ನಿಲ್ದಾಣದ ಸ್ಥಳಕ್ಕೆ ಮತ್ತು ಭಾರತಕ್ಕೆ ಹಿಂದಿರುಗುವಾಗ ವಿಮಾನಯಾನ ಭತ್ಯೆ ನೀಡಲಾಗುವುದು.

ಪ್ರಬುದ್ಧ – ಧನಸಹಾಯ ಪಡೆಯಲು ಅಭ್ಯರ್ಥಿಗಳು ಹೊಂದಿರಬೇಕಾಗಿರುವ ಅರ್ಹತೆಗಳು.

- ಅಭ್ಯರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
- ಕರ್ನಾಟಕ ರಾಜ್ಯ ಪ್ರಕಟಿಸಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ಇಲಾಖೆಯಿಂದ ಪ್ರಕಟಿಸಲಾದ ವಿದೇಶಿ ವಿಶ್ವವಿದ್ಯಾಲಯದಿಂದ ಆಫರ್ ಲೆಟರ್ ಪಡೆದಿರಬೇಕು.
- ವಿದೇಶಿ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಅಧ್ಯಯನ ಮಾಡಲು ಉದ್ದೇಶಿಸಿರುವ ಅಭ್ಯರ್ಥಿಯು ಯು.ಜಿ.ಸಿ ಮಾನ್ಯತೆ ಪಡೆದ ವಿಶ್ವ ವಿದ್ಯಾಲಯದಿಂದ ಪದವಿಯನ್ನು ಪಡೆದಿರಬೇಕು. ಪಿ.ಹೆಚ್.ಡಿ ಅಧ್ಯಯನಕ್ಕೆ ತೆರಳುವ ಅಭ್ಯರ್ಥಿಗಳು ಸ್ನಾತಕೋತ್ತರ ಪದವಿ ಪಡೆದಿರಬೇಕು.

11. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ (ಯು.ಪಿ.ಎಸ್.ಸಿ/ಕೆ.ಪಿ.ಎಸ್.ಸಿ ಮತ್ತು ಬ್ಯಾಂಕಿಂಗ್)

- ಅಭ್ಯರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು ಮತ್ತು ಪದವೀಧರರಾಗಿಬೇಕು.
- ಕರ್ನಾಟಕ ರಾಜ್ಯ ಪ್ರಕಟಿಸಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ವಾರ್ಷಿಕ ಆದಾಯ ಮಿತಿ ರೂ. 5.00 ಲಕ್ಷ
- ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಿ ಮೆರಿಟ್ ಆಧಾರದಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುತ್ತಿದ್ದು, ತರಬೇತಿ ಸಂಸ್ಥೆಯನ್ನು ಅಭ್ಯರ್ಥಿಗಳೇ ಕೌನ್ಸಲಿಂಗ್ ಮೂಲಕ ಆಯ್ಕೆ ಮಾಡಿಕೊಳ್ಳಬಹುದಾಗಿದೆ.
- ದೆಹಲಿ, ಹೈದರಾಬಾದ್, ಬೆಂಗಳೂರಿನಲ್ಲಿರುವ ಪ್ರತಿಷ್ಠಿತ ತರಬೇತಿ ಸಂಸ್ಥೆಗಳ ಮೂಲಕ ಯು.ಪಿ.ಎಸ್.ಸಿ, ಕೆ.ಪಿ.ಎಸ್.ಸಿ. ಮತ್ತು ಬ್ಯಾಂಕಿಂಗ್ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಇಲಾಖೆಯಿಂದ ತರಬೇತಿಯನ್ನು ನೀಡಲಾಗುತ್ತಿದ್ದು, ತರಬೇತಿ ಶುಲ್ಕ ಮತ್ತು ತರಬೇತಿಯ ಅವಧಿಯಲ್ಲಿ ಶಿಷ್ಯವೇತನವನ್ನು ನೀಡಲಾಗುತ್ತದೆ. (ಮಾಸಿಕ ರೂ. 5000/- ದಿಂದ ರೂ. 10000/- ದವರೆಗೆ)
- ತರಬೇತಿ ಸಂಸ್ಥೆಗಳಿಗೆ ಕಾಲ ಕಾಲಕ್ಕೆ ನಿಗದಿ ಪಡಿಸಲಾದ ತರಬೇತಿ ಶುಲ್ಕವನ್ನು ನೀಡಲಾಗುತ್ತದೆ.

12. **ಅಂತರ್ ಜಾತಿ ವಿವಾಹಿತ ದಂಪತಿಗಳಿಗೆ ಪ್ರೋತ್ಸಾಹಧನ** : ಅಸ್ಪೃಶ್ಯತಾ ನಿವಾರಣೆ ಉದ್ದೇಶದಿಂದ ಅಂತರ್ ಜಾತಿ ವಿವಾಹಿತ ದಂಪತಿಗಳಿಗೆ ಪ್ರೋತ್ಸಾಹಧನ ನೀಡಲಾಗುತ್ತದೆ.

- ಪರಿಶಿಷ್ಟ ಜಾತಿ ಯುವಕರು ಇತರೆ ಜಾತಿಯ ಯುವತಿಯರನ್ನು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.2.50 ಲಕ್ಷಗಳ ಪ್ರೋತ್ಸಾಹಧನ
- ಪರಿಶಿಷ್ಟ ಜಾತಿ ಯುವತಿಯರು ಇತರೆ ಜಾತಿಯ ಯುವಕರನ್ನು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ.
- ಅಂತರ್‌ಜಾತಿ ವಿವಾಹವನ್ನು ನೊಂದಾಯಿಸತಕ್ಕದ್ದು.
- ಮದುವೆಯಾದ ನಂತರ 18 ತಿಂಗಳೊಳಗೆ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕು.
- ಯುವತಿಯ ವಯಸ್ಸು 18 ರಿಂದ 42 ವರ್ಷ.
- ಯುವಕನ ವಯಸ್ಸು 21 ರಿಂದ 45 ವರ್ಷ.
- ವಾರ್ಷಿಕ ಆದಾಯ ಮಿತಿ ರೂ.5.00 ಲಕ್ಷಗಳು.

13. **ವಿಧವಾ ಮರು ವಿವಾಹಕ್ಕೆ ಪ್ರೋತ್ಸಾಹಧನ:** ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ವಿಧವೆಯರು ಹೊಸ ಬದುಕನ್ನು ರೂಪಿಸಲು ಅನುಕೂಲವಾಗುವಂತೆ ಅವರು ಮರು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

- ವಿಧವೆಯ ವಯೋಮಿತಿ 18 ರಿಂದ ಗರಿಷ್ಠ 42 ವರ್ಷ
- ವಿವಾಹವಾಗುವ ವರನ ವಯೋಮಿತಿ 21 ರಿಂದ 45 ವರ್ಷ
- ಮರು ವಿವಾಹದ ಬಗ್ಗೆ ನೊಂದಾಯಿಸತಕ್ಕದ್ದು.
- ವಿವಾಹವಾದ 1 ವರ್ಷದೊಳಗೆ ಅರ್ಜಿ ಸಲ್ಲಿಸಬೇಕು.
- ಅಂತರ್‌ಜಾತಿ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.

14. **ಒಳ ಪಂಗಡಗಳ ಅಂತರ್‌ಜಾತಿ ವಿವಾಹ:** ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಯುವಕ/ಯುವತಿಯರು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಉಪ ಜಾತಿಗಳ ಯುವತಿ/ಯುವಕರನ್ನು ವಿವಾಹವಾದಲ್ಲಿ ರೂ.2.00 ಲಕ್ಷ ಪ್ರೋತ್ಸಾಹಧನ ನೀಡಲಾಗುತ್ತಿದೆ.

**ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ:** ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವ ಸಲುವಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ರೈತರಿಗೆ ಶೇ.75ರ ರಿಯಾಯತಿ ದರದಲ್ಲಿ ಎರೆಹುಳು ಗೊಬ್ಬರ, ಸಿಟಿ ಕಾಂಪೋಸ್ಟ್, ಸಾವಯವ ಗೊಬ್ಬರ, ರಂಜಕಯುಕ್ತ ಸಾವಯವ ಗೊಬ್ಬರ ಹಾಗೂ ಎಣ್ಣೆ ರಹಿತ ಹಿಂಡಿ ಗೊಬ್ಬರಗಳ ವಿತರಣೆ.

- ಕೃಷಿ ಉತ್ಪನ್ನಗಳ ಸಂಸ್ಕರಣೆ, ಮೌಲ್ಯವರ್ಧನೆ ಮಾಡಲು ಕೃಷಿ ಸಂಸ್ಕರಣಾ ಘಟಕಗಳ ಸ್ಥಾಪನೆಗೆ 90% ಅಥವಾ ಗರಿಷ್ಠ ರೂ.1.00 ಲಕ್ಷ ಸಹಾಯಧನ.
- ಕೃಷಿ ಉತ್ಪನ್ನಗಳನ್ನು ಮಳೆಯಿಂದ ರಕ್ಷಿಸಲು ಮತ್ತು ಒಣಗಿಸಲು ಟಾರ್ಪಾಲಿನ್‌ಗಳನ್ನು ವಿತರಿಸುವುದು (250 GSM ಕಪ್ಪು ಬಣ್ಣದ HDPE 8 x 6 mtr ಅಳತೆ) ಮತ್ತು ರೈತರಿಗೆ ಶುದ್ಧ ಖಾದ್ಯ ತೈಲ ಲಭ್ಯವಾಗುವಂತೆ ಮಾಡಲು ಸಣ್ಣ ಯಂತ್ರಚಾಲಿತ ಎಣ್ಣೆ ಗಾಣಗಳಿಗೆ ಸಹಾಯಧನ. (ಶೇ.90 ಅಥವಾ ಗರಿಷ್ಠ ರೂ.1.00 ಲಕ್ಷವರೆಗೆ ಸಹಾಯಧನ ನೀಡುವುದು)
- ಬಾಡಿಗೆ ಆಧಾರಿತ ಸೇವಾ ಕೇಂದ್ರಗಳಿಂದ ರೈತರು ಉಪಯೋಗಿಸಿದ ಯಂತ್ರೋಪಕರಣಗಳಿಗೆ ನೇರ ಸೌಲಭ್ಯ ನಗದು ವರ್ಗಾವಣೆ (DBT).
- ಪ.ಜಾತಿ/ಪ.ಪಂಗಡದ ರೈತರ ಜಮೀನುಗಳಲ್ಲಿ ಬೆಳೆ ಪ್ರಾತ್ಯಕ್ಷಿಕೆ.
- ಪ.ಜಾತಿ/ಪ.ಪಂಗಡದ ರೈತರಿಗೆ ಕೃಷಿ ಕಾರ್ಯಕ್ರಮಗಳ ಬಗ್ಗೆ ತರಬೇತಿ.
- ರೈತರ ಬೆಳೆ ಸಂರಕ್ಷಣೆಗೆ ಕೀಟನಾಶಕ ಔಷಧಗಳ ಖರೀದಿಗೆ ಮತ್ತು ರಾಸಾಯನಿಕ/ ಜೈವಿಕ ಗೊಬ್ಬರ ಖರೀದಿಗೆ ಸಹಾಯಧನ.
- ಕೃಷಿ ಕಣಗಳ ನಿರ್ಮಾಣಕ್ಕೆ ಸಹಾಯಧನ.

7. **ಕೃಷಿ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/- ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ತೋಟಗಾರಿಕೆ ಇಲಾಖೆ

1. **ಪಿ.ಎಂ.ಕೆ.ಎಸ್.ವೈ-ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ, ಸಮಗ್ರ ತೋಟಗಾರಿಕೆ ಅಭಿವೃದ್ಧಿ, ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಪಾಲು ಸೇರಿಸಿ ಸಹಾಯಧನ ನೀಡಲಾಗುತ್ತದೆ.**

- ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ ಮತ್ತು ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ ಹನಿ /ತುಂತುರು ನೀರಾವರಿ ಘಟಕಗಳನ್ನು ಅಳವಡಿಸಿದ ಪ್ರತಿ ರೈತ ಕುಟುಂಬಕ್ಕೆ ಮೊದಲ 2 ಹೆಕ್ಟೇರ್ ಪ್ರದೇಶದವರೆಗೆ ಶೇ.90 ಮತ್ತು 2 ಹೆಕ್ಟೇರ್ ಮೇಲ್ಪಟ್ಟು 5 ಹೆಕ್ಟೇರ್ ವರೆಗೆ (ಒಟ್ಟು ಗರಿಷ್ಠ 5 ಹೆಕ್ಟೇರ್) ಶೇ.45 ರಷ್ಟು ಮಿತಿಯೊಳಗೆ ಸಹಾಯಧನ ನೀಡಲಾಗುವುದು.
- ಪ್ರತಿ ಫಲಾನುಭವಿಗೆ ಗರಿಷ್ಠ 5 ಹೆಕ್ಟೇರ್ ಪ್ರದೇಶಕ್ಕೆ ಹಾಗೂ ತರಕಾರಿ ಮತ್ತು ಹೂ ಬೆಳೆಗಳಿಗೆ ಗರಿಷ್ಠ 2 ಹೆಕ್ಟೇರ್ ಪ್ರದೇಶಕ್ಕೆ ಸಹಾಯಧನ ನೀಡಲಾಗುವುದು.

- ಕೃಷಿ ಯಂತ್ರೋಪಕರಣಗಳಿಗೆ ಟಿಲ್ಲರ್ ಇತ್ಯಾದಿಗಳಿಗೆ ಶೇ.90 ಅಥವಾ ಗರಿಷ್ಠ ರೂ.1.00 ಲಕ್ಷ ಸಹಾಯಧನ ನೀಡಲಾಗುವುದು.
- ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಶೇ.90 ಸಹಾಯಧನವನ್ನು ಈ ಕೆಳಕಂಡ ಚಟುವಟಿಕೆಗಳಿಗೆ ನೀಡಲಾಗುತ್ತದೆ.
    - * ತೋಟಗಾರಿಕೆ ಬೆಳೆಗಳ ಪ್ರದೇಶ ವಿಸ್ತರಣೆ / ನಿರ್ವಹಣೆ/ ಪುನಶ್ಚೇತನ
    - * ನೀರು ಸಂಗ್ರಹಣಾ ಘಟಕ/ ಸಂರಕ್ಷಿತ ಬೇಸಾಯ/ ಜೇನು ಸಾಕಾಣಿಕೆ
    - * ಯಾಂತ್ರೀಕರಣ / ಸಮಗ್ರ ಪೋಷಕಾಂಶ / ಕೀಟ ನಾಶಕ
    - * ಕೊಯ್ಲೋತ್ತರ ನಿರ್ವಹಣೆ ಮತ್ತು ಮಾರುಕಟ್ಟೆ ಅಭಿವೃದ್ಧಿ
- ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ – ತೋಟಗಾರಿಕೆ ಬೆಳೆಗಳಿಗೆ ತಗಲುವ ರೋಗ ಮತ್ತು ಕೀಟ ಬಾಧೆಯ ನಿಯಂತ್ರಣಕ್ಕಾಗಿ ಸಸ್ಯ ಸಂರಕ್ಷಣಾ ಔಷಧಿಗಳ ಖರೀದಿಗಾಗಿ ಶೇ.90 ರಂತೆ ಪ್ರತಿ ಹೆಕ್ಟೇರ್‌ಗೆ ಗರಿಷ್ಠ ರೂ.9,000/– ರಂತೆ ಗರಿಷ್ಠ 2 ಹೆಕ್ಟೇರ್‌ಗಳವರೆಗೆ ಸಹಾಯಧನ ನೀಡಲಾಗುವುದು.

**2. ತೋಟಗಾರಿಕೆ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/– ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ರೇಷ್ಮೆ ಇಲಾಖೆ

**1. ರೇಷ್ಮೆ ಇಲಾಖೆಯಿಂದ ಪ.ಜಾತಿ/ಪ.ಪಂಗಡದ ರೈತರಿಗೆ ಈ ಕೆಳಗಿನ ಸೌಲಭ್ಯಗಳಡಿ ಶೇ.90 ರಷ್ಟು ಸಹಾಯಧನ ಒದಗಿಸಲಾಗುವುದು.**

(ರೂ. ಲಕ್ಷಗಳಲ್ಲಿ)

| ಕ್ರ.ಸಂ | ಸೌಲಭ್ಯದ ವಿವರ | ಘಟಕ ವೆಚ್ಚ | ಗರಿಷ್ಠ ಸಹಾಯಧನ. |
|---|---|---|---|
| 1 | ಹುಳು ಸಾಕಾಣಿಕೆ ಸಲಕರಣೆ / ಹಿಪ್ಪುನೇರಳೆ ತೋಟ ನಿರ್ವಹಣಾ ಸಲಕರಣೆ | 0.75 | 0.675 |
| 2 | ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣ (ಕನಿಷ್ಟ 225 ಚ.ಅಡಿಯಿಂದ 1000 ಚ.ಅಡಿಯವರೆಗೆ) | 0.90–4.00 | 0.81–3.60 |
| 3 | ಮೌಂಟಿಂಗ್ ಹಾಲ್ ನಿರ್ಮಾಣ (ಕನಿಷ್ಟ 600 ಚ.ಅಡಿಯಿಂದ 1800 ಚ.ಅಡಿಯವರೆಗೆ) | 0.26–0.83 | 0.24–0.75 |
| 4 | ಚಾಕಿ ಸಾಕಾಣಿಕೆ ಕೇಂದ್ರ ನಿರ್ಮಾಣ | 12.00 | 10.80 |
| 5 | ರೀಲಿಂಗ್ ಶೆಡ್ ನಿರ್ಮಾಣ | | |
| | • 10 ಬೇಸಿನ್ ಮಲ್ಟಿಎಂಡ್ ರೀಲಿಂಗ್ ಘಟಕ (1200 ಚ.ಅಡಿ) | 7.20 | 6.48 |
| | • 06 ಬೇಸಿನ್ ಮಲ್ಟಿಎಂಡ್ ರೀಲಿಂಗ್ ಘಟಕ (900 ಚ.ಅಡಿ) | 5.40 | 4.86 |
| | • 48 ಕೊನೆಗಳ ಸುಧಾರಿತ ಕಾಟೇಜ್ ಬೇಸಿನ್ (900 ಚ.ಅಡಿ) | 5.40 | 4.86 |
| | • 36 ಕೊನೆಗಳ ಸುಧಾರಿತ ಕಾಟೇಜ್ ಬೇಸಿನ್(900 ಚ.ಅಡಿ) | 5.40 | 4.86 |
| | • ಇಟಾಲಿಯನ್ ಮಾದರಿ ಕಾಟೇಜ್ ಬೇಸಿನ್ – ಕನಿಷ್ಠ 02 ಟೇಬಲ್ ಇರುವ (600 ಚ.ಅಡಿ) | 3.60 | 3.24 |

| ಕ್ರಸಂ | ಸೌಲಭ್ಯದ ವಿವರ | ಘಟಕ ವೆಚ್ಚ | ಗರಿಷ್ಟ ಸಹಾಯಧನ. |
|---|---|---|---|
| 6 | ಸೋಲಾರ್ ವಾಟರ್ ಹೀಟರ್ (200 ಲೀ. – 1000 ಲೀ.) | 0.54–2.42 | 0.48–2.17 |
| 7 | ಹೀಟ್ ರಿಕವರಿ ಯುನಿಟ್ | 0.25 | 0.22 |

## ಪಶುಸಂಗೋಪನೆ ಇಲಾಖೆ

1. **ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ :**

- ಕುರಿ ಮತ್ತು ಮೇಕೆ 6+1 ಘಟಕಗಳಿಗೆ ಘಟಕ ವೆಚ್ಚದ ಶೇ.90 ರಷ್ಟು ಸಹಾಯಧನ. ರೂ.45,000/– ಘಟಕ ವೆಚ್ಚದಲ್ಲಿ ರೂ.40,500/– ಬ್ಯಾಂಕ್ ಸಾಲ ಮತ್ತು ರೂ.4,500/– ಫಲಾನುಭವಿಗಳ ವಂತಿಕೆ.
- ಕುರಿ ಮತ್ತು ಮೇಕೆಗಳ ಆಕಸ್ಮಿಕ ಮರಣಕ್ಕೆ ಆರು ತಿಂಗಳ ಮೇಲಿನ ಕುರಿ/ಮೇಕೆಗೆ ರೂ.5,000/– ಹಾಗೂ ಆರು ತಿಂಗಳ ಒಳಗಿನ ಕುರಿ/ಮೇಕೆಗೆ ರೂ.2,500/– ಪರಿಹಾರ.
- ಪ.ಜಾತಿ /ಪ.ಪಂಗಡದ ಫಲಾನುಭವಿಗಳು ಕುರಿ ಮತ್ತು ಉಣ್ಣೆ ಅಭಿವೃದ್ಧಿ ಸಹಕಾರ ಸಂಘದ ಸದಸ್ಯರಾಗಿರಬೇಕು.

2. **ಜಾನುವಾರು ರೋಗಗಳ ನಿಯಂತ್ರಣ :** ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರ ಜಾನುವಾರುಗಳಿಗೆ ಸಮೂಹ ಲಸಿಕೆ ಹಾಕುವುದು.

3. **ಹಾಲು ಉತ್ಪಾದಕರಿಗೆ ಉತ್ತೇಜನ :**
   - ಹಾಲು ಉತ್ಪಾದಕರಿಗೆ ಪ್ರತಿ ಲೀಟರ್ ಹಾಲಿಗೆ ರೂ.5/– ರಂತೆ ಪ್ರೋತ್ಸಾಹಧನ.
   - ಹಾಲು ಉತ್ಪಾದಕರ ಸಂಘಗಳಲ್ಲಿ ಪ.ಜಾತಿ/ಪ.ಪಂಗಡದ ರೈತರನ್ನು ಸದಸ್ಯರನ್ನಾಗಿ ನೋಂದಾಯಿಸುವುದು.
   - ಹೈನುಗಾರಿಕೆಗೆ 75% ಸಹಾಯಧನ.

4. **ರಾಷ್ಟ್ರೀಯ ಜಾನುವಾರು ಮಿಷನ್:** ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರ ಜಾನುವಾರುಗಳಿಗೆ ಉಚಿತ ವಿಮಾ ಯೋಜನೆ.

5. **ಪಶುಸಂಗೋಪನೆ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/– ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ಮೀನುಗಾರಿಕೆ ಇಲಾಖೆ

1. **ಪ್ರಧಾನ ಮಂತ್ರಿ ಮತ್ಸ್ಯ ಸಂಪದ ಯೋಜನೆ:** ನೀಲಿ ಕ್ರಾಂತಿ/ ಮೀನುಗಾರಿಕೆಯ ಸಮಗ್ರ ಅಭಿವೃದ್ಧಿ ಮತ್ತು ನಿರ್ವಹಣೆಯಡಿ ಮೀನು ಕೃಷಿ/ ಮೀನು ಮಾರಾಟ/ ಮೀನು ಸಂಸ್ಕರಣೆ ಮುಂತಾದ ಮೀನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವವರಿಗೆ ವಿವಿಧ ಕಾರ್ಯಕ್ರಮಗಳಿಗೆ ಶೇ.60 ರಂತೆ ಗರಿಷ್ಠ ರೂ.6.00 ಲಕ್ಷ ಸಹಾಯಧನ ಮತ್ತು ಶೇ.40 ರಂತೆ ಫಲಾನುಭವಿಗಳ ವಂತಿಕೆ / ಬ್ಯಾಂಕ್ ಸಾಲ ನೀಡಲಾಗುತ್ತದೆ.

2. **ಮೀನುಮರಿಗಳ ಖರೀದಿಗೆ ಸಹಾಯಧನ :**

1) ಮೀನು ಮರಿಗಳನ್ನು ಖರೀದಿಸಲು ಒಬ್ಬ ವ್ಯಕ್ತಿಗೆ ರೂ 5000/- ಸಹಾಯಧನ ನೀಡಲಾಗುತ್ತದೆ.

2) ಮೀನುಗಾರಿಕಾ ಸಹಕಾರ ಸಂಘಕ್ಕೆ ರೂ 20000/- ಸಹಾಯಧನ ನೀಡಲಾಗುತ್ತದೆ.

3) ನೋಂದಾಯಿತ ಮೀನು ಮರಿಗಳ ಸಾಕಣೆ ಕೇಂದ್ರಗಳಿಗೆ ರೂ 25,000/- ಸಬ್ಸಿಡಿ ನೀಡಲಾಗುತ್ತದೆ.

3. **ಒಳನಾಡು ಮೀನುಗಾರರಿಗೆ ಫೈಬರ್ ಗ್ಲಾಸ್ ದೋಣಿ ವಿತರಣೆ :** ಒಳನಾಡು ಜಲಸಂಪನ್ಮೂಲಗಳಾದ ಕೆರೆಗಳು, ಜಲಾಶಯಗಳು ಮತ್ತು ನದಿ ತೀರಗಳಲ್ಲಿ ಮೀನುಗಾರಿಕೆ ಚಟುವಟಿಕೆಯಲ್ಲಿ ತೊಡಗಿರುವ ಮೀನುಗಾರರಿಗೆ ಮೀನುಗಾರಿಕೆ ಇಲಾಖೆಯಿಂದ ಫೈಬರ್ ಗ್ಲಾಸ್ ಕೊರಾಕಲ್ ಅನ್ನು ವಿತರಿಸಲಾಗುತ್ತದೆ. ಈ ಯೋಜನೆಯಡಿ ಒಳನಾಡು ಮೀನುಗಾರರಿಗೆ ರೂ.10,000/- ಮೌಲ್ಯದ ಫೈಬರ್ ಗ್ಲಾಸ್ ಕೊರಾಕಲ್ (ಫೈಬರ್ ಗ್ಲಾಸ್ ದೋಣಿ) ಮತ್ತು ಎರಡು ಹುಟ್ಟುಗಳನ್ನು ಉಚಿತವಾಗಿ ನೀಡಲಾಗುತ್ತದೆ.

4. **ಮೀನುಗಾರಿಕೆ ಸಲಕರಣೆ ವಿತರಣೆ :**

- ಒಳನಾಡು ಮೀನುಗಾರರಿಗೆ ಮೀನುಗಾರಿಕೆ ಬಲೆ ಮತ್ತು ಪರಿಕರಗಳ ಕಿಟ್ ವಿತರಿಸಲಾಗುತ್ತದೆ.
- ಮೀನುಗಾರಿಕೆ ಬಲೆ ಮತ್ತು ಪರಿಕರಗಳ ಒಟ್ಟು ಮೌಲ್ಯ ರೂ 10,000/- ದ ಕಿಟ್ ಅನ್ನು ಒಳನಾಡು ಮೀನುಗಾರರಿಗೆ ಉಚಿತವಾಗಿ ನೀಡಲಾಗುತ್ತದೆ.

5. **ಸಾಮೂಹಿಕ ವಿಮಾ ಯೋಜನೆ (ಗುಂಪು ವಿಮಾ ಯೋಜನೆ) :**

- ನೈಸರ್ಗಿಕ ವಿಕೋಪಗಳಿಂದ ಮೀನುಗಾರರನ್ನು ರಕ್ಷಿಸಲು, ಮೀನುಗಾರ ಅಥವಾ ಮೀನುಗಾರರ ಸಂಬಂಧಿಕರಿಗೆ ವಿಮಾ ಸೌಲಭ್ಯವನ್ನು ನೀಡಲಾಗುತ್ತದೆ.
- ಮರಣ/ಶಾಶ್ವತ ಅಂಗವಿಕಲತೆಯ ಪ್ರಕರಣಗಳಲ್ಲಿ ರೂ 2.00 ಲಕ್ಷ ಮತ್ತು ಭಾಗಶಃ ಅಂಗವಿಕಲತೆಯ ಪ್ರಕರಣಗಳಲ್ಲಿ ರೂ 1.00 ಲಕ್ಷ ವಿಮೆ ನೀಡಲಾಗುತ್ತದೆ.

6. **ಮೀನುಗಾರಿಕೆ ದೋಣಿಗಳಿಗೆ ಡೀಸೆಲ್ ಮಾರಾಟ ತೆರಿಗೆ ಮರುಪಾವತಿ :**

- ಮೀನುಗಾರಿಕಾ ದೋಣಿಯ ಎಂಜಿನ್ ಹಾರ್ಸ್ ಪವರ್ (HP) ಆಧಾರದ ಮೇಲೆ, ವಿತರಣಾ ಹಂತದಲ್ಲಿ ರಾಜ್ಯ ಮಾರಾಟ ತೆರಿಗೆ ವಿನಾಯಿತಿ ಡೀಸೆಲ್ ನೀಡಲಾಗುತ್ತದೆ.

7. **ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ನೆರವು :**

- ಮೀನು ಸಾಕಾಣಿಕೆ ಕೊಳಗಳ ನಿರ್ಮಾಣಕ್ಕಾಗಿ ಪ್ರತಿ ಹೆಕ್ಟೇರ್‌ಗೆ ರೂ.7.00 ಲಕ್ಷಗಳಿಗೆ ಶೇ.60 ರಷ್ಟು.
- ಹೂಡಿಕೆ ವೆಚ್ಚ ರೂ.4.00 ಲಕ್ಷಕ್ಕೆ ಶೇ.60 ರಷ್ಟು ಸಹಾಯಧನ (ಕೊಳದ ಕನಿಷ್ಟ ವಿಸ್ತೀರ್ಣ ಅರ್ಧ ಎಕರೆ)
- ಫಲಾನುಭವಿಗಳ ವಂತಿಕೆ/ಬ್ಯಾಂಕ್ ಸಾಲ - 40% (ಗರಿಷ್ಟ ರೂ.3.50 ಲಕ್ಷ).

6. **ಮೀನುಗಾರರ ಕಲ್ಯಾಣ ಕಾರ್ಯಕ್ರಮ :**

- ಮೀನುಗಾರಿಕೆ ರಜೆ ಅವಧಿಯಲ್ಲಿ ಕರಾವಳಿಯ ಮೀನುಗಾರರಿಗೆ ನೆರವು ನೀಡಲಾಗುತ್ತದೆ.
- ಈ ಯೋಜನೆಯಡಿ ಮೀನುಗಾರಿಕೆ ಅವಧಿಯಲ್ಲಿ ಪ್ರತಿ ಮೀನುಗಾರರಿಂದ ಒಟ್ಟು ರೂ.1500/- ಸಂಗ್ರಹಿಸಲಾಗುತ್ತದೆ ಮತ್ತು ಇದಕ್ಕೆ ಹೊಂದಾಣಿಕೆಯ ಕೊಡುಗೆಯಾಗಿ ರಾಜ್ಯ ಮತ್ತು ಕೇಂದ್ರ ಸರಕಾರದಿಂದ ತಲಾ ರೂ.1500/- ಗಳನ್ನು ನೀಡಲಾಗುತ್ತದೆ. ಹೀಗೆ ಸಂಗ್ರಹಿಸಿದ ರೂ.4500/- ಅನ್ನು ಮೀನುಗಾರಿಕೆ ನಿಷೇಧದ 3 ತಿಂಗಳ ಅವಧಿಯಲ್ಲಿ ಫಲಾನುಭವಿಗಳಿಗೆ ಸಮಾನವಾಗಿ ಒಂದು ತಿಂಗಳಿಗೆ ರೂ.1500/- ರಂತೆ ನೀಡಲಾಗುತ್ತದೆ.

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ

1. **ಗ್ಯಾಸ್ ಸಿಲಿಂಡರ್‌ಗಳಿಗೆ ರೀ–ಫಿಲ್ಲಿಂಗ್ ಸೌಲಭ್ಯ :** ಅರಣ್ಯ ಮತ್ತು ಅರಣ್ಯದಂಚಿನಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಾಂಗದವರಿಗೆ ಈ ಹಿಂದೆ ಎಲ್.ಪಿ.ಜಿ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಅಂತಹ ಫಲಾನುಭವಿಗಳಿಗೆ 2 ಸಿಲಿಂಡರ್‌ಗಳನ್ನು ರೀ–ಫಿಲ್ಲಿಂಗ್ ಮಾಡಲಾಗುವುದು.

2. **ರಾಷ್ಟ್ರೀಯ ಬಿದಿರು ಅಭಿಯಾನ :** ಪ.ಜಾತಿ/ಪ.ಪಂಗಡದ ರೈತರ ಜಮೀನಿನಲ್ಲಿ ಬಿದಿರು ಬೆಳೆಯಲು ಪ್ರೋತ್ಸಾಹ ನೀಡುವುದು. ಬುಟ್ಟಿ ಹೆಣೆಯುವವರಿಗೆ ಪ್ರತೀ ಫಲಾನುಭವಿಗಳಿಗೆ 50 ಬೊಂಬುಗಳನ್ನು ಉಚಿತವಾಗಿ ನೀಡುವುದು.

## ಸಹಕಾರ ಇಲಾಖೆ

1. **ಬೆಳೆ ಸಾಲಕ್ಕಾಗಿ ಹಾಗೂ ಸ್ವಸಹಾಯ ಸಂಘಗಳಿಗೆ ಬಡ್ಡಿ ಸಹಾಯಧನ.**

   **ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ :** ರೈತರಿಗೆ 0% ಬಡ್ಡಿದರದಲ್ಲಿ ರೂ.3.00 ಲಕ್ಷಗಳವರೆಗಿನ ಅಲ್ಪಾವಧಿ ಹಾಗೂ 3% ಬಡ್ಡಿದರದಲ್ಲಿ ರೂ.10.00 ಲಕ್ಷದವರೆಗಿನ ದೀರ್ಘಾವಧಿ ಕೃಷಿ ಸಾಲವನ್ನು ಸಹಕಾರ ಸಂಘಗಳ ಮೂಲಕ ವಿತರಿಸುವುದು.

   **ಅಡಮಾನ ಸಾಲಕ್ಕೆ ಬಡ್ಡಿ ಸಹಾಯಧನ :** ಸಣ್ಣ ರೈತರು ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಂದ ಮತ್ತು ತಾಲ್ಲೂಕು ಕೃಷಿ ಉತ್ಪಾದನೆ ಮತ್ತು ಸಹಕಾರಿ ಮಾರುಕಟ್ಟೆ ಸಂಸ್ಥೆಗಳಿಂದ ಗೋದಾಮುಗಳಲ್ಲಿ ಸಂಗ್ರಹಿಸುವ ಕೃಷಿ ಉತ್ಪನ್ನಗಳ ಮೇಲೆ 7% ಬಡ್ಡಿದರದಂತೆ ರೂ.2.00 ಲಕ್ಷದವರೆಗೆ ಸಾಲ ನೀಡುವುದು.

   **ಸ್ವಸಹಾಯ ಗುಂಪುಗಳ ಮೂಲಕ ಬಡ್ಡಿ ಸಹಾಯಧನ :**

   - **ಮಹಿಳಾ ಸ್ವಸಹಾಯ ಸಂಘಗಳಿಗೆ :** ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಶೂನ್ಯಬಡ್ಡಿ ದರದಂತೆ ರೂ.5.00 ಲಕ್ಷಗಳವರೆಗೆ ಮತ್ತು ಶೇ.4ರ ಬಡ್ಡಿ ದರದಂತೆ ರೂ.5.00 ಲಕ್ಷದಿಂದ ರೂ.10.00 ಲಕ್ಷಗಳವರೆಗೆ ಸಾಲ ಸೌಲಭ್ಯ.
   - **ಪುರುಷರ ಸ್ವಸಹಾಯ ಸಂಘಗಳಿಗೆ :** ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಶೇ.4ರ ಬಡ್ಡಿದರದಂತೆ ರೂ.5.00 ಲಕ್ಷಗಳವರೆಗೆ ಸಾಲ ಸೌಲಭ್ಯ.

2. **ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರನ್ನು ವಿವಿಧ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವುದು.**

   - ಕಬ್ಬು/ಸಕ್ಕರೆ ಸಹಕಾರಿ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಗರಿಷ್ಠ ರೂ.2500/– ಗಳನ್ನು ಭರಿಸುವುದು.
   - ಇತರೆ ಸಹಕಾರಿ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಗರಿಷ್ಠ ರೂ.1000/–ಗಳನ್ನು ಭರಿಸುವುದು.

3. **ಗೋದಾಮುಗಳಲ್ಲಿ ಕೃಷಿ ಉತ್ಪನ್ನಗಳ ಶೇಖರಣೆಗೆ ಬಾಡಿಗೆ ವೆಚ್ಚ ಭರಿಸಲು ಸಹಾಯಧನ.**
   ರೈತರು ಕೃಷಿ ಉತ್ಪನ್ನವನ್ನು ಗೋದಾಮುಗಳಲ್ಲಿ ಶೇಖರಿಸಲು ತಗಲುವ ಬಾಡಿಗೆ ವೆಚ್ಚದಲ್ಲಿ ಪ.ಜಾತಿ/ಪ.ಪಂಗಡದ ರೈತರಿಗೆ 50% ರಷ್ಟು ಸಹಾಯಧನ/ ರಿಯಾಯಿತಿ ನೀಡಲಾಗುವುದು. (ಸಾಮಾನ್ಯ ರೈತರಿಗೆ 25%)

4. **ಲ್ಯಾಂಪ್ಸ್ ಸಂಯುಕ್ತ ಸಂಘಗಳಿಗೆ ಮಾರುಕಟ್ಟೆ ಮೂಲ ಸೌಕರ್ಯಗಳ ಸ್ಥಾಪನೆ.**
   ಪರಿಶಿಷ್ಟ ಪಂಗಡಕ್ಕೆ ಸೇರಿದ ಲ್ಯಾಂಪ್ಸ್ ಸಂಘಗಳಿಗೆ ಮೂಲಭೂತ ಸೌಕರ್ಯವನ್ನು ಸ್ಥಾಪಿಸಲು ಸರ್ಕಾರದಿಂದ ಅನುದಾನ ಒದಗಿಸಲಾಗುವುದು.

## ಸಾರಿಗೆ ಇಲಾಖೆ

1. **ಪ.ಜಾತಿ / ಪ.ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್‌ಪಾಸ್:**

- ವಿದ್ಯಾರ್ಥಿಗಳು ನಿಯಮಿತ ಶಾಲೆ/ಕಾಲೇಜುಗಳು/ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಯಾಗಿರಬೇಕು.
- ಸೇವಾ ಸಿಂಧುವಿನಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವುದು.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

1. **ಕೃಷಿ, ತೋಟಗಾರಿಕೆ, ಪಶುಸಂಗೋಪನೆ ಮತ್ತು ಆರ್.ಡಿ.ಪಿ.ಆರ್ ಇಲಾಖೆಗಳ ವ್ಯಾಪ್ತಿಯ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/- ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಆದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

2. **ಕುಡಿಯುವ ನೀರಿನ ಸಂಪರ್ಕ :**

ಜಲಜೀವನ್ ಮಿಷನ್ ಯೋಜನೆಯಡಿ ಗ್ರಾಮೀಣ ಪ್ರದೇಶದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಸಾಮೂಹಿಕ ಮತ್ತು ವೈಯಕ್ತಿಕ ಕುಡಿಯುವ ನೀರಿನ ಸಂಪರ್ಕ ಒದಗಿಸಲಾಗುತ್ತಿದೆ.

3. ಗ್ರಾಮೀಣ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯ :

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಪ.ಜಾತಿ/ಪ.ಪಂಗಡದ ಹೆಚ್ಚಿನ ಜನಸಂಖ್ಯೆ ಇರುವ ಗ್ರಾಮಗಳಿಗೆ ಸಂಪರ್ಕ ರಸ್ತೆ ನಿರ್ಮಿಸುವುದು.

ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ ಮತ್ತು ಚರಂಡಿ ಸೌಲಭ್ಯ ಒದಗಿಸಲಾಗುತ್ತದೆ.

4. **ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ :**

- ಸದರಿ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕೂಲಿ ಕಾರ್ಮಿಕರಿಗೆ ಜಾಬ್ ಕಾರ್ಡ್ ನೀಡಿ ಕನಿಷ್ಠ 100 ದಿನಗಳ (ಸರ್ಕಾರ ಅಧಿಸೂಚಿಸಿದ ಬರಪೀಡಿತ ಮತ್ತು ಪ್ರವಾಹಪೀಡಿತ ತಾಲ್ಲೂಕುಗಳಲ್ಲಿ 150 ದಿನಗಳು) ಕೆಲಸವನ್ನು ಒದಗಿಸಲಾಗುತ್ತದೆ. ದಿನದ ಕೂಲಿ ವೆಚ್ಚ ರೂ.289/-.
- ಎಸ್.ಸಿ/ಎಸ್.ಟಿ ರೈತರು ತಮ್ಮ ಜಮೀನುಗಳ ಅಭಿವೃದ್ಧಿ ಕೆಲಸಗಳನ್ನು ತೆಗೆದುಕೊಳ್ಳಲು ಕೂಲಿ ವೆಚ್ಚವನ್ನು ಈ ಯೋಜನೆಯಡಿ ಭರಿಸಲು ಅವಕಾಶವಿದೆ.
- ಪ.ಜಾತಿ/ಪ.ಪಂಗಡದವರಿಗೆ ಸ್ಮಶಾನ ನಿರ್ಮಾಣ, ಶಾಲೆಯ ಆವರಣ ಗೋಡೆ, ಅಂಗನವಾಡಿ ನಿರ್ಮಾಣ ಇತ್ಯಾದಿಗಳಿಗೆ ನಿಯಮಾನುಸಾರ ವೆಚ್ಚ ಭರಿಸಲು ಅವಕಾಶವಿದೆ.

5. **ಸ್ವಚ್ಛ ಭಾರತ ಅಭಿಯಾನ :**

ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ವೈಯಕ್ತಿಕ ಶೌಚಾಲಯ ಮತ್ತು ಸ್ನಾನಗೃಹ ನಿರ್ಮಾಣಕ್ಕಾಗಿ 2021-22ನೇ ಸಾಲಿನಿಂದ ರೂ.20,000/- ಸಹಾಯಧನ ನೀಡಲಾಗುತ್ತದೆ.

# ವಸತಿ ಇಲಾಖೆ

1. **ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ:**

**ಪ್ರತಿ ಮನೆಗೆ ಸಹಾಯಧನ**

- ಗ್ರಾಮೀಣ ಪ್ರದೇಶ – ಪ್ರಸಕ್ತ ಸಾಲಿನಿಂದ ಮಂಜೂರಾಗುವ ಮನೆಗಳಿಗೆ ಘಟಕ ಸಹಾಯಧನವನ್ನು ರೂ.2.00 ಲಕ್ಷಕ್ಕೆ ಹೆಚ್ಚಿಸಲಾಗಿದೆ.
- ನಗರ ಪ್ರದೇಶ – ರೂ.2,00,000/- ಮತ್ತು ಇದರೊಂದಿಗೆ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಅಡಿಯಲ್ಲಿ ರೂ.1,50,000/-ಗಳ ಸಹಾಯಧನವನ್ನು ಸೇರಿಸಿ ಒಟ್ಟು ರೂ.3.50 ಲಕ್ಷ ಸಹಾಯಧನ ನೀಡಲಾಗುವುದು. ಫಲಾನುಭವಿಗಳ ವಂತಿಕೆ ರೂ.1.50 ಲಕ್ಷ ಒಟ್ಟು ಘಟಕ ವೆಚ್ಚ ರೂ.5.00 ಲಕ್ಷ.
- ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) – ಸಹಾಯಧನ ರೂ.1.50 ಲಕ್ಷ (ಕೇಂದ್ರ ಸರ್ಕಾರದಿಂದ ರೂ.72,000/- ಮತ್ತು ರಾಜ್ಯ ಸರ್ಕಾರದಿಂದ ರೂ.78,000/-), ಆದರೆ ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆಯಡಿ ರೂ.50,000/- ನೀಡಿ ಒಟ್ಟು ಸಹಾಯಧನ ರೂ.2.00 ಲಕ್ಷಗಳನ್ನು ನೀಡಲಾಗುತ್ತದೆ. ( ಈ ಹಿಂದೆ ರೂ.1.75 ಲಕ್ಷ ನೀಡುತ್ತಿದ್ದು, ಪ್ರಸಕ್ತ ಸಾಲಿನಿಂದ ರೂ.2.00 ಲಕ್ಷಕ್ಕೆ ಹೆಚ್ಚಿಸಲಾಗಿದೆ)

**ಅರ್ಹತೆ – ವಾರ್ಷಿಕ ಆದಾಯ ಮಿತಿ**

- ಗ್ರಾಮೀಣ ಪ್ರದೇಶ– ರೂ. 32,000/-
- ನಗರ ಪ್ರದೇಶ – ರೂ. 87,600/-

**ಯೋಜನೆಯ ಪ್ರಮುಖ ಅಂಶಗಳು**

- ಸ್ವತಃ ಫಲಾನುಭವಿಗಳೇ ಮನೆಗಳನ್ನು ನಿರ್ಮಿಸಿಕೊಳ್ಳಲು ಮೊದಲ ಆದ್ಯತೆ.
- ಆನ್‌ಲೈನ್‌ನಲ್ಲಿ ಕಾಮಗಾರಿ ಆದೇಶ ನೀಡುವಿಕೆ.
- ಜಿಪಿಎಸ್ ಆಧಾರಿತ ಭೌತಿಕ ಪ್ರಗತಿ ಪರಿಶೀಲನೆ.
- ಫಲಾನುಭವಿಗಳ ಖಾತೆಗೆ ನೇರವಾಗಿ ಸಹಾಯಧನ ಬಿಡುಗಡೆ.
- ಸಹಾಯಧನ ಬಿಡುಗಡೆ ವಿವರಗಳನ್ನು ಎಸ್.ಎಂ.ಎಸ್ ಮೂಲಕ ಫಲಾನುಭವಿಗಳಿಗೆ ತಿಳಿಸಲಾಗುವುದು.

2. **ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) – AHP-Affortable housing Programme.**

| ವರ್ಗ | ವಾರ್ಷಿಕ ಆದಾಯ | ಮನೆಯ ವಿಸ್ತೀರ್ಣ |
|---|---|---|
| ಬಿ.ಪಿ.ಎಲ್ | 87600/- ವರೆಗೆ | 30 sqmt |
| ಆರ್ಥಿಕ ಹಿಂದುಳಿದವರು | ರೂ 87600/- ರಿಂದ ರೂ 3 ಲಕ್ಷದವರೆಗೆ | 60 sqmt |
| ಎಲ್.ಐ.ಜಿ | ರೂ 3 ಲಕ್ಷ ದಿಂದ 6 ಲಕ್ಷದವರೆಗೆ | 60 sqmt |
| ಎಂ.ಐ.ಜಿ-1 | ರೂ 6 ಲಕ್ಷದಿಂದ 12 ಲಕ್ಷದವರೆಗೆ | 160 sqmt |
| ಎಂ.ಐ.ಜಿ-2 | ರೂ 12 ಲಕ್ಷದಿಂದ 18 ಲಕ್ಷದವರೆಗೆ | 200 sqmt |

ಮೇಲ್ಕಂಡ ಯೋಜನೆಯಡಿ ಸಹಾಯಧನ ರೂ.3.50 ಲಕ್ಷ ಮಾತ್ರ ನೀಡಲಾಗುತ್ತದೆ. (ಡಾ.ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆಯಡಿ ರೂ.2.00 ಲಕ್ಷ ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ರೂ.1.50 ಲಕ್ಷ ಸೇರಿಸಿ)

೮. ಕೊಳಚೆ ಪ್ರದೇಶಾಭಿವೃದ್ಧಿ ಮಂಡಳಿ :

ನಗರ ಪ್ರದೇಶಗಳಲ್ಲಿ ಕೊಳಚೆ ಅಭಿವೃದ್ಧಿ ಮಂಡಳಿಯಿಂದ ಘೋಷಿಸಲಾದ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ. ಒಟ್ಟು ಸಹಾಯಧನ ರೂ.3.50 ಲಕ್ಷ. (ಡಾ.ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆಯಡಿ ರೂ.2.00 ಲಕ್ಷ ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ರೂ.1.50 ಲಕ್ಷ ಸೇರಿಸಿ) ಫಲಾನುಭವಿಗಳ ವಂತಿಕೆಯಲ್ಲಿ 50% ಗರಿಷ್ಠ ರೂ.75,000/- ವನ್ನು ಎಸ್.ಸಿ.ಎಸ್.ಪಿ/ ಟಿ.ಎಸ್.ಪಿ ಅಡಿ ಭರಿಸಲು ತಿಳಿಸಲಾಗಿದೆ.

## ನಗರಾಭಿವೃದ್ಧಿ ಇಲಾಖೆ

**1.ಖಾಯಂ ಪೌರ ಕಾರ್ಮಿಕರ ವಸತಿ ಯೋಜನೆ :**

- ವಸತಿ ಸೌಲಭ್ಯವನ್ನು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ಶಾಸ್ವತ ವಸತಿ ರಹಿತ ಪೌರಕಾರ್ಮಿಕರು, ಲೋಡರ್‌ಗಳು, ಸಹಾಯಕರು, ಯು.ಜಿ.ಡಿ ಕೆಲಸಗಾರರು ಮತ್ತು ಕ್ಲೀನರ್‌ಗಳಿಗೆ ನೀಡಲಾಗುವುದು.
- ಘಟಕ ಸಹಾಯಧನ ರೂ. 6.00 ಲಕ್ಷ.

**2. ಸ್ವಚ್ಚಭಾರತ ಮಿಷನ್ :**
ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರಿಗೆ ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕಾಗಿ ರೂ. 15000/- ಗಳ ಸಹಾಯಧನ ನೀಡಲಾಗುವುದು.

**3. ನಗರಸಭೆ ಮತ್ತು ಪುರಸಭೆಗಳಿಗೆ ಮುಖ್ಯ ಮಂತ್ರಿಗಳ ನಗರೋತ್ಥಾನ ಯೋಜನೆ :**
ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರ ವಾಸಸ್ಥಳಗಳಲ್ಲಿ ಕುಡಿಯುವ ನೀರು, ರಸ್ತೆ, ಚರಂಡಿ, ಯುಜಿಡಿ ಮತ್ತು ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತದೆ.

**4. ಕುಡಿಯುವ ನೀರಿನ ಸರಬರಾಜು**
ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಇತರ ನಗರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳಲ್ಲಿ ಬಿ.ಡಬ್ಲ್ಯೂ.ಎಸ್.ಎಸ್.ಬಿ ಮತ್ತು ಕೆ.ಯು.ಡಬ್ಲ್ಯೂ.ಎಸ್.ಎಸ್.ಬಿ ಮೂಲಕ ಕುಡಿಯುವ ನೀರಿನ ಸರಬರಾಜು ವ್ಯವಸ್ಥೆ ಕಲ್ಪಿಸಲಾಗುತ್ತದೆ.

**5. ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ವಿಶೇಷ ಮೂಲಭೂತ ಸೌಕರ್ಯ**
ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳಲ್ಲಿ ಕುಡಿಯುವ ನೀರು, ರಸ್ತೆ, ಚರಂಡಿ, ಯುಜಿಡಿ ಮತ್ತು ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತದೆ.

## ಲೋಕೋಪಯೋಗಿ ಇಲಾಖೆ

- ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಸಿ.ಸಿ.ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು. ಹತ್ತಿರದ ಮುಖ್ಯ ರಸ್ತೆಯಿಂದ ಕಾಲೋನಿಗೆ ಸಂಪರ್ಕ ರಸ್ತೆ ನಿರ್ಮಿಸುವುದು.

## ಇಂಧನ ಇಲಾಖೆ

1) ಪ.ಜಾತಿ/ಪ.ಪಂಗಡದ ರೈತರ 10 ಹೆಚ್.ಪಿ ವರೆಗಿನ ಕೃಷಿ ನೀರಾವರಿ ಪಂಪು ಸೆಟ್‌ಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಒದಗಿಸುವುದು.
2) ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು.

3) ಪ್ರಧಾನ ಮಂತ್ರಿ ಕುಸುಮ್ ಯೋಜನೆಯ ಮಾರ್ಗಸೂಚಿಯಂತೆ ಪ.ಜಾತಿ/ಪ.ಪಂಗಡದ ರೈತರ ತೆರೆದ ಬಾವಿ/ಕೊಳವೆ ಬಾವಿಗಳಿಗೆ ಗರಿಷ್ಠ 7.5 ಹೆಚ್.ಪಿ ಸಾಮರ್ಥ್ಯವರೆಗಿನ ಸೌರಶಕ್ತಿ ಆಧಾರಿತ ನೀರಾವರಿ ಪಂಪು ಸೆಟ್‌ಗಳಿಗೆ 80% ಸಹಾಯಧನ ನೀಡುವುದು.
4) ಪ.ಜಾತಿ/ಪ.ಪಂಗಡದವರ ವಾಸಸ್ಥಳಗಳಿಗೆ / ಕಾಲೋನಿಗಳಿಗೆ ವಿದ್ಯುತ್ ಸಂಪರ್ಕ ಒದಗಿಸುವುದು.
5) ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ.

## ಭಾರೀ ನೀರಾವರಿ ಇಲಾಖೆ

**ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅನುದಾನವನ್ನು ಆಯಾ ನಿಗಮಗಳ ವ್ಯಾಪ್ತಿಯ ಅಚ್ಚುಕಟ್ಟು ಪ್ರದೇಶದಲ್ಲಿ ಪ.ಜಾತಿ/ಪ.ಪಂಗಡದ ರೈತರ ಜಮೀನಿನ ವಿಸ್ತೀರ್ಣದ ಆಧಾರದ ಮೇಲೆ ನಿಗಮ ಇತ್ಯಾದಿಗಳಿಗೆ ಹಂಚಿಕೆ ಮಾಡುವುದು.**

**ಸಾಮಾನ್ಯ ನೀರಾವರಿ ಕಾಮಗಾರಿ :**
ಸಾಮಾನ್ಯ ನೀರಾವರಿ ಯೋಜನೆಗಳಿಗೆ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ವಿಸ್ತೀರ್ಣದ ಆಧಾರದ ಅನುಪಾತದಲ್ಲಿ ಎಸ್.ಸಿ.ಎಸ್.ಪಿ/ ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.

**ಸಾಮೂಹಿಕ ನೀರಾವರಿ :**

- ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿ 50% ಮೇಲ್ಪಟ್ಟು ಪ.ಜಾತಿ/ ಪ.ಪಂಗಡದ ರೈತರ ಜಮೀನು ಇದ್ದಲ್ಲಿ 100% ವೆಚ್ಚವನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ಭರಿಸುವುದು.
- 50% ಕ್ಕಿಂತ ಕಡಿಮೆ ಇದ್ದಲ್ಲಿ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ಅನುಪಾತಕ್ಕೆ ಅನುಗುಣವಾಗಿ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.

**ವೈಯಕ್ತಿಕ ನೀರಾವರಿ ಸೌಲಭ್ಯ :**

- ಅಚ್ಚುಕಟ್ಟು ಪ್ರದೇಶದಲ್ಲಿ ಕಾಲುವೆಗಳ ಮೂಲಕ ನೀರು ಸರಬರಾಜು ಆಗದೇ ಇರುವ ಪ್ರದೇಶಗಳಲ್ಲಿ ಆದ್ಯತೆ ಮೇಲೆ ಗಂಗಾ ಕಲ್ಯಾಣ ಯೋಜನೆಯ ಮಾದರಿಯಲ್ಲಿ ಕೊಳವೆ ಬಾವಿ ಮತ್ತು ತೆರೆದ ಬಾವಿ ಸೌಲಭ್ಯವನ್ನು ಕಲ್ಪಿಸುವುದು.

## ಸಣ್ಣ ನೀರಾವರಿ ಇಲಾಖೆ

**ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜಮೀನಿನಲ್ಲಿ ವೈಯಕ್ತಿಕ ನೀರಾವರಿ ಮತ್ತು ಸಾಮೂಹಿಕ ನೀರಾವರಿ ಸೌಲಭ್ಯ ಒದಗಿಸಲಾಗುವುದು.(ಏತ ನೀರಾವರಿ/ ಕೊಳವೆಬಾವಿ/ತೆರೆದ ಬಾವಿ/ಚೆಕ್ ಡ್ಯಾಮ್)**

ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅನುದಾನವನ್ನು ಜನಸಂಖ್ಯೆಯ ಆಧಾರದ ಮೇಲೆ ಜಿಲ್ಲೆಗಳಿಗೆ ಹಂಚಿಕೆ ಮಾಡುವುದು.

**ಸಾಮೂಹಿಕ ನೀರಾವರಿ :**

- ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿ 50% ಮೇಲ್ಪಟ್ಟು ಪ.ಜಾತಿ/ ಪ.ಪಂಗಡದ ರೈತರ ಜಮೀನು ಇದ್ದಲ್ಲಿ 100% ವೆಚ್ಚವನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ಭರಿಸುವುದು.
- 50% ಕ್ಕಿಂತ ಕಡಿಮೆ ಇದ್ದಲ್ಲಿ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ಅನುಪಾತಕ್ಕೆ ಅನುಗುಣವಾಗಿ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.
- ನದಿ ನಾಲೆಗಳಿಗೆ ಸಣ್ಣ ಮಟ್ಟದ ಬ್ಯಾರೇಜ್‌ಗಳ ನಿರ್ಮಾಣ – ಏತ ನೀರಾವರಿಗೆ ನಿಗದಿಪಡಿಸಿರುವ ಮೇಲ್ಕಂಡ ಷರತ್ತುಗಳಂತೆ ನಿರ್ಮಿಸುವುದು.

ವೈಯಕ್ತಿಕ ನೀರಾವರಿ ಸೌಲಭ್ಯ :

- ಕೊಳವೆ ಬಾವಿ ಮತ್ತು ತೆರೆದ ಬಾವಿ ಸೌಲಭ್ಯವನ್ನು ಗಂಗಾ ಕಲ್ಯಾಣ ಯೋಜನೆಯ ಮಾದರಿಯಲ್ಲಿ ನೀಡಲಾಗುವುದು.

- ಫಲಾನುಭವಿ ಕನಿಷ್ಠ ಒಂದು ಎಕರೆ ಜಮೀನು ಹೊಂದಿರಬೇಕು ಆದರೆ ಕರಾವಳಿ ಹಾಗೂ ಮಲೆನಾಡು ಪ್ರದೇಶಗಳಾದ ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ, ಕೊಡಗು ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಫಲಾನುಭವಿಗಳು ಕನಿಷ್ಠ ಅರ್ಧ ಎಕರೆ ಜಮೀನು ಹೊಂದಿರಬೇಕು.
- ಸಮಾಜ ಕಲ್ಯಾಣ ಇಲಾಖೆಯ ನಿಗಮಗಳಿಂದ ಗಂಗಾ ಕಲ್ಯಾಣ ಯೋಜನೆಯಡಿ ಸೌಲಭ್ಯ ಪಡೆದ ಫಲಾನುಭವಿಗಳು ಸಣ್ಣ ನೀರಾವರಿ ಇಲಾಖೆಯಿಂದ ಸೌಲಭ್ಯ ಪಡೆಯಲು ಅರ್ಹರಲ್ಲ.
- ಫಲಾನುಭವಿಗಳನ್ನು ಪಾರದರ್ಶಕವಾಗಿ ಪ್ರಕಟಣೆಗಳ ಮೂಲಕ ಅರ್ಜಿಗಳನ್ನು ಆಹ್ವಾನಿಸಿ ಆಯ್ಕೆ ಮಾಡುವುದು. (ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಧಿನಿಯಮದಂತೆ)

**ಚೆಕ್ ಡ್ಯಾಂಗಳ ನಿರ್ಮಾಣ (ಮಣ್ಣಿನ ತೇವಾಂಶವನ್ನು ಮತ್ತು ಅಂತರ್ಜಲ ಮಟ್ಟವನ್ನು ಹೆಚ್ಚಿಸಲು)** : ಪ.ಜಾತಿ/ಪ.ಪಂಗಡದ ರೈತರ ಜಮೀನುಗಳ ಅಭಿವೃದ್ಧಿಗಾಗಿ ಪೂರಕವಾಗುವಂತೆ ಜಮೀನಿನ ಅಕ್ಕ-ಪಕ್ಕದಲ್ಲಿ ಚೆಕ್ ಡ್ಯಾಂಗಳನ್ನು ನಿರ್ಮಿಸತಕ್ಕದ್ದು.

## ಯೋಜನಾ ಇಲಾಖೆ

1. **ಶಾಸಕರ ಕ್ಷೇತ್ರಾಭಿವೃದ್ಧಿ ನಿಧಿ:** ವಿಧಾನಸಭಾ ಕ್ಷೇತ್ರವಾರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಮೂಲಭೂತ ಸೌಕರ್ಯ – ಸಿ.ಸಿ ರಸ್ತೆ, ಚರಂಡಿ, ಅಂಗನವಾಡಿ ಕಟ್ಟಡ/ ಕಂಪೌಂಡ್ ವಾಲ್, ಸಮುದಾಯ ಭವನ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಯೋಜನಾ ಇಲಾಖೆಗಳಿಂದ ಅನುಷ್ಠಾನ ಮಾಡಲಾಗುತ್ತದೆ.
2. **ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಕಲಬುರಗಿ)** : ಮಂಡಳಿಯ ವ್ಯಾಪ್ತಿಗೆ ಬರುವ ಎಲ್ಲಾ ಜಿಲ್ಲೆಗಳಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

   1) ಪ.ಜಾತಿ/ಪಂಗಡದ ಕಾಲೋನಿಗಳಿಗೆ ಸಂಪರ್ಕ ರಸ್ತೆ, ಬೀದಿ ದೀಪ, ಶುದ್ಧ ಕುಡಿಯುವ ನೀರಿನ ಘಟಕ, ಒಳಚರಂಡಿ ಇತ್ಯಾದಿ ಸೌಕರ್ಯ ಕಲ್ಪಿಸುವುದು.

   2) ಪ.ಜಾತಿ/ಪಂಗಡದ ವಿದ್ಯಾರ್ಥಿಗಳು ಹೆಚ್ಚಿಗೆ ಇರುವ ಶಾಲೆಗಳಲ್ಲಿ ಹೆಚ್ಚುವರಿ ಕೊಠಡಿ, ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆ ಮತ್ತು ಅಂಗನವಾಡಿ ಕಟ್ಟಡ ನಿರ್ಮಾಣ/ಕಂಪೌಂಡ್ ವಾಲ್.

   3) ಪ.ಜಾತಿ/ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ/ಉಪಕೇಂದ್ರಗಳನ್ನು ಅಭಿವೃದ್ಧಿ ಪಡಿಸುವುದು.
3. **ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ (ಚಿತ್ರದುರ್ಗ):** ಮಂಡಳಿಯ ವ್ಯಾಪ್ತಿಗೆ ಒಳಪಡುವ ಜಿಲ್ಲೆಗಳಲ್ಲಿ ಅಂಗನವಾಡಿ ಮತ್ತು ಶಾಲೆಗಳಿಗೆ ಹೆಚ್ಚುವರಿ ಕೊಠಡಿ ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಕಾಂಕ್ರೀಟ್ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಅನುಷ್ಠಾನ ಮಾಡಲಾಗುತ್ತದೆ.
4. **ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ (ಶಿವಮೊಗ್ಗ):** ಮಂಡಳಿಯ ವ್ಯಾಪ್ತಿಗೆ ಒಳಪಡುವ ಜಿಲ್ಲೆಗಳಲ್ಲಿ ಪ.ಜಾತಿ/ಪ.ಪಂಗಡದ ಜನವಸತಿ ಪ್ರದೇಶಗಳಲ್ಲಿ ರಸ್ತೆ ಮತ್ತು ಸೇತುವೆ, ಬಾಕ್ಸ್ ಚರಂಡಿ, ತೂಗು ಸೇತುವೆ, ಕಾಲು ಸಂಕಗಳ ನಿರ್ಮಾಣ ಕಾಮಗಾರಿಗಳನ್ನು ಅನುಷ್ಠಾನ ಮಾಡಲಾಗುತ್ತದೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

1. **ಸರ್ಕಾರಿ ಖಾಸಗಿ ಸಹಭಾಗಿತ್ವದಲ್ಲಿ ರೋಗ ಪತ್ತೆ ಪರೀಕ್ಷೆ ಹಾಗೂ ಡಯಾಲಿಸೀಸ್ ಚಿಕಿತ್ಸೆಗಳು.**
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ವ್ಯಾಪ್ತಿಯ ಸರ್ಕಾರಿ ಆಸ್ಪತ್ರೆಗಳಲ್ಲಿ ಕೊನೆಯ ಹಂತದ ಮೂತ್ರಪಿಂಡ ವೈಫಲ್ಯದ ರೋಗಿಗಳಿಗೆ ಡಯಾಲಿಸಿಸ್ ಸೇವೆಗಳನ್ನು ಉಚಿತವಾಗಿ ನೀಡಲಾಗುತ್ತದೆ.

2. **ರಾಷ್ಟ್ರೀಯ ಆರೋಗ್ಯ ಅಭಿಯಾನ ಯೋಜನೆ.**
ಸರ್ಕಾರಿ ಆಸ್ಪತ್ರೆಗಳಲ್ಲಿ ಜನನಿ ಸುರಕ್ಷಾ ಯೋಜನೆ, ಜನನಿ ಶಿಶು ಸುರಕ್ಷಾ ಕಾರ್ಯಕ್ರಮ, ರೋಗ ನಿರೋಧಕ ಲಸಿಕಾ ಕಾರ್ಯಕ್ರಮ, ರಾಷ್ಟ್ರೀಯ ಬಾಲ ಸುರಕ್ಷಾ ಕಾರ್ಯಕ್ರಮ, ರಾಷ್ಟ್ರೀಯ ನಗರ ಆರೋಗ್ಯ ಕಾರ್ಯಕ್ರಮ, ಸುವರ್ಣ ಆರೋಗ್ಯ ಚೈತನ್ಯ, ಆರೋಗ್ಯ ಕವಚ ಮತ್ತು ಆರೋಗ್ಯ ಘಟಕಗಳ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತದೆ.

3. **ಇ.ಎಂ.ಆರ್.ಐ. (Establishment of EMRI) ಸ್ಥಾಪನೆ (ಆರೋಗ್ಯ ಕವಚ) ಯೋಜನೆ.**
ಎಲ್ಲಾ ರೀತಿಯ ವೈದ್ಯಕೀಯ ತುರ್ತು ಪರಿಸ್ಥಿತಿಗಳಲ್ಲಿ ಹಾಗೂ ರಸ್ತೆ ಸಂಚಾರ ಅಪಘಾತಕ್ಕೀಡಾದ ಸಂತ್ರಸ್ತರನ್ನು ಆಸ್ಪತ್ರೆಗೆ ಕರೆದೊಯ್ಯಲು ಟೋಲ್ ಫ್ರೀ '108' ಸಂಖ್ಯೆಯ ಸಾರಿಗೆ ಸೌಲಭ್ಯವನ್ನು ಉಚಿತವಾಗಿ ನೀಡಲಾಗುತ್ತದೆ.

4. **ಆಯುಷ್ಮಾನ್ ಭಾರತ – ಪ್ರಧಾನ ಮಂತ್ರಿ ಜನ ಆರೋಗ್ಯ ಯೋಜನೆ**
ಬಿ.ಪಿ.ಎಲ್ ಕಾರ್ಡ್ ಹೊಂದಿರುವ ಪ್ರತಿ ಕುಟುಂಬಕ್ಕೆ ವರ್ಷಕ್ಕೆ ರೂ.5.00 ಲಕ್ಷಗಳು ಮತ್ತು ಎ.ಪಿ.ಎಲ್ ಕಾರ್ಡ್ ಹೊಂದಿರುವ ಪ್ರತಿ ಕುಟುಂಬಕ್ಕೆ ಕಾರ್ಯವಿಧಾನದ ದರಗಳ ಮಿತಿಯನ್ವಯ 30% ನಂತೆ ವರ್ಷಕ್ಕೆ ರೂ.1.50 ಲಕ್ಷಗಳ ಆರ್ಥಿಕ ನೆರವು ನೀಡಲಾಗುವುದು.

5. **ಶುಚಿ ಯೋಜನೆ**
ಎಸ್.ಸಿ/ಎಸ್.ಟಿ ಸೇರಿದಂತೆ ಎಲ್ಲಾ ವರ್ಗಗಳ ಹದಿಹರೆಯದ ಹೆಣ್ಣು ಮಕ್ಕಳು ಋತು ಕಾಲದ ಸಮಯದಲ್ಲಿ ಉತ್ತಮ ಶುಚಿತ್ವ ಹಾಗೂ ಆರೋಗ್ಯವನ್ನು ಕಾಪಾಡಿಕೊಳ್ಳುವ ಸ್ಯಾನಿಟರಿ ನ್ಯಾಪ್ಕಿನ್‌ಗಳನ್ನು ಉಚಿತವಾಗಿ ಪೂರೈಸುವುದು.

6. **ಉಚಿತ ಕಾಕ್ಲಿಯರ್ ಇಂಪ್ಲಾಂಟ್ ಶಸ್ತ್ರ ಚಿಕಿತ್ಸೆ.**
ಕಿವುಡು ನಿವಾರಣೆಗೆ ಸಂಬಂಧಿಸಿದಂತೆ ಉಚಿತ ಕಾಕ್ಲಿಯರ್ ಇಂಪ್ಲಾಂಟ್ ಶಸ್ತ್ರ ಚಿಕಿತ್ಸೆ ಮಾಡಲಾಗುವುದು.

## ವೈದ್ಯಕೀಯ ಶಿಕ್ಷಣ ಇಲಾಖೆ

1. **ವೈದ್ಯಕೀಯ ಶಿಕ್ಷಣ ಇಲಾಖೆ**
ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ವೈದ್ಯಕೀಯ ಕಾಲೇಜುಗಳಲ್ಲಿ ಮತ್ತು ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳಲ್ಲಿ ಪ.ಜಾತಿ/ಪ.ಪಂಗಡದ ರೋಗಿಗಳಿಗೆ ಉಚಿತ ಚಿಕಿತ್ಸೆಯನ್ನು ನೀಡಲಾಗುವುದು.

2. **ಎಂ.ಬಿ.ಬಿ.ಎಸ್/ಎಂ.ಡಿ/ಎಂ.ಎಸ್ ವೈದ್ಯಕೀಯ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳು:**
   - ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿನ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ ಮೇಲ್ಪಟ್ಟು ರೂ.10.00 ಲಕ್ಷದೊಳಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 100% ಶುಲ್ಕ ಮರುಪಾವತಿ.
   - ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವಾರ್ಷಿಕ ಕುಟುಂಬ ಆದಾಯ ರೂ.5.00 ಲಕ್ಷದೊಳಗಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳ ವಿತರಣೆ.
   - ವೈದ್ಯಕೀಯ ಉಪಕರಣ (Stethoscope, apron, emergency light, BP apparetus, mask, gloves) ಮತ್ತು ವೈದ್ಯಕೀಯ ಪುಸ್ತಕಗಳ ವಿತರಣೆ.
   - ವಿದ್ಯಾರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
   - ಬೇರೆ ರಾಜ್ಯಗಳಿಂದ ಕರ್ನಾಟಕದಲ್ಲಿನ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಪಡೆದವರು ಮೇಲ್ಕಂಡ ಸೌಲಭ್ಯಗಳಿಗೆ ಅರ್ಹರಲ್ಲ. ಅಂತಹ ವಿದ್ಯಾರ್ಥಿಗಳು ಆಯಾ ರಾಜ್ಯಗಳಿಂದ ವಿದ್ಯಾರ್ಥಿವೇತನ ಸೌಲಭ್ಯ ಪಡೆಯಬಹುದಾಗಿದೆ.

3. ಆಯುಷ್ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳು (ಆಯುರ್ವೇದ, ಹೋಮಿಯೋಪತಿ, ಯುನಾನಿ, ಸಿದ್ಧ)

- ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿನ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ ಮೇಲ್ಪಟ್ಟು ರೂ.10.00 ಲಕ್ಷದೊಳಗಿನ ವಿದ್ಯಾರ್ಥಿಗಳಿಗೆ 100% ಶುಲ್ಕ ಮರುಪಾವತಿ.
- ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವಾರ್ಷಿಕ ಕುಟುಂಬ ಆದಾಯ ರೂ.5.00 ಲಕ್ಷದೊಳಗಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ವಿತರಿಸಲಾಗುವುದು.
- ವೈದ್ಯಕೀಯ ಉಪಕರಣ ಮತ್ತು ವೈದ್ಯಕೀಯ ಪುಸ್ತಕಗಳ ವಿತರಣೆ.
- ವಿದ್ಯಾರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
- ಬೇರೆ ರಾಜ್ಯಗಳಿಂದ ಕರ್ನಾಟಕದಲ್ಲಿನ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಪಡೆದವರು ಮೇಲ್ಕಂಡ ಸೌಲಭ್ಯಗಳಿಗೆ ಅರ್ಹರಲ್ಲ. ಅಂತಹ ವಿದ್ಯಾರ್ಥಿಗಳು ಆಯಾ ರಾಜ್ಯಗಳಿಂದ ವಿದ್ಯಾರ್ಥಿವೇತನ ಸೌಲಭ್ಯ ಪಡೆಯಬಹುದಾಗಿದೆ.

## ಉನ್ನತ ಶಿಕ್ಷಣ ಇಲಾಖೆ

**1. ವಿಶ್ವವಿದ್ಯಾಲಯಗಳಲ್ಲಿ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಒದಗಿಸುತ್ತಿರುವ ಸೌಲಭ್ಯಗಳು.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/– ಶಿಷ್ಯವೇತನ ನೀಡುವುದು (ವಿಶ್ವವಿದ್ಯಾಲಯ / ಸ್ನಾತಕೋತ್ತರ ಕೇಂದ್ರ / ಸಂಯೋಜಿತ ಇತ್ಯಾದಿ ಕಾಲೇಜುಗಳಲ್ಲಿ ಪಿ.ಹೆಚ್.ಡಿ ಗೆ ಆಯ್ಕೆ ಮಾಡಿದ ವಿದ್ಯಾರ್ಥಿಗಳಿಗೆ)
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಆದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ನೀಡುವುದು.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

**2. ವಿದ್ಯಾರ್ಥಿನಿಯರಿಗೆ ಪೂರ್ಣ ಶುಲ್ಕ ಮರುಪಾವತಿ.**

- ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪದವಿ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿನಿಯರಿಗೆ ಪೂರ್ಣ ಶುಲ್ಕ ಮರುಪಾವತಿಸುವುದು.
- ಉನ್ನತ ಶಿಕ್ಷಣ ಇಲಾಖೆಯಿಂದ ಶುಲ್ಕ ವಿನಾಯಿತಿ ಪಡೆಯುತ್ತಿರುವ ವಿದ್ಯಾರ್ಥಿನಿಯರು ಸಮಾಜ ಕಲ್ಯಾಣ ಇಲಾಖೆಯಡಿ ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.

**3. ಇಂಜಿನಿಯರಿಂಗ್ ಮತ್ತು ಪಾಲಿಟೆಕ್ನಿಕ್ ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ.**

- ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ಎಸ್.ಸಿ./ಎಸ್.ಟಿ ವಿದ್ಯಾರ್ಥಿಗಳಿಗೆ ಇಂಜಿನಿಯರಿಂಗ್ (UG & PG) ಮತ್ತು ಪಾಲಿಟೆಕ್ನಿಕ್ ಕೋರ್ಸ್‌ಗಳಲ್ಲಿ ಸರ್ಕಾರ ನಿಗದಿಪಡಿಸಿದ 100% ಶುಲ್ಕ ಮರುಪಾವತಿ (ಸಿ.ಇ.ಟಿ & ಕಾಮೆಡ್–ಕೆ ಯಿಂದ ಆಯ್ಕೆಯಾದವರಿಗೆ).

## ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಇಲಾಖೆ

1. ಆರ್.ಟಿ.ಇ **(Right to Education Act.)** ಕಾಯ್ದೆ ಅಡಿ ವಿದ್ಯಾರ್ಥಿಗಳಿಗೆ ಖಾಸಗಿ ಶಾಲೆಗಳ ಶುಲ್ಕ ಮರುಪಾವತಿ: ಪ್ರಾಥಮಿಕ/ಪ್ರೌಢ ಶಾಲೆಗಳಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ 1 ರಿಂದ 8ನೇ ತರಗತಿವರೆಗೆ ತಗಲುವ ಬೋಧನಾ ಶುಲ್ಕವನ್ನು ಸರ್ಕಾರದಿಂದ ಭರಿಸಲಾಗುವುದು. (ಸರ್ಕಾರಿ ಶಾಲೆಗಳು ಇಲ್ಲದೇ ಇರುವ ಪ್ರದೇಶಗಳಲ್ಲಿ ಮಾತ್ರ)

2. **ವಿದ್ಯಾ ವಿಕಾಸ ಯೋಜನೆ :** ಪಠ್ಯ–ಪುಸ್ತಕ ಮತ್ತು ಸಮವಸ್ತ್ರ ವಿತರಣೆ – ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಈ ಯೋಜನೆಗೆ ಒಳಪಡುತ್ತಾರೆ.

3. **ಮಧ್ಯಾಹ್ನದ ಬಿಸಿ ಊಟ ಮತ್ತು ಕ್ಷೀರ ಭಾಗ್ಯ ಯೋಜನೆ :** ಈ ಯೋಜನೆಯು ಸರ್ಕಾರಿ ಮತ್ತು ಅನುದಾನಿತ ಶಾಲೆಯ 1 ರಿಂದ 10ನೇ ತರಗತಿಯ ಮಕ್ಕಳಿಗೆ ಎಲ್ಲಾ ಕೆಲಸದ ದಿನಗಳಲ್ಲಿ ಮಧ್ಯಾಹ್ನದ ಬಿಸಿ ಊಟವನ್ನು ಹಾಗೂ ಕ್ಷೀರ ಭಾಗ್ಯ ಯೋಜನೆಯಡಿ ವಾರದಲ್ಲಿ ಐದು ದಿನಗಳವರೆಗೆ ವಿದ್ಯಾರ್ಥಿಗಳಿಗೆ ಹಾಲನ್ನು ಸಹ ನೀಡಲಾಗುವುದು.

4. **ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ :** ಈ ಯೋಜನೆಯಡಿಯಲ್ಲಿ ಸರ್ಕಾರಿ ಮತ್ತು ಸರ್ಕಾರೇತರ ಶಾಲೆಗಳಲ್ಲಿ 6 ರಿಂದ 10ನೇ ತರಗತಿಯಲ್ಲಿ ಓದುತ್ತಿರುವ ಎಸ್.ಸಿ/ಎಸ್.ಟಿ ಬಾಲಕರು ಮತ್ತು ಬಾಲಕಿಯರಿಗೆ ಶುಲ್ಕವನ್ನು (ಪರೀಕ್ಷಾ ಶುಲ್ಕ ಸೇರಿ) ಮರುಪಾವತಿಸಲಾಗುತ್ತದೆ.

5. **ಪದವಿ ಪೂರ್ವ ಶಿಕ್ಷಣ :** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಓದುತ್ತಿರುವ ದ್ವಿತೀಯ ಪಿ.ಯು.ಸಿ ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ವಿಶ್ವಾಸ ಕಿರಣ ಕಾರ್ಯಕ್ರಮದಡಿ ಇಂಗ್ಲಿಷ್ ಗ್ರಾಮರ್/ ಸಂವಹನ ತರಗತಿಗಳನ್ನು ನಡೆಸುವುದು.

   ದ್ವಿತೀಯ ಪದವಿ ಪೂರ್ವ ವಾರ್ಷಿಕ ಪರೀಕ್ಷೆಯಲ್ಲಿ ಕಲಾ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗದಲ್ಲಿ ಅತಿ ಹೆಚ್ಚಿನ ಅಂಕಗಳಿಸುವ ತಲಾ 5 ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

1. **ಭಾಗ್ಯಲಕ್ಷ್ಮಿ ಯೋಜನೆ :** ಭಾಗ್ಯಲಕ್ಷ್ಮಿ– ಸುಕನ್ಯಾ ಸಮೃದ್ಧಿ ಖಾತೆ ಯೋಜನೆಯಡಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕುಟುಂಬದ ಎರಡು ಹೆಣ್ಣು ಮಕ್ಕಳಿಗೆ ಸೀಮಿತಗೊಳಿಸಿ ವಾರ್ಷಿಕ ತಲಾ ರೂ.3,000/– ದಂತೆ 15 ವರ್ಷಗಳವರೆಗೆ ಪ್ರೀಮಿಯಂ ತುಂಬುವುದು. (ಮರುಪಾವತಿಯ ಮೊತ್ತ ರೂ.1.27 ಲಕ್ಷ).

2. **ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ :** ಗರ್ಭಿಣಿ /ಬಾಣಂತಿ ಮಹಿಳೆಯರಿಗೆ ರೂ.5000/– ಗಳ ಸಹಾಯಧನವನ್ನು ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ಫಲಾನುಭವಿಯ ಖಾತೆಗೆ ವರ್ಗಾಯಿಸಲಾಗುತ್ತದೆ

3. **ಸ್ತ್ರೀ ಶಕ್ತಿ ಯೋಜನೆ :**
   - ಅರ್ಹ ಸ್ತ್ರೀ ಶಕ್ತಿ ಗುಂಪಿಗೆ ಪ್ರತೀ ವರ್ಷ ರೂ.5,000/– ದಂತೆ 5 ವರ್ಷಗಳಿಗೆ ರೂ. 25,000/– ಸುತ್ತು ನಿಧಿ.
   - ಸ್ತ್ರೀ ಶಕ್ತಿ ಗುಂಪುಗಳಿಗೆ ಆದಾಯ ಹೆಚ್ಚಿಸುವ ಚಟುವಟಿಕೆಗಾಗಿ ಉಳಿತಾಯ ರೂ. 75,000/– ದಿಂದ 1.00 ಲಕ್ಷ ಇದ್ದಲ್ಲಿ ರೂ. 15,000/– ಪ್ರೋತ್ಸಾಹಧನ.
   - ರೂ. 1.00 ಲಕ್ಷಕ್ಕಿಂತ ಹೆಚ್ಚು ಉಳಿತಾಯ ಇದ್ದಲ್ಲಿ ರೂ. 20,000/– ಪ್ರೋತ್ಸಾಹಧನ.

4. **ಐ.ಸಿ.ಡಿ.ಎಸ್.– ರಾಷ್ಟ್ರೀಯ ಪೌಷ್ಟಿಕ ಆಹಾರ ಯೋಜನೆ**
   - 6 ತಿಂಗಳಿಂದ 6 ವರ್ಷದ ಮಕ್ಕಳಿಗೆ ಸಾಮಾನ್ಯ ಮಕ್ಕಳು: ಪ್ರತಿ ಮಗುವಿಗೆ ದಿನಕ್ಕೆ ರೂ.8.00 ಘಟಕ ವೆಚ್ಚದಲ್ಲಿ 300 ದಿನ ಪೌಷ್ಟಿಕ ಆಹಾರ.
   - ಗರ್ಭಿಣಿ/ಬಾಣಂತಿ/ಅಂಗನವಾಡಿ ಕಾರ್ಯಕರ್ತೆ/ ಅಂಗನವಾಡಿ ಸಹಾಯಕಿಯರು – ಪ್ರತಿ ಫಲಾನುಭವಿಗೆ ರೂ.9.50 ರಂತೆ 300 ದಿನಗಳಿಗೆ ಪೌಷ್ಟಿಕ ಆಹಾರ
   - 6 ತಿಂಗಳಿಂದ 6 ವರ್ಷದ ತೀವ್ರ ಅಪೌಷ್ಟಿಕ ಮಕ್ಕಳು – ಪ್ರತಿ ಫಲಾನುಭವಿಗೆ ರೂ.12 ರಂತೆ 300 ದಿನಗಳಿಗೆ

- 6 ತಿಂಗಳಿಂದ ರಿಂದ 3 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳು/6 ಜಿಲ್ಲೆಗಳ (ರಾಯಚೂರು, ಬೀದರ್, ಕಲಬುರಗಿ, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ) ಸಾಧಾರಣ ಅಪೌಷ್ಠಿಕ ಮಕ್ಕಳು : ಪ್ರತಿ ಮಗುವಿಗೆ ವಾರದಲ್ಲಿ 5 ದಿನ ಹಾಲು ಮತ್ತು 3 ದಿನ ಮೊಟ್ಟೆ ವಿತರಣೆ (150 ದಿನ)
- 3 ವರ್ಷದಿಂದ 6 ವರ್ಷದ ತೀವ್ರ/6 ಜಿಲ್ಲೆಗಳ (ರಾಯಚೂರು, ಬೀದರ್, ಕಲಬುರಗಿ, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ) ಸಾಧಾರಣ ಅಪೌಷ್ಠಿಕ ಮಕ್ಕಳು: ಪ್ರತಿ ಮಗುವಿಗೆ ವಾರದಲ್ಲಿ 5 ದಿನ ಮೊಟ್ಟೆ ಮತ್ತು 5 ದಿನ ಹಾಲು ವಿತರಣೆ (250 ದಿನ)
- 6 ತಿಂಗಳಿಂದ 6 ವರ್ಷದ ಎಲ್ಲಾ ಪ.ಜಾತಿ/ಪ.ಪಂಗಡದ ಮಕ್ಕಳಿಗೆ ವಾರದಲ್ಲಿ 5 ದಿನ ಹಾಲು (250 ದಿನ)
- 3 ವರ್ಷಗಳಿಂದ 6 ವರ್ಷದ ಎಲ್ಲಾ ಪ.ಜಾತಿ/ಪ.ಪಂಗಡದ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆ (100 ದಿನ)
- ಮಾತೃ ಪೂರ್ಣ ಯೋಜನೆಯಡಿ ಗರ್ಭಿಣಿ/ಬಾಣಂತಿ/ ಅಂಗನವಾಡಿ ಕಾರ್ಯಕರ್ತೆ/ ಅಂಗನವಾಡಿ ಸಹಾಯಕಿಯರು:
- ರಾಜ್ಯ ಸರ್ಕಾರದ ಹೆಚ್ಚುವರಿ ಅನುದಾನ – ಪ್ರತಿ ಫಲಾನುಭವಿಗೆ ರೂ.11.50 ರಂತೆ 300 ದಿನಗಳಿಗೆ.

## ಮಹಿಳಾ ಅಭಿವೃದ್ಧಿ ನಿಗಮ :

1. **ಚೇತನ (ಲೈಂಗಿಕ ಕಾರ್ಯಕರ್ತೆಯರಿಗೆ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮ) :**
   - ವಯೋಮಿತಿ – 18 ವರ್ಷ.
   - ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅನುಮೋದಿತ ಯಾವುದಾದರೂ ಸಮುದಾಯ ಸಂಸ್ಥೆಗಳಲ್ಲಿ ಅರ್ಜಿದಾರರು ಹೆಸರನ್ನು ನೋಂದಾಯಿಸಿರಬೇಕು.
   - ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು.
   - ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು.
   - ಸಹಾಯಧನದ ಮೊತ್ತ – ರೂ 30,000/-

2. **ದೇವದಾಸಿಯರಿಗೆ ಆರ್ಥಿಕ ಚಟುವಟಿಕೆಗಳಿಗೆ ಸಹಾಯಧನ:**
   - 1993-94 ಮತ್ತು 2007-08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು.
   - ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು.
   - ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು
   - ಸಹಾಯಧನದ ಮೊತ್ತ – ರೂ. 30,000/-

3. **ಉದ್ಯಮಶೀಲತಾ ತರಬೇತಿ ಕಾರ್ಯಕ್ರಮ :**
   - ವಯೋಮಿತಿ – 18 ರಿಂದ 45 ವರ್ಷ.
   - ಆರ್ಥಿಕವಾಗಿ ಹಿಂದುಳಿದ, ವಿಧವೆ, ನಿರಾಶ್ರಿತ, ವಿಕಲ ಚೇತನ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಉದ್ಯಮಶೀಲತಾ ತರಬೇತಿ ನೀಡಲಾಗುವುದು.
   - ಕೌಶಲ್ಯಾಭಿವೃದ್ಧಿ ತರಬೇತಿ ಇಲಾಖೆಯಿಂದ ಮಾನ್ಯತೆ ಹೊಂದಿರುವ ತರಬೇತಿ ಸಂಸ್ಥೆಗಳ ಮೂಲಕ ತರಬೇತಿ ನೀಡಲಾಗುವುದು.

4. **ಉದ್ಯೋಗಿನಿ :**
   - ವಯೋಮಿತಿ – 18 ರಿಂದ 55 ವರ್ಷ
   - ವಾರ್ಷಿಕ ಆದಾಯ ಮಿತಿ – ರೂ 2.00 ಲಕ್ಷ
   - ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು
   - ಶಾಸಕರ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು

- ಸಹಾಯಧನ ಮತ್ತು ಸಾಲ ಬಿಡುಗಡೆಯ ಪೂರ್ವದಲ್ಲಿ ಉದ್ಯಮಶೀಲತಾ ತರಬೇತಿಯನ್ನು ಪಡೆದಿರಬೇಕು
- ನಿಗಮದಿಂದ 50% ಸಹಾಯಧನ ಮತ್ತು ಬ್ಯಾಂಕ್‌ಗಳ ಮೂಲಕ 50% ಸಾಲ

5. **ದೇವದಾಸಿಯರಿಗೆ ವಸತಿ ಸೌಲಭ್ಯ :**
   - ವಯೋಮಿತಿ – 45 ಮತ್ತು 45ಕ್ಕಿಂತ ಹೆಚ್ಚು
   - 1993–94 ಮತ್ತು 2007–08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು
   - ನಿವೇಶನ ಹೊಂದಿರುವ ವಸತಿ ರಹಿತ ದೇವದಾಸಿಯರಿಗೆ ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ವಸತಿ ಸೌಲಭ್ಯ ಒದಗಿಸಲಾಗುತ್ತದೆ.
   - ಘಟಕ ಸಹಾಯಧನ ಗ್ರಾಮೀಣ ಪ್ರದೇಶದಲ್ಲಿ ರೂ.1.75 ಲಕ್ಷ ಮತ್ತು ನಗರ ಪ್ರದೇಶದಲ್ಲಿ ರೂ.2.00 ಲಕ್ಷ.

6. **ಸ್ವಸಹಾಯ ಸಂಘಗಳಿಗೆ ಕಿರು ಸಾಲ ಯೋಜನೆ**
   - ಸ್ತ್ರೀ ಶಕ್ತಿ / ಸ್ವಸಹಾಯ ಗುಂಪುಗಳು ಸಣ್ಣ ಉದ್ದಿಮೆ ಅಥವಾ ಉತ್ಪಾದನಾ ಘಟಕಗಳನ್ನು ಸ್ಥಾಪಿಸಿ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆ ಹೊಂದಲು ಬಡ್ಡಿರಹಿತ ಸಾಲ.
   - ಸಾಲದ ಮೊತ್ತ ರೂ.1.00 ಲಕ್ಷ ರಿಂದ ರೂ.3.00 ಲಕ್ಷವನ್ನು ಒದಗಿಸಲಾಗುವುದು.

## ವಿಕಲಚೇತನರ ಕಲ್ಯಾಣ ಇಲಾಖೆ

1. **ದೈಹಿಕ ಮತ್ತು ಮಾನಸಿಕವಾಗಿ ಸವಾಲಿಗೊಳಗಾದವರ ಕಲ್ಯಾಣ**
   ಆಧಾರ ಯೋಜನೆ, ವಿವಾಹ ಪ್ರೋತ್ಸಾಹಧನ ಯೋಜನೆ, ನಿರಾಮಯ, ಶುಲ್ಕ ಮರುಪಾವತಿ, ವೈದ್ಯಕೀಯ ಪರಿಹಾರ ನಿಧಿ ಯೋಜನೆ, ಪ್ರತಿಭೆ, ಶಿಶು ಪಾಲನಾ ಭತ್ಯೆ ಯೋಜನೆಗಳಡಿ ಧನಸಹಾಯ ಮಾಡುವುದು.

2. **ವಿಕಲಚೇತನರಿಗೆ ಸಾಧನ ಮತ್ತು ಸಲಕರಣೆಗಳು**
   ವಿಕಲಚೇತನರಿಗೆ ಸಾಧನ ಸಲಕರಣೆ, ಎಸ್.ಎಸ್.ಎಲ್.ಸಿ ಹಾಗೂ ನಂತರ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಹಾಗೂ ತೀವ್ರತೆರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನ ನೀಡುವುದು.

3. **ಹಿರಿಯ ನಾಗರಿಕರ ನೀತಿ**
   ಪ.ಜಾತಿ / ಪ.ಪಂಗಡದ ಹಿರಿಯ ನಾಗರಿಕರ ಸಹಾಯವಾಣಿ ಹಾಗೂ ಹಗಲು ಯೋಗಕ್ಷೇಮ ಕೇಂದ್ರಗಳ ಅನುಷ್ಠಾನ.

4. **ವಿಶೇಷ ಶಾಲೆಗಳಿಗೆ ಆರ್ಥಿಕ ನೆರವು**
   ಪ.ಜಾತಿ/ಪ.ಪಂಗಡದ ವಿಕಲಚೇತನರ ಮಕ್ಕಳಿಗೆ ವಿಶೇಷ ಶಾಲೆ ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ ಸಹಾಯಧನ.

## ಕೌಶಲ್ಯಾಭಿವೃದ್ಧಿ ಇಲಾಖೆ

1) **ಕೌಶಲ್ಯಾಭಿವೃದ್ಧಿ ಮಿಷನ್ :**
ಮುಖ್ಯಮಂತ್ರಿ ಕೌಶಲ್ಯ ಕರ್ನಾಟಕ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ನಿರುದ್ಯೋಗಿಗಳಿಗೆ ಉಚಿತವಾಗಿ ಕೌಶಲ್ಯ ಅಭಿವೃದ್ಧಿ ತರಬೇತಿ ನೀಡಲಾಗುವುದು.

2) **ಐ.ಟಿ.ಐ ವಿದ್ಯಾರ್ಥಿಗಳಿಗೆ ಟೂಲ್‌ಕಿಟ್ ವಿತರಣೆ :**
ಐ.ಟಿ.ಐ ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಟೂಲ್‌ಕಿಟ್, ಲೇಖನ ಸಾಮಗ್ರಿ ವಿತರಣೆ.

3) **ಇ.ಡಿ.ಪಿ ತರಬೇತಿ :**
ಪ.ಜಾತಿ/ ಪ.ಪಂಗಡದ ಅಭ್ಯರ್ಥಿಗಳಿಗೆ ಉದ್ಯಮಶೀಲತಾ ತರಬೇತಿ ನೀಡಲಾಗುತ್ತದೆ. (ಇ.ಡಿ.ಪಿ)

ಅರ್ಹತೆಗಳು :

18 ರಿಂದ 35 ವಯೋಮಿತಿಯ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ನಿರುದ್ಯೋಗಿಗಳು ಆನ್‌ಲೈನ್ ಮುಖಾಂತರ ಸದರಿ ಇಲಾಖೆಯ ಅಧಿಸೂಚನೆಯಂತೆ ಅರ್ಜಿ ಸಲ್ಲಿಸಿ ವಿವಿಧ ತರಬೇತಿ ಕಾರ್ಯಕ್ರಮಗಳಲ್ಲಿ ತರಬೇತಿ ಪಡೆಯಬಹುದು.

4) ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ

- ನಗರ ಪ್ರದೇಶಗಳಲ್ಲಿ ಪ.ಜಾತಿ/ಪ.ಪಂಗಡದ ಅಭ್ಯರ್ಥಿಗಳಿಗೆ
- Social Mobilization & Institution Development (SM&ID),
- Employment through Skill Training and Placement (EST&P),
- Capacity Building and Training (CB&T)
- Scheme of shelter for Urban Homeless (SUH)
- Support to Urban Street Vendors (SUSV)
- Self Employment Programme(SEP, )
- Information, Education and Communication (IEC) ರಡಿ ಸ್ವ-ಸಹಾಯ ಯೋಜನೆಯನ್ನು ರೂಪಿಸಿ ಅನುಷ್ಠಾನ ಮಾಡಲಾಗುವುದು.
- ಸಾಲದ ಮೊತ್ತ – ಬ್ಯಾಂಕ್‌ಗಳಿಂದ ಪ್ರತಿ ಸ್ವಸಹಾಯ ಸಂಘಕ್ಕೆ ರೂ.1.00 ಲಕ್ಷದವರೆಗೆ ಸಾಲ ಪಡೆಯಲು ಅವಕಾಶವಿದೆ.
- ಬಡ್ಡಿ ಸಹಾಯಧನ – ಸ್ವಸಹಾಯ ಗುಂಪುಗಳು ಬಡ್ಡಿದರದಲ್ಲಿ 7% ವರೆಗೆ ಭರಿಸಬೇಕಾಗಿದೆ. 7% ಕ್ಕಿಂತ ಮೇಲ್ಪಟ್ಟ ಬಡ್ಡಿದರದ ಮೊತ್ತಕ್ಕೆ ಸಹಾಯಧನ ನೀಡಲಾಗುವುದು. ನಿಯಮಿತವಾಗಿ ಸಾಲವನ್ನು ಮರುಪಾವತಿಸುವ ಸ್ವಸಹಾಯ ಸಂಘಗಳಿಗೆ 3% ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನವನ್ನು ನೀಡಲಾಗುವುದು.
- ಸುತ್ತು ನಿಧಿ – ಪ್ರತಿ ಸ್ವಸಹಾಯ ಸಂಘಕ್ಕೆ ರಚನೆಯಾದ 3 ತಿಂಗಳ ನಂತರ ರೂ.10,000/– ಆವರ್ತಕ ನಿಧಿಯನ್ನು ನೀಡಲಾಗುತ್ತಿದೆ.
- ಸಂಘಗಳು ಬ್ಯಾಂಕಿನಿಂದ ಸಾಲ ಸೌಲಭ್ಯ ಈ ಕೆಳಕಂಡಂತಿದೆ.
  - ➢ ವೈಯಕ್ತಿಕ ಕಿರು ಉದ್ದಿಮೆ – ರೂ. 2.00 ಲಕ್ಷದವರೆಗೆ
  - ➢ ಗುಂಪು ಕಿರು ಉದ್ದಿಮೆ – ರೂ. 10.00 ಲಕ್ಷದವರೆಗೆ
  - ➢ ಬಡ್ಡಿ ಸಹಾಯಧನ – ಸ್ವಸಹಾಯ ಗುಂಪುಗಳು ಬಡ್ಡಿದರದಲ್ಲಿ 7% ವರೆಗೆ ಭರಿಸಬೇಕಾಗಿದೆ. 7% ಕ್ಕಿಂತ ಮೇಲ್ಪಟ್ಟ ಬಡ್ಡಿದರದ ಮೊತ್ತಕ್ಕೆ ಸಹಾಯಧನ ನೀಡಲಾಗುವುದು. ನಿಯಮಿತವಾಗಿ ಸಾಲವನ್ನು ಮರುಪಾವತಿಸುವ ಸ್ವಸಹಾಯ ಸಂಘಗಳಿಗೆ 3% ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನವನ್ನು ನೀಡಲಾಗುವುದು.

5) ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ:

- ಗ್ರಾಮೀಣ ಭಾಗದ ಸ್ವಸಹಾಯ ಗುಂಪುಗಳಿಗೆ ಕಮ್ಯುನಿಟಿ ಇನ್‌ವೆಸ್ಟ್‌ಮೆಂಟ್ ಫಂಡ್ ಹಾಗೂ ರಿವಾಲ್‌ವಿಂಗ್ ಫಂಡ್ ಒದಗಿಸುವುದು.
- ಸ್ವಸಹಾಯ ಗುಂಪುಗಳಿಗೆ ರೂ.1.25 ಲಕ್ಷ ಸಾಲ, ರೂ.15000/– ಸಹಾಯಧನ, ರೂ. 15000/– ಸುತ್ತು ನಿಧಿಯನ್ನು ಒದಗಿಸಲಾಗುತ್ತದೆ.

## ಕೈಮಗ್ಗ ಮತ್ತು ಜವಳಿ ಇಲಾಖೆ

1) ನೇಕಾರರ ಪ್ಯಾಕೇಜ್

ಅ) ಕೈಮಗ್ಗ /ವಿದ್ಯುತ್ ಮಗ್ಗ ಮತ್ತು ಎಲೆಕ್ಟ್ರಾನಿಕ್ ಜಕಾರ್ಡ್‌ಗಳ ಖರೀದಿಗೆ ಸಹಾಯಧನ :

- ಕೈಮಗ್ಗ /ವಿದ್ಯುತ್ ಮಗ್ಗದ ತರಬೇತಿ ಹೊಂದಿದವರು / ಸಾಂಪ್ರದಾಯಿಕ ನೇಕಾರರಾಗಿರಬೇಕು
- ವೈಯಕ್ತಿಕ ಫಲಾನುಭವಿಗಳಿಗೆ ಸಹಾಯಧನ ಸೌಲಭ್ಯ ಒದಗಿಸಲಾಗುವುದು.
- ಮಗ್ಗಗಳನ್ನು ಸ್ಥಾಪಿಸಲು ಸ್ಥಳಾವಕಾಶ ಹೊಂದಿರಬೇಕು.
- ಸಹಾಯಧನದ ಮೊತ್ತ.

| | |
|---|---|
| ಕೈಮಗ್ಗಗಳಿಗೆ | – 90% ಅಥವಾ ಗರಿಷ್ಟ ರೂ 27,000/– ಸಹಾಯಧನ |
| ವಿದ್ಯುತ್ ಮಗ್ಗಗಳಿಗೆ (2 ಮಗ್ಗಗಳಿಗೆ ಮಾತ್ರ) | – 90% ಅಥವಾ ಗರಿಷ್ಟ ರೂ 2,70,000/– ಸಹಾಯಧನ |
| ಎಲೆಕ್ಟ್ರಾನಿಕ್ ಜಕಾರ್ಡ್‌ಗಳಿಗೆ | – 90% ಅಥವಾ ಗರಿಷ್ಟ ರೂ 4,05,000/– ಸಹಾಯಧನ |

**ಆ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನೇಕಾರರ ಸಂಘಗಳಿಗೆ ಮಗ್ಗ ಪೂರ್ವ ಸೌಲಭ್ಯ :** ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನೇಕಾರರ ಸಂಘಗಳಿಗೆ ಮಗ್ಗಗಳ ಸ್ಥಾಪನೆಗೆ ಬೇಕಾದ ವೈಂಡಿಂಗ್, ವಾರ್ಪಿಂಗ್, ಟ್ವಿಸ್ಟಿಂಗ್ ಮತ್ತು ಡೈಯಿಂಗ್ ಉಪಕರಣಗಳ ಖರೀದಿಗೆ ಗರಿಷ್ಠ ರೂ.6,00,000/- ಸಹಾಯಧನ ನೀಡಲಾಗುವುದು.

**2) ಸಣ್ಣ ಮತ್ತು ಅತೀ ಸಣ್ಣ ಜವಳಿ ಘಟಕಗಳ ಸ್ಥಾಪನೆಗೆ ಸಹಾಯಧನ.**

- ಬಂಡವಾಳ ಸಹಾಯಧನ – 75%
- ಬಡ್ಡಿ ಸಹಾಯಧನ – 15%
- ಎಸ್.ಎಂ.ಇ ಜವಳಿ/ಸಿದ್ಧ ಉಡುಪು ಘಟಕಗಳಿಗೆ ಬಂಡವಾಳ (ಸ್ಥಿರಾಸ್ಥಿ) ಹೂಡಿಕೆ ಮೊತ್ತದಲ್ಲಿ (ನಿವೇಶನ ವೆಚ್ಚ ಹೊರತುಪಡಿಸಿ) 75% ರಂತೆ ಬಂಡವಾಳ ಸಹಾಯಧನ ಅಥವಾ ಗರಿಷ್ಠ ರೂ.2.00 ಕೋಟಿವರೆಗೆ ಯಾವುದು ಕಡಿಮೆ ಅದನ್ನು ನೀಡುವುದು.
- ಕೆ.ಎಸ್.ಎಫ್.ಸಿ. ಮತ್ತು ಬ್ಯಾಂಕ್‌ಗಳಿಂದ 4% ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಸಾಲ ಪಡೆದ ಘಟಕಗಳಿಗೆ ಕೈಮಗ್ಗ ಮತ್ತು ಜವಳಿ ಇಲಾಖೆಯಿಂದ ಬಡ್ಡಿ ಸಹಾಯಧನ ನೀಡತಕ್ಕದ್ದಲ್ಲ. ಇತರೆ ಪ್ರಕರಣಗಳಲ್ಲಿ ಬಡ್ಡಿ ಸಹಾಯಧನ ನೀಡಬಹುದು.

**3) ತರಬೇತಿ ಕಾರ್ಯಕ್ರಮಗಳು**

| ವಿವರ | ಅಡ್ವಾನ್ಸ್‌ಡ್ ಸೀವಿಂಗ್ ಮೆಷಿನ್ ಆಪರೇಟರ್ ತರಬೇತಿ / ಕೈಮಗ್ಗ ಮತ್ತು ವಿದ್ಯುತ್ ತರಬೇತಿಗಳ ನೇಯ್ಗೆ ತರಬೇತಿ | ಬೊಟಿಕ್ ತರಬೇತಿ |
|---|---|---|
| ವಿದ್ಯಾರ್ಹತೆ | 5ನೇ ತರಗತಿ ಉತ್ತೀರ್ಣ | 10ನೇ ತರಗತಿ ಉತ್ತೀರ್ಣ |
| ವಯೋಮಿತಿ | 18 ರಿಂದ 35 ವರ್ಷ | 18 ರಿಂದ 35 ವರ್ಷ |
| ತರಬೇತಿ ಅವಧಿ | 45 ದಿನ | 45 ದಿನಗಳು |
| ಶಿಷ್ಯ ವೇತನ | ರೂ 3,500/- | ರೂ 3,500/- |
| ಕಚ್ಚಾ ಮಾಲು ವೆಚ್ಚ | ರೂ 1,000/- | ರೂ. 4,500/- |
| ಸಂಸ್ಥೆಯ ನಿರ್ವಹಣೆ ವೆಚ್ಚ | ರೂ 5,000/- (ಎಸ್‌ಡಿಸಿ) ರೂ 6,500/- ಖಾಸಗಿ | ರೂ. 7,500/- (ಎಸ್‌ಡಿಸಿ) |
| ಒಟ್ಟು ಒಬ್ಬ ಅಭ್ಯರ್ಥಿಗೆ ತಗಲುವ ವೆಚ್ಚ | ರೂ 9500/- (ಎಸ್‌ಡಿಸಿ) ರೂ 11,000/- ಖಾಸಗಿ | ರೂ.15,500/- |

# ಸಣ್ಣ ಕೈಗಾರಿಕೆ ಇಲಾಖೆ

1. ಕೈಗಾರಿಕಾ ನಿವೇಶನಗಳು ಮತ್ತು ಶೆಡ್‌ಗಳಿಗೆ 75% ಸಹಾಯಧನ

**ಕೆ.ಐ.ಎ.ಡಿ.ಬಿ ಮತ್ತು ಕೆ.ಎಸ್.ಎಸ್.ಐ.ಡಿ.ಸಿ ಯಿಂದ ಹಂಚಿಕೆ ಮಾಡುವ ಕೈಗಾರಿಕಾ ನಿವೇಶನ ಮತ್ತು ಶೆಡ್‌ಗಳಿಗೆ ಶೇ.75 ರಷ್ಟು ಸಹಾಯಧನ ನೀಡಲಾಗುತ್ತದೆ.**

ಷರತ್ತುಗಳು:

- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನಗಳನ್ನು ಮೂಲಭೂತ ಸೌಕರ್ಯ ಕಲ್ಪಿಸಿ ಪೂರ್ಣ ಪ್ರಮಾಣದಲ್ಲಿ ಉದ್ದಿಮೆ ಸ್ಥಾಪನೆಗೆ ಗರಿಷ್ಟ 3 ವರ್ಷಗಳ ಕಾಲಾವಕಾಶ ನೀಡುವುದು.
- ಉದ್ದಿಮೆಯ ಎಲ್ಲಾ ಸ್ಥಾಪಕರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು.
- ಹಂಚಿಕೆ ಪತ್ರದಲ್ಲಿನ ಮೊತ್ತದ ಶೇ.10ರಷ್ಟು ಮೊತ್ತವನ್ನು ಮಾತ್ರ ಪಾವತಿಸಿದ ನಂತರ ನಿವೇಶನವನ್ನು ಫಲಾನುಭವಿಗೆ ಸ್ವಾಧೀನ ಪತ್ರದ ಮೂಲಕ ನೀಡಿ ಉಳಿದ ಶೇ. 15 ರಷ್ಟು ಮೊತ್ತವನ್ನು ಸ್ವಾಧೀನ ಪತ್ರ ವಿತರಿಸಿದ ದಿನಾಂಕದಿಂದ 08 ತ್ರೈಮಾಸಿಕ ಸಮ ಕಂತುಗಳಲ್ಲಿ ನಿಗಮ ಹಾಗೂ ಮಂಡಳಿಯ ಫಲಾನುಭವಿಯಿಂದ ವಸೂಲಾತಿ ಮಾಡಿಕೊಳ್ಳತಕ್ಕದ್ದು.
- ಕೈಗಾರಿಕಾ ನಿವೇಶನವನ್ನು 10 ವರ್ಷಗಳ ಅವಧಿಗೆ ಲೀಸ್ ಕಂ ಸೇಲ್ ಆಧಾರದ ಮೇಲೆ ಹಂಚಿಕೆ ಮಾಡಲಾಗುತ್ತಿದೆ. ಈ ಅವಧಿಯಲ್ಲಿ ಮಾರಾಟ ಮಾಡಲು ಅವಕಾಶವಿಲ್ಲ.
- ಒಬ್ಬ ಉದ್ದಿಮೆದಾರರಿಗೆ/ಸಂಸ್ಥೆಗೆ ಗರಿಷ್ಟ 2 ಎಕರೆ ಕೈಗಾರಿಕಾ ನಿವೇಶನಕ್ಕೆ ಶೇ.75 ರಂತೆ ರಿಯಾಯಿತಿ ದರದಲ್ಲಿ ಹಂಚಿಕೆ ಮಾಡುವುದು. ಒಬ್ಬರೇ ಉದ್ಯಮಿಯು ಹಲವು ಕಂಪನಿಗಳಿಗೆ ಪ್ರವರ್ತಕರಾಗಿದ್ದಲ್ಲಿ, ಒಮ್ಮೆ ಮಾತ್ರ ಈ ಸೌಲಭ್ಯ ನೀಡುವುದು.
- ಎಲ್ಲಾ ಉದ್ದಿಮೆದಾರರು ಒಂದು ಬಾರಿ ಮಾತ್ರ ಸಹಾಯಧನ ಪಡೆಯಲು ಅರ್ಹರಿರುತ್ತಾರೆ.
- ಬಂಡವಾಳ ಸಹಾಯಧನವನ್ನು ಮತ್ತು ಇತರೆ ಸೌಲಭ್ಯಗಳನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಇಂಡಸ್ಟ್ರಿಯಲ್ ಪಾಲಿಸಿ 2020-25 ರಂತೆ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

2. **ಸಣ್ಣ ಮತ್ತು ಅತಿಸಣ್ಣ ಕೈಗಾರಿಕಾ ಘಟಕಗಳಿಗೆ ಶೇ.60 ರಂತೆ ಗರಿಷ್ಟ ರೂ.5.00 ಲಕ್ಷ ಸಹಾಯಧನ** (ಜಿಲ್ಲಾ ಕೈಗಾರಿಕಾ ಕೇಂದ್ರಗಳಿಂದ)
   - ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
   - ಕನಿಷ್ಠ ವಯೋಮಿತಿ 18 ವರ್ಷ
   - ಯೋಜನಾ ವೆಚ್ಚ ರೂ 10 ಲಕ್ಷಕ್ಕಿಂತ ಕಡಿಮೆ ಇರಬೇಕು
   - ಯಾವುದೇ ಹಣಕಾಸು ಸಂಸ್ಥೆಯಲ್ಲಿ ಸುಸ್ತಿದಾರ ಆಗಿರಕೂಡದು.
3. **ವೃತ್ತಿ ಪರ ಕುಶಲಕರ್ಮಿಗಳಿಗೆ ಟೂಲ್ ಕಿಟ್ ವಿತರಣೆ**
   - ವೃತ್ತಿಪರ ಕುಶಲಕರ್ಮಿಗಳಾಗಿರಬೇಕು
   - ರೂ.5000/- ವೆಚ್ಚದಲ್ಲಿ ಟೂಲ್ ಕಿಟ್ ವಿತರಿಸಲಾಗುವುದು.
4. **ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಶುಲ್ಕದಲ್ಲಿ ಸಹಾಯಧನ**
   - ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಮಾಲೀಕತ್ವಕ್ಕೆ ಒಳಪಟ್ಟ ಉದ್ದಿಮೆಗಳಾಗಿರಬೇಕು
   - ಪ್ರತಿ ಯೂನಿಟ್‌ಗೆ ರೂ.2 ರಂತೆ 5 ವರ್ಷಗಳ ಕಾಲ ಸಹಾಯಧನ ನೀಡಲಾಗುವುದು.
   - ದಿನಾಂಕ:01.04.2017ರ ನಂತರ ಪ್ರಾರಂಭಗೊಂಡ ಘಟಕಗಳು ಸಹಾಯಧನ ಪಡೆಯಲು ಅರ್ಹತೆ ಹೊಂದಿರುತ್ತವೆ.
5. ಸಾಫ್ಟ್ ಸೀಡ್ ಕ್ಯಾಪಿಟಲ್ (ಬೀಜ ಧನ)
   - ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
   - ಪ್ರಥಮ ಪೀಳಿಗೆಯ ಉದ್ಯಮಿಯಾಗಿರಬೇಕು
   - ಯೋಜನಾ ವೆಚ್ಚವು ರೂ.2.00 ಕೋಟಿಯ ಒಳಗಿರಬೇಕು

- 50% ಅಥವಾ ಗರಿಷ್ಠ ರೂ.75.00 ಲಕ್ಷ ಬಡ್ಡಿ ರಹಿತ ಬಂಡವಾಳ ಸಾಲವನ್ನು ನೀಡಲಾಗುವುದು.

**6. ಖಾದಿ ಚರಕಗಳ ವಿತರಣೆ**

- ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಿಂದ ಗುರುತಿಸಲ್ಪಟ್ಟ ಖಾದಿ ಕೆಲಸಗಾರರಾಗಿರಬೇಕು.
- ರೂ 13,000/- ವೆಚ್ಚದಲ್ಲಿ ಖಾದಿ ಚರಕವನ್ನು ನೀಡಲಾಗುವುದು

**7. ಖಾಸಗಿ ಕೈಗಾರಿಕಾ ಎಸ್ಟೇಟ್‌ಗಳ ಸ್ಥಾಪನೆಗೆ ನೆರವು**

- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಸಂಘ-ಸಂಸ್ಥೆ/ಟ್ರಸ್ಟ್‌ಗಳಿಗೆ ಖಾಸಗಿ ಕೈಗಾರಿಕಾ ಎಸ್ಟೇಟ್‌ಗಳ ಸ್ಥಾಪನೆಗೆ 50% ಗರಿಷ್ಠ ರೂ 5 ಕೋಟಿ ಧನಸಹಾಯ ನೀಡಲಾಗುವುದು.
- ಕನಿಷ್ಠ 10 ಎಕರೆ ಪ್ರದೇಶದ ಕೈಗಾರಿಕಾ ಎಸ್ಟೇಟ್‌ಗಳನ್ನು ಸ್ಥಾಪಿಸಬೇಕು.

**8. ಹಣಕಾಸು ಸಂಸ್ಥೆಗಳಿಂದ ಪಡೆದಿರುವ ಸಾಲದ ಪ್ರೋಸೆಸಿಂಗ್ ಶುಲ್ಕದ ಮರುಪಾವತಿ**

ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರು ಕೆಎಸ್ಎಫ್‌ಸಿ ಮತ್ತು ಬ್ಯಾಂಕ್ ಗಳ ಮೂಲಕ ಪಡೆದಿರುವ ಸಾಲದ ಪ್ರೋಸೆಸಿಂಗ್ ಶುಲ್ಕ, ಲೀಗಲ್ ಶುಲ್ಕ, ಸಾಲ ವಿತರಣಾ ಶುಲ್ಕವನ್ನು ಮರುಪಾವತಿಸಲಾಗುವುದು.

**9. ವಸತಿ ಕಾರ್ಯಾಗಾರ ಯೋಜನೆ**

- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಕುಶಲಕರ್ಮಿಗಳಾಗಿರಬೇಕು
- ಕನಿಷ್ಠ 399 ಚ.ಅಡಿಯ ಮನೆ/ಕಾರ್ಯಾಗಾರವನ್ನು ನಿರ್ಮಿಸಬೇಕು
- ಘಟಕ ಸಹಾಯಧನ - ರೂ 2,50,000/-
- ಫಲಾನುಭವಿಯ ವಂತಿಕೆ - ರೂ 25,000/-

**10. ಕೌಶಲ್ಯ ತರಬೇತಿ ಕೇಂದ್ರಗಳ ಸ್ಥಾಪನೆಗೆ ಧನಸಹಾಯ**

**ಷರತ್ತುಗಳು**

- ಸೌಲಭ್ಯ ಪಡೆಯುವ ಕೈಗಾರಿಕಾ ಸಂಘ-ಸಂಸ್ಥೆಗಳು/ಟ್ರಸ್ಟ್‌ಗಳಲ್ಲಿ 51% ಅಥವಾ ಅದಕ್ಕಿಂತ ಹೆಚ್ಚಿನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಸದಸ್ಯರಾಗಿರಬೇಕು.
- ಸಂಸ್ಥೆಯ ಹೆಸರಿನಲ್ಲಿ ಸ್ವಂತ ನಿವೇಶನ ಹೊಂದಿರಬೇಕು.
- ಸಂಸ್ಥೆಯ ಬೈಲಾದಲ್ಲಿ ಕೈಗಾರಿಕಾ ತರಬೇತಿ ನೀಡಲು ಅವಕಾಶವಿರಬೇಕು.
- ಸಂಸ್ಥೆಯು ಸ್ಥಾಪನೆಗೊಂಡು 2 ವರ್ಷಗಳಾಗಿರಬೇಕು.
- ಸಂಸ್ಥೆಯು ಕೈಗಾರಿಕಾ ಸಂಬಂಧಿತ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಬೇಕು.
- ಕೈಗಾರಿಕಾ ಘಟಕಗಳಿಗೆ ಅಗತ್ಯವಿರುವ ಯಂತ್ರೋಪಕರಣಗಳ ಖರೀದಿಗೂ ಸಹಾಯಧನ ನೀಡಲಾಗುವುದು.

**ಸೌಲಭ್ಯಗಳು**

- ತರಬೇತಿ ಕೇಂದ್ರಗಳ ಸ್ಥಾಪನೆಗೆ 60% ಗರಿಷ್ಠ ರೂ.12.00 ಲಕ್ಷ ಧನಸಹಾಯ
- ಯಂತ್ರೋಪಕರಣಗಳ ಖರೀದಿಗೆ 60% ಗರಿಷ್ಠ ರೂ.8.00 ಲಕ್ಷ ಧನಸಹಾಯ
- ಉಳಿಕೆ ಅನುದಾನವನ್ನು ಸಂಸ್ಥೆಯೇ ಭರಿಸಬೇಕು

## ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ

**ಅನ್ನಭಾಗ್ಯ ಯೋಜನೆ :**
ಬಿ.ಪಿ.ಎಲ್ ಕಾರ್ಡ್ ಹೊಂದಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಆಹಾರ ಧಾನ್ಯಗಳಾದ ರಾಗಿ, ಅಕ್ಕಿ, ಗೋಧಿ ಇತ್ಯಾದಿ ಸರ್ಕಾರದಿಂದ ನಿಗದಿಪಡಿಸಿದ ಪ್ರಮಾಣದಲ್ಲಿ ವಿತರಣೆ. (ಉಚಿತ)

## ಕಂದಾಯ ಇಲಾಖೆ

1. **ವೃದ್ಧಾಪ್ಯ ವೇತನ ಮತ್ತು ಸಂಧ್ಯಾ ಸುರಕ್ಷಾ ವೇತನ**
   - 60 ರಿಂದ 64 ವರ್ಷದೊಳಗಿರುವ ಹಿರಿಯ ನಾಗರಿಕರು ಮಾಸಿಕ ರೂ.600/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - 65 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಮಾಸಿಕ ರೂ.1200/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.

2. **ವಿಧವಾ ವೇತನ**
   - 18 ವರ್ಷ ಮೇಲ್ಪಟ್ಟ ವಿಧವೆಯರು ಮಾಸಿಕ ರೂ.800/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.

3. **ವಿಕಲಚೇತನರ ಪಿಂಚಣಿ**
   - ಶೇ.40 ಅಂಗವಿಕಲತೆ ಹೊಂದಿರುವವರು ಮಾಸಿಕ ರೂ. 800/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಶೇ.75 ಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವವರು ಮಾಸಿಕ ರೂ.1400/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಶೇ.75 ಕ್ಕಿಂತ ಹೆಚ್ಚಿನ ಮನೋವೈಕಲ್ಯತೆ ಹೊಂದಿರುವವರಿಗೆ ರೂ.2,000/- ಮಾಸಿಕ ಪಿಂಚಣಿ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.
4. **ಮನಸ್ವಿನಿ:** ಬಡತನ ರೇಖೆಗಿಂತ ಕೆಳಗಿರುವ 40 ರಿಂದ 60 ವರ್ಷದೊಳಗಿನ ಅವಿವಾಹಿತ / ವಿಚ್ಛೇದಿತ / ಪರಿತ್ಯಕ್ತ ಮಹಿಳೆಯರಿಗೆ ಮಾಸಿಕ ಪಿಂಚಣಿ ರೂ.800/-

5. ರೈತರ ಆತ್ಮಹತ್ಯೆ ಪ್ರಕರಣಗಳಲ್ಲಿ ವಿಧವೆಯರಿಗೆ ಮಾಸಿಕ ಪಿಂಚಣಿ ರೂ.2,000/-
6. **ದೇವದಾಸಿಯರ ಪಿಂಚಣಿ ಯೋಜನೆ :**
   - ವಯೋಮಿತಿ – 45 ಮತ್ತು 45ಕ್ಕಿಂತ ಹೆಚ್ಚು
   - 1993-94 ಮತ್ತು 2007-08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು
   - ಮಾಸಿಕ ಪಿಂಚಣಿಯ ಮೊತ್ತ – ರೂ 1,500/-
7. **ರಾಷ್ಟ್ರೀಯ ಕುಟುಂಬ ನೆರವು ಯೋಜನೆ**
   - ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ದುಡಿಯುವ ಮುಖ್ಯ ವ್ಯಕ್ತಿಯ ಮರಣವಾದಲ್ಲಿ ಕುಟುಂಬಕ್ಕೆ ರೂ.20000/- ದಂತೆ ಆರ್ಥಿಕ ನೆರವು ನೀಡುವುದು
   - ಮೃತ ವ್ಯಕ್ತಿಯ ವಯೋಮಿತಿ 18 ಕ್ಕಿಂತ ಹೆಚ್ಚಿಗೆ ಮತ್ತು 59 ರವರೆಗಿರಬೇಕು.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ. 32,000/-ಗಳಿಗಿಂತ ಕಡಿಮೆ ಇರಬೇಕು.

8. **ಆರಾಧನಾ ಯೋಜನೆ :** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಹಳೆಯ ದೇವಾಲಯ, ಪ್ರಾರ್ಥನಾ ಮಂದಿರಗಳ ದುರಸ್ಥಿ ಮತ್ತು ಉನ್ನತೀಕರಣಕ್ಕಾಗಿ ಅನುದಾನ ನೀಡಲಾಗುವುದು.

## ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

ಕಾರ್ಯಕ್ರಮಗಳ ವಿವರ.

1. ಜಿಲ್ಲಾ ಕಛೇರಿಗಳಲ್ಲಿ ಕ್ಷೇತ್ರ ಪ್ರಚಾರ ಕಾರ್ಯಕ್ರಮ ಹಾಗೂ ಮಾಧ್ಯಮ ಕ್ಷೇತ್ರದ ಬಗ್ಗೆ ತರಬೇತಿ. ಒಬ್ಬರಿಗೆ ಪ್ರತಿ ಮಾಹೆಗೆ ರೂ.15,000/- ರಂತೆ ತರಬೇತಿ ಭತ್ಯೆ ನೀಡುವುದು.
2. ಪರಿಶಿಷ್ಟ ಜಾತಿ/ಪಂಗಡದ ಯುವತಿ/ಯುವಕರಿಗೆ ಚಲನಚಿತ್ರ ನಿರ್ದೇಶನ, ಛಾಯಾಗ್ರಹಣ, ವೀಡಿಯೋ ಸಂಕಲನ, ಸ್ಕ್ರಿಪ್ಟ್ ತಯಾರಿಕೆ ಇತ್ಯಾದಿಗಳ ಬಗ್ಗೆ ಕರ್ನಾಟಕ ಚಲನಚಿತ್ರ ಅಕಾಡೆಮಿ ಮೂಲಕ ತರಬೇತಿ.
3. ಪ.ಜಾತಿ ಮತ್ತು ಪ.ಪಂಗಡದ ಮಾಲಿಕತ್ವದ ಪತ್ರಿಕೆಗಳಿಗೆ ಎಸ್.ಸಿ/ಎಸ್.ಟಿ ಜನರಿಗೆ ವಿವಿಧ ಇಲಾಖೆಗಳಿಂದ ಅನುಷ್ಠಾನ ಮಾಡುವ ಕಾರ್ಯಕ್ರಮಗಳ ಬಗ್ಗೆ ಪ್ರಚಾರ ನೀಡಲು ಜಾಹೀರಾತು ನೀಡಿ ಧನ ಸಹಾಯ ಒದಗಿಸಲಾಗುತ್ತದೆ.

## ಪ್ರವಾಸೋದ್ಯಮ ಇಲಾಖೆ

**ಕರ್ನಾಟಕ ದರ್ಶನ :** ಸರ್ಕಾರಿ ಶಾಲೆಯಲ್ಲಿ 8 ರಿಂದ 10ನೇ ತರಗತಿ ಓದುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಕಾರ್ಯಕ್ರಮದಡಿ ವಿವಿಧ ಪ್ರೇಕ್ಷಣೀಯ ಸ್ಥಳಗಳಿಗೆ ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಲಾಗುತ್ತದೆ.

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ

ಕಾರ್ಯಕ್ರಮಗಳ ವಿವರ.

1) ಅಂತರರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಅಧಿಕೃತ ಕ್ರೀಡೆಗಳಲ್ಲಿ ಪದಕ ವಿಜೇತರಾದ ಪರಿಶಿಷ್ಟ ಜಾತಿ / ಪಂಗಡದ ಕ್ರೀಡಾಪಟುಗಳಿಗೆ ತಲಾ ಕ್ರಮವಾಗಿ ರೂ. 5.00 ಲಕ್ಷ, ರೂ. 3.00 ಲಕ್ಷ ಮತ್ತು ರೂ. 1.00 ಲಕ್ಷ ದಂತೆ ಪ್ರೋತ್ಸಾಹಧನ ನೀಡುವುದು.

2) ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಕ್ರೀಡಾ ಶಾಲೆ/ನಿಲಯಗಳ ಪ.ಜಾತಿ/ಪ.ಪಂಗಡದ ಕ್ರೀಡಾ ಪಟುಗಳಿಗೆ ಪೌಷ್ಟಿಕ ಆಹಾರ ಕ್ರೀಡಾ ಗಂಟು, ಸಮವಸ್ತ್ರ, ಕ್ರೀಡಾ ಕಲರ್ಸ್, ಫಿಟ್‌ನೆಸ್ ಸಾಮಗ್ರಿಗಳು ಇತ್ಯಾದಿಗಳನ್ನು ನೀಡುವುದು.

3) ಚಾಮರಾಜನಗರ ಜಿಲ್ಲೆಯ ಸಂತೇಮರಹಳ್ಳಿ ಆರ್ಚರಿ ಮತ್ತು ಫೆನ್ಸಿಂಗ್ ಕ್ರೀಡಾ ವಸತಿ ನಿಲಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಕ್ರೀಡಾ ವಸತಿ ನಿಲಯದ ವಿದ್ಯಾರ್ಥಿಗಳ ಊಟೋಪಚಾರ, ಕ್ರೀಡಾಪಟುಗಳಿಗೆ ಕ್ರೀಡಾ ಸಮವಸ್ತ್ರ ಮತ್ತು ಕ್ರೀಡೋಪಕರಣ, ದಿನಭತ್ಯೆ, ಪ್ರಯಾಣ ಭತ್ಯೆ ನೀಡುವುದು ಹಾಗೂ ವಿದ್ಯಾರ್ಥಿಗಳಿಗೆ ಅವಶ್ಯಕವಿರುವ ಸಾಮಗ್ರಿಗಳ ವಿತರಣೆ.

4) ಅಂತರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದ ಅಧಿಕೃತ ಕ್ರೀಡಾ ಕೂಟಗಳಲ್ಲಿ ಪದಕ ವಿಜೇತರಾದ ಪರಿಶಿಷ್ಟ ಜಾತಿ/ಪಂಗಡದ ಕ್ರೀಡಾ ಪಟುಗಳಿಗೆ ಸ್ವಯಂ ಉದ್ಯೋಗ ಹೊಂದಲು ಜಿಮ್ ಸ್ಥಾಪನೆಗಾಗಿ ಒಟ್ಟು ರೂ.15.00 ಲಕ್ಷಗಳ ಸಹಾಯಧನ.

5) ಕ್ರೀಡಾರೋಹಣ (Climbing) ಮತ್ತು ಜಲಸಾಹಸ ಕ್ರೀಡಾ (Water sports) ಕೇಂದ್ರಗಳ ಸ್ಥಾಪನೆಗೆ ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಯಿಂದ ತರಬೇತಿ ಪಡೆದು ಪ್ರಮಾಣ ಪತ್ರ ಹೊಂದಿರುವ ಮತ್ತು ಜಲಸಾಹಸ ಕ್ರೀಡೆಗಳಲ್ಲಿ ತರಬೇತಿ ಹೊಂದಿ ಪ್ರಮಾಣಪತ್ರ ಪಡೆದಿರುವ ಪ.ಜಾತಿ/ಪ.ಪಂಗಡದ ಕ್ರೀಡಾಪಟುಗಳಿಗೆ ಸ್ವಯಂ ಉದ್ಯೋಗ ಹೊಂದಲು ಗರಿಷ್ಠ ರೂ.15.00 ಲಕ್ಷ ಸಹಾಯಧನ.

6) ರಾಜ್ಯ ಮಟ್ಟದ ಯುವಜನ ಮೇಳ/ಯುವ ಜನೋತ್ಸವದ ವೈಯಕ್ತಿಕ ವಿಭಾಗದಲ್ಲಿ ಪ್ರಥಮ, ದ್ವಿತೀಯ ಮತ್ತು ತೃತೀಯ ಸ್ಥಾನ ಪಡೆದ ಪ.ಜಾತಿ / ಪ.ಪಂಗಡದವರಿಗೆ ಕ್ರಮವಾಗಿ ತಲಾ ರೂ.25,000/-, ರೂ.15,000/- ಮತ್ತು ರೂ.10,000/- ನಗದು ಪ್ರೋತ್ಸಾಹಧನ ಮತ್ತು ಪದಕ ವಿಜೇತ ತಂಡದ ಪ್ರತಿ ಯುವಕ/ಯುವತಿಯರಿಗೆ ತಲಾ ರೂ.5,000/-, ರೂ.3,000/- & ರೂ.2,000/- ಗಳ ನಗದು ಪ್ರೋತ್ಸಾಹಧನ ನೀಡುವುದು.

7) ವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ, ಪ್ರತಿ ವಿಭಾಗದ ಜಿಲ್ಲೆಗೆ ಎರಡು ಯುವಕ/ಯುವತಿ ಸಂಘ-ಸಂಸ್ಥೆಗಳಿಗೆ 50 ಜನರಂತೆ ಇಲಾಖೆಯ ತರಬೇತಿ ಕೇಂದ್ರಗಳಲ್ಲಿ ತರಬೇತಿ ನೀಡುವುದು.

8) ಪ್ರತಿ ತಾಲ್ಲೂಕಿನಲ್ಲಿ ಪ.ಜಾತಿ-2 ಮತ್ತು ಪ.ಪಂ-1, ಯುವಕ/ ಯುವತಿ ಸಂಘಗಳಿಗೆ ಹೊಸದಾಗಿ ನೊಂದಣಿ ಮಾಡಲು ಹಾಗೂ ಇಲಾಖಾ ಕಾರ್ಯಕ್ರಮಗಳಿಗೆ ಸಕ್ರಿಯವಾಗಿ ಪಾಲ್ಗೊಳ್ಳಲು ತಲಾ ರೂ. 5,000/- ಪ್ರೋತ್ಸಾಹಧನ.

9) ಪ.ಜಾತಿ/ಪ.ಪಂಗಡದ ಯುವಜನರಿಗೆ ಈಜುಕೊಳಗಳಲ್ಲಿ ಜೀವರಕ್ಷಕ (Life Guard), ಜಿಮ್ ತರಬೇತುದಾರರು, ಫಿಟ್‌ನೆಸ್ ತರಬೇತುದಾರರು, ಮಾರ್ಕರ್ ತರಬೇತಿ ನೀಡುವುದು.

10) ಟಿ.ಎಸ್.ಪಿ ಯಡಿ ಕೊರಗ, ಕಾಡು ಕುರುಬ, ಸಿದ್ಧಿ, ಜೇನು ಕುರುಬ, ಸೋಲಿಗ ಇತ್ಯಾದಿ ಪರಿಶಿಷ್ಟ ಪಂಗಡದವರಿಗೆ ವಿಶೇಷ ಕ್ರೀಡಾ ತರಬೇತಿ ಹಾಗೂ ಕ್ರೀಡಾ ಕೂಟವನ್ನು ಆಯೋಜಿಸುವುದು.

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ

**ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಸ್ಟಾರ್ಟ್ ಅಪ್ ಘಟಕಗಳಿಗೆ ಧನಸಹಾಯ ನೀಡುವುದು.**

1. ತಜ್ಞರ ಸಮಿತಿಯಿಂದ ಆಯ್ಕೆಯಾದ ನವೋದ್ಯಮ/ಆವಿಷ್ಕರಣ ಸ್ಟಾರ್ಟ್ ಅಪ್‌ಗಳಿಗೆ ಗರಿಷ್ಠ ರೂ.50.00 ಲಕ್ಷ ಸಹಾಯಧನ ನೀಡುವುದು.
2. Firm/ Company ಗಳಲ್ಲಿ ಕನಿಷ್ಠ 70% ಪ.ಜಾತಿ/ಪ.ಪಂಗಡದವರು ಷೇರುದಾರರಾಗಿರಬೇಕು

## ಕಾರ್ಮಿಕ ಇಲಾಖೆ

1. **ಬಾಲ ಕಾರ್ಮಿಕರ ಪುನರ್ವಸತಿ ಯೋಜನೆ**

- ಎಸ್.ಸಿ/ಎಸ್.ಟಿ ಕಾಲೋನಿಗಳಲ್ಲಿ ಬಾಲಕಾರ್ಮಿಕ ನಿರ್ಮೂಲನೆ ಕುರಿತು ಜಾಗೃತಿ ಕಾರ್ಯಕ್ರಮವನ್ನು ಮೂಡಿಸುವುದು.
- ಗುರುತಿಸಲ್ಪಟ್ಟ ಬಾಲ ಕಾರ್ಮಿಕರಿಗೆ ವಿಶೇಷ ಶಾಲೆಯಲ್ಲಿ ದಾಖಲಿಸಿ ವಿದ್ಯಾಭ್ಯಾಸ ಕಲ್ಪಿಸುವುದು.

## ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಕಾರ್ಯಕ್ರಮಗಳ ವಿವರ.**

1. ಸಾಂಸ್ಕೃತಿಕ ಸಂಘ ಸಂಸ್ಥೆಗಳಿಗೆ ಧನಸಹಾಯ/ ವಾದ್ಯ ಪರಿಕರ/ ವೇಷಭೂಷಣ ಖರೀದಿಗೆ/ಚಿತ್ರಶಿಲ್ಪಾ ಕಲಾಕೃತಿಗಳ ಪ್ರದರ್ಶನಕ್ಕೆ ಧನಸಹಾಯ.
2. 30 ಜಿಲ್ಲೆಗಳಲ್ಲಿ ಸಂಘ ಸಂಸ್ಥೆಗಳು ಏರ್ಪಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರಾಯೋಜಿಸಿರುವ ಕಲಾ ತಂಡದ ಕಲಾವಿದರಿಗೆ ಪಾವತಿಸುವ ಸಂಭಾವನೆ.
3. ಯಾವುದೇ ಕಲೆಗಳಲ್ಲಿ ಪ್ರತಿಭಾವಂತ ಪರಿಶಿಷ್ಟ ಜಾತಿ/ಪ.ಪಂಗಡದ ಯುವ ಕಲಾವಿದರಿಗೆ ಅವರಲ್ಲಿ ನೈಪುಣ್ಯತೆಯನ್ನು ಹೆಚ್ಚಿಸಲು ಪ್ರತಿಷ್ಠಿತ ಸಂಸ್ಥೆಗಳಲ್ಲಿ ತರಬೇತಿಗಾಗಿ ಪ್ರವೇಶ ಕಲ್ಪಿಸಲು ಧನಸಹಾಯ.
4. ಪ.ಜಾತಿ/ಪ.ಪಂಗಡ ಜನಪರ ಉತ್ಸವಗಳು (ಜಿಲ್ಲೆಗೆ ರೂ.5.00 ಲಕ್ಷದಂತೆ).
5. ವಿದ್ಯಾರ್ಥಿಗಳಿಗೆ ಡಾ.ಬಿ.ಆರ್.ಅಂಬೇಡ್ಕರ್ ರವರ ಕುರಿತು "ಡಾ.ಅಂಬೇಡ್ಕರ್ ಓದು" ಎಂಬ ಯೋಜನೆ.
   - ಡಾ. ಅಂಬೇಡ್ಕರ್ ರವರನ್ನು ಕುರಿತು ರಸಪ್ರಶ್ನೆ, ಪ್ರಬಂಧ ಸ್ಪರ್ಧೆ, ಆಶುಭಾಷಣ ಮತ್ತು ಕವನ ವಾಚನ ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಎರಡು ವಿಷಯಗಳನ್ನು ಆಯ್ಕೆ ಮಾಡಿ ವಿದ್ಯಾರ್ಥಿಗಳಿಗೆ ಸ್ಪರ್ಧೆಗಳನ್ನು ಏರ್ಪಡಿಸುವುದು.
6. ಸಾಮಾಜಿಕ ಅರಿವು ಸಾಂಸ್ಕೃತಿಕ ಕಾರ್ಯಕ್ರಮದ (ಅಸ್ಪೃಶ್ಯತಾ ನಿವಾರಣೆ ಅರಿವು ಕಾರ್ಯಕ್ರಮ)
7. ಪ.ಜಾತಿ/ಪ.ಪಂಗಡದ ಕಲಾವಿದರಿಗೆ ಪಿಂಚಣಿ.

** * **

| | | |
|---|---|---|
| | | ಇಲಾಖೆಯು ನಿರ್ವಹಿಸುತ್ತಿರುವ "ಕುಟುಂಬ" ತಂತ್ರಾಂಶದ ದತ್ತಾಂಶದಲ್ಲಿ ದಾಖಲಾಗಿರುವ ಸದಸ್ಯರು.<br>• ವಿದ್ಯಾರ್ಥಿಯು ಇತರೆ ಯಾವುದೇ ವಿದ್ಯಾರ್ಥಿ ವೇತನ ಪಡೆಯುತ್ತಿದ್ದರೂ 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಅಡಿ ವಿದ್ಯಾರ್ಥಿ ವೇತನ ಪಡೆಯಲು ಅರ್ಹರಾಗುತ್ತಾರೆ.<br>• 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ವಿದ್ಯಾರ್ಥಿ ವೇತನವನ್ನು ವಿತರಿಸುವ ಉದ್ದೇಶಕ್ಕೆ ರಾಜ್ಯದ ವಿವಿಧ ಇಲಾಖೆಗಳು ನಿರ್ವಹಿಸುತ್ತಿರುವ ಶೈಕ್ಷಣಿಕ ಹಾಗೂ ಇತರೆ ದತ್ತಾಂಶದ ಆಧಾರದ ಮೇಲೆ ಅರ್ಹ ಫಲಾನುಭವಿಗಳನ್ನು ಗುರುತಿಸಿ (On entitlement basis) ವಿದ್ಯಾರ್ಥಿ ವೇತನವನ್ನು ವಿತರಿಸುವುದು ಹಾಗೂ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದಲ್ಲಿ, ಅಂತಹ ಪ್ರಕರಣಗಳನ್ನು ಸಹ ಪರಿಗಣಿಸಿ ಅರ್ಹರಿಗೆ ವಿದ್ಯಾರ್ಥಿ ವೇತನವನ್ನು ನೇರ ನಗದು ವರ್ಗಾವಣೆ (Direct Benefit Transfer) ಮೂಲಕ ವರ್ಗಾಯಿಸಲಾಗುವುದು.<br>**ಕಾರ್ಯಕ್ರಮದಡಿ ನೀಡಲಾಗುವ ವಿದ್ಯಾರ್ಥಿ ವೇತನದ ವಿವರಗಳು ಈ ಕೆಳಕಂಡಂತಿವೆ;** |
| ಈ. | ಕೃಷಿ ಇಲಾಖೆಯ ವಿವಿಧ ಪ್ರೋತ್ಸಾಹಕ ಯೋಜನೆಗಳಿಗಾಗಿ ಮೀಸಲಿಟ್ಟ ಅನುದಾನ ಮತ್ತು ಅದರ ಅನುಷ್ಠಾನದ ವಿವರಗಳೇನು? | ಕೃಷಿ ಇಲಾಖೆಯ ವಿವಿಧ ಪ್ರೋತ್ಸಾಹಕ ಯೋಜನೆಗಳಿಗಾಗಿ ಮೀಸಲಿಟ್ಟ ಅನುದಾನ ಮತ್ತು ಅದರ ಅನುಷ್ಠಾನದ ವಿವರಗಳನ್ನು ಅನುಬಂಧ 5ರಲ್ಲಿ ಒದಗಿಸಲಾಗಿದೆ. |

| ಕ್ರ ಸಂ | ಕೋರ್ಸ್‌ಗಳು | ವಿದ್ಯಾರ್ಥಿಗಳು | ವಿದ್ಯಾರ್ಥಿನಿಯರು |
|---|---|---|---|
| 1 | ಪ್ರೌಢಶಾಲಾ ಶಿಕ್ಷಣ | ——— | ರೂ. 2000/- |
| 2 | ಪಿ.ಯು.ಸಿ / ಐ.ಟಿ.ಐ / ಡಿಪ್ಲೋಮಾ | ರೂ. 2500/- | ರೂ. 3000/- |
| 3 | ಬಿ.ಎ./ಬಿ.ಎಸ್.ಸಿ/ಬಿ.ಕಾಂ ಇನ್ನಿತರೆ ಪದವಿ ಕೋರ್ಸ್‌ಗಳು | ರೂ. 5000/- | ರೂ. 5500/- |
| 4 | ಎಲ್.ಎಲ್.ಬಿ / ಪ್ಯಾರಾ ಮೆಡಿಕಲ್ / ಬಿ.ಫಾರ್ಮ್ / ನರ್ಸಿಂಗ್ ಇನ್ನಿತರೆ ವೃತ್ತಿಪರ ಕೋರ್ಸ್‌ಗಳು | ರೂ. 7500/- | ರೂ. 8000/- |
| 5 | ಎಂ.ಬಿ.ಬಿ.ಎಸ್ / ಬಿ.ಇ / ಬಿ.ಟೆಕ್ ಮತ್ತು ಎಲ್ಲಾ ಸ್ನಾತಕೋತ್ತರ ಕೋರ್ಸ್‌ಗಳು | ರೂ. 10000/- | ರೂ. 11000/- |

ಸಂಖ್ಯೆ: AGRI-AML/40/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## LAQ 597 ಅನುಬಂಧ-1

## ರಾಜ್ಯದ ಕೃಷಿ ಮತ್ತು ಕೃಷಿಕರ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರದ ಯೋಜನಾ ಅನುಷ್ಠಾನಗಳ ವಿವರ

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 1. | ಬಿತ್ತನೆ ಬೀಜಗಳ ಪೂರೈಕೆ | ಈ ಯೋಜನೆಯಡಿ ಸಾಮಾನ್ಯ ವರ್ಗದ ರೈತರಿಗೆ ಶೇ. 50 ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75 ರ ರಿಯಾಯಿತಿ ದರದಲ್ಲಿ ವಿವಿಧ ಬೆಳೆಗಳ ಪ್ರಮಾಣಿತ/ ನಿಜ ಚೀಟಿ ಬಿತ್ತನೆ ಬೀಜಗಳನ್ನು ಒಟ್ಟಾರೆ ಗರಿಷ್ಟ 2.00 ಹೆಕ್ಟೇರ್ ಅಥವಾ ಅವರ ವಾಸ್ತವಿಕ ಹಿಡುವಳಿ (Actual holding) ಯಾವುದು ಕಡಿಮೆಯೋ ಆ ವಿಸ್ತೀರ್ಣಕ್ಕೆ ಮಾತ್ರ ವಿತರಣೆ ಮಾಡಲಾಗುತ್ತದೆ. |
| 2. | ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ | ಈ ಯೋಜನೆಯಡಿ ಪ್ರಕೃತಿ ವಿಕೋಪಗಳು, ಕೀಟಗಳು ಮತ್ತು ರೋಗಗಳಿಂದಾಗಿ ಯಾವುದೇ ಅಧಿಸೂಚಿತ ಬೆಳೆ ವಿಫಲವಾದ ಪಕ್ಷದಲ್ಲಿ ರೈತರಿಗೆ ವಿಮಾ ರಕ್ಷಣೆ ಮತ್ತು ಹಣಕಾಸು ಬೆಂಬಲ ನೀಡಲಾಗುವುದು. ರೈತರಿಗೆ ನೀಡುವ ವಿಮಾ ಕಂತಿನ ರಿಯಾಯಿತಿಯಲ್ಲಿ ರಾಜ್ಯ ಸರ್ಕಾರದ ಪಾಲನ್ನು ನೀಡಿ ಬೆಳೆ ವಿಮಾ ನಷ್ಟ ಪರಿಹಾರವನ್ನು ಇತ್ಯರ್ಥಪಡಿಸಲು ಅನುವು ಮಾಡಲಾಗುತ್ತದೆ. |
| 3. | ಬೆಳೆ ಸಮೀಕ್ಷೆ ಕಾರ್ಯಕ್ರಮ | ರಾಜ್ಯದ ಎಲ್ಲಾ ರೈತರ ಜಮೀನುಗಳಲ್ಲಿ ಸರ್ವೆ ಮತ್ತು ಹಿಸ್ಸಾ ನಂಬರ್ ವಾರು ಬೆಳೆದಿರುವ ಬೆಳೆಗಳ ಮಾಹಿತಿಯನ್ನು ಮೊಬೈಲ್ ಆಪ್ ಮೂಲಕ ಜಿಪಿಎಸ್ ನಿಖರತೆಯೊಂದಿಗೆ ಸಂಗ್ರಹಿಸುವುದು ಮತ್ತು ಸಂಗ್ರಹಿಸಿದ ಬೆಳೆ ಸಮೀಕ್ಷೆ ದತ್ತಾಂಶವನ್ನು ರಾಜ್ಯ ಮತ್ತು ಕೇಂದ್ರ ಸರ್ಕಾರದಿಂದ ವಿವಿಧ ಇಲಾಖೆಗಳ ಮೂಲಕ ವಿವಿಧ ಯೋಜನೆಗಳ ಅನುಷ್ಠಾನದಲ್ಲಿ ಉಪಯೋಗಿಸಲಾಗುತ್ತಿದೆ. ಅದೇ ರೀತಿ ಬೆಳೆ ಸಮೀಕ್ಷೆ ದತ್ತಾಂಶವು ಎಲ್ಲಾ ರೈತರಿಗೂ ಸಹ ಲಭ್ಯವಿರುತ್ತದೆ. |
| 4. | ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ (PMKISAN) | ಭಾರತ ಸರ್ಕಾರದ ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆಯಡಿ ಸಾಗುವಳಿ ಭೂಮಿ ಹೊಂದಿರುವ ಎಲ್ಲಾ ಅರ್ಹ ರೈತರಿಗೆ ವಾರ್ಷಿಕ ರೂ.6000/-ಗಳ ನಗದನ್ನು ರೂ.2000/-ಗಳಂತೆ ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ನಾಲ್ಕು ತಿಂಗಳಿಗೊಮ್ಮೆ ನೀಡಲಾಗುತ್ತದೆ. ಇದರ ಜೊತೆಗೆ ಕರ್ನಾಟಕ ರಾಜ್ಯ ಸರ್ಕಾರದಿಂದ ರೂ.4000/-ಗಳನ್ನು ಎರಡು ಕಂತುಗಳಲ್ಲಿ ನೀಡಲಾಗುತ್ತದೆ. |
| 5. | ಮುಖ್ಯಮಂತ್ರಿ ರೈತ ವಿದ್ಯಾ ನಿಧಿ ಕಾರ್ಯಕ್ರಮ | ರೈತರ ಮಕ್ಕಳು ಸ್ನಾತಕೋತ್ತರ ಶಿಕ್ಷಣದವರೆಗೆ ವಿದ್ಯಾಭ್ಯಾಸ ಪಡೆಯುವುದನ್ನು ಪ್ರೋತ್ಸಾಹಿಸಲು 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಕಾರ್ಯಕ್ರಮವನ್ನು ಅನುಷ್ಠಾನ ಮಾಡಲಾಗಿದೆ. 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಅಡಿ ವಿದ್ಯಾರ್ಥಿವೇತನವನ್ನು ವಿತರಿಸುವ ಉದ್ದೇಶಕ್ಕೆ ರಾಜ್ಯದ ವಿವಿಧ ಇಲಾಖೆಗಳು ನಿರ್ವಹಿಸುತ್ತಿರುವ ಶೈಕ್ಷಣಿಕ ಹಾಗೂ ಇತರೆ ದತ್ತಾಂಶದ ಆಧಾರದ ಮೇಲೆ ಅರ್ಹ ಫಲಾನುಭವಿಗಳನ್ನು ಗುರುತಿಸಿ (On entitlement basis) ವಿದ್ಯಾರ್ಥಿ ವೇತನವನ್ನು ವಿತರಿಸುವುದು ಹಾಗೂ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದಲ್ಲಿ, ಅಂತಹ ಪ್ರಕರಣಗಳನ್ನು ಸಹ ಪರಿಗಣಿಸಿ ಅರ್ಹರಿಗೆ ವಿದ್ಯಾರ್ಥಿ ವೇತನವನ್ನು ನೇರ ನಗದು ವರ್ಗಾವಣೆ (Direct Benefit Transfer) ಮೂಲಕ ವರ್ಗಾಯಿಸಲಾಗುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
| --- | --- | --- |
| | | 2022-23ನೇ ಶೈಕ್ಷಣಿಕ ಸಾಲಿನಿಂದ ವಿದ್ಯಾಭ್ಯಾಸ ಮಾಡುತ್ತಿರುವ ಭೂರಹಿತ ಕೃಷಿ ಕಾರ್ಮಿಕರ ಮಕ್ಕಳಿಗೆ ಹೆಚ್ಚಿನ ಪ್ರೋತ್ಸಾಹ ನೀಡುವ ಉದ್ದೇಶದಿಂದ ಮುಖ್ಯಮಂತ್ರಿ ರೈತ ವಿದ್ಯಾ ನಿಧಿ ಕಾರ್ಯಕ್ರಮವನ್ನು ವಿಸ್ತರಿಸಲಾಗಿರುತ್ತದೆ. |
| 6. | ಸಾವಯವ ಕೃಷಿ | ಸಾವಯವ ಕೃಷಿ ಅಳವಡಿಕೆ ಮತ್ತು ದೃಢೀಕರಣ ಕಾರ್ಯಕ್ರಮದಡಿ ರಾಜ್ಯದ ಸಾವಯವ ಪ್ರಮಾಣೀಕೃತ ಪ್ರದೇಶವನ್ನು ವಿಸ್ತರಿಸುವ ನಿಟ್ಟಿನಲ್ಲಿ ಆಸಕ್ತ ಗುಂಪು ಮತ್ತು ವ್ಯಕ್ತಿಗತ ಪ್ರಸ್ತಾವನೆಗಳ ಪ್ರಮಾಣೀಕರಣಕ್ಕಾಗಿ ಅನುದಾನ ಬಳಕೆ ಮಾಡಲಾಗುತ್ತದೆ. |
| 7. | ರೈತ ಸಿರಿ | ಸಿರಿಧಾನ್ಯಗಳಾದ ನವಣೆ, ಹಾರಕ, ಸಾಮೆ, ಕೊರಲೆ, ಊದಲು ಬೆಳೆಗಳನ್ನು ಬೆಳೆದ ಎಲ್ಲಾ ವರ್ಗದ ರೈತರಿಗೆ ಪ್ರತಿ ಹೆಕ್ಟೇರಿಗೆ ರೂ.10,000/-ದಂತೆ ಗರಿಷ್ಠ ಎರಡು ಹೆಕ್ಟೇರುಗಳಿಗೆ ಪ್ರೋತ್ಸಾಹಧನವನ್ನು ಫಲಾನುಭವಿಗಳಿಗೆ ನೇರ ನಗದು ವರ್ಗಾವಣೆ ಮೂಲಕ ನೀಡಲಾಗುವುದು. ಸಿರಿಧಾನ್ಯಗಳನ್ನು ಬೆಳೆದ ರೈತರುಗಳಿಗೆ ಬೆಳೆ ಸಮೀಕ್ಷೆ ಆಧಾರದಂತೆ ಪ್ರೋತ್ಸಾಹಧನವನ್ನು ವಿತರಿಸಲಾಗುತ್ತದೆ. |
| 8. | ಸೂಕ್ಷ್ಮ ನೀರಾವರಿ | ಹನಿ / ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಎಲ್ಲಾ ವರ್ಗದ ರೈತರಿಗೆ ಶೇ.90 ರಷ್ಟು ಸಹಾಯಧನ (2.00 ಹೆಕ್ಟೇರ್ ವರೆಗೆ) ಒದಗಿಸಲಾಗುತ್ತದೆ. |
| 9. | ಕೃಷಿ ಯಾಂತ್ರೀಕರಣ ಹಾಗೂ ಕೃಷಿ ಉತ್ಪನ್ನಗಳ ಸಂಸ್ಕರಣೆ | ಸಣ್ಣ ಟ್ರ್ಯಾಕ್ಟರ್, ಪವರ್ ಟಿಲ್ಲರ್, ಭೂಮಿ ಸಿದ್ಧತೆ ಉಪಕರಣಗಳು, ನಾಟಿ / ಬಿತ್ತನೆ ಉಪಕರಣಗಳು, ಟ್ರ್ಯಾಕ್ಟರ್ / ಶಕ್ತಿಚಾಲಿತ ಸಸ್ಯ ಸಂರಕ್ಷಣಾ ಉಪಕರಣಗಳು, ಅಂತರ ಬೇಸಾಯ ಉಪಕರಣಗಳು, ತ್ಯಾಜ್ಯ ವಸ್ತುಗಳ ನಿರ್ವಹಣಾ ಉಪಕರಣಗಳು, ಕೊಯಿಲು ಮತ್ತು ಒಕ್ಕಣೆ ಮಾಡುವ ಉಪಕರಣಗಳು ಕೃಷಿ ಸಂಸ್ಕರಣಾ ಘಟಕಗಳು ಹಾಗೂ ಡೀಸಲ್ ಪಂಪ್ ಸೆಟ್‌ಗಳನ್ನು ಸಾಮಾನ್ಯ ರೈತರಿಗೆ ಶೇ.50 ರಷ್ಟು ಸಹಾಯಧನ ಹಾಗು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತರಿಗೆ ಶೇ.90 ರಷ್ಟು ಸಹಾಯಧನವನ್ನು ಗರಿಷ್ಠ ಮಿತಿ ರೂ. ಒಂದು ಲಕ್ಷದವರೆಗೆ ನೀಡಲಾಗುತ್ತಿದೆ. ಸಣ್ಣ ಟ್ರ್ಯಾಕ್ಟರ್‌ಗಳ ಖರೀದಿಗೆ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ರೂ.3.00ಲಕ್ಷ ಹಾಗು ಸಾಮಾನ್ಯ ರೈತರಿಗೆ ರೂ.0.75ಲಕ್ಷಗಳಂತೆ ಗರಿಷ್ಠ ಸಹಾಯಧನವನ್ನು ನೀಡಲಾಗುತ್ತದೆ. |
| 10. | ಕೃಷಿ ಯಂತ್ರಧಾರೆ | ರಾಜ್ಯದಲ್ಲಿಸಣ್ಣ ಮತ್ತು ಅತಿಸಣ್ಣ ರೈತರಿಗೆ ಸಕಾಲದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ, ಕಡಿಮೆ ಬಾಡಿಗೆ ದರದಲ್ಲಿ ಭೂಮಿ ಸಿದ್ಧತೆಯಿಂದ ಕೊಯ್ಲು ಮತ್ತು ಸಂಸ್ಕರಣೆಗೆ ಉಪಯುಕ್ತವಾಗುವ ವಿವಿಧ ಕೃಷಿ ಯಂತ್ರೋಪಕರಣಗಳನ್ನು ರೈತರಿಗೆ ಬಾಡಿಗೆ ಆಧಾರದ ಮೇಲೆಉಪಯೋಗಿಸಲು ಅವಕಾಶ ಕಲ್ಪಿಸಲು ಹೋಬಳಿ ಕೇಂದ್ರಗಳಲ್ಲಿ ಆಯ್ದ ಸಂಸ್ಥೆಗಳ ಸಹಯೋಗದೊಂದಿಗೆ ಕೃಷಿ ಯಂತ್ರಧಾರೆ (ಕೃಷಿ ಯಂತ್ರೋಪಕರಣಗಳ ಬಾಡಿಗೆ ಆಧಾರಿತ ಸೇವಾ )ಕೇಂದ್ರಗಳನ್ನು ತೆರೆಯಲಾಗಿರುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 11. | ತರಬೇತಿ ಕಾರ್ಯಕ್ರಮಗಳು | ಈ ಯೋಜನೆಯಡಿ ಕೃಷಿ ವಿಸ್ತರಣಾ ಅಧಿಕಾರಿಗಳ ನಿರ್ವಹಣಾ ಸಾಮರ್ಥ್ಯ ಮತ್ತು ರೈತರ/ ರೈತ ಮಹಿಳೆಯರ ವೃತ್ತಿ ಸಾಮರ್ಥ್ಯವನ್ನು ಹೆಚ್ಚಿಸಲು ಕೃಷಿ ತಾಂತ್ರಿಕತೆಗಳಿಗೆ ಸಂಬಂಧಿಸಿದಂತೆ ವಿಶೇಷ ತರಬೇತಿಗಳನ್ನು ಹಾಗೂ ಅಧ್ಯಯನ ಪ್ರವಾಸಗಳನ್ನು ಆಯೋಜಿಸಲಾಗುತ್ತದೆ. |
| 12. | ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನ | ಈ ಯೋಜನೆಯಡಿ ಬತ್ತ, ದ್ವಿದಳಧಾನ್ಯ, ನೂಟ್ರಿ ಸಿರಿಧಾನ್ಯ, ಎಣ್ಣೆಕಾಳು, ಕಬ್ಬು ಮತ್ತು ಹತ್ತಿ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಆಧುನಿಕ ತಾಂತ್ರಿಕತೆಗಳ ಗುಚ್ಛ ಪ್ರಾತ್ಯಕ್ಷಿಕೆಗಳನ್ನು ಆಯೋಜಿಸುವುದರ ಜೊತೆಗೆ ಬಿತ್ತನೆ ಬೀಜ, ಲಘುಪೋಷಕಾಂಶಗಳು, ಜೈವಿಕ ಗೊಬ್ಬರಗಳು, ಸಸ್ಯ ಸಂರಕ್ಷಣಾ ರಾಸಾಯನಿಕಗಳು, ಜಿಪ್ಸಂ/ ಕೃಷಿ ಸುಣ್ಣ, ಕೃಷಿ ಉಪಕರಣಗಳು, ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತದೆ. |
| 13. | ಸಸ್ಯ ಸಂರಕ್ಷಣೆ | ಶೇ.50ರ ರಿಯಾಯಿತಿಯಲ್ಲಿ ಸಸ್ಯ ಸಂರಕ್ಷಣಾ ಪೀಡೆನಾಶಕಗಳನ್ನು ವಿತರಣೆ ಮಾಡಲಾಗುತ್ತದೆ. |
| 14. | ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ | ಎರೆಹುಳು ಗೊಬ್ಬರ, ಸಾವಯವ ಗೊಬ್ಬರ, ರಂಜಕಯುಕ್ತ ಸಾವಯವ ಗೊಬ್ಬರ, ಸಿಟಿ ಕಾಂಪೋಸ್ಟ್ ರಿಯಾಯತಿ ದರದಲ್ಲಿ ವಿತರಣೆ ಮಾಡುವುದು. ಸಾಮಾನ್ಯ ವರ್ಗದ ರೈತರಿಗೆ ಶೇ.50ರ ಸಹಾಯಧನ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತದೆ. |
| 15. | ಸಾವಯವ ಇಂಗಾಲ ಹೆಚ್ಚಿಸುವ ಅಭಿಯಾನ | ವಿವಿಧ ದ್ವಿದಳ ಧಾನ್ಯ ಬೀಜಗಳು ಮತ್ತು ಹಸಿರೆಲೆ ಗೊಬ್ಬರ ಬೀಜಗಳನ್ನು ಸಾಮಾನ್ಯ ವರ್ಗ ಹಾಗೂ ಪರಿಶಿಷ್ಟ ಜಾತಿ/ ಪಂಗಡದ ರೈತರಿಗೆ ಶೇ.75ರ ಸಹಾಯಧನ ನೀಡಲಾಗುತ್ತದೆ. |
| 16. | ಕೃಷಿ ವಿಸ್ತರಣಾ ಉಪ ಅಭಿಯಾನ (SAME-ATMA) | ಯೋಜನೆಯಡಿ ಆಯೋಜಿಸುವ ವಿಸ್ತರಣಾ ಕಾರ್ಯಕ್ರಮಗಳ ಚಟುವಟಿಕೆಗಳಲ್ಲಿ ಎಲ್ಲಾ ವರ್ಗದ ರೈತರು / ರೈತ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಅವಕಾಶ ಕಲ್ಪಿಸಲಾಗಿದೆ. |
| 17. | ಮಣ್ಣಿನ ಫಲವತ್ತತೆ ಯೋಜನೆ | ಮಣ್ಣು ಆರೋಗ್ಯ ಚೀಟಿ ಶಿಫಾರಸ್ಸಿನ ಅನ್ವಯ ಪ್ರಾತ್ಯಕ್ಷಿಕೆಗಳನ್ನು ಕೈಗೊಳ್ಳಲು ರಿಯಾಯಿತಿ ದರದಲ್ಲಿ ರಸಗೊಬ್ಬರ, ಸಾವಯವ ಗೊಬ್ಬರ, ಜೈವಿಕ ಗೊಬ್ಬರ, ಲಘುಪೋಷಕಾಂಶ ಮಣ್ಣು ಸುಧಾರಕಗಳನ್ನು ಪ್ರತಿ ಹೆಕ್ಟೇರಿಗೆ ಗರಿಷ್ಠ ರೂ.2500/- ಸಹಾಯಧನ ನೀಡಲಾಗುತ್ತದೆ. |
| 18. | ರಾಷ್ಟ್ರೀಯ ಕೃಷಿ ವಿಕಾಸ್ ಯೋಜನೆಯಡಿ ಸಮಗ್ರ ಕೃಷಿ ಪದ್ಧತಿಯ ವಿಸ್ತರಣೆ ಹಾಗೂ ಜನಪ್ರಿಯಗೊಳಿಸುವ ಕಾರ್ಯಕ್ರಮ | ಕೃಷಿ ಮತ್ತು ಕೃಷಿ ಸಂಬಂಧಿತ ಚಟುವಟಿಕೆಗಳಾದ ತೋಟಗಾರಿಕೆ ಹಾಗೂ ಪಶುಸಂಗೋಪನೆಗಳನ್ನು ಒಗ್ಗೂಡಿಸಿ "ಸಮಗ್ರ ಕೃಷಿ ಪದ್ಧತಿ "ಮೂಲಕ ರೈತನ ಆದಾಯ ಹೆಚ್ಚಳ ಮಾಡುವುದು ಹಾಗೂ ಅಳವಡಿಸಿದ ಪ್ರದೇಶದಲ್ಲಿ/ ಜಮೀನಿನಲ್ಲಿ ಬೆಳೆ ಉತ್ಪಾದಕತೆ, ಸುಸ್ಥಿರತೆ, ಸಮತೋಲನಾ ಆಹಾರ ಉತ್ಪಾದನೆ, ತಾಜ್ಯಗಳ ಮರುಬಳಕೆ ಹಾಗೂ ವರ್ಷಪೂರ್ತಿ ಆದಾಯ ಹೆಚ್ಚಿಸುವ ಉದ್ದೇಶದಿಂದ ಸಮಗ್ರ ಕೃಷಿ ಪದ್ಧತಿ ಮಾದರಿಗಳ ಅನುಷ್ಠಾನಕ್ಕೆ ಸಹಾಯಧನ ನೀಡಲಾಗುತ್ತದೆ. |

| ಕ್ರ. ಸಂ | ಯೋಜನೆ/ ಕಾರ್ಯಕ್ರಮ | ವಿವರ |
|---|---|---|
| 19. | ಪ್ರಧಾನ ಮಂತ್ರಿ ಕಿರು ಆಹಾರ ಸಂಸ್ಕರಣಾ ಉದ್ದಿಮೆಗಳ ನಿಯಮಬದ್ಧಗೊಳಿಸುವಿಕೆ ಯೋಜನೆ | ಅಸಂಘಟಿತ ವಲಯದಲ್ಲಿರುವ ಸೂಕ್ಷ್ಮ/ ಕಿರು ಆಹಾರ ಸಂಸ್ಕರಣ ಉದ್ದಿಮೆಗಳಿಗಳನ್ನು ಪ್ರೋತ್ಸಾಹಿಸಿ ಅವುಗಳ ಸ್ಪರ್ಧಾತ್ಮಕತೆಯನ್ನು ಹೆಚ್ಚಿಸುವುದು ಮತ್ತು ಅವುಗಳನ್ನು ಸಂಘಟಿತ ವಲಯಕ್ಕೆ ತರುವುದು ಹಾಗೂ ರೈತ ಉತ್ಪಾದಕ ಸಂಸ್ಥೆಗಳು, ಸ್ವಸಹಾಯ ಸಂಘಗಳು ಹಾಗೂ ಉತ್ಪಾದಕ ಸಹಕಾರಿ ಸಂಘಗಳಿಗೆ ಅವುಗಳ ಸರಪಳಿಕೊಂಡಿಯೊಂದಿಗೆ ಉತ್ತೇಜನ ನೀಡಲು ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನವನ್ನು ಒದಗಿಸಲಾಗುತ್ತದೆ. |
| 20. | ರೈತ ಶಕ್ತಿ ಕಾರ್ಯಕ್ರಮ | ರೈತರಿಗೆ ಕೃಷಿ ಯಂತ್ರೋಪಕರಣಗಳ ಬಳಕೆಯನ್ನು ಪ್ರೋತ್ಸಾಹಿಸಲು ಹಾಗೂ ಇಂಧನ ವೆಚ್ಚದ ಭಾರವನ್ನು ಕಡಿಮೆ ಮಾಡಲು ರಾಜ್ಯದಲ್ಲಿಯೇ ಮೊಟ್ಟಮೊದಲ ಬಾರಿಗೆ ಪ್ರತಿ ಎಕರೆಗೆ 250/- ರೂ.ಗಳಂತೆ ಗರಿಷ್ಠ ಐದು ಎಕರೆಗೆ ಡಿ.ಬಿ.ಟಿ ಮೂಲಕ ಡೀಸಲ್‌ಗೆ ಸಹಾಯಧನವನ್ನು ನೀಡಲಾಗುತ್ತದೆ. |

ಕೃಷಿ ನಿರ್ದೇಶಕರು

## ಅನುಬಂಧ-2

1. **ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ-2.0 Pradhan Mantri Krishi Sinchayi Yojana- Watershed Development Component-2.0 (PMKSY-WDC 2.0):**

ಈ ಯೋಜನೆಯು ಕೇಂದ್ರ ಪ್ರಾಯೋಜಿತ ಯೋಜನೆಯಾಗಿದ್ದು, ಸದರಿ ಯೋಜನೆಯನ್ನು 2021-22ನೇ ಸಾಲಿನಿಂದ ರಾಜ್ಯದ 30 ಜಿಲ್ಲೆಗಳ ಆಯ್ದ 57 ತಾಲ್ಲೂಕುಗಳ 2.75 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಅನುಷ್ಠಾನ ಮಾಡಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಮೋದನೆ ನೀಡಿರುತ್ತದೆ. ಈ ಯೋಜನೆಯನ್ನು ಸಹ ದಿಬ್ಬದಿಂದ ಕಣಿವೆ ಮಾದರಿಯಲ್ಲಿ ಅನುಷ್ಠಾನ ಮಾಡಲು ವಿವರವಾದ ಯೋಜನಾ ವರದಿಯನ್ನು ತಯಾರಿಸಿ ಕಾರ್ಯಕ್ರಮದ ಅನುಷ್ಠಾನವನ್ನು ಪ್ರಾರಂಭಿಸಲಾಗಿದೆ. ಈ ಯೋಜನೆಯಡಿ ಸಮರ್ಥ ನೀರು ಕೊಯ್ಲು, ಮಣ್ಣಿನ ತೇವಾಂಶ ಸಂರಕ್ಷಣೆ, ಪರ್ಯಾಯ ಬೆಳೆ ವ್ಯವಸ್ಥೆಗಳು, ಕೃಷಿ ಅರಣ್ಯ, ಖುಷ್ಕಿ ತೋಟಗಾರಿಕೆ, ಪಶುಸಂಗೋಪನೆಯ ಮೂಲಕ ಹವಾಮಾನ/ವೈಪರೀತ್ಯ ಮತ್ತು ಬರಗಾಲದ ಅಪಾಯಗಳನ್ನು ಎದುರಿಸುವುದು ಮತ್ತು ರೈತರ ಆದಾಯವನ್ನು ಭದ್ರಪಡಿಸುವುದು; ಯೋಜನಾ ಪ್ರದೇಶಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳ ಸಮರ್ಥನೀಯ ಬಳಕೆಯ ಮೂಲಕ ಬೆಳೆಗಳು, ಜಾನುವಾರು, ಮೀನುಗಾರಿಕೆ, ಹಾಗೂ ಉತ್ಪಾದನಾ ವ್ಯವಸ್ಥೆಗಳ ಮೂಲಕ ಉತ್ಪಾದಕತೆಯನ್ನು ಸುಧಾರಿಸುವುದು; ಆಸ್ತಿ ರಹಿತ ರೈತರನ್ನು ಗುರುತಿಸುವುದು ಮತ್ತು ಪರ್ಯಾಯ ಜೀವನೋಪಾಯದ ಅವಕಾಶಗಳನ್ನು ಉತ್ತೇಜಿಸುವುದು; ಸುಲಭವಾದ ಕೈಗೆಟುಕುವ ತಂತ್ರಜ್ಞಾನಗಳ ಉತ್ತೇಜನ ಮಾಡುವುದು; ಆದಾಯವನ್ನು ಉತ್ಪಾದಿಸುವ ಅವಕಾಶಗಳಿಗೆ ಹೆಚ್ಚಿನ ಉತ್ತೇಜನ ನೀಡುವುದು ಹಾಗೂ ರೈತ ಉತ್ಪಾದಕರ ಸಂಸ್ಥೆಗಳನ್ನು ರಚಿಸುವುದು/ಬಲವರ್ಧಿಸಲು ಕಾರ್ಯಕ್ರಮವನ್ನು ರೂಪಿಸಲಾಗಿದೆ.

2. **ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ - ಪರ್ ಡ್ರಾಪ್ ಮೋರ್ ಕ್ರಾಪ್-ಇತರೆ ಉಪಚಾರಗಳು (Pradhan Mantri Krishi Sinchayi Yojana- PDMC-OI):**

ಈ ಯೋಜನೆಯಡಿ ವೈಯಕ್ತಿಕ ನೀರಿನ ಮೂಲಗಳ/ನೀರು ಸಂಗ್ರಹಣಾ ವಿನ್ಯಾಸಗಳ ರಚನೆ, ಸಣ್ಣ ನೀರು ಸಂಗ್ರಹಣಾ ವಿನ್ಯಾಸಗಳ ಮರುಸ್ಥಾಪನೆ/ನವೀಕರಣ, ಅಂತರ್ಜಲ ಶೋಷಿತವಲ್ಲದ ತಾಲ್ಲೂಕುಗಳಲ್ಲಿ ಕೊಳವೆ ಬಾವಿ ನಿರ್ಮಾಣ, ಪೂರ್ವ ಎರಕಹೊಯ್ದ ನೀರು ವಿತರಣಾ ವ್ಯವಸ್ಥೆ, ನೀರು ಎತ್ತುವ ಸಾಧನಗಳನ್ನು ಒದಗಿಸುವುದರ ಮೂಲಕ ಸೂಕ್ಷ್ಮ ನೀರಾವರಿ ಘಟಕಗಳೊಂದಿಗೆ ಜೋಡಿಸುವುದು.

3. **ಜಲಾನಯನ ಅಭಿವೃದ್ಧಿ ಮೂಲಕ ಬರಗಾಲವನ್ನು ತಡೆಯುವಿಕೆ ಯೋಜನೆ(Watershed Development to Prevent Drought):**

ರಾಜ್ಯದಲ್ಲಿ ಜಲಾನಯನ ಉಪಚಾರಕ್ಕೆ ಬಾಕಿ ಲಭ್ಯವಿರುವ ಮಳೆಯಾಶ್ರಿತ ಪ್ರದೇಶದಲ್ಲಿ 2019-20ನೇ ಸಾಲಿನಿಂದ 2023-24ನೇ ಸಾಲಿನವರೆಗೆ, ಆಯ್ದ 100 ಬರಪೀಡಿತ ಮತ್ತು ಅತೀ ಹೆಚ್ಚು ಅಂತರ್ಜಲ ಶೋಷಿತ ತಾಲ್ಲೂಕುಗಳಲ್ಲಿ, ಪ್ರತಿ ತಾಲ್ಲೂಕಿನಲ್ಲಿ 3,000 ರಿಂದ 5,000 ಹೆಕ್ಟೇರ್ ಪ್ರದೇಶವನ್ನು ಭೂ ಸಂಪನ್ಮೂಲ ಹಾಗೂ ಜಲಸಂಪನ್ಮೂಲ ಸಮೀಕ್ಷೆಯ ಮಾಹಿತಿಗಳನ್ನಾಧರಿಸಿ ಜಲಾನಯನ ಅಭಿವೃದ್ಧಿ ಯೋಜನೆಗಳನ್ನು ಸಂಪೂರ್ಣ ಜಲಾನಯನ ಉಪಚಾರದ ವಿಧಾನದಲ್ಲಿ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣಾ ಉದ್ಯೋಗ ಖಾತ್ರಿ ಯೋಜನೆ, ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ ಕಾರ್ಯಕ್ರಮದೊಡನೆ ಹಾಗೂ ಇತರೆ ಇಲಾಖೆಗಳ ಯೋಜನೆಗಳೊಂದಿಗೆ ಒಗ್ಗೂಡಿಸಿ ಬರ ನಿರೋಧಕ ಜಲಾನಯನ ಚಟುವಟಿಕೆಗಳನ್ನು ಅನುಷ್ಠಾನ ಮಾಡಲಾಗುತ್ತಿದೆ.

4. **ಕೇಂದ್ರ ಪುರಸ್ಕೃತ ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ - ಮಳೆ ಆಧಾರಿತ ಪ್ರದೇಶ ಅಭಿವೃದ್ಧಿ (RKVY-RAFTAAR ಮೂಲಕ) ಯೋಜನೆ :**

ಈ ಯೋಜನೆಯನ್ನು ವಿಶೇಷವಾಗಿ ರಾಜ್ಯದ ಮಳೆಯಾಶ್ರಿತ ಪ್ರದೇಶದಲ್ಲಿ ಅನುಷ್ಠಾನ ಮಾಡಲಾಗುತ್ತಿದೆ. ಈ ಕಾರ್ಯಕ್ರಮದಡಿ ರೈತರಿಗೆ ಸಮಗ್ರ ಕೃಷಿ ಪದ್ಧತಿಗಳ ಅಳವಡಿಕೆಯನ್ನು ಪ್ರೋತ್ಸಾಹಿಸುವುದು, ಅದರಲ್ಲೂ ಬಹು-ಬೆಳೆಪದ್ಧತಿ, ಮಿಶ್ರ-ಬೆಳೆ, ಅಂತರ-ಬೆಳೆ, ಬೆಳೆ-ಪರಿವರ್ತನೆ, ತೋಟಗಾರಿಕೆ, ಕೃಷಿ ಅರಣ್ಯ, ಪಶುಸಂಗೋಪನೆ ಘಟಕಗಳನ್ನೊಳಗೊಂಡ ರೈತರ ಆದಾಯವನ್ನು ಹೆಚ್ಚಿಸುವುದಲ್ಲದೆ, ಫಲಾನುಭವಿಗಳಿಗೆ ಮೌಲ್ಯವರ್ಧನೆ ಹಾಗೂ ಸಂಪನ್ಮೂಲ ಸಂರಕ್ಷಣೆಯಡಿ ವಿವಿಧ ಚಟುವಟಿಕೆಗಳಾದ ಜೇನು ಕೃಷಿ, ಸೈಲೇಜ್ ಘಟಕ, ಎರೆಹುಳು ತಯಾರಿಕಾ ಘಟಕಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## 5. ವಿಶ್ವಬ್ಯಾಂಕ್ ಅನುದಾನಿತ ಹೊಸ REWARD ಯೋಜನೆ:

ವಿಶ್ವಬ್ಯಾಂಕ್ ನೆರವಿನ ಸುಜಲ-III (ಕರ್ನಾಟಕ ಜಲಾನಯನ ಅಭಿವೃದ್ಧಿ ಯೋಜನೆ-II) ಯೋಜನೆಯನ್ನು 2013-14 ದ 2019-20 ನೇ ಸಾಲಿನವರೆಗೆ ಅನುಷ್ಠಾನಗೊಳಿಸಿದ್ದು, ರಾಜ್ಯದ 12 ಜಿಲ್ಲೆಗಳ 2534 ಕಿರುಜಲಾನಯನಗಳಲ್ಲಿ 14.07 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ವಿವಿಧ ವೈಜ್ಞಾನಿಕ ಸಂಸ್ಥೆಗಳ ಮೂಲಕ ಯೋಜನಾ ಪ್ರದೇಶದ ಜಲಾನಯನಗಳಲ್ಲಿ ಭೂ-ಸಂಪನ್ಮೂಲ ಸಮೀಕ್ಷೆ (Land Resource Inventory-LRI) ಕೈಗೊಂಡು ಮಣ್ಣಿನ ಭೌತಿಕ ಹಾಗೂ ರಸಾಯನಿಕ ಗುಣಧರ್ಮಗಳ ದತ್ತಾಂಶ ಸಂಗ್ರಹಿಸಲಾಗಿರುತ್ತದೆ. ಈ ತಾಂತ್ರಿಕ ಮಾಹಿತಿ ಬಳಸಿಕೊಂಡು ಪೈಲಟ್ ಮಾದರಿಯಲ್ಲಿ 11 ಮಾದರಿ ಜಲಾನಯನಗಳ ಯೋಜನಾ ವರದಿ ತಯಾರಿಸಿ ಸಂಪೂರ್ಣ ಜಲಾನಯನ ಉಪಚಾರ ವಿಧಾನದಲ್ಲಿ ಜಲಾನಯನ ಕಾಮಗಾರಿಗಳನ್ನು ಕೈಗೊಂಡು ಉಪಚರಿಸಲಾಗಿದೆ.

ಸುಜಲ-III ಯೋಜನೆ ಮಾದರಿಯಲ್ಲಿ ವಿಶ್ವಬ್ಯಾಂಕ್ ಅನುದಾನದೊಂದಿಗೆ ಹೊಸ REWARD ಯೋಜನೆಯನ್ನು ರೂಪಿಸಲಾಗಿದ್ದು, ರಾಜ್ಯದ 21 ಜಿಲ್ಲೆಗಳಲ್ಲಿ ಸುಮಾರು 19.9 ಲಕ್ಷ ಹೆ. ಮಳೆಯಾಶ್ರಿತ ಪ್ರದೇಶದಲ್ಲಿ ಸುಜಲ-III ಪಾಲುದಾರ ಸಂಸ್ಥೆಗಳ ಮೂಲಕ ಭೂ-ಸಂಪನ್ಮೂಲ ಸಮೀಕ್ಷೆ ಕೈಗೊಂಡು ದತ್ತಾಂಶ ಸಂಗ್ರಹಿಸಲು ಮತ್ತು ಅಂದಾಜು 1.00 ಲಕ್ಷ ಹೆ. ಪ್ರದೇಶದಲ್ಲಿ (20 ಉಪ ಜಲಾನಯನಗಳು) ಜಲಾನಯನ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಂಡು ಸಂಪೂರ್ಣ ಜಲಾನಯನಗಳನ್ನು ಉಪಚರಿಸಲು ಯೋಜಿಸಲಾಗಿರುತ್ತದೆ.

ಭೂ ಸಂಪನ್ಮೂಲ ಮಾಹಿತಿಯನ್ನು ಬಳಸಿಕೊಂಡು ಜಲಾನಯನ ಪ್ರದೇಶಗಳಲ್ಲಿ ಸೂಕ್ತವಾದ ಕಾಮಗಾರಿಗಳನ್ನು ಕೈಗೊಳ್ಳಲು ಹಾಗೂ ಜಲಾನಯನ ಅಭಿವೃದ್ಧಿ ಯೋಜನೆಗಳನ್ನು ಹೆಚ್ಚು ನಿಖರವಾಗಿ ಹಾಗೂ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಆದ್ಯತೆ ನೀಡಲಾಗುತ್ತಿದೆ.

## 6. ನಬಾರ್ಡ್ ಆರ್.ಐ.ಡಿ.ಎಫ್ (ಟ್ರಾಂಚಿ-27) ನೆರವಿನ ಜಲಾನಯನ ಅಭಿವೃದ್ಧಿ ಯೋಜನೆಗಳು:

ನಬಾರ್ಡ್–RIDF Tranche -27 ಯೋಜನೆಯು 2021-22 ರಿಂದ 2023-24 ನೇ ಸಾಲಿನ ವರೆಗೆ 3 ವರ್ಷಗಳಲ್ಲಿ ಅನುಷ್ಠಾನಗೊಳಿಸಲು ರೂ.2500.00 ಲಕ್ಷ (ನಬಾರ್ಡ್ ಸಾಲ ರೂ. 2375.00 ಲಕ್ಷ ಮತ್ತು ರಾಜ್ಯ ಸರ್ಕಾರ ಪಾಲು ರೂ.125.00 ಲಕ್ಷ) ಗಳ ಆಡಳಿತಾತ್ಮಕ ಮಂಜೂರಾತಿ ದೊರೆತಿರುತ್ತದೆ.

ಈ ಯೋಜನೆ ಮೂಲಕ ಮಣ್ಣು ಮತ್ತು ನೀರು ಸಂರಕ್ಷಣೆಗಾಗಿ ಉಪಜಲಾನಯನ ಪ್ರದೇಶಗಳಲ್ಲಿ ಮೇಲ್ ಸ್ತರ ಉಪಚಾರಗಳು ರಬಲ್ ತಡೆ & ಬೊಲ್ಡರ್ ತಡೆ ಮತ್ತು ನಾಲಾ ಪ್ರದೇಶ ಉಪಚಾರಕ್ಕಾಗಿ ತಡೆಅಣೆಗಳು, ನಾಲಾಬದುಗಳು, ಗೋಕಟ್ಟೆ ಹಾಗೂ ವಿವಿಧ ನೀರು ಸಂಗ್ರಹಣಾ ವಿನ್ಯಾಸಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

## 7. ರೈತ ಉತ್ಪಾದಕರ ಸಂಸ್ಥೆಗಳು (FPOs):

ರೈತ ಉತ್ಪಾದಕರ ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಸಣ್ಣ ಹಾಗೂ ಅತಿ ಸಣ್ಣ ರೈತರು ತಮ್ಮ ಉತ್ಪನ್ನಗಳನ್ನು ಮಾರುಕಟ್ಟೆ ಮಾಡುವಲ್ಲಿ ಒಬ್ಬಂಟಿಯಾಗಿ ಎದುರಿಸುವ ಹಲವಾರು ಸವಾಲುಗಳನ್ನು ಪರಿಹರಿಸಬಹುದು. ಉತ್ಪಾದಕರ ಸಂಸ್ಥೆಯಾಗಿ ರೈತ ಉತ್ಪಾದಕರ ಸಂಸ್ಥೆಯು ಸ್ಥಳೀಯ ರೈತ ಸಮುದಾಯದ ಸಂಧಾನ ಸಾಮರ್ಥ್ಯವನ್ನು ಹಾಗೂ ವ್ಯವಹಾರಿಕ ಪಾಲುದಾರಿಕೆಯನ್ನು ಅಭಿವೃದ್ಧಿಗೊಳಿಸುವ ಮೂಲಕ ರೈತರ ಆರ್ಥಿಕ ಹಾಗೂ ಔಧ್ಯಮಿಕ ಸಂಭಾವ್ಯ ಶಕ್ತಿಯನ್ನು ಸಡಿಲಿಸುವಂತೆ ಮಾಡಬಹುದಾಗಿದೆ. ಈ ಸಂಸ್ಥೆಗಳಿಂದ ಉತ್ಪಾದಕರ ಬೇಡಿಕೆಗೆ ಅನುಗುಣವಾಗಿ ಹಾಗೂ ಮೌಲ್ಯ ಸರಪಳಿಯ ಪದ್ಧತಿಯನ್ನು ಅಳವಡಿಸುವ ಮೂಲಕ ಉತ್ಪಾದಕರ ಆರ್ಥಿಕ ಹಾಗೂ ಸಾಮಾಜಿಕ ಲಾಭಗಳನ್ನು ಹೆಚ್ಚಿಸುವ ಉದ್ದೇಶವನ್ನು ಹೊಂದಿದೆ.

ಇಲಾಖೆಯು ರೈತ ಉತ್ಪಾದಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನವನ್ನು ಈ ಕೆಳಕಂಡ ಯೋಜನೆಗಳಡಿ ಅನುಷ್ಠಾನಗೊಳಿಸಲಾಗುತ್ತಿದೆ.

ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ

ಕೇಂದ್ರ ಪುರಸ್ಕೃತ ಯೋಜನೆ-10000 ರೈತ ಉತ್ಪಾಟಕರ ಸಂಸ್ಥೆಗಳ ರಚನೆ ಮತ್ತು ಉತ್ತೇಜನೆ

ಅಮೃತ ರೈತ ಉತ್ಪಾದಕರ ಸ್ಥಾಪನೆ ಮತ್ತು ಪ್ರೋತ್ಸಾಹ ಯೋಜನೆ.

**ಕೃಷಿ ಇಲಾಖೆ ಮತ್ತು ಇತರೆ ಇಲಾಖೆಗಳಿಂದ ಬಿಡುಗಡೆಯಾದ ಅನುದಾನದಲ್ಲಿ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು:**

1. **ಅಟಲ್ ಭೂಜಲ್ ಯೋಜನೆ:**

ಅಟಲ್ ಭೂಜಲ್ ಯೋಜನೆಯು ಜಲ್ ಶಕ್ತಿ ಮಂತ್ರಾಲಯ, ಭಾರತ ಸರ್ಕಾರದ ಕೇಂದ್ರ ವಲಯ ಯೋಜನೆಯಾಗಿದ್ದು, ಗುರುತಿಸಲಾದ ನೀರಿನ ಶೋಷಿತ ಪ್ರದೇಶಗಳಲ್ಲಿ ಅಂತರ್ಜಲ ನೀರಿನ ಬೇಡಿಕೆ ಮತ್ತು ಸರಬರಾಜು ನಿರ್ವಹಣೆಗೆ ಸಮುದಾಯ ಸಹಭಾಗಿತ್ವದಲ್ಲಿ ಒತ್ತು ನೀಡಲು ರೂಪಿಸಿರುವ ಕಾರ್ಯಕ್ರಮವಾಗಿದೆ. ರಾಜ್ಯದಲ್ಲಿ ಆಯ್ದ 14 ಜಿಲ್ಲೆಗಳ 41 ತಾಲ್ಲೂಕುಗಳಲ್ಲಿ 1199 ಶೋಷಿತ ಗ್ರಾಮ ಪಂಚಾಯತಿಗಳಲ್ಲಿ ಕೇಂದ್ರ ಮತ್ತು ರಾಜ್ಯ ಯೋಜನೆಗಳ ಒಗ್ಗೂಡಿಸುವಿಕೆಯ ಮೂಲಕ ಅಂತರ್ಜಲ ನಿರ್ವಹಣೆಯನ್ನು ಉತ್ತೇಜಿಸುವುದು ಯೋಜನೆಯ ಒಂದು ಪ್ರಮುಖ ಉದ್ದೇಶವಾಗಿರುತ್ತದೆ.

ಅಂತೆಯೇ, ಅಂತರ್ಜಲ ನಿರ್ವಹಣೆಗೆ ಪೂರಕವಾಗಿರುವ ಭೂಜಲ ಪೂರಣ ಫಲಿತಾಂಶವನ್ನು ಪಡೆಯಲು ಯೋಜನೆಯಡಿ ಗುರುತಿಸಿರುವ ಅರ್ಹ Supply Intervention ಸಂಬಂಧಿಸಿದ ಮಳೆನೀರು ಕೊಯ್ಲು, ನೀರು ಇಂಗುವಿಕೆ ಮತ್ತು ಜಲಮರುಪೂರಣ ಕಾಮಗಾರಿಗಳಿಗೆ ಸಂಬಂಧಿಸಿದ ಬಹುತೇಕ ನೀರು ಕೊಯ್ಲು ಮತ್ತು ಸಂರಕ್ಷಣೆ ರಚನೆಗಳ ಕಾಮಗಾರಿ ಕಾರ್ಯಕ್ರಮಗಳನ್ನು ಜಲಾನಯನ ಅಭಿವೃದ್ಧಿ ಇಲಾಖೆ ವತಿಯಿಂದ ಈ ಮೇಲೆ ತಿಳಿಸಿರುವಂತೆ ಆಯ್ದ 1199 ಶೋಷಿತ ಗ್ರಾಮ ಪಂಚಾಯತಿಗಳಲ್ಲಿ ಮೂರು ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲಾಗುವುದು.

2. **ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (Rashtriya Krishi Vikas Yojane)**

**a) ತಡೆಅಣೆ ನಿರ್ಮಾಣ (Construction of Check dam):**

ತಡೆ ಅಣೆಯು ಮಳೆ ನೀರು ಕೊಚ್ಚಣೆಯಿಂದ ಹಳ್ಳಗಳಲ್ಲಿ ಹರಿದು ಹೋಗುವ ನೀರನ್ನು ತಡೆಗಟ್ಟಲು ಮತ್ತು ರಚಿಸಲಾಗುವ ಮಳೆ ನೀರು ಕೊಯ್ಲು ರಚನೆಯಾಗಿರುತ್ತದೆ. ಹರಿದು ಹೋಗುವ ಮಳೆ ನೀರನ್ನು ತಡೆಗಟ್ಟುವುದರಿಂದ ಭೂಮಿಯಲ್ಲಿ ನೀರನ್ನು ಇಂಗಿಸಲು ಹೆಚ್ಚು ಸಮಯಾವಕಾಶ ನೀಡುವ ಮೂಲಕ ಅಂತರ್ಜಲ ವೃದ್ಧಿಗೆ ಅನುಕೂಲವಾಗುವುದು.

**b) ಸಮಸ್ಯಾತ್ಮಕ ಮಣ್ಣುಗಳ ಸುಧಾರಣೆ ಕಾರ್ಯಕ್ರಮ (Reclamation of Problematic Soil):**

ಸಮಸ್ಯಾತ್ಮಕ ಮಣ್ಣಿನ ಪ್ರದೇಶಗಳಲ್ಲಿ ಅಂತರ ಬಸಿ ಕಾಲುವೆ ನಿರ್ಮಾಣ ಮೂಲಕ ಸವಳು ಜವಳು ಮಣ್ಣಿನ ಸುಧಾರಣೆ ಮತ್ತು ಮಣ್ಣು ಸುಧಾರಣಾ ಪರಿಕರಗಳು ಮತ್ತು ಹಸಿರು ಗೊಬ್ಬರಗಳ ಬಳಕೆ ಮೂಲಕ ಆಮ್ಲೀಯ ಮಣ್ಣುಗಳ ಸುಧಾರಣಾ ಕ್ರಮಗಳನ್ನು ಕೈಗೊಂಡು, ರೈತರಲ್ಲಿ ಮಣ್ಣುಗಳ ಸಮಸ್ಯೆ ಕುರಿತು ಅರಿವು ಮೂಡಿಸಿ, ಸುಧಾರಿತ ಬೇಸಾಯ ಕ್ರಮಗಳನ್ನು ಅಳವಡಿಸಲು ಉತ್ತೇಜಿಸುವುದು.

## LAQ 597 ಅನುಬಂಧ 3

# ಕಳೆದ ಎರಡು ಆರ್ಥಿಕ ವರ್ಷಗಳ ಕೇಂದ್ರ ಪುರಸ್ಕೃತ ಯೋಜನೆಗಳು ಹಾಗೂ ಕೇಂದ್ರ ಅನುದಾನದ ವಿವರಗಳು

| ಕ್ರ. ಸಂ. | ಯೋಜನೆ | ಕೇಂದ್ರದಿಂದ ಬಿಡುಗಡೆಯಾದ ಅನುದಾನ | |
|---|---|---|---|
| | | 2020-21 | 2021-22 |
| 1 | ರಾಷ್ಟ್ರೀಯ ಆಹಾರ ಸುರಕ್ಷತೆ ಮಿಶನ್ (2401-00-102-0-08) | 14157.80 | 9930.75 |
| 3 | NMSA-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ (2401-00-108-1-15) | 19755.04 | 13894.37 |
| 4 | ಮಳೆ ಆಶ್ರಿತ ಪ್ರದೇಶದ ಅಭಿವೃದ್ಧಿ (RAD)-2401-00-108-1-16 | 995.99 | 0.00 |
| 5 | ಕೃಷಿ ವಿಸ್ತರಣೆ ಉಪ ಅಭಿಯಾನ (SMAE)-2401-00-109-0-34 | 1922.55 | 2151.60 |
| 6 | ಕೃಷಿ ಯಾಂತ್ರೀಕರಣ ಉಪ ಅಭಿಯಾನ (SMAM)-2401-00-113-0-02 | 15174.91 | 14827.81 |
| 7 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ (2401-00-800-1-57) | 23253.08 | 13237.94 |
| 8 | ಮಣ್ಣಿನ ಫಲವತ್ತತೆಯ ಯೋಜನೆ-2402-00-101-0-03 | 1317.20 | 98.16 |
| 9 | ಪ್ರಧಾನ ಮಂತ್ರಿ ಕಿರು ಆಹಾರ ಸಂಸ್ಕರಣಾ ಉದ್ದಿಮೆಗಳ ನಿಯಮಬದ್ಧಗೊಳಿಸುವಿಕೆ ಯೋಜನೆ -2408-01-103-0-02 | 0.00 | 1381.40 |
| | **ಒಟ್ಟು** | ***76576.57*** | ***55522.02*** |

ಕೃಷಿ ನಿರ್ದೇಶಕರು

## ಅನುಬಂಧ - 4

## ಕಳೆದ ಎರಡು ಆರ್ಥಿಕ ವರ್ಷಗಳ ಆಯವ್ಯಯದಲ್ಲಿ ಜಲಾನಯನ ಅಭಿವೃದ್ಧಿ ಇಲಾಖೆಯಲ್ಲಿ ಅನುಷ್ಠಾನದಲ್ಲಿರುವ ಕೇಂದ್ರ ಪುರಸ್ಕೃತ ಯೋಜನೆಗಳು ಹಾಗೂ ಅನುದಾನದ (ಬಿಡುಗಡೆ) ವಿವರ

**LAQ-597**

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ಯೋಜನೆ | 2020-21 | | | 2021-22 | | |
|---|---|---|---|---|---|---|---|
| | | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು | ಕೇಂದ್ರದ ಪಾಲು | ರಾಜ್ಯದ ಪಾಲು | ಒಟ್ಟು |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ 1.0 ಮತ್ತು ಇತರೆ ಉಪಚಾರಗಳು | 7122.05 | 4748.03 | **11870.08** | 3812.00 | 2541.33 | **6353.33** |
| 2 | ಪ್ರಧಾನ ಮಂತ್ರಿ ಕೃಷಿ ಸಿಂಚಾಯೀ ಯೋಜನೆ-ಜಲಾನಯನ ಅಭಿವೃದ್ಧಿ ಘಟಕ 2.0 | - | - | - | 2408.48 | 1605.65 | **4014.13** |
| 3 | ರಾಷ್ಟ್ರೀಯ ಸುಸ್ಥಿರ ಕೃಷಿ ಅಭಿಯಾನ-ಮಳೆಯಾಶ್ರಿತ ಪ್ರದೇಶಾಭಿವೃದ್ಧಿ | 996.00 | 664.00 | **1660.00** | 766.37 | 510.91 | **1277.28** |

ಆಯುಕ್ತರು 9/2

ಜಲಾನಯನ ಅಭಿವೃದ್ಧಿ ಇಲಾಖೆ

**LAQ : 597ರ ಅನುಬಂಧ-3**

## ಪ್ರಸಕ್ತ ಸಾಲಿನ ಕೃಷಿ ಇಲಾಖೆಯ ವಿವಿಧ ಪ್ರೋತ್ಸಾಹಕ ಯೋಜನೆಗಳಿಗಾಗಿ ಮೀಸಲಿಟ ಅನುದಾನ ಮತ್ತು ಅನುಷ್ಠಾನದ ವಿವರ (ರೂ.ಲಕ್ಷಗಳಲ್ಲಿ)

| ಕ್ರ.ಸಂ | ಯೋಜನೆ | ಮೀಸಲಿಟ್ಟ ಅನುದಾನ | ಬಿಡುಗಡೆ | ಪ್ರಗತಿ |
|---|---|---|---|---|
| 1 | ಬಿತ್ತನೆ ಬೀಜಗಳ ಪೂರೈಕೆ | 16547.43 | 16547.43 | 14854.86 |
| 2 | ಹೊಸ ಬೆಳೆ ವಿಮೆ ಯೋಜನೆ | 79280.00 | 79280.00 | 78949.53 |
| 3 | ಬೆಳೆ ಸಮೀಕ್ಷೆ ಕಾರ್ಯಕ್ರಮ | 8392.56 | 8392.56 | 3404.42 |
| 4 | ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ನಿಧಿ ಯೋಜನೆ (PMKISAN) * | 182000.00 | 101999.00 | 95671.00 |
| 5 | ಮುಖ್ಯಮಂತ್ರಿ ರೈತ ವಿದ್ಯಾ ನಿಧಿ ಕಾರ್ಯಕ್ರಮ | 101000.00 | 64000.00 | 22292.24 |
| 7 | ಸಾವಯವ ಕೃಷಿ ಮತ್ತು ರೈತ ಸಿರಿ | 2000.00 | 2000.00 | 891.13 |
| 8 | NMSA-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ * | 31138.00 | 28539.63 | 22321.98 |
| 9 | ಕೃಷಿ ಯಾಂತ್ರೀಕರಣ | 12000.00 | 12000.00 | 5164.04 |
| 10 | ಕೃಷಿ ಯಾಂತ್ರೀಕರಣ ಉಪ ಅಭಿಯಾನ * | 28000.00 | 8333.34 | 6800.90 |
| 11 | ಕೃಷಿ ಉತ್ಪನ್ನಗಳ ಸಂಸ್ಕರಣೆ | 3500.00 | 3500.00 | 261.37 |
| 12 | ಕೃಷಿ ಯಂತ್ರಧಾರೆ | 6000.00 | 6000.00 | 53.80 |
| 13 | ರೈತರ/ ವಿಸ್ತರಣಾ ಅಧಿಕಾರಿಗಳ ತರಬೇತಿ ಕಾರ್ಯಕ್ರಮ | 30.00 | 30.00 | 14.67 |
| 14 | ರಾಷ್ಟ್ರೀಯ ಆಹಾರ ಭದ್ರತಾ ಅಭಿಯಾನ | 16666.66 | 10964.30 | 4356.94 |
| 15 | ಸಸ್ಯ ಸಂರಕ್ಷಣೆ | 500.00 | 500.00 | 354.94 |
| 16 | ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ | 275.00 | 275.00 | 101.65 |
| 17 | ಸಾವಯವ ಇಂಗಾಲ ಹೆಚ್ಚಿಸುವ ಅಭಿಯಾನ | 300.00 | 300.00 | 298.13 |
| 18 | ಕೃಷಿ ವಿಸ್ತರಣಾ ಉಪ ಅಭಿಯಾನ (SAME-ATMA) | 3586.00 | 1497.33 | 1259.98 |

| ಕ್ರ.ಸಂ | ಯೋಜನೆ | ಮೀಸಲಿಟ್ಟ ಅನುದಾನ | ಬಿಡುಗಡೆ | ಪ್ರಗತಿ |
|---|---|---|---|---|
| 19 | ಮಣ್ಣಿನ ಫಲವತ್ತತೆ ಯೋಜನೆ | 8.00 | 0.00 | 0.00 |
| 20 | ರಾಷ್ಟ್ರೀಯ ಕೃಷಿ ವಿಕಾಸ್ ಯೋಜನೆಯಡಿ ಸಮಗ್ರ ಕೃಷಿ ಪದ್ಧತಿಯ ವಿಸ್ತರಣೆ * | 800.00 | 800.00 | 636.87 |
| 21 | ಪ್ರಧಾನ ಮಂತ್ರಿ ಕಿರು ಆಹಾರ ಸಂಸ್ಕರಣಾ ಉದ್ದಿಮೆಗಳ ನಿಯಮಬದ್ಧಗೊಳಿಸುವಿಕೆ ಯೋಜನೆ | 2910.00 | 866.73 | 661.44 |
| 22 | ರೈತ ಶಕ್ತಿ ಕಾರ್ಯಕ್ರಮ | 40000.00 | 40000.00 | 4541.97 |
|  | **ಒಟ್ಟು** | **534933.65** | **385825.32** | **262891.86** |

*ಕಳೆದ ಸಾಲಿನಲ್ಲಿ ಬಿಡುಗಡೆಯಾದ ಅನುದಾನದಲ್ಲಿ ಪ್ರಸಕ್ತ ಸಾಲಿನಲ್ಲಿ ಪ್ರಗತಿ ಸಾಧಿಸಲಾಗಿರುತ್ತದೆ.

ಕೃಷಿ ನಿರ್ದೇಶಕರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 598

ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ

ಉತ್ತರಿಸುವ ದಿನಾಂಕ : 15-02-2023

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಪರಿಶಿಷ್ಟ ವರ್ಗಗಳ ಶೈಕ್ಷಣಿಕ ಉನ್ನತಿಗಾಗಿ ಸರ್ಕಾರದ ಪರಿಣಾಮಕಾರಿ ಕ್ರಮಗಳು ಯಾವುವು; | ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಅಭಿವೃದ್ಧಿಗಾಗಿ ಹಾಗೂ ಉತ್ತೇಜನ ನೀಡುವ ಸಂಬಂಧ ಸರ್ಕಾರ ಹಮ್ಮಿಕೊಂಡ ಯೋಜನೆಗಳು ಈ ಕೆಳಕಂಡಂತಿವೆ.<br>1. ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಹಾಗೂ ವಾಲ್ಮೀಕಿ ಆಶ್ರಮ ಶಾಲೆಗಳು.<br>2. ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಸತಿ ಶಾಲೆಗಳು.<br>3. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ<br>4. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ<br>5. ಎಸ್.ಎಸ್.ಎಲ್.ಸಿ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಪ್ರಥಮ ದರ್ಜೆಯಲ್ಲಿ, ಪ್ರಥಮ ಪ್ರಯತ್ನದಲ್ಲಿ ಉತ್ತೀರ್ಣರಾದ ಪ.ಪಂಗಡದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಯೋಜನೆ.<br>6. ಪ್ರತಿಷ್ಠಿತ ಶಾಲೆಗಳಲ್ಲಿ ದಾಖಲಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಶಾಲಾ ಶುಲ್ಕ ಮತ್ತು ನಿರ್ವಹಣಾ ವೆಚ್ಚವನ್ನು ಭರಿಸುವ ಕಾರ್ಯಕ್ರಮ.<br>7. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಪ್ರಬುದ್ಧ ಯೋಜನೆಯಡಿ ಧನಸಹಾಯ.<br>8. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷಗಳ ಧನಸಹಾಯ.<br>9. ವಿಶ್ವವಿದ್ಯಾಲಯ ಮಟ್ಟದಲ್ಲಿ 1 ರಿಂದ 5ನೇ Rank ಪಡೆದ ವಿದ್ಯಾರ್ಥಿಗಳಿಗೆ ರೂ.50,000/-ಗಳ ಪ್ರೋತ್ಸಾಹಧನ.<br>10. ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಹಾಗೂ ನಿರುದ್ಯೋಗಿ ಜೀವನ ಭತ್ಯೆ ಕಾರ್ಯಕ್ರಮ.<br>11. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ ಯೋಜನೆ.<br>ಈ ಮೇಲ್ಕಂಡ ಯೋಜನೆಗಳಿಗೆ ಸಂಬಂಧಿಸಿದ ವಿವರವಾದ ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ) | ಕಳೆದ ಮೂರು ವರ್ಷಗಳಲ್ಲಿ ಶೈಕ್ಷಣಿಕ ಪ್ರೋತ್ಸಾಹಕ ಯೋಜನೆಗಳಿಂದ ಶೈಕ್ಷಣಿಕ ಅಭಿವೃದ್ಧಿ ಕುರಿತಾದ ಪ್ರಗತಿಯ ವಿವರಗಳೇನು; | ಕಳೆದ ಮೂರು ವರ್ಷಗಳಲ್ಲಿ ಶೈಕ್ಷಣಿಕ ಪ್ರೋತ್ಸಾಹಕ ಯೋಜನೆಗಳಿಂದ ಶೈಕ್ಷಣಿಕ ಅಭಿವೃದ್ಧಿ ಕುರಿತಾದ ಪ್ರಗತಿಯ ವಿವರಗಳನ್ನು ಅನುಬಂಧ-2ರಲ್ಲಿ ನೀಡಿದೆ. |

ಇ) ಕಳೆದ ಮೂರು ವರ್ಷಗಳಲ್ಲಿ ಪರಿಶಿಷ್ಟ ವರ್ಗದ ಅರ್ಹ ವಿದ್ಯಾರ್ಥಿಗಳನ್ನು ಪ್ರತಿಷ್ಠಿತ ಶಾಲೆಗಳಿಗೆ ದಾಖಲಿಸುವ ಪ್ರೋತ್ಸಾಹಕ ಯೋಜನೆಯನ್ನು ಎಷ್ಟು ವಿದ್ಯಾರ್ಥಿಗಳಿಗೆ ಒದಗಿಸಿಕೊಡಲಾಗಿದೆ;

ಶ್ರೀ ರಾಮಕೃಷ್ಣ ವಿದ್ಯಾ ಶಾಲಾ ಮಾದರಿ ಶಾಲೆಯಂತೆ ರಾಜ್ಯದ ಪ್ರತಿ ಜಿಲ್ಲೆಯಲ್ಲಿರುವ ಪ್ರತಿಷ್ಠಿತ ಶಾಲೆಗಳನ್ನು ಗುರುತಿಸಿ ಈ ಶಾಲೆಗಳಲ್ಲಿ ಪರಿಶಿಷ್ಟ ವರ್ಗದ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಕೆಲವು ಷರತ್ತುಗಳಿಗೆ ಒಳಪಡಿಸಿ 6ನೇ ತರಗತಿಯಿಂದ ಪ್ರವೇಶ ನೀಡಲು ಅವಕಾಶ ಕಲ್ಪಿಸಲಾಗಿರುತ್ತದೆ. ಈ ಕೆಳಕಂಡಂತೆ ಕಳೆದ ಮೂರು ವರ್ಷಗಳಲ್ಲಿ 1223-ನವೀನ, 5560-ನವೀಕರಣ ಒಟ್ಟು 6783 ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿರುತ್ತದೆ.

| ಕ್ರ. ಸಂ | ವರ್ಷ | ವಿದ್ಯಾರ್ಥಿಗಳ ಗುರಿ | ನವೀನ ವಿದ್ಯಾರ್ಥಿಗಳ ಸಂಖ್ಯೆ | ನವೀಕರಣ ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| 01 | 2019-20 | 750 | 636 | 1859 |
| 02 | 2020-21 | 750 | 0 | 1853 |
| 03 | 2021-22 | 750 | 587 | 1848 |
| **ಒಟ್ಟು** | | | **1223** | **5560** |

ಈ) ಈ ಯೋಜನೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಅನುಷ್ಠಾನಗೊಳಿಸುವ ಮೂಲಕ ರಾಜ್ಯದಾದ್ಯಂತ ಇರುವ ಸದರಿ ವಿದ್ಯಾರ್ಥಿಗಳಿಗೆ ಅನುಕೂಲ ಮಾಡಿಕೊಡುವ ಕುರಿತಾಗಿ ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಯಾವುವು;

ಸರ್ಕಾರದ ಆದೇಶ ಸಂಖ್ಯೆ: ಸಕಇ 251 ಪವಯೋ 2017 ಬೆಂಗಳೂರು, ದಿನಾಂಕ:15.07.2017ರಲ್ಲಿ ರಾಜ್ಯದ ಪ್ರತಿಷ್ಠಿತ ಶಾಲೆಗಳಿಗೆ ಪ್ರವೇಶ ಕಲ್ಪಿಸುವ ಸಂದರ್ಭದಲ್ಲಿ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಜಿಲ್ಲಾವಾರು ಈ ಕೆಳಕಂಡಂತೆ ವಿದ್ಯಾರ್ಥಿಗಳ ಗುರಿ ಹೆಚ್ಚಿಸಿ ಆದೇಶಿಸಲಾಗಿರುತ್ತದೆ. ಸರ್ಕಾರದ ಆದೇಶದಂತೆ ಆಯಾ ಜಿಲ್ಲೆಗಳಿಗೆ ನಿಗದಿಪಡಿಸಿರುವ ಗುರಿಗೆ ಅನುಗುಣವಾಗಿ ದಾಖಲಾತಿ ಪಡೆಯಲಾಗುತ್ತಿದೆ.

| ಕ್ರ ಸಂ | ಜಿಲ್ಲೆಯ ವಿವರ | ನಿಗದಿಪಡಿಸಲಾದ ವಿದ್ಯಾರ್ಥಿಗಳ ಗುರಿ | ಹೆಚ್ಚುವರಿಯಾಗಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಗುರಿ | ಒಟ್ಟು |
|---|---|---|---|---|
| 1. | ಬೆಂಗಳೂರು ಗ್ರಾಮಾಂತರ | 15 | 4 | 19 |
| 2. | ಬೆಂಗಳೂರು ನಗರ | 12 | 3 | 15 |
| 3. | ರಾಮನಗರ | 10 | 2 | 12 |
| 4. | ದಾವಣಗೆರೆ | 23 | 20 | 43 |
| 5. | ಕೋಲಾರ | 5 | 2 | 7 |
| 6. | ಚಿಕ್ಕಬಳ್ಳಾಪುರ | 25 | 5 | 30 |
| 7. | ಚಿತ್ರದುರ್ಗ | 42 | 8 | 50 |
| 8. | ತುಮಕೂರು | 12 | 10 | 22 |
| 9. | ಶಿವಮೊಗ್ಗ | 10 | 8 | 18 |
| 10. | ಮೈಸೂರು | 15 | 20 | 35 |
| 11. | ಮಂಡ್ಯ | 5 | 2 | 7 |
| 12. | ಹಾಸನ | 5 | 2 | 7 |
| 13. | ಚಾಮರಾಜನಗರ | 30 | 5 | 35 |
| 14. | ಚಿಕ್ಕಮಗಳೂರು | 14 | 6 | 20 |
| 15. | ದಕ್ಷಿಣ ಕನ್ನಡ | 3 | 2 | 5 |
| 16. | ಕೊಡಗು | 25 | 13 | 38 |
| 17. | ಉಡುಪಿ | 15 | 10 | 25 |
| 18. | ಬಾಗಲಕೋಟೆ | 10 | 5 | 15 |
| 19. | ಬೆಳಗಾವಿ | 10 | 5 | 15 |
| 20. | ವಿಜಯಪುರ | 18 | 5 | 23 |
| 21. | ಧಾರವಾಡ | 10 | 5 | 15 |
| 22. | ಗದಗ | 30 | 8 | 38 |
| 23. | ಹಾವೇರಿ | 10 | 15 | 25 |
| 24. | ಉತ್ತರ ಕನ್ನಡ | 5 | 2 | 7 |
| 25. | ಕೊಪ್ಪಳ | 12 | 7 | 19 |
| 26. | ರಾಯಚೂರು | 35 | 30 | 65 |
| 27. | ಬಳ್ಳಾರಿ | 40 | 20 | 60 |
| 28. | ಬೀದರ್ | 25 | 10 | 35 |
| 29. | ಕಲಬುರಗಿ | 5 | 10 | 15 |
| 30. | ಯಾದಗಿರಿ | 22 | 6 | 28 |
| **ಒಟ್ಟು** | | **498** | **250** | **748** |

| ಉ) | ರಾಜ್ಯದ ಅತಿ ಕಡಿಮೆ ಸಂಖ್ಯೆಯ ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿರುವ ಜಿಲ್ಲೆಗಳಿಗೆ ಆಧ್ಯತೆ ನೀಡಿ, ಎಲ್ಲಾ ಅರ್ಹ ವಿದ್ಯಾರ್ಥಿಗಳಿಗೂ ಯೋಜನೆಯ ಸೌಲಭ್ಯವನ್ನು ಒದಗಿಸಿಕೊಡುವ ಕುರಿತ ಸರ್ಕಾರದ ಕ್ರಮಗಳೇನು? | ಅನುದಾನದ ಲಭ್ಯತೆ ಅನುಗುಣವಾಗಿ ಕ್ರಮವಹಿಸಲಾಗುತ್ತಿದೆ. |
|---|---|---|

**ಸಕಇ-ಎಸ್‌ಟಿಪಿ/18/2023**

**(ಬಿ.ಶ್ರೀರಾಮುಲು )**
ಸಾರಿಗೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ
ಸಚಿವರು .

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ-598 ಕ್ಕೆ ಅನುಬಂಧ-1

- **ಶೈಕ್ಷಣಿಕ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು:**

ಪರಿಶಿಷ್ಟ ವರ್ಗದ ಜನಾಂಗದ ಶೈಕ್ಷಣಿಕ ಅಭಿವೃದ್ಧಿಗಾಗಿ ಸರ್ಕಾರ ಹಮ್ಮಿಕೊಂಡ ಯೋಜನೆಗಳು ಮತ್ತು ಅವುಗಳ ಮೂಲಕ ಸಾಧಿಸಿದ ಪ್ರಗತಿಯ ವಿವರಗಳು ಕೆಳಕಂಡಂತಿದೆ.

1. **ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಹಾಗೂ ವಾಲ್ಮೀಕಿ ಆಶ್ರಮ ಶಾಲೆಗಳು:**

ಇಲಾಖಾವತಿಯಿಂದ 136 ಮೆಟ್ರಿಕ್ ಪೂರ್ವ, 134 ಮೆಟ್ರಿಕ್ ನಂತರದ ಹಾಗೂ 119 ವಾಲ್ಮೀಕಿ ಆಶ್ರಮ ಶಾಲೆಗಳು ಸೇರಿ ಒಟ್ಟು 389 ಸಂಸ್ಥೆಗಳನ್ನು ನಿರ್ವಹಿಸಲಾಗುತ್ತಿದೆ. 2022-23ನೇ ಸಾಲಿನಲ್ಲಿ 36463 ವಿದ್ಯಾರ್ಥಿಗಳು ಪ್ರವೇಶ ಪಡೆದಿದ್ದು, ಈ ಸಂಸ್ಥೆಗಳ ನಿರ್ವಹಣೆಗಾಗಿ ರೂ.128.55 ಕೋಟಿ ನಿಗಧಿಪಡಿಸಿಕೊಳ್ಳಲಾಗಿದೆ.

2. **ವಸತಿ ಶಾಲೆಗಳು**

ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ 156 ವಸತಿ ಶಾಲೆಗಳು ಕಾರ್ಯನಿರ್ವಹಿಸುತ್ತಿದ್ದು, 28557 ವಿದ್ಯಾರ್ಥಿಗಳು ದಾಖಲಾತಿ ಪಡೆದಿರುತ್ತಾರೆ. ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ವಸತಿ ಶಾಲೆ | ಶಾಲೆಗಳ ಸಂಖ್ಯೆ | ದಾಖಲಾತಿ ಪಡೆದ ವಿದ್ಯಾರ್ಥಿಗಳ ಸಂಖ್ಯೆ |
|---|---|---|---|
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆ | 45 | 8204 |
| 2 | ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜು | 2 | 147 |
| 3 | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆ | 46 | 8486 |
| 4 | ಶ್ರೀಮತಿ ಇಂಧಿರಾ ಗಾಂಧಿ ವಸತಿ ಶಾಲೆ | 25 | 4494 |
| 5 | ಏಕಲವ್ಯ ಮಾದರಿ ವಸತಿ ಶಾಲೆ | 12 | 2867 |
| 6 | ಡಾ. ಬಿ.ಆರ್ ಅಂಬೇಡ್ಕರ್ ವಸತಿ ಶಾಲೆ | 25 | 4204 |
| 7 | ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆ | 1 | 155 |
| | **ಒಟ್ಟು** | **156** | **28557** |

3. **ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ:**

1 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದೆ. 2021-22ನೇ ಸಾಲಿನಲ್ಲಿ ಒಟ್ಟು 315169 ವಿದ್ಯಾರ್ಥಿಗಳಿಗೆ ರೂ.3881.44 ಲಕ್ಷಗಳ ವೆಚ್ಚವನ್ನು ಭರಿಸಲಾಗಿದೆ. 2022-23ನೇ ಸಾಲಿನಲ್ಲಿ ವಿದ್ಯಾರ್ಥಿವೇತನ ಕೋರಿ ಅರ್ಜಿ ಸಲ್ಲಿಸುವ ಪ್ರಕ್ರಿಯೆ ಚಾಲ್ತಿಯಲ್ಲಿದ್ದು, ಇಲ್ಲಿಯವರೆಗೆ ಒಟ್ಟು 266605 ಅರ್ಜಿಗಳು ಸ್ವೀಕೃತವಾಗಿದೆ. (ದಿನಾಂಕ:09.02.2023ಕ್ಕೆ)

4. **ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ:**

ಮೆಟ್ರಿಕ್ ನಂತರದ ವಿವಿಧ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದೆ. 2021-22ನೇ ಸಾಲಿನಲ್ಲಿ ಒಟ್ಟು 128659 ವಿದ್ಯಾರ್ಥಿಗಳಿಗೆ ರೂ.138.84 ಕೋಟಿಗಳ ವೆಚ್ಚವನ್ನು ಭರಿಸಲಾಗಿದೆ. 2022-23ನೇ ಸಾಲಿನಲ್ಲಿ ವಿದ್ಯಾರ್ಥಿವೇತನ ಕೋರಿ ಅರ್ಜಿ ಸಲ್ಲಿಸುವ ಪ್ರಕ್ರಿಯೆ ಚಾಲ್ತಿಯಲ್ಲಿದ್ದು, ಇಲ್ಲಿಯವರೆಗೆ ಒಟ್ಟು 91198 ಅರ್ಜಿಗಳು ಸ್ವೀಕೃತವಾಗಿದೆ. (ದಿನಾಂಕ:09.02.2023ಕ್ಕೆ)

5. **ಎಸ್.ಎಸ್.ಎಲ್.ಸಿ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಯೋಜನೆ:**

- ಎಸ್.ಎಸ್.ಎಲ್.ಸಿ ವಾರ್ಷಿಕ ಪರೀಕ್ಷೆಯಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನವನ್ನು ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ ಒಟ್ಟು 39766 ವಿದ್ಯಾರ್ಥಿಗಳಿಗೆ ರೂ.44.29 ಕೋಟಿ

ವೆಚ್ಚಭರಿಸಲಾಗಿದೆ. 2022-23ನೇ ಸಾಲಿನಲ್ಲಿ ಒಟ್ಟು 46434 ವಿದ್ಯಾರ್ಥಿಗಳ ಪೈಕಿ 4997 ವಿದ್ಯಾರ್ಥಿಗಳಿಗೆ ರೂ.750.00 ಲಕ್ಷಗಳ ವೆಚ್ಚಭರಿಸಲಾಗಿದೆ. ಉಳಿದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನವನ್ನು ಮಂಜೂರು ಮಾಡಲು ಕ್ರಮವಹಿಸಲಾಗುತ್ತಿದೆ.

- ಮೆಟ್ರಿಕ್ ನಂತರದ ವಿವಿಧ ಕೋರ್ಸ್ ಗಳಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನವನ್ನು ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ ಒಟ್ಟು 27685 ವಿದ್ಯಾರ್ಥಿಗಳಿಗೆ ರೂ.54.05 ಕೋಟಿ ವೆಚ್ಚಭರಿಸಲಾಗಿದೆ. 2022-23ನೇ ಸಾಲಿನಲ್ಲಿ ಆನ್‌ಲೈನ್ ಮೂಲಕ ಅರ್ಜಿಯನ್ನು ಸಲ್ಲಿಸಲು ಅವಕಾಶ ಕಲ್ಪಿಸಲಾಗಿದ್ದು, ಪ್ರೋತ್ಸಾಹಧನ ಕೋರಿ ಇದುವರೆಗೆ ಒಟ್ಟು 25352 ಅರ್ಜಿಗಳು ಸ್ವೀಕೃತಿಯಾಗಿದ್ದು, ಈ ಪೈಕಿ 12178 ಅರ್ಜಿಗಳಿಗೆ ಮಂಜೂರಾತಿ ನೀಡಿ 2670.10 ಲಕ್ಷಗಳು ಭರಿಸಲಾಗಿರುತ್ತದೆ.

**6. ಪ್ರತಿಷ್ಠಿತ ಶಾಲೆಗಳಲ್ಲಿ ದಾಖಲಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಶಾಲಾ ಶುಲ್ಕ ಮತ್ತು ನಿರ್ವಹಣಾ ವೆಚ್ಚವನ್ನು ಭರಿಸುವ ಕಾರ್ಯಕ್ರಮ:**

ಪ್ರತಿಷ್ಠಿತ ಶಾಲೆಗಳಲ್ಲಿ ನವೀನ ಮತ್ತು ನವೀಕರಣ ಪ್ರತಿಭಾವಂತ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶಾಲಾ ಶುಲ್ಕ ಮಂಜೂರು ಮಾಡುವ ಕುರಿತು.ರಾಜ್ಯ ಮಟ್ಟದ ಸಮಿತಿಯಿಂದ ಆಯ್ಕೆ ಮಾಡಲಾದ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶಾಲಾ ಶುಲ್ಕ ಹಾಗೂ ನಿರ್ವಹಣ ವೆಚ್ಚವನ್ನು ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ ಒಟ್ಟು 2435 ನವೀಕರಣ ಹಾಗೂ ನವೀನ ವಿದ್ಯಾರ್ಥಿಗಳಿಗೆ ರೂ.8.20 ಕೋಟಿ ವೆಚ್ಚಭರಿಸಲಾಗಿದೆ. 2022-23ನೇ ಸಾಲಿನಲ್ಲಿ ಒಟ್ಟು 244 ನವೀಕರಣ ಹಾಗೂ ನವೀನ ವಿದ್ಯಾರ್ಥಿಗಳಿಗೆ ರೂ.70.71 ಲಕ್ಷ ವೆಚ್ಚಭರಿಸಲಾಗಿದೆ

**7. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಪ್ರಬುದ್ಧ ಯೋಜನೆಯಡಿ ಧನಸಹಾಯ:**

ವಿದೇಶಿ ವಿಶ್ವವಿದ್ಯಾಲಯಗಳ್ಲಲಿ ಉನ್ನತ ವ್ಯಾಸಂಗಕ್ಕಾಗಿ ಪ್ರವೇಶ ಪಡೆಯುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಧನಸಹಾಯ ನೀಡಲಾಗುತ್ತಿದೆ. 2021-22ನೇ ಸಾಲಿನಲ್ಲಿ 31 ವಿದ್ಯಾರ್ಥಿಗಳಿಗೆ ರೂ.4.41 ಕೋಟಿಗಳ ವೆಚ್ಚ ಮಾಡಲಾಗಿದೆ. 2022-23ನೇ ಸಾಲಿನಲ್ಲಿ 52 ವಿದ್ಯಾರ್ಥಿಗಳಿಗೆ ರೂ.755.00 ಲಕ್ಷಗಳ ವೆಚ್ಚ ಮಾಡಲಾಗಿದೆ.

**8. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:**

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಾದ ಐ.ಐ.ಟಿ/ಐ.ಐ.ಎಂ/ಐ.ಎಂ.ಐ/ಎನ್‌ಐಟಿ ಗಳಲ್ಲಿ ಪ್ರವೇಶ ಪಡೆದಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷಗಳ ಧನಸಹಾಯ ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ 13 ವಿದ್ಯಾರ್ಥಿಗಳಿಗೆ ಮೊದಲನೇ ಕಂತಿನಲ್ಲಿ ರೂ.13.00 ಲಕ್ಷಗಳ ಧನಸಹಾಯ ಮಂಜೂರು ಮಾಡಲಾಗಿದೆ. 2022-23ನೇ ಸಾಲಿನಲ್ಲಿ 22 ವಿದ್ಯಾರ್ಥಿಗಳಿಗೆ ಮೊದಲನೇ ಕಂತಿನಲ್ಲಿ ರೂ.22.00 ಲಕ್ಷಗಳ ಧನಸಹಾಯ ಮಂಜೂರು ಮಾಡಲಾಗಿದೆ.

**9. ವಿಶ್ವವಿದ್ಯಾಲಯ ಮಟ್ಟದಲ್ಲಿ 1 ರಿಂದ 5ನೇ Rank ಪಡೆದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ:**

ವಿಶ್ವವಿದ್ಯಾಲಯ ಮಟ್ಟದಲ್ಲಿ 1 ರಿಂದ 5ನೇ Rank ಪಡೆದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ರೂ.50,000/-ಗಳ ಪ್ರೋತ್ಸಾಹಧನ ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ 23 ವಿದ್ಯಾರ್ಥಿಗಳಿಗೆ ರೂ.11.50 ಲಕ್ಷಗಳ ವೆಚ್ಚ ಭರಿಸಲಾಗಿದೆ. 2022-23ನೇ ಸಾಲಿನಲ್ಲಿ 51 ವಿದ್ಯಾರ್ಥಿಗಳಿಗೆ ರೂ.25.50 ಲಕ್ಷಗಳ ವೆಚ್ಚ ಭರಿಸಲಾಗಿದೆ.

**10. ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಹಾಗೂ ನಿರುದ್ಯೋಗಿ ಜೀವನ ಭತ್ಯೆ ಕಾರ್ಯಕ್ರಮ:**

ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿ ಪರಿಶಿಷ್ಟ ಪಂಗಡದವರಾದ ಜೇನು ಕುರುಬ ಹಾಗೂ ಕೊರಗ ಸಮುದಾಯದವರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಹಾಗೂ ನಿರುದ್ಯೋಗಿ ಜೀವನ ಭತ್ಯೆಯನ್ನು ನೀಡಲಾಗುತ್ತಿದ್ದು, 2021-22ನೇ ಸಾಲಿನಲ್ಲಿ ಶೈಕ್ಷಣಿಕ ಪ್ರೋತ್ಸಾಹಧನಕ್ಕಾಗಿ 356

ವಿದ್ಯಾರ್ಥಿಗಳಿಗೆ ರೂ.24.21 ಲಕ್ಷಗಳು ಹಾಗೂ 641 ನಿರುದ್ಯೋಗಿ ಯುವಕ ಯುವತಿಯರಿಗೆ ರೂ.81.03 ಲಕ್ಷ ವೆಚ್ಚ ಮಾಡಲಾಗಿದೆ. 2022-23ನೇ ಸಾಲಿನಲ್ಲಿ ಶೈಕ್ಷಣಿಕ ಪ್ರೋತ್ಸಾಹಧನಕ್ಕಾಗಿ 220 ವಿದ್ಯಾರ್ಥಿಗಳಿಗೆ ರೂ.62.70 ಲಕ್ಷಗಳು ಹಾಗೂ 677 ನಿರುದ್ಯೋಗಿ ಯುವಕ ಯುವತಿಯರಿಗೆ ರೂ.137.30 ಲಕ್ಷ ವೆಚ್ಚ ಮಾಡಲಾಗಿದೆ.

**11. ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ ಯೋಜನೆ:**

ಯುಪಿಎಸ್‌ಸಿ/ಕೆಪಿಎಸ್‌ಸಿ ಹಾಗೂ ಬ್ಯಾಂಕಿಂಗ್ ಪರೀಕ್ಷಾ ಪೂರ್ವ ತರಬೇತಿಗೆ ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ ಆಯ್ಕೆ ಮಾಡಿ ಪ್ರತಿಷ್ಠಿತ ಸಂಸ್ಥೆಗಳಿಗೆ ಅಭ್ಯರ್ಥಿಗಳನ್ನು ನಿಯೋಜಿಸಲಾಗುತ್ತಿದೆ. 2022-23ನೇ ಸಾಲಿನಲ್ಲಿ 2250 ಅಭ್ಯರ್ಥಿಗಳಿಗೆ ರೂ.948.38 ಲಕ್ಷಗಳ ವೆಚ್ಚದಲ್ಲಿ ತರಬೇತಿ ನೀಡಲು ಕ್ರಮವಹಿಸಲಾಗುತ್ತಿದೆ.

****

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ-598 ಕ್ಕೆ ಅನುಬಂಧ-2

- **ಶೈಕ್ಷಣಿಕ ಅಭಿವೃದ್ಧಿಗಾಗಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳು:**

ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಶೈಕ್ಷಣಿಕ ಅಭಿವೃದ್ಧಿಗಾಗಿ ಹಾಗೂ ಉತ್ತೇಜನ ನೀಡಲು ಸರ್ಕಾರದಿಂದ ಹಮ್ಮಿಕೊಂಡ ಯೋಜನೆಗಳು ಮತ್ತು ಅವುಗಳ ಮೂಲಕ ಸಾಧಿಸಿದ ಪ್ರಗತಿಯ ವಿವರಗಳು ಕೆಳಕಂಡಂತಿದೆ.

**12. ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ:**

1 ರಿಂದ 10ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನವನ್ನು ಮಂಜೂರು ಮಾಡಲಾಗುತ್ತಿದ್ದು, ಕಳೆದ ಮೂರು ಸಾಲುಗಳಲ್ಲಿ 1142164 ಅರ್ಜಿಗಳನ್ನು ಮಂಜೂರಾತಿ ನೀಡಿ ರೂ.15476.76 ಲಕ್ಷಗಳ ಅನುದಾನ ಪಾವತಿಸಲಾಗಿರುತ್ತದೆ. ವರ್ಷವಾರು ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ವರ್ಷ | ಮಂಜೂರಾತಿ ನೀಡಲಾದ ವಿದ್ಯಾರ್ಥಿಗಳ ಸಂಖ್ಯೆ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 427223 | 5594.34 |
| 02 | 2020-21 | 399772 | 6000.98 |
| 03 | 2021-22 | 315169 | 3881.44 |
| | **ಒಟ್ಟು** | **1142164** | **15476.76** |

**13. ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ:**

ಮೆಟ್ರಿಕ್ ನಂತರದ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಶೈಕ್ಷಣಿಕವಾಗಿ ಮುಂದುವರೆಯಲು ಉತ್ತೇಜನ ನೀಡುವ ಸಲುವಾಗಿ ಮೆಟ್ರಿಕ್ ನಂತರದ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು ಅನುಷ್ಠಾನಮಾಡಲಾಗುತ್ತಿದ್ದು, ಕಳೆದ ಮೂರು ಸಾಲುಗಳಲ್ಲಿ 366165 ಅರ್ಜಿಗಳನ್ನು ಮಂಜೂರಾತಿ ನೀಡಿ ರೂ.38601.6 ಲಕ್ಷಗಳ ಅನುದಾನ ಪಾವತಿಸಲಾಗಿರುತ್ತದೆ. ವರ್ಷವಾರು ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ವರ್ಷ | ಮಂಜೂರಾತಿ ನೀಡಲಾದ ವಿದ್ಯಾರ್ಥಿಗಳ ಸಂಖ್ಯೆ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 126780 | 13026.08 |
| 02 | 2020-21 | 110726 | 11691.42 |
| 03 | 2021-22 | 128659 | 13884.10 |
| | **ಒಟ್ಟು** | **366165** | **38601.6** |

**14. ಎಸ್.ಎಸ್.ಎಲ್.ಸಿ ವಾರ್ಷಿಕ ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಯೋಜನೆ:**

ಎಸ್.ಎಸ್.ಎಲ್.ಸಿ ವಾರ್ಷಿಕ ಪರೀಕ್ಷೆಯಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ. ವರ್ಷವಾರು ಮಂಜೂರಾತಿ ನೀಡಲಾದ ವಿದ್ಯಾರ್ಥಿಗಳ ವಿವರ ಈ ಕೆಳಕಂಡಂತಿದೆ.

| ಕ್ರ ಸಂ | ವರ್ಷ | ಮಂಜೂರಾತಿ ನೀಡಲಾದ ವಿದ್ಯಾರ್ಥಿಗಳ ಸಂಖ್ಯೆ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 21889 | 2494.82 |
| 02 | 2020-21 | 23498 | 2410.3 |
| 03 | 2021-22 | 39766 | 4429.16 |
| | **ಒಟ್ಟು** | **85153** | **9334.28** |

**15. ಮೆಟ್ರಿಕ್ ನಂತರದ ವಿವಿಧ ಕೋರ್ಸ್‌ಗಳಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ಯೋಜನೆ:**

ಮೆಟ್ರಿಕ್ ನಂತರದ ವಿವಿಧ ಕೋರ್ಸ್‌ಗಳಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನವನ್ನು ನೀಡಲಾಗುತ್ತಿದ್ದು, ವರ್ಷಾವಾರು ಮಾಹಿತಿಯು ಈ ಕೆಳಕಂಡಂತಿದೆ.

| ಕ್ರ ಸಂ | ವರ್ಷ | ಮಂಜೂರಾತಿ ನೀಡಲಾದ ವಿದ್ಯಾರ್ಥಿಗಳ ಸಂಖ್ಯೆ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 18904 | 4044.35 |
| 02 | 2020-21 | 20646 | 3663.00 |
| 03 | 2021-22 | 27685 | 5405.20 |
| | **ಒಟ್ಟು** | **67235** | **13112.55** |

**16. ಪ್ರತಿಷ್ಠಿತ ಶಾಲೆಗಳಲ್ಲಿ ದಾಖಲಾದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಶಾಲಾ ಶುಲ್ಕ ಮತ್ತು ನಿರ್ವಹಣಾ ವೆಚ್ಚವನ್ನು ಭರಿಸುವ ಕಾರ್ಯಕ್ರಮ ಕಾರ್ಯಕ್ರಮ:**

ಪ್ರತಿಷ್ಠಿತ ಶಾಲೆಗಳಲ್ಲಿ ನವೀನ ಮತ್ತು ನವೀಕರಣ ಪ್ರತಿಭಾವಂತ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶಾಲಾ ಶುಲ್ಕ ಮಂಜೂರು ಮಾಡುವ ಕುರಿತು.ರಾಜ್ಯ ಮಟ್ಟದ ಸಮಿತಿಯಿಂದ ಆಯ್ಕೆ ಮಾಡಲಾದ ಪ್ರತಿಷ್ಠಿತ ಶಾಲೆಗಳಲ್ಲಿ ಪ್ರವೇಶ ಪಡೆದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶಾಲಾ ಶುಲ್ಕ ಹಾಗೂ ನಿರ್ವಹಣ ವೆಚ್ಚವನ್ನು ನೀಡಲಾಗುತ್ತಿದ್ದು ಈ ಕೆಳಕಂಡಂತೆ ಕಳೆದ ಮೂರು ವರ್ಷಗಳಲ್ಲಿ 1223-ನವೀನ, 5560-ನವೀಕರಣ ಒಟ್ಟು 6783 ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸಲಾಗಿರುತ್ತದೆ.

| ಕ್ರ. ಸಂ | ವರ್ಷ | ವಿದ್ಯಾರ್ಥಿಗಳ ಗುರಿ | ನವೀನ ವಿದ್ಯಾರ್ಥಿಗಳ ಸಂಖ್ಯೆ | ನವೀಕರಣ ವಿದ್ಯಾರ್ಥಿಗಳ ಸಂಖ್ಯೆ |
|---|---|---|---|---|
| 01 | 2019-20 | 748 | 636 | 1859 |
| 02 | 2020-21 | 748 | 0 | 1853 |
| 03 | 2021-22 | 748 | 587 | 1848 |
| | | **ಒಟ್ಟು** | **1223** | **5560** |

**17. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಪಡೆಯಲು ಪ್ರಭುದ್ಧ ಯೋಜನೆಯಡಿ ಧನಸಹಾಯ:**

ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಪ್ರವೇಶ ಪಡೆಯುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಧನಸಹಾಯ ನೀಡಲಾಗುತ್ತಿದೆ. ವಿವರ ಈ ಕೆಳಕಂಡಂತಿದೆ.

| ಕ್ರ. ಸಂ | ವರ್ಷ | ವಿದ್ಯಾರ್ಥಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 05 | 146.89 |
| 02 | 2020-21 | 07 | 229.00 |
| 03 | 2021-22 | 31 | 441.00 |
| | **ಒಟ್ಟು** | **43** | **816.89** |

**18. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:**

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳಾದ ಐ.ಐ.ಟಿ/ಐ.ಐ.ಎಂ/ಐ.ಎಂ.ಐ/ಎನ್ಐಟಿ ಗಳಲ್ಲಿ ಪ್ರವೇಶ ಪಡೆದಿರುವ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷಗಳ ಧನಸಹಾಯ ನೀಡಲಾಗುತ್ತಿದ್ದು,ವರ್ಷಾವಾರು ವಿವರ ಈ ಕೆಳಕಂಡಂತಿದೆ.

| ಕ್ರ. ಸಂ | ವರ್ಷ | ವಿದ್ಯಾರ್ಥಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ |
|---|---|---|---|

| | | | (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 17 | 17.00 |
| 02 | 2020-21 | 9 | 7.50 |
| 03 | 2021-22 | 13 | 13.00 |
| | **ಒಟ್ಟು** | **39** | **37.5** |

**19. ವಿಶ್ವವಿದ್ಯಾಲಯ ಮಟ್ಟದಲ್ಲಿ 1 ರಿಂದ 5ನೇ Rank ಪಡೆದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ:**

ವಿಶ್ವವಿದ್ಯಾಲಯ ಮಟ್ಟದಲ್ಲಿ 1 ರಿಂದ 5ನೇ Rank ಪಡೆದ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ರೂ.50,000/-ಗಳ ಪ್ರೋತ್ಸಾಹಧನ ನೀಡಲಾಗುತ್ತಿದೆ. ವರ್ಷವಾರು ವಿವಿರ ಈ ಕೆಳಕಂಡಂತಿದೆ.

| ಕ್ರ. ಸಂ | ವರ್ಷ | ವಿದ್ಯಾರ್ಥಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|
| 01 | 2019-20 | 34 | 17.00 |
| 02 | 2020-21 | 42 | 21.00 |
| 03 | 2021-22 | 23 | 11.50 |
| | **ಒಟ್ಟು** | **99** | **49.5** |

**20. ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಹಾಗೂ ನಿರುದ್ಯೋಗಿ ಜೀವನ ಭತ್ಯೆ ಕಾರ್ಯಕ್ರಮ:**

ಮೈಸೂರು, , ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಪಂಗಡದವರಾದ ಜೇನು ಕುರುಬ ಹಾಗೂ ಕೊರಗ ಸಮುದಾಯದವರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಹಾಗೂ ನಿರುದ್ಯೋಗಿ ಜೀವನ ಭತ್ಯೆಯನ್ನು ನೀಡಲಾಗುತ್ತಿದ್ದು, 2019-20 ರಿಂದ 2021-22 ವರೆಗಿನ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹಧನ ಮತ್ತು ನಿರುದ್ಯೋಗಿಗಳಿಗೆ ಜೀವನ ಭತ್ಯೆಗೆ ಬಿಡುಗಡೆ ಮಾಡಿರುವ ಅನುದಾನ ಹಾಗೂ ಫಲಾನುಭವಿಗಳ ವಿವರಗಳು.

- **ಶೈಕ್ಷಣಿಕ ಪ್ರೋತ್ಸಾಹಧನದ ವಿವರ:**

| ಕ್ರ ಸಂ | ಜಿಲ್ಲೆ | 2019-20 | | 2020-21 | | 2021-22 | |
|---|---|---|---|---|---|---|---|
| | | ವಿದ್ಯಾರ್ಥಿಗಳ ಸಂಖ್ಯೆ | ವೆಚ್ಚ | ವಿದ್ಯಾರ್ಥಿಗಳ ಸಂಖ್ಯೆ | ವೆಚ್ಚ | ವಿದ್ಯಾರ್ಥಿಗಳ ಸಂಖ್ಯೆ | ವೆಚ್ಚ |
| 1 | ದಕ್ಷಿಣ ಕನ್ನಡ | 119 | 14.74 | 101 | 11.89 | 115 | 14.29 |
| 2 | ಮೈಸೂರು | 7 | 0.94 | 74 | 9.66 | 169 | 0.00 |
| 3 | ಉಡುಪಿ | 61 | 9.08 | 82 | 11.06 | 71 | 9.86 |
| 4 | ಕೊಡಗು | 9 | 0.70 | 16 | 1.03 | 1 | 0.06 |
| 5 | ಚಾಮರಾಜನಗರ | 1 | 0.12 | 0 | 0.00 | 0 | 0.00 |
| | **ಒಟ್ಟು** | **197** | **25.58** | **273** | **33.64** | **356** | **24.21** |

- **ನಿರುದ್ಯೋಗಿಗಳಿಗೆ ಜೀವನ ಭತ್ಯೆ ವಿವರ:**

| ಕ್ರ ಸಂ | ಜಿಲ್ಲೆ | 2019-20 | | 2020-21 | | 2021-22 | |
|---|---|---|---|---|---|---|---|
| | | ಫಲಾನುಭವಿಗಳ ಸಂಖ್ಯೆ | ವೆಚ್ಚ | ಫಲಾನುಭವಿಗಳ ಸಂಖ್ಯೆ | ವೆಚ್ಚ | ಫಲಾನುಭವಿಗಳ ಸಂಖ್ಯೆ | ವೆಚ್ಚ |
| 1 | ದಕ್ಷಿಣ ಕನ್ನಡ | 139 | 34.93 | 171 | 45.19 | 188 | 59.40 |
| 2 | ಮೈಸೂರು | 279 | 49.06 | 248 | 32.30 | 320 | 0.00 |
| 3 | ಉಡುಪಿ | 94 | 14.50 | 66 | 13.20 | 59 | 12.30 |
| 4 | ಕೊಡಗು | 77 | 21.84 | 133 | 36.86 | 74 | 9.33 |
| | **ಒಟ್ಟು** | **589** | **120.33** | **618** | **127.55** | **641** | **81.03** |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 599

ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ.

ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು

ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ಜನಸಂಖ್ಯಾ ಹೆಚ್ಚಳ ಮತ್ತು ಪ್ರಯಾಣಿಕರ ಬೇಡಿಕೆಗನುಸಾರವಾಗಿ ಸಾರಿಗೆ ಸುವ್ಯವಸ್ಥೆಯ ಸೌಲಭ್ಯಗಳು ಸುಲಭವಾಗಿ ಲಭಿಸುವಂತೆ ಹಾಗೂ ನವೀಕರಣ /ಆಧುನೀಕರಣಗೊಳಿಸುವುದರೊಂದಿಗೆ ಮಾದರಿ ರೀತ್ಯ ಜನಪ್ರಿಯಗೊಳಿಸಲು ಸಾರಿಗೆ ಇಲಾಖೆಯವರು ಹಮ್ಮಿಕೊಂಡಿರುವ ಯೋಜನೆಗಳು ಯಾವುವು; | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಬೆಂಗಳೂರು ನಗರ ಹಾಗೂ ಸುತ್ತಮುತ್ತಲಿನ ಸಾರ್ವಜನಿಕ ಪ್ರಯಾಣಿಕರಿಗೆ ಉತ್ತಮ ಸಾರಿಗೆ ಸೌಲಭ್ಯವನ್ನು ಒದಗಿಸಲು ನಿರಂತರವಾಗಿ ಶ್ರಮಿಸುತ್ತಿದೆ. ಪ್ರಸ್ತುತ ಸಂಸ್ಥೆಯಿಂದ ಬೆಂಗಳೂರು ನಗರ ಹಾಗೂ ಹೊರವಲಯದ ಪ್ರಯಾಣಿಕರು ದಟ್ಟಣೆ/ ಬೇಡಿಕೆಗನುಗುಣವಾಗಿ 1800 ಮಾರ್ಗಗಳಲ್ಲಿ 5581 ಅನುಸೂಚಿಗಳಿಂದ 54,553 ಸುತ್ತುವಳಿಗಳನ್ನು (ದಿನಾಂಕ: 31.01.2023ರಲ್ಲಿದ್ದಂತೆ) ಸಾಮಾನ್ಯ, ವಜ್ರ, ವಾಯುವಜ್ರ, ಮೆಟ್ರೋ ಫೀಡರ್ ಮಾದರಿಯ ಸಾರಿಗೆಗಳಿಂದ ಕಾರ್ಯಾಚರಣೆಗೊಳಿಸಲಾಗುತ್ತಿದೆ. |
| ಆ. | ಬಿಎಂಟಿಸಿ ಪ್ರಯಾಣಿಕರ ಸಂಖ್ಯಾ ಹೆಚ್ಚಳದ ಕುರಿತು ವಿವರಗಳು ಹಾಗೂ ನೂತನ ಹಾಗೂ ವಿವಿಧ ವರ್ಗಗಳ ಪ್ರಯಾಣಿಕರೂ ಮಹಾನಗರ ಸಾರಿಗೆ ವ್ಯವಸ್ಥೆಯತ್ತ ಆಕರ್ಷಿಸಲು ಆಡಳಿತ ಮಂಡಳಿಯ ಅನುಕರಣೀಯ ಕ್ರಮಗಳು ಯಾವುವು; | ಕಳೆದ ಮೂರು ವರ್ಷಗಳಲ್ಲಿ ಸಂಸ್ಥೆಯ ವಾಹನಗಳಲ್ಲಿ ಪ್ರತಿನಿತ್ಯ ಪ್ರಯಾಣಿಸುತ್ತಿರುವ ಸರಾಸರಿ ಪ್ರಯಾಣಿಕರ ಸಂಖ್ಯೆ ಈ ಕೆಳಕಂಡಂತಿದೆ:<br><br>**(ಲಕ್ಷಗಳಲ್ಲಿ)**<br><br>**2019-20**: 33.10<br>**2020-21**: 12.71<br>**2021-22**: 15.80<br>**2022-23 (ಡಿಸೆಂಬರ್ ವರೆಗೆ)**: 27.18<br><br>ವಿವಿಧ ವರ್ಗಗಳ ಪ್ರಯಾಣಿಕರು ಮಹಾನಗರ ಸಾರಿಗೆ ವ್ಯವಸ್ಥೆಯತ್ತ ಆಕರ್ಷಿಸಲು ಈ ಕೆಳಕಂಡ ಕ್ರಮ ಕೈಗೊಳ್ಳಲಾಗಿದೆ:<br><br>• ಸಂಸ್ಥೆಯು ವಿವಿಧ ಮಾದರಿಯ ಸೇವೆಗಳಾದ ಸಾಮಾನ್ಯ, ವಜ್ರ, ವಾಯುವಜ್ರ, ಮೆಟ್ರೋ ಫೀಡರ್ ಸೇವೆಗಳನ್ನು ಕಾರ್ಯಾಚರಣೆ ಮಾಡುತ್ತಿದೆ.<br>• ಸಂಸ್ಥೆಯು "ಸಹಾಯ ಹಸ್ತ ಪಾಸು" ಒಳಗೊಂಡಂತೆ ವಿವಿಧ ರೀತಿಯ ರಿಯಾಯಿತಿ ಪಾಸುಗಳನ್ನು ವಿತರಣೆ ಮಾಡುತ್ತಿದೆ.<br>• ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ದೈನಿಕ, ಸಾಪ್ತಾಹಿಕ ಹಾಗೂ ಮಾಸಿಕ ಪಾಸುಗಳನ್ನು ಆನ್‌ಲೈನ್ ಮೂಲಕ Digital Pass ಪಡೆಯಲು ಕ್ರಮ ಕೈಗೊಳ್ಳಲಾಗಿದೆ. |

| | |
|---|---|
| | • 2022-23ನೇ ಸಾಲಿನಲ್ಲಿ 238 ಬಿ.ಎಸ್-6 ಡೀಸೆಲ್ ಇಂಧನದ ಸಾಮಾನ್ಯ ಬಸ್ಸುಗಳನ್ನು ಸಂಸ್ಥೆಯ ವಾಹನ ಬಲಕ್ಕೆ ಸೇರ್ಪಡೆಗೊಳಿಸಲಾಗಿದೆ.<br>• ಭಾರತ ಸರ್ಕಾರದ ಫೇಮ್-2 ಯೋಜನೆಯಲ್ಲಿ 300 ಹವಾನಿಯಂತ್ರಿತ ಬಸ್ಸುಗಳು, ರಾಜ್ಯ ಸರ್ಕಾರದ ಸ್ಮಾರ್ಟ್ ಸಿಟಿ ಯೋಜನೆಯಡಿಯಲ್ಲಿ 90 ಮೆಟ್ರೋ ಫೀಡರ್ ಬಸ್ಸುಗಳು, ಒಟ್ಟಾರೆ 390 ಎಲೆಕ್ಟ್ರಿಕ್ ಬಸ್ಸುಗಳನ್ನು GCC Model ಆಧಾರದ ಮೇಲೆ ಕಾರ್ಯಾಚರಣೆ ಮಾಡಲು ಕ್ರಮ ಕೈಗೊಂಡಿದ್ದು, ಪ್ರಸ್ತುತ 250 ಎಲೆಕ್ಟ್ರಿಕ್ ಬಸ್ಸುಗಳನ್ನು ವಿವಿಧ ಮಾರ್ಗಗಳಲ್ಲಿ ಆಚರಣೆ ಮಾಡಲಾಗುತ್ತಿದೆ.<br>• ಭಾರತ ಸರ್ಕಾರದ ಫೇಮ್-2 ಅಡಿಯಲ್ಲಿ M/s CESL ವತಿಯಿಂದ 921 ಹವಾನಿಯಂತ್ರಿತ ಎಲೆಕ್ಟ್ರಿಕ್ ಬಸ್ಸುಗಳನ್ನು GCC Model ಆಧಾರದ ಮೇಲೆ ಕಾರ್ಯಾಚರಣೆ ಮಾಡಲು ಯೋಜಿಸಲಾಗಿದೆ. |
| ರಾಜ್ಯ ಮಹಾನಗರ ಸಾರಿಗೆ ವ್ಯವಸ್ಥೆಯು ದೇಶದಲ್ಲಿ ಮಾದರಿ ಸಂಚಾರ ವ್ಯವಸ್ಥೆಯನ್ನಾಗಿ ಅಭಿವೃದ್ಧಿಪಡಿಸಲು ಇಲಾಖೆಯವರ ಮುಂದಿರುವ ಪ್ರಸ್ತಾವನೆಗಳು ಯಾವುವು; ನೂತನ ಆಧುನಿಕ ವ್ಯವಸ್ಥೆಯ ಬಸ್‌ಗಳು ಹಾಗೂ ವಿದ್ಯುತ್ ಚಾಲಿತ ಬಸ್‌ಗಳ ಬಳಕೆಯನ್ನು ಹೆಚ್ಚಿಸಲು ಹಾಗೂ ಸುರಕ್ಷಿತ ಪ್ರಯಾಣವನ್ನು ಖಾತರಿಪಡಿಸುವಲ್ಲಿ ಬಿಎಂಟಿಸಿ ಸಂಸ್ಥೆಯ ಕ್ರಮಗಳೇನು? | ಸಂಸ್ಥೆಯಲ್ಲಿ ಪ್ರಸ್ತುತ GCC (Gross Cost Contract) ಆಧಾರದ ಮೇಲೆ ಹವಾನಿಯಂತ್ರಣರಹಿತ ಎಲೆಕ್ಟ್ರಿಕ್ ಬಸ್ಸುಗಳನ್ನು ಆಚರಣೆ ಮಾಡಲಾಗುತ್ತಿದೆ.<br><br>2023-24ರ ಅಂತ್ಯಕ್ಕೆ ಒಟ್ಟು 1311 ಎಲೆಕ್ಟ್ರಿಕ್ ಬಸ್ಸುಗಳನ್ನು ಕಾರ್ಯಾಚರಿಸಲು ಯೋಜಿಸಲಾಗಿದೆ.<br><br>• ಪ್ರಸ್ತುತ ಸಂಸ್ಥೆಯಿಂದ M/s. NTPC Vidyut Vyapar Nigam Limited ರವರ 90 ಎಲೆಕ್ಟ್ರಿಕ್ ಬಸ್ಸುಗಳನ್ನು ಹಾಗೂ M/s. Switch Mobility Automotive ರವರ 160 ಎಲೆಕ್ಟ್ರಿಕ್ ಬಸ್ಸುಗಳನ್ನು ಒಟ್ಟಾರೆ 250 ಎಲೆಕ್ಟ್ರಿಕ್ ಬಸ್ಸುಗಳನ್ನು ಕಾರ್ಯಾಚರಿಸಲಾಗುತ್ತಿದೆ.<br>• ನಗರದಲ್ಲಿ ಉತ್ತಮ ಹಾಗೂ ಸುರಕ್ಷಿತ ಸಾರಿಗೆ ಸೌಲಭ್ಯವನ್ನು ಒದಗಿಸಲು ನಿರ್ಭಯಾ ಯೋಜನೆಯಡಿ Vehicle Tracking System, Passenger Information System, Mobile ತಂತ್ರಾಂಶಗಳನ್ನು ಅನುಷ್ಠಾನಗೊಳಿಸಲು ಯೋಜಿಸಲಾಗಿದೆ. |

: ಟಿಡಿ 24 ಟಿಸಿಕ್ಯೂ 2023

(ಬಿ. ಶ್ರೀರಾಮುಲು)

ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ

ಕಲ್ಯಾಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 60
ಉತ್ತರಿಸಬೇಕಾದ ದಿನಾಂಕ : 15.02.2023
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್ (ಇಂಡಿ)
ಉತ್ತರಿಸುವ ಸಚಿವರು : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಯುವನೀತಿ-2022ಕ್ಕೆ ಸಚಿವ ಸಂಪುಟ ಅನುಮೋದನೆ ನೀಡಿದೆಯೇ, ನೀಡಿದ್ದಲ್ಲಿ, ಯಾವಾಗ ಅನುಮೋದನೆ ನೀಡಲಾಗಿದೆ ಮತ್ತು ಅದರ ಉದ್ದೇಶಗಳೇನು(ವಿವರ ನೀಡುವುದು) | ಹೌದು,<br>ಕರ್ನಾಟಕ ರಾಜ್ಯ ಯುವನೀತಿ 2022 ಕ್ಕೆ ಸಚಿವ ಸಂಪುಟ ದಿನಾಂಕ: 08-12-2022 ರಂದು ಅನುಮೋದನೆ ನೀಡಿದ್ದು, ಇದರ ಉದ್ದೇಶಗಳನ್ನು **ಅನುಬಂಧ-1ರಲ್ಲಿ** ನೀಡಲಾಗಿದೆ. |
| ಆ) | ಸದರಿ ಯುವನೀತಿಗೆ 14 ಜನರ ಸಮಿತಿ ಅಧ್ಯಯನ ನಡೆಸಿ, ಯುವನೀತಿ ಕರಡನ್ನು ರಾಜ್ಯ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿದೆಯೇ; | ಹೌದು,<br>ಕರ್ನಾಟಕ ರಾಜ್ಯ ಯುವನೀತಿ 2022 ಕ್ಕೆ ಸಂಬಂಧಿಸಿದಂತೆ 15 ಜನರನ್ನೊಳಗೊಂಡ ತಜ್ಞರ ಸಮಿತಿಯು ಅಧ್ಯಯನ ನಡೆಸಿ ಕರಡನ್ನು ರಾಜ್ಯ ಸರ್ಕಾರಕ್ಕೆ ದಿನಾಂಕ: 04-08-2022 ರಂದು ಶಿಫಾರಸ್ಸು ಮಾಡಿ ಸಲ್ಲಿಸಲಾಗಿದೆ. |
| ಇ) | 14 ಜನರ ಸಮಿತಿ ಸೂಚಿಸಿದ್ದ ಸಲಹೆ-ಸೂಚನೆಗಳೇನು; ಅವುಗಳಲ್ಲಿ ಯಾವ ಯಾವ ಸೂಚನೆಗಳಿಗೆ ಸಚಿವ ಸಂಪುಟ ಸಭೆಯು ಅನುಮೋದಿಸಿದೆ; | ಕರ್ನಾಟಕ ರಾಜ್ಯ ಯುವ ನೀತಿ 2022ರ ತಜ್ಞರ ಸಮಿತಿಯು ಸಲ್ಲಿಸಿದ ಶಿಫಾರಸ್ಸುಗಳ ಸಲಹೆ ಸೂಚನೆಗಳಿಗೆ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದಂತೆ ಸರ್ಕಾರಿ ಆದೇಶ ಸಂಖ್ಯೆ: ವೈಎಸ್‌ಡಿ 86 ಇಪಿಇ 2022; ದಿನಾಂಕ: 22.12.2022ರಂದು ಹೊರಡಿಸಲಾಗಿದೆ. ಪ್ರತಿಯನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |
| ಈ | ಸದರಿ ಸಂಪುಟ ಸಭೆಯು ಅನುಮೋದಿಸಿದ್ದನ್ನು ಇದುವರೆಗೂ ಅನುಷ್ಠಾನಗೊಳಿಸದಿರಲು ಕಾರಣಗಳೇನು; | ಕರ್ನಾಟಕ ರಾಜ್ಯ ಯುವ ನೀತಿ 2022ರ ಬಗ್ಗೆ ಕಾರ್ಯಕಾರಿ ಮಾರ್ಗಸೂಚಿಗಳನ್ನು ರಚಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. 2022ರ ಯುವನೀತಿ ಅಂಶಗಳಿಗೆ 2023-24ರ ಸಾಲಿನಲ್ಲಿ ಅನುದಾನ ನಿರೀಕ್ಷಿಸಿದೆ. |
| ಉ) | ಯುವ ಸಬಲೀಕರಣ ಮತ್ತು ಕ್ರೀಡೆಗೆ ಪ್ರತ್ಯೇಕ ನಿರ್ದೇಶನಾಲಯಗಳನ್ನು ಸ್ಥಾಪಿಸುವ ಬಗ್ಗೆ ರಾಜ್ಯ ಸರ್ಕಾರದ ಸ್ಪಷ್ಟ ನಿಲುವೇನು? ( ವಿವರ ನೀಡುವುದು). | ಸದರಿ ಅಂಶವು ಸಚಿವ ಸಂಪುಟ ಸಭೆಯಲ್ಲಿ ಅನುಮೋದನೆಗೊಂಡಿರುವುದಿಲ್ಲ. |

ವೈಎಸ್‌ಡಿ-ಇಬಿಬಿ/ 06/2023

**(ಡಾ. ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

# ಅನುಬಂಧ-1

## ಉದ್ದೇಶಗಳು:-

- **ಉದ್ಯೋಗ ಮತ್ತು ಕೌಶಲ್ಯಗಳ ನಡುವೆ ಇರುವ ಅಂತರದ ಸಮಸ್ಯೆಗೆ ಕಾರಣಗಳನ್ನು ಪರಿಶೀಲಿಸಲು ಸಮಿತಿಯನ್ನು ರಚಿಸುವುದು,** ಉದ್ಯೋಗ ಮಾರುಕಟ್ಟೆಯ ಪ್ರಸ್ತುತ ಅಗತ್ಯತೆಗಳನ್ನು ಗುರುತಿಸಿ ಅವುಗಳನ್ನು ಪದವಿ ಮತ್ತು ಸ್ನಾತಕೋತ್ತರ ಮಟ್ಟದ ಶೈಕ್ಷಣಿಕ ಕೋರ್ಸ್‌ಗಳ ಪಠ್ಯಕ್ರಮಗಳಲ್ಲಿ ಅಳವಡಿಸಿಕೊಳ್ಳಲು ಮರು ಪರಿಶೀಲನೆ ಮಾಡುವುದು.

- **ಉದ್ಯೋಗಿಗಳಿಗೆ ಬೇಕಿರುವ ಕೌಶಲ್ಯ ಕೊರತೆ ಕುರಿತು ಜಿಲ್ಲಾ ಮಟ್ಟದಲ್ಲಿ ಸಮೀಕ್ಷೆ** ನಡೆಸಲು ವಿಶ್ವವಿದ್ಯಾನಿಲಯಗಳು ಮತ್ತು ನಾಗರೀಕ ಸೇವಾ ಸಂಘಟನೆಗಳೊಡನೆ ಕೈ ಜೋಡಿಸುವುದು.

- ಉದ್ಯೋಗಗಳಲ್ಲಿ ಮಹಿಳೆಯ ಭಾಗವಹಿಸುವಿಕೆಯನ್ನು ಉತ್ತೇಜಿಸಲು ಪ್ರತಿ ಜಿಲ್ಲೆಯಲ್ಲಿ ಮಹಿಳೆಯರಿಗಾಗಿ ಸ್ವ-ಸಹಾಯ ಗುಂಪುಗಳು, ಸ್ತ್ರೀ-ಶಕ್ತಿ ಮತ್ತು ಪ್ರಧಾನ ಮಂತ್ರಿ ಮುದ್ರಾ ಯೋಜನೆಯಂತಹ ಕಾರ್ಯಕ್ರಮಗಳೊಂದಿಗೆ ಸಂಪರ್ಕಿಸುವುದು.

- ಹೊಸ ಯುವ ನೀತಿಯಲ್ಲಿ ಪ್ರಸ್ತಾಪಿಸಿದಂತೆ, ಶೇ.80ರಷ್ಟು ಯುವಜನರು ಕೌಶಲ್ಯ ತರಬೇತಿಯಿಂದ ವಂಚಿತರಾಗಿರುವುದರಿಂದ ಕರ್ನಾಟಕ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿರುವ ಯುವಜನತೆಗೆ **ಸ್ಥಳೀಯ ಕೈಗಾರಿಕೆಗಳಲ್ಲಿ ಮೂರು ತಿಂಗಳ ಅವಧಿಗೆ ಇಂಟರ್ನ್‌ಶಿಪ್ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬಹುದಾಗಿದೆ.** ಇದರಿಂದ ಯುವಜನರ ಕೌಶಲ್ಯತೆಯನ್ನು ಮತ್ತು ಉದ್ಯಮಶೀಲತೆಯನ್ನು ಹೆಚ್ಚಿಸಬಹುದಾಗಿದ್ದು, ಅವರುಗಳು ಸ್ವಾವಲಂಬಿಯಾಗಿ ಸ್ವ-ಉದ್ಯೋಗ ಕಲ್ಪಿಸಲು ಹಾಗೂ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಅನುಕೂಲ ಮಾಡಿದಂತಾಗುತ್ತದೆ.

## ಆರೋಗ್ಯ ಮತ್ತು ಯೋಗಕ್ಷೇಮ

- ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆಯ ಪ್ರಕಾರ 15 ರಿಂದ 19 ವರ್ಷದೊಳಗಿನ ಶೇ. 49.40ರಷ್ಟು ಹೆಣ್ಣು ಮಕ್ಕಳು ಹಾಗೂ ಶೇ. 26.50 ಗಂಡು ಮಕ್ಕಳು **ರಕ್ತ ಹೀನತೆಯಿಂದ** ಬಳಲುತ್ತಿದ್ದಾರೆ.

- ಹೆಣ್ಣು ಮಕ್ಕಳು ಹಾಗೂ ಗಂಡು ಮಕ್ಕಳು ಕ್ರಮವಾಗಿ ಶೇ. 17.20 ರಷ್ಟು ಹಾಗೂ ಶೇ. 14.30ರಷ್ಟು **ಸಾಮಾನ್ಯಕ್ಕಿಂತ ಕಡಿಮೆ ದೈಹಿಕ ತೂಕವನ್ನು** ಹೊಂದಿರುತ್ತಾರೆ.

- 2019 ಮತ್ತು 2020ರಲ್ಲಿ ರಾಜ್ಯದಲ್ಲಿ **ಆತ್ಮಹತ್ಯೆ ಮಾಡಿಕೊಂಡು ನಿಧನರಾದವರಲ್ಲಿ ಶೇ. 30ರಷ್ಟು ಮಂದಿ** ಯುವಜನರಿದ್ದಾರೆ.

ಯುವಜನರ ಆರೋಗ್ಯ ಮತ್ತು ಯೋಗಕ್ಷೇಮವನ್ನು ಸುಧಾರಿಸಲು ಯುವಜನರ ಪೋಷಣೆ, ಲೈಂಗಿಕ ಮತ್ತು ಸಂತಾನೋತ್ಪತ್ತಿ, ಆರೋಗ್ಯ ಮತ್ತು ಮಾನಸಿಕ ಆರೋಗ್ಯದ ಮೇಲೆ ಕೇಂದ್ರೀಕರಿಸಲು ಈ ನೀತಿ ಸಹಕಾರಿಯಾಗಿದ್ದು, ಈ ಕೆಳಕಂಡ ಶಿಫಾರಸ್ಸುಗಳನ್ನು ಸಮರ್ಥಿಸುತ್ತದೆ:-

- ಯುವ ಜನರಲ್ಲಿ ಆರೋಗ್ಯ ಮತ್ತು ಪೌಷ್ಠಿಕತೆಯನ್ನು ಉತ್ತೇಜಿಸಲು ಮಹಿಳಾ ಪೂರಕ ಪೌಷ್ಠಿಕಾಂಶ ಉತ್ಪಾದನೆ ಮತ್ತು ತರಬೇತಿಗಾಗಿ **ತಾಲ್ಲೂಕು ಮಟ್ಟದಲ್ಲಿ ಅರ್ಹ ಪೌಷ್ಠಿಕ ತಜ್ಞರನ್ನು** ನೇಮಿಸುವುದು.
- ರಾಷ್ಟ್ರೀಯ ಆರೋಗ್ಯ ಮಿಷನ್ ಅಡಿಯಲ್ಲಿ ಜಿಲ್ಲಾ ಮಾನಸಿಕ ಆರೋಗ್ಯ ಕಾರ್ಯಕ್ರಮದ ವ್ಯಾಪ್ತಿಯನ್ನು ತಾಲ್ಲೂಕುಗಳಿಗೆ ವಿಸ್ತರಿಸುವುದು.
- ಡಿಜಿಟಲ್ ವ್ಯಸನದ ದುಷ್ಪರಿಣಾಮಗಳನ್ನು ಎದುರಿಸಲು ಯುವಜನರಿಗೆ ಸಹಾಯ ಮಾಡಲು **ಯುವ ಸ್ಪಂದನ** ಕಾರ್ಯಕ್ರಮದ ವ್ಯಾಪ್ತಿಯನ್ನು ವಿಸ್ತರಿಸಿ, ಜಾಗೃತಿ ಮೂಡಿಸುವುದು ಹಾಗೂ **ಮದ್ಯ, ತಂಬಾಕು ಮತ್ತು ಮಾದಕ ವಸ್ತುಗಳ** ಸೇವನೆಯ ಪರಿಣಾಮದಿಂದ ಆಗುವ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ನಡೆಸುವುದು.

## <u>ಕಲೆ ಮತ್ತು ಸಂಸ್ಕೃತಿ</u>

ರಾಜ್ಯದ ಶ್ರೀಮಂತ ಮತ್ತು ವೈವಿಧ್ಯಮಯ ಕಲಾತ್ಮಕ ಮತ್ತು ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸುವಲ್ಲಿ ಯುವಜನರಲ್ಲಿ ಅರಿವು ಮೂಡಿಸಲು ಮತ್ತು ತೊಡಗಿಸಿಕೊಳ್ಳಲು ಈ ಕೆಳಕಂಡ ಕಾರ್ಯಸೂಚಿಗಳನ್ನು ಯುವ ನೀತಿಯು ಶಿಫಾರಸ್ಸು ಮಾಡುತ್ತದೆ: -

- ಕಲೆ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಪ್ರಶಸ್ತಿ ಮತ್ತು ಗೌರವಧನವನ್ನು ಒದಗಿಸುವುದು.
- ಜಾನಪದ ಮತ್ತು ಬುಡಕಟ್ಟು ಕಲೆಯನ್ನು ಯುವಜನರಲ್ಲಿ ಉತ್ತೇಜಿಸಲು ತಜ್ಞರೊಂದಿಗೆ ಸಮಾಲೋಚಿಸಿ, ಪ್ರತ್ಯೇಕ ಕೋರ್ಸ್‌ಗಳನ್ನು ವಿವಿಧ ಅಧ್ಯಯನ ಕೇಂದ್ರಗಳಲ್ಲಿ ವಿನ್ಯಾಸಗೊಳಿಸುವುದು.
- ಗ್ರಾಮ / ತಾಲ್ಲೂಕು / ಜಿಲ್ಲಾ / ರಾಜ್ಯ ಮಟ್ಟದಲ್ಲಿ ವಾರ್ಷಿಕ ಯುವಜನೋತ್ಸವಗಳನ್ನು ನಡೆಸುವುದು.

## <u>ಕ್ರೀಡೆ ಮತ್ತು ದೈಹಿಕ ಸಾಮರ್ಥ್ಯ</u>

ಕ್ರೀಡೆ ಮತ್ತು ಫಿಟ್‌ನೆಸ್ ಯುವಜನರಿಗೆ ನಾಯಕತ್ವ ಮತ್ತು ಟೀಮ್ ವರ್ಕ್ ಮತ್ತು ತಂಡದ ಕೆಲಸಗಳಲ್ಲಿನ ಪ್ರಮುಖ ಮೌಲ್ಯಗಳನ್ನು ಕಲಿಯಲು ಮತ್ತು ಜೀವನದಲ್ಲಿ ಸಂವಹನ ಮತ್ತು ಪರಸ್ಪರರೊಡನೆ ಹಂಚಿಕೊಳ್ಳುವಂತಹ ಸಾಮಾಜಿಕ ಕೌಶಲ್ಯಗಳನ್ನು ಕಲಿಯಲು ಸಹಾಯ ಮಾಡುತ್ತದೆ. ಯುವಜನರಲ್ಲಿ **ಸಶಕ್ತತೆಗಾಗಿ ಕ್ರೀಡೆಗಳು ಮತ್ತು ಉತ್ಕೃಷ್ಟತೆಗಾಗಿ ಕ್ರೀಡೆಗಳಂತಹ** ಮೌಲ್ಯಗಳನ್ನು ರೂಪಿಸಲು ಈ ಕೆಳಕಂಡಂತೆ ಶಿಫಾರಸ್ಸು ಮಾಡುತ್ತದೆ: -

- ಫಿಟ್ ಇಂಡಿಯಾ ಅಭಿಯಾನದ ಮಾದರಿಯಲ್ಲಿ **ಫಿಟ್ ಕರ್ನಾಟಕ ಅಭಿಯಾನ**ವನ್ನು ಕರ್ನಾಟಕದಲ್ಲಿ ಅನುಷ್ಠಾನಗೊಳಿಸುವುದು.

- ಕರ್ನಾಟಕದ ಗ್ರಾಮೀಣ, ನಗರ ಮತ್ತು ಬುಡಕಟ್ಟು ಪ್ರದೇಶಗಳಲ್ಲಿ ವಿವಿಧ ಕ್ರೀಡೆಗಳಲ್ಲಿ ಸಮುದಾಯ ಸ್ಪರ್ಧೆಗಳನ್ನು ನಡೆಸುವುದು.

- **ಯುವಜನ ಕ್ರೀಡೆ ಮತ್ತು ದೈಹಿಕ ಸಾಮರ್ಥ್ಯದ ರಾಯಭಾರಿ**ಗಳನ್ನು ಪ್ರತಿ ತಾಲ್ಲೂಕಿನಲ್ಲಿ ನೇಮಕ ಮಾಡಿಕೊಂಡು ದೈಹಿಕ ಸಾಮರ್ಥ್ಯ ಯೋಜನೆಗಳನ್ನು ಉತ್ತೇಜಿಸುವುದು.

## <u>ಮೌಲ್ಯಾಧಾರಿತ ನಾಯಕತ್ವದ ಅಭಿವೃದ್ಧಿ</u>

ನಾಯಕತ್ವದ ಗುಣಗಳನ್ನು ಬೆಳೆಸುವ ಮೂಲಕ ಮತ್ತು ಭಾಗವಹಿಸುವಿಕೆಗೆ ಅವಕಾಶಗಳನ್ನು ಸೃಷ್ಟಿಸುವ ಮೂಲಕ ಯುವಜನರ ನಾಗರಿಕ ಮತ್ತು ರಾಜಕೀಯ ಭಾಗವಹಿಸುವಿಕೆಯನ್ನು ಸಕ್ರಿಯಗೊಳಿಸುವುದು. ಯುವಜನರಿಗೆ ಅವಕಾಶ ನೀಡುವ ವಿವಿಧ ಮಾರ್ಗಗಳನ್ನು ಸೃಷ್ಟಿಸಲು ಯುವ ನೀತಿ-2022 ಈ ಕೆಳಕಂಡ ಶಿಫಾರಸ್ಸುಗಳನ್ನು ಮಾಡುತ್ತದೆ.

- ಗ್ರಾಮ ಪಂಚಾಯಿತಿ ಮಟ್ಟದಲ್ಲಿ **ಯುವ ಸಬಲೀಕರಣ ಅಧಿಕಾರಿ**ಯನ್ನು ನೇಮಿಸುವುದು.

- **ಯುವ ಸ್ಪಂದನ ವೇದಿಕೆ**ಯನ್ನು ಎಲ್ಲಾ ಯುವಜನ ಸಂಬಂಧಿತ ಸಮಸ್ಯೆಗಳಿಗೆ **ಏಕಗವಾಕ್ಷಿ ಪರಿಹಾರ** ನೀಡುವುದು.

- ರಾಜ್ಯದ ಗ್ರಾಮೀಣ ಯುವಜನರಿಗಾಗಿ **ಪಂಚಾಯತ್ ರಾಜ್ ಸಂಸ್ಥೆಗಳ ಫೆಲೋಶಿಪ್** ಕಾರ್ಯಕ್ರಮವನ್ನು ಸ್ಥಾಪಿಸುವುದು.

## <u>ಸುಸ್ಥಿರ ಅಭಿವೃದ್ಧಿ</u>

- ಸುಸ್ಥಿರ ಅಭಿವೃದ್ಧಿಯು ಕರ್ನಾಟಕ ಯುವ ನೀತಿ 2022ರ ಮಾರ್ಗದರ್ಶಿ ತತ್ವವಾಗಿದೆ. ಈ ನೀತಿಯ ಅನುಷ್ಠಾನಕ್ಕೆ ಸಾಮಾಜಿಕ, ಆರ್ಥಿಕ ಮತ್ತು ಪರಿಸರದ ವಾಸ್ತವಗಳು ಮಾರ್ಗದರ್ಶನ ನೀಡುವುದನ್ನು ಈ ತತ್ವವು ಖಚಿತಪಡಿಸುತ್ತದೆ.

- ವಿಶ್ವ ಸಂಸ್ಥೆಗಳ ಸುಸ್ಥಿರ ಅಭಿವೃದ್ಧಿಗಾಗಿ 2030ರ ಕಾರ್ಯಸೂಚಿಯೊಂದಿಗೆ ಹೊಂದಾಣಿಕೆಯಿರುವ **ಕರ್ನಾಟಕ ಯುವ ನೀತಿ, 2022 ಎಂಟು ವರ್ಷಗಳ ಅವಧಿಗೆ ಅಂದರೆ 2030ರ ತನಕ** ಕಾರ್ಯನಿರ್ವಹಿಸುತ್ತದೆ.

## ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 600 |
| ಮಾನ್ಯ ಸದಸ್ಯರ ಹೆಸರು | ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) |
| ಉತ್ತರಿಸಬೇಕಾದ ದಿನಾಂಕ | 15.02.2023 |
| ಉತ್ತರಿಸುವ ಸಚಿವರು | ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ವ್ಯಾಪ್ತಿಯ ಯೋಜನಾನುಷ್ಠಾನಗಳ ಕುರಿತು ವಿವರ ನೀಡುವುದು; | (ಕೆಳಗೆ ನೋಡಿ) |

**ಡಿ. ದೇವರಾಜ ಅರಸು, ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ**

ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಮಡಿವಾಳ ಮಾಚಿದೇವ ಅಭಿವೃದ್ಧಿ ನಿಗಮ, ಕರ್ನಾಟಕ ಅಲೆಮಾರಿ ಮತ್ತು ಅರೆ ಅಲೆಮಾರಿ ಅಭಿವೃದ್ಧಿ ನಿಗಮ ಹಾಗೂ ಕರ್ನಾಟಕ ಸವಿತಾ ಸಮಾಜ ಅಭಿವೃದ್ಧಿ ನಿಗಮಗಳಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರವನ್ನು ಅನುಬಂಧ-01ರಲ್ಲಿ ನೀಡಲಾಗಿದೆ.

**ಮರಾಠ ಸಮುದಾಯಗಳ ಅಭಿವೃದ್ಧಿ ನಿಗಮ ನಿಯಮಿತ.**

ಕರ್ನಾಟಕ ಮರಾಠಾ ಸಮುದಾಯಗಳ ಅಭಿವೃದ್ಧಿ ನಿಗಮದ ವತಿಯಿಂದ 2022-23ನೇ ಸಾಲಿನಲ್ಲಿ ಮರಾಠ ಸಮುದಾಯಗಳ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ರೂಪಿಸಲಾಗಿದೆ.

| ಕ್ರ ಸಂ | ಯೋಜನೆ ವಿವರ |
|---|---|
| 1 | ಜೀಜಾವು-ಜಲಭಾಗ್ಯ ಯೋಜನೆ (ಗಂಗಾ ಕಲ್ಯಾಣ ನೀರಾವರಿ ಯೋಜನೆ) |
| 2 | ಶ್ರೀ ಶಹಜೀರಾಜೇ ಸಮೃದ್ಧಿ ಯೋಜನೆ (ಎಸ್.ಎಸ್ .ಆರ್. ಎಸ್. ವೈ) |
| 3 | ಅಮೃತ್ ಯೋಜನೆ (ಅಮೃತ್ ಮುನ್ನಡೆ) |
| 4 | ಅರಿವು ಶೈಕ್ಷಣಿಕ ಸಾಲ ಯೋಜನೆ |
| 5 | ವಿದೇಶಿ ವ್ಯಾಸಂಗ ಸಾಲ ಯೋಜನೆ |
| 6 | ಮರಾಠ ಮಿಲ್ಟ್ರಿ ಹೋಟೆಲ್ ಯೋಜನೆಗಳನ್ನು |

**ಉಪ್ಪಾರ ಅಭಿವೃದ್ಧಿ ನಿಗಮ ನಿಯಮಿತ**

ಕರ್ನಾಟಕ ಉಪ್ಪಾರ ಅಭಿವೃದ್ಧಿ ನಿಗಮದಿಂದ ಈ ಕೆಳಕಂಡ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ.

1. ಸ್ವಯಂ ಉದ್ಯೋಗ ನೇರ ಸಾಲ ಯೋಜನೆ
2. ಅರಿವು ಶೈಕ್ಷಣಿಕ ಸಾಲ ಯೋಜನೆ
3. ಗಂಗಾ ಕಲ್ಯಾಣ ನೀರಾವರಿ ಯೋಜನೆ
4. ಸ್ವಾತಂತ್ರ್ಯ ಅಮೃತ ಮಹೋತ್ಸವ ಕೌಶಲ್ಯಾಭಿವೃದ್ಧಿ ಯೋಜನೆ

**ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದಿಂದ**

2022-23ನೇ ಸಾಲಿಗೆ ಕರ್ನಾಟಕ ವಿಶ್ವಕರ್ಮ ಸಮುದಾಯಗಳ ಅಭಿವೃದ್ಧಿ ನಿಗಮದಿಮದ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗಿದೆ.

1 ಪಂಚವೃತ್ತಿ ಅಭಿವೃದ್ಧಿಗಾಗಿ ಆರ್ಥಿಕ ನೆರವು ಯೋಜನೆ.
2 ಸ್ವಯಂ ಉದ್ಯೋಗ ನೇರ ಸಾಲ ಯೋಜನೆ.
3 ಅಮೃತ ಮುನ್ನಡೆ ಯೋಜನೆ.
4 ಅರಿವು-ಶೈಕ್ಷಣಿಕ ಸಾಲ ಯೋಜನೆ (ಹೊಸದು)
ಅರಿವು-ನವೀಕರಣ ವಿದ್ಯಾರ್ಥಿಗಳಿಗೆ.
5 ಗಂಗಾ ಕಲ್ಯಾಣ ವೈಯಕ್ತಿಕ ನೀರಾವರಿ ಯೋಜನೆ

**ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತ**

ನಿಜಶರಣ ಅಂಬಿಗರ ಚೌಡಯ್ಯ ಅಭಿವೃದ್ಧಿ ನಿಗಮ ನಿಯಮಿತದಿಂದ ಸರ್ಕಾರದ ಆದೇಶ ಸಂಖ್ಯೆ ಸಕಇ ಬಿಸಿಎ 2000 ದಿನಾಂಕ 30.03.2002ರ ಆದೇಶದಲ್ಲಿ ಗುರ್ತಿಸಿದ ಪ್ರವರ್ಗ-Iರಲ್ಲಿ ಕ್ರಮ ಸಂಖ್ಯೆ 6(ಎ) ಯಿಂದ 6(ಎಕೆ)ವರೆಗೆ ಬರುವ ಸಮುದಾಯದವರಿಗೆ ಪ್ರಸ್ತುತ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

- ಸ್ವಯಂ ಉದ್ಯೋಗ ಸಾಲ ಮತ್ತು ಸಹಾಯಧನ ಯೋಜನೆ
- ಗಂಗಾ ಕಲ್ಯಾಣ ನೀರಾವರಿ ಯೋಜನೆ
- ಅರಿವು ಶೈಕ್ಷಣಿಕ ಸಾಲ ಯೋಜನೆ (ಹೊಸತು ಮತ್ತು ನವೀಕರಣ)
- ಸ್ವಾತಂತ್ರ್ಯ ಮಹೋತ್ಸವದ ಅಮೃತ್ ಮುನ್ನಡೆ ಯೋಜನೆ

**ಕರ್ನಾಟಕ ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮ ನಿಯಮಿತ**

ಸರ್ಕಾರದ ಆದೇಶ ಸಂಖ್ಯೆ:ಬಿಸಿಡ್ಬ್ಲ್ಯೂ 198 ಬಿಸಿಎ 2020 ದಿನಾಂಕ: 23.11.2020 ರನ್ವಯ ಕರ್ನಾಟಕ ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮ (ನಿ)ವನ್ನು ಸ್ಥಾಪಿಸಲಾಗಿದೆ.

ವೀರಶೈವ ಲಿಂಗಾಯತ ಸಮುದಾಯದವರಿಗೆ ಕರ್ನಾಟಕ ವೀರಶೈವ ಲಿಂಗಾಯತ ಅಭಿವೃದ್ಧಿ ನಿಗಮದಿಂದ ಅನುಷ್ಠಾನಗೊಳಿಸಲಾಗುವ ಯೋಜನೆಗಳು:

1. ಬಸವ ಬೆಳಗು (ವೃತ್ತಿಪರ ಕೋರ್ಸ್‌ಗಳಿಗೆ ಆರ್ಥಿಕ ನೆರವು)
2. ವಿದೇಶವಿದ್ಯಾ ವಿಕಾಸ (ಮಾನ್ಯತೆ ಪಡೆದಿರುವಂತಹ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವಿದ್ಯಾಭ್ಯಾಸ ಆರ್ಥಿಕ ನೆರವು)
3. ಪರಿಪೂರ್ಣದೆಡೆಗೆ (ಸಂಶೋಧನಾ ವ್ಯಾಸಂಗ ಮಾಡುವ ಅಭ್ಯರ್ಥಿಗಳಿಗೆ ಆರ್ಥಿಕ ನೆರವು)
4. ಜೀವಜಲ(ಸಣ್ಣ ಮತ್ತು ಅತಿಸಣ್ಣ ರೈತರ ಜಮೀನಿಗೆ ನೀರಾವರಿ ಸೌಲಭ್ಯ ಒದಗಿಸಲು ಆರ್ಥಿಕ ನೆರವು)
5. ಸ್ವಸಹಾಯ ಸಂಘಗಳಿಗೆ ಉತ್ತೇಜನ (ಸ್ವಸಹಾಯ ಸಂಘಗಳಿಗೆ ಸಾಲ ಮತ್ತು ಸಹಾಯಧನ)
6. ಕಾಯಕ ಕಿರಣ (ವೃತ್ತಿಕ ಸುಬುದಾರರು ಹಾಗೂ ಕುಶಲಕರ್ಮಿಗಳಿಗೆ ಸಾಲ ಮತ್ತು ಸಹಾಯಧನ)
7. ಶರಣಸೇನೆ (ಸೇನೆ ಹಾಗೂ ಸಿವಿಲ್ ಪೋಲಿಸ್ ಸೇವೆಗೆ ಸೇರಲು ಇಚ್ಛಿಸುವ ಅಭ್ಯರ್ಥಿಗಳಿಗೆ ತರಬೇತಿ)
8. ವಿಭೂತಿ ನಿರ್ಮಾಣ ಘಟಕ (ವಿಭೂತಿ ನಿರ್ಮಾಣ ಮಾಡಲು ಸಾಲ ಮತ್ತು ಸಹಾಯ ಧನ)
9. ಭೋಜನಾಲಯ ಕೇಂದ್ರ (ಸ್ವಂತ ಖಾನಾವಳಿ / ಹೋಟೆಲ್ ಆರಂಭಿಸಲು ಸಾಲ ಮತ್ತು ಸಹಾಯ ಧನ)

**ಒಕ್ಕಲಿಗ ಸಮುದಾಯ ಅಭಿವೃದ್ಧಿ ನಿಗಮ ನಿಯಮಿತ**

ಕರ್ನಾಟಕ ಒಕ್ಕಲಿಗ ಸಮುದಾಯ ಅಭಿವೃದ್ಧಿ ನಿಗಮವನ್ನು ದಿನಾಂಕ: 11.04.2022 ರಂದು ನೊಂದಾಯಿಸಿ ಸ್ಥಾಪಿಸಲಾಗಿರುತ್ತದೆ. ನಿಗಮವು 2022-23ನೇ ಸಾಲಿನಿಂದ ಒಕ್ಕಲಿಗ ಸಮುದಾಯದ ಅಭಿವೃದ್ಧಿಗೆ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

2022-23ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿರುವ ಯೋಜನೆಗಳು:

1. ಸ್ವಯಂ ಉದ್ಯೋಗ ಸಾಲ ಯೋಜನೆ
2. ಗಂಗಾ ಕಲ್ಯಾಣ ನೀರಾವರಿ ಯೋಜನೆ
3. ಟೂರಿಸ್ಟ್ ಟ್ಯಾಕ್ಸಿ / ಸರಕು ಸಾಗಾಣಿಕೆ ವಾಹನ ಸಹಾಯಧನ ಯೋಜನೆ
4. ಶೈಕ್ಷಣಿಕ ಸಾಲ ಯೋಜನೆ
5. ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಉನ್ನತ ವ್ಯಾಸಂಗಕ್ಕೆ ಆರ್ಥಿಕ ನೆರವು
6. ಸ್ವಾತಂತ್ರ ಅಮೃತ ಮುನ್ನಡೆ ಕೌಶಾಲ್ಯಾಭಿವೃದ್ಧಿ ತರಬೇತಿ ಕಾರ್ಯಕ್ರಮ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 62
ಸದಸ್ಯರ ಹೆಸರು : ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್
ಉತ್ತರಿಸುವ ಸಚಿವರು : ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರು
ಉತ್ತರಿಸುವ ದಿನಾಂಕ : 15.02.2023

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿ 4 ಸಾರಿಗೆ ಸಂಸ್ಥೆಯ ಸಿಬ್ಬಂದಿ ವರ್ಗದವರು ಪದೇ ಪದೇ ಮುಷ್ಕರ, ಪ್ರತಿಭಟನೆ, ಸತ್ಯಾಗ್ರಹ ಹಾಗೂ ಧರಣಿ ನಡೆಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. |
| ಆ. | ಬಂದಿದ್ದಲ್ಲಿ, ಪ್ರತಿಭಟನೆ ಹಾಗೂ ಮುಷ್ಕರಕ್ಕೆ ಕಾರಣಗಳೇನು; ಅವರ ನ್ಯಾಯಯುತ ಬೇಡಿಕೆಗಳೇನು; | ದಿನಾಂಕ:01.01.2020ರಿಂದ ಜಾರಿಗೆ ಬರುವಂತೆ ಪರಿಷ್ಕೃತ ವೇತನ ಜಾರಿಗೆ ತರಲು ಮತ್ತು ಸಾರಿಗೆ ನೌಕರರಿಗೆ 06ನೇ ವೇತನದ ಶಿಫಾರಸ್ಸುಗಳನ್ನು ಸಾರಿಗೆ ಸಂಸ್ಥೆಯ ನಾಲ್ಕು ನಿಗಮಗಳಿಗೆ ಅನ್ವಯವಾಗುವಂತೆ ಅಳವಡಿಸಿಕೊಳ್ಳಲು ಹಾಗೂ ಸರ್ಕಾರಿ ನೌಕರರಿಗೆ ನೀಡುವ ಇತರೆ ಸೌಲಭ್ಯಗಳನ್ನು ನೀಡುವ ಬೇಡಿಕೆಗಳ ಈಡೇರಿಕೆಗಾಗಿ ಪ್ರತಿಭಟನೆ ಹಾಗೂ ಮುಷ್ಕರ ನಡೆಸಿರುತ್ತಾರೆ. |
| ಇ. | ಸದರಿ ಬೇಡಿಕೆಗಳಲ್ಲಿ ಎಷ್ಟು ಬೇಡಿಕೆಗಳನ್ನು ಈಡೇರಿಸಲಾಗಿದೆ; ಬಾಕಿ ಬೇಡಿಕೆಗಳನ್ನು ಯಾವಾಗ ಈಡೇರಿಸಲಾಗುವುದು; | ಸಾರಿಗೆ ನೌಕರರ ಬೇಡಿಕೆಗಳಲ್ಲಿ 08 ಬೇಡಿಕೆಗಳನ್ನು ಈಡೇರಿಸಲಾಗಿದ್ದು, ವಿವರಗಳನ್ನು "**ಅನುಬಂಧ-ಅ**"ರಲ್ಲಿ ನೀಡಲಾಗಿದೆ.<br><br>ವೇತನ ಪರಿಷ್ಕರಣೆಗೆ ಸಂಬಂಧಿಸಿದ ಬೇಡಿಕೆಯು ಪರಿಶೀಲನೆಯಲ್ಲಿದೆ. |
| ಈ. | ಸದರಿ ನೌಕರರುಗಳಿಗೆ ನೀಡುತ್ತಿರುವ ವೇತನ/ಗೌರವ ಧನ/ಇತರೆ ಭತ್ಯೆಗಳ ಮೊತ್ತ ಎಷ್ಟು; (ಪ್ರತ್ಯೇಕವಾಗಿ ವಿವರ ನೀಡುವುದು) | ನಾಲ್ಕೂ ಸಾರಿಗೆ ಸಂಸ್ಥೆಗಳ ನೌಕರರುಗಳಿಗೆ ನೀಡುತ್ತಿರುವ ವೇತನ/ ಗೌರವಧನ/ ಇತರೆ ಭತ್ಯೆಗಳ ವಿವರವನ್ನು **ಅನುಬಂಧ-ಆ**ದಲ್ಲಿ ನೀಡಲಾಗಿದೆ. |
| ಉ. | ಇತ್ತೀಚಿನ ಬೆಲೆ ಏರಿಕೆಯಿಂದಾಗಿ ಸದರಿಯವರು ತಮ್ಮ ಗೌರವಧನ | ಸಾರಿಗೆ ಸಂಸ್ಥೆಗಳ ನೌಕರರ ವೇತನ |



Generated from eOffice by B SREERAMULU, TD-MIN(BS), TRANSPORT MINISTER Trans on 15/02/2023 11:26 AM

| | | |
|---|---|---|
| | ಅಥವಾ ವೇತನದಲ್ಲಿ ಕುಟುಂಬದ ನಿರ್ವಹಣೆ ಮಾಡಲು ಸಾಧ್ಯವೇ; | ಪರಿಷ್ಕರಣೆಗೆ ಸಂಬಂಧಿಸಿದಂತೆ ನಾಲ್ಕೂ ಸಾರಿಗೆ ಸಂಸ್ಥೆಗಳ ವ್ಯವಸ್ಥಾಪಕರ |
| ಊ. | ಸದರಿ ನೌಕರರುಗಳ ಜೀವನ ಭದ್ರತೆ ಹಾಗೂ ಅವರ ಬೇಡಿಕೆಗಳನ್ನು ಈಡೇರಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ನಿರ್ದೇಶಕರುಗಳನ್ನೊಳಗೊಂಡ ಆಂತರಿಕ ಸಮಿತಿಯು ಸಲ್ಲಿಸಿರುವ ವರದಿಯು ಪರಿಶೀಲನೆಯಲ್ಲಿರುತ್ತದೆ. |

ಸಂಖ್ಯೆ: ಟಿಡಿ 07 ಟಿಸಿಕ್ಯೂ 2022

(ಬಿ. ಶ್ರೀರಾಮುಲು)
ಸಾರಿಗೆ ಮತ್ತು ಪರಿಶಿಷ್ಟ ಪಂಗಡಗಳ
ಕಲ್ಯಾಣ ಸಚಿವರು



B SREERAMULU TI-MIN(BS) TRANSPORT MINISTER Trans on 15/02/2023 11:26 AM

ಅನುಬಂಧ-ಅ

**ಸಾರಿಗೆ ಸಂಸ್ಥೆಗಳ ನೌಕರರ ಬೇಡಿಕೆಗಳ ಕುರಿತು ತೆಗೆದುಕೊಂಡಿರುವ ಕ್ರಮ**

| ಕ್ರ.ಸಂ | ಬೇಡಿಕೆ | ಷರಾ |
|---|---|---|
| 1 | ಸಾರಿಗೆ ಸಂಸ್ಥೆಯ ನೌಕರರಿಗೆ ಆರೋಗ್ಯ ಭಾಗ್ಯ/ ಜ್ಯೋತಿ ಸಂಜೀವಿನಿ ವಿಮಾ ಯೋಜನೆಯನ್ನು ಅಳವಡಿಸುವ ಕುರಿತು. | ಸರ್ಕಾರದ ಮಾದರಿಯಲ್ಲಿ ನಿಗಮದ ನೌಕರರು ಚಿಕಿತ್ಸೆ ಪಡೆದ ಆಸ್ಪತ್ರೆಯ ದರ್ಜೆಗೆ ಅನುಗುಣವಾಗಿ ಅಂದರೆ, ಎನ್.ಎ.ಬಿ.ಹೆಚ್ ದರ್ಜೆಯ ಖಾಸಗಿ ಆಸ್ಪತ್ರೆ ಆಗಿದ್ದಲ್ಲಿ ಸಿ.ಜಿ.ಹೆಚ್.ಎಸ್-2014 ಎನ್.ಎ.ಬಿ.ಹೆಚ್ ದರದಲ್ಲಿ ಮತ್ತು ನಾನ್-ಎನ್.ಎ.ಬಿ.ಹೆಚ್ ದರ್ಜೆಯ ಆಸ್ಪತ್ರೆ ಆಗಿದ್ದಲ್ಲಿ ಸಿ.ಜಿ.ಹೆಚ್.ಎಸ್-2014 ನಾನ್-ಎನ್.ಎ.ಬಿ.ಹೆಚ್ ದರದಲ್ಲಿ ಲೆಕ್ಕ ಪರಿಶೀಲನೆ ಮಾಡಿ ಅರ್ಹ ಮೊತ್ತವನ್ನು ಮರುಪಾವತಿಸಲು ಆದೇಶ ಹೊರಡಿಸಲಾಗಿದ್ದು, ಇದನ್ನು ದಿನಾಂಕ.01.04.2021 ರಿಂದ ಅನ್ವಯಿಸುವಂತೆ ಜಾರಿ ಮಾಡಲಾಗಿದೆ.<br><br>ನಿಗಮದ ನೌಕರರು & ಅವಲಂಬಿತರಿಗೆ ನಗದು ರಹಿತ ವೈದ್ಯಕೀಯ ಸೌಲಭ್ಯವನ್ನು ಜಾರಿಗೊಳಿಸುವ ಸಂಬಂಧ ಪರಿಶೀಲನೆಯಲ್ಲಿದೆ. |
| 2 | ಕೋವಿಡ್-19 ಸೋಂಕು ತಗುಲಿದ ನಿಗಮದ ನೌಕರರು ಮರಣ ಹೊಂದಿದ ಸಂದರ್ಭದಲ್ಲಿ ಅವರ ಕುಟುಂಬಗಳಿಗೆ ಸರ್ಕಾರಿ ನೌಕರರಿಗೆ ನೀಡಿದಂತೆ ರೂ.30 ಲಕ್ಷ ಪರಿಹಾರ ನೀಡುವ ಕುರಿತು. | ಕೋವಿಡ್-19 ಸಾಂಕ್ರಾಮಿಕ ರೋಗಕ್ಕೆ ತುತ್ತಾಗಿ ಮೃತಪಟ್ಟ ನಿಗಮದ ನೌಕರರ ಪೈಕಿ 07 ನೌಕರರ ಕುಟುಂಬದವರಿಗೆ ದಿನಾಂಕ: 26-02-2021 ರಂದು ಸನ್ಮಾನ್ಯ ಮುಖ್ಯಮಂತ್ರಿ ರವರಿಂದ ತಲಾ ರೂ.30 ಲಕ್ಷಗಳ ಚೆಕ್‌ಗಳನ್ನು ನೀಡಲಾಗಿದೆ.<br><br>ಉಳಿದ ಪ್ರಕರಣಗಳಲ್ಲಿ ಹಣ ಮಂಜೂರು ಮಾಡಲು ಕೋರಿರುವ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದೆ. |
| 3 | ನಿಗಮದಲ್ಲಿ ಹೆಚ್.ಆರ್.ಎಂ.ಎಸ್ (ಮಾನವ ಸಂಪನ್ಮೂಲ) ವ್ಯವಸ್ಥೆಯನ್ನು ಜಾರಿಗೊಳಿಸುವ ಕುರಿತು. | ಸಾರಿಗೆ ಸಂಸ್ಥೆಗಳಲ್ಲಿ (HRMS) ಹೆಚ್.ಆರ್.ಎಂ.ಎಸ್ ವ್ಯವಸ್ಥೆಯನ್ನು CEG ಯವರ ಸಹಯೋಗದಲ್ಲಿ ಜಾರಿಗೊಳಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| 4 | ಸಿಬ್ಬಂದಿಯು ಕರ್ತವ್ಯ ನಿರ್ವಹಿಸಿದ ಸಂದರ್ಭದಲ್ಲಿ ಭತ್ಯೆಯನ್ನು (ಬಾಟಾ) ನೀಡುವ ಕುರಿತು. | ನಿಗಮದ ಸಿಬ್ಬಂದಿಗಳು ದಿನದ ಕರ್ತವ್ಯದ ಸಲುವಾಗಿ ಅರ್ಹ ವಿವಿಧ ಭತ್ಯೆಗಳು ಮತ್ತು ಬಾಟಾಗಳು ಹಾಗೂ ಮಾಸಿಕ ಭತ್ಯೆಗಳನ್ನು ದಿನಾಂಕ.01.03.2021 ರಿಂದ ಜಾರಿಗೆ ಬರುವಂತೆ ನೀಡಲು ಸೂಚಿಸಿ ಆದೇಶವನ್ನು ಈಗಾಗಲೇ ಹೊರಡಿಸಲಾಗಿದೆ ಮತ್ತು ಅದರಂತೆ ಕ್ರಮ ಜಾರಿಯಲ್ಲಿದೆ. |
| 5 | ಘಟಕದ ವ್ಯಾಪ್ತಿಯಲ್ಲಿ ನೌಕರರಿಗೆ ಕಿರುಕುಳ ತಪ್ಪಿಸಲು ಸೂಕ್ತ ಆಡಳಿತ ವ್ಯವಸ್ಥೆ ಜಾರಿಗೆ ತರುವ ಕುರಿತು. | 1. ಚಾಲಕ ನಿರ್ವಾಹಕರಿಗೆ ಅನುಸೂಚಿಗಳ ನಿಗಧಿ ವಿಚಾರದಲ್ಲಿ ಏಕರೀತಿಯ ಅಂಶಗಳನ್ನು ಅನುಸರಿಸಲು ಕೌನ್ಸಿಲಿಂಗ್ ಪದ್ಧತಿಯನ್ನು ಜಾರಿಗೆ ತರಲಾಗಿದೆ.<br>2. ನೌಕರರಿಗೆ ರಜಾ ಮಂಜೂರಾತಿ ಕುರಿತಂತೆ ಪಾರದರ್ಶಕ ಮತ್ತು ತಂತ್ರಾಂಶ ಆಧಾರಿತ ರಜಾ ನಿರ್ವಹಣಾ ವ್ಯವಸ್ಥೆ ಜಾರಿಗೆ ತರಲಾಗಿದೆ. ಈ ಪದ್ಧತಿಯನ್ನು ಕಟ್ಟುನಿಟ್ಟಾಗಿ ಪಾಲಿಸಲು ನಿರ್ದೇಶನಗಳನ್ನು ನೀಡಿದ್ದು, ಅದರಂತೆ ಕ್ರಮ ಜಾರಿಯಲ್ಲಿದೆ.<br>3. ನೌಕರರ ಸೇವಾ ಸಂಬಂಧಿತ ಕುಂದುಕೊರತೆ/ ಸಮಸ್ಯೆಗಳನ್ನು ಪರಿಶೀಲಿಸಿ, ಬಗೆಹರಿಸುವ ಪದ್ಧತಿ ಜಾರಿಯಲ್ಲಿದ್ದು, ಅದನ್ನು ಪರಿಣಾಮಕಾರಿಯಾಗಿ ನಿರ್ವಹಿಸಲಾಗುತ್ತಿದೆ. |

| | | |
|---|---|---|
| | | ಅದರಂತೆ, ವಿಭಾಗಗಳ ಅಧಿಕಾರಿಗಳ ತಂಡವು ಘಟಕಗಳಿಗೆ ಭೇಟಿ ನೀಡಿ ನೌಕರರ ಕುಂದುಕೊರತೆಗಳನ್ನು ಪಡೆದು, ಪರಿಶೀಲಿಸಿ ಬಗೆಹರಿಸುವ ಪದ್ಧತಿ ನಿರಂತರವಾಗಿ ನಡೆಯುತ್ತಿದೆ.<br>4. ತನಿಖಾ ಕಾರ್ಯದಲ್ಲಿ ಪಾರದರ್ಶಕತೆಯನ್ನು ತರುವ ಸಲುವಾಗಿ ತನಿಖಾ ಸಿಬ್ಬಂದಿಗಳಿಗೆ ಕಡ್ಡಾಯವಾಗಿ Body Camera ವನ್ನು ಬಳಸುವಂತೆ ನಿರ್ದೇಶನಗಳನ್ನು ದಿನಾಂಕ.03.02.2021 ರಂತೆ ನೀಡಲಾಗಿದೆ ಮತ್ತು ಅದರಂತೆ ಕ್ರಮ ಜಾರಿಯಲ್ಲಿದೆ<br>5. ತಂತ್ರಾಂಶ ಆಧಾರಿತ ಕುಂದುಕೊರತೆ ನಿವಾರಣಾ ವ್ಯವಸ್ಥೆಯನ್ನು ಜಾರಿಗೆ ತರುವ ಉಪಕ್ರಮವನ್ನು (Grievance Redressal Mechanism) ಅಭಿವೃದ್ಧಿಪಡಿಸಿದ್ದು, ಜಾರಿಗೆ ತರುವ ಸಂಬಂಧ ಸುತ್ತೋಲೆ ಸಂಖ್ಯೆ:127/2021, ದಿನಾಂಕ:26.08.2021 ನ್ನು ಈಗಾಗಲೇ ಹೊರಡಿಸಲಾಗಿದೆ. |
| 6 | ಎನ್.ಐ.ಎನ್.ಸಿ (ನಾಟ್ ಇಶ್ಯೂಡ್ - ನಾಟ್ ಕಲೆಕ್ಟೆಡ್) ಪದ್ಧತಿಯನ್ನು ಪುನರ್ ಪರಿಶೀಲಿಸಿ ಸೂಕ್ತ ವ್ಯವಸ್ಥೆ ಅಳವಡಿಸಿಕೊಳ್ಳುವ ಕುರಿತು. | NINC (Not Issued Not Collected) ಪ್ರಕರಣಗಳಲ್ಲಿ ತೆಗೆದುಕೊಳ್ಳಬೇಕಾದ ಕ್ರಮದ ಕುರಿತು ಪರಿಷ್ಕೃತ ನಿರ್ದೇಶನಗಳ ಆದೇಶವನ್ನು ದಿನಾಂಕ:-02.03.2021 ರಂದು ಹೊರಡಿಸಲಾಗಿದೆ ಮತ್ತು ಅದರಂತೆ ಕ್ರಮ ಜಾರಿಯಲ್ಲಿದೆ.<br><br>ಅಲ್ಲದೇ, ತನಿಖಾ ಕಾರ್ಯದಲ್ಲಿ ಪಾರದರ್ಶಕತೆಯನ್ನು ತರುವ ಸಲುವಾಗಿ ತನಿಖಾ ಸಿಬ್ಬಂದಿಗಳಿಗೆ ಕಡ್ಡಾಯವಾಗಿ Body Camera ಗಳನ್ನು ಧರಿಸಿ ವಾಹನಗಳನ್ನು ತನಿಖೆ ಮಾಡಲು ನಿರ್ದೇಶನಗಳನ್ನು ದಿನಾಂಕ.03.02.2021 ರಂತೆ ನೀಡಲಾಗಿದೆ ಮತ್ತು ಅದರಂತೆ ಕ್ರಮ ಜಾರಿಯಲ್ಲಿದೆ. |
| 7 | ಅಂತರ-ನಿಗಮ ವರ್ಗಾವಣೆ ಕುರಿತು. | "ಅಂತರ ನಿಗಮ ವರ್ಗಾವಣೆ ನೀತಿ" ಯನ್ನು ಜಾರಿಗೆ ತರುವ ಕುರಿತು ಸರ್ಕಾರವು ದಿನಾಂಕ: 09.03.2021 ರಂದು ಆದೇಶವನ್ನು ಹೊರಡಿಸಿದ್ದು, ಅದರನ್ವಯ 2021 ನೇ ಸಾಲಿನಲ್ಲಿ 2365 ನೌಕರರನ್ನು ಅಂತರ ನಿಗಮ ವರ್ಗಾವಣೆ ಮಾಡಲಾಗಿದೆ.<br><br>2022 ನೇ ಸಾಲಿನಲ್ಲಿ ಪರಸ್ಪರ ವರ್ಗಾವಣೆಯಡಿ 712 ನೌಕರರನ್ನು ಈಗಾಗಲೇ ವರ್ಗಾವಣೆ ಮಾಡಿದ್ದು, ಸಾಮಾನ್ಯ ಪ್ರಕರಣಗಳಲ್ಲಿ 1013 ನೌಕರುಗಳನ್ನು ವರ್ಗಾವಣೆ ಮಾಡಲಾಗಿದೆ. |
| 8 | ತರಬೇತಿಯಲ್ಲಿರುವ ನೌಕರರನ್ನು ತರಬೇತಿ ಅವಧಿಯನ್ನು 02 ವರ್ಷದಿಂದ 01 ವರ್ಷಕ್ಕೆ ಇಳಿಸುವ ಕುರಿತು. | ದಿನಾಂಕ: 01.07.2021 ರಿಂದ ಜಾರಿಗೆ ಬರುವಂತೆ ನೌಕರರ ತರಬೇತಿ ಅವಧಿಯನ್ನು 01 ವರ್ಷಕ್ಕೆ ಇಳಿಸಲಾಗಿದೆ. |

ಅನುಬಂಧ-ಆ

ಮಾಹೆಯಾನ ವೆಚ್ಚ (ರೂ. ಕೋಟಿಗಳಲ್ಲಿ)

| ಕ್ರ ಸಂ | ವಿವರಣೆ | ಕ.ರಾ.ರ.ಸಾ.ನಿಗಮ | ಬೆಂ.ಮ.ಸಾ.ಸಂಸ್ಥೆ | ವಾ.ಕ.ರ.ಸಾ.ಸಂಸ್ಥೆ | ಕ.ಕ.ರ.ಸಾ.ನಿಗಮ |
|---|---|---|---|---|---|
| 1 | ಮೂಲ ವೇತನ | 54.41 | 42.24 | 34.04 | 31.79 |
| 2 | ಮೂಲ ತುಟ್ಟಿ ಭತ್ಯೆ | 21.71 | 17.26 | 13.74 | 12.72 |
| 3 | ತುಟ್ಟಿ ಭತ್ಯೆ | 22.68 | 18.44 | 14.81 | 10.90 |
| 4 | ಮನೆ ಬಾಡಿಗೆ ಭತ್ಯೆ | 8.30 | 12.46 | 4.88 | 4.25 |
| 5 | ನಗರ ಪರಿಹಾರ ಭತ್ಯೆ | 0.36 | 1.07 | 0.02 | 0.11 |
| 6 | ಹೆಚ್ಚುವರಿ ಕಾರ್ಯಾವಧಿ ಭತ್ಯೆ | 9.06 | 1.75 | 4.25 | 4.95 |
| 7 | ಪ್ರೋತ್ಸಾಹ ಧನ | 5.21 | 1.57 | 1.01 | |
| 8 | ಇತರ ಭತ್ಯೆಗಳು | 1.34 | 0.21 | 2.77 | 1.30 |
| | **ಒಟ್ಟು** | **123.07** | **93.25** | **75.52** | **66.02** |

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 620 |
| ಉತ್ತರಿಸಬೇಕಾದ ದಿನಾಂಕ | : 15.02.2023. |
| ಸದಸ್ಯರ ಹೆಸರು | : ಶ್ರೀ ಬೆಳ್ಳಿ ಪ್ರಕಾಶ್ (ಕಡೂರು) |
| ಉತ್ತರಿಸುವ ಸಚಿವರು | : ಮಾನ್ಯ ರೇಷ್ಮೆ, ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಕ್ರೀಡಾಪಟುಗಳಿಗೆ ಸಮರ್ಪಕವಾದ ತರಬೇತುದಾರರಿಲ್ಲದೇ, ರಾಜ್ಯದ ಕ್ರೀಡಾಪಟುಗಳು ಇತ್ತೀಚೆಗೆ ನಡೆದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಯಶಸ್ಸು ಗಳಿಸದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಅನುದಾನಿತ ಸಂಸ್ಥೆಯಾದ ಕರ್ನಾಟಕ ಕ್ರೀಡಾ ಪ್ರಾಧಿಕಾರದಲ್ಲಿ ಒಟ್ಟು 111 ತರಬೇತುದಾರರು ಕಾರ್ಯ ನಿರ್ವಹಿಸುತ್ತಿದ್ದಾರೆ.<br><br>ಮುಂದುವರೆದು, ಇಲಾಖೆಯಲ್ಲಿ ತರಬೇತುದಾರರ ಸೇವೆಯನ್ನು ಹೆಚ್ಚಿಸುವ ನಿಟ್ಟಿನಲ್ಲಿ ಸರ್ಕಾರದ ಆದೇಶ ಸಂ:ವೈಎಸ್‌ಡಿ-ಇವೈಡಬ್ಲ್ಯೂ/178/2021, ದಿನಾಂಕ:10-10-2022ರಲ್ಲಿ 176 ತಾಲ್ಲೂಕು ತರಬೇತುದಾರರು ಕಂ ಸಂಯೋಜಕರ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ. ಹೊಸದಾಗಿ ಸೃಜಿಸಲಾದ ಹುದ್ದೆಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ಅಂತಿಮಗೊಳಿಸಲು ಕ್ರಮ ವಹಿಸಲಾಗಿದ್ದು, ನಂತರ ನೇಮಕಾತಿ ಪ್ರಕ್ರಿಯೆ ಕೈಗೊಳ್ಳಲಾಗುವುದು.<br><br>ಟೋಕಿಯೋದಲ್ಲಿ ನಡೆದ ಒಲಂಪಿಕ್ಸ್ ಮತ್ತು ಪ್ಯಾರಾ ಒಲಂಪಿಕ್ಸ್ ಕ್ರೀಡಾಕೂಟಗಳಲ್ಲಿ 05 ಕ್ರೀಡಾಪಟುಗಳು ಹಾಗೂ ಬರ್ಮಿಂಗ್ ಹ್ಯಾಂನಲ್ಲಿ ನಡೆದ 22ನೇ ಕಾಮನ್ ವೆಲ್ತ್ ಕ್ರೀಡಾಕೂಟದಲ್ಲಿ 07 ಕ್ರೀಡಾಪಟುಗಳು ಕರ್ನಾಟಕವನ್ನು ಪ್ರತಿನಿಧಿಸಿರುತ್ತಾರೆ. |
| ಆ) | ಇತ್ತೀಚೆಗೆ ನಡೆದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ್ದ ಕ್ರೀಡಾಪಟುಗಳು ಯಾರು ಮತ್ತು ಯಾವ ಯಾವ ಕ್ರೀಡೆಗಳಲ್ಲಿ ಪ್ರತಿನಿಧಿಸಿದ್ದರು; (ಪೂರ್ಣ ಮಾಹಿತಿ ನೀಡುವುದು) | ಟೋಕಿಯೋದಲ್ಲಿ ನಡೆದ ಒಲಂಪಿಕ್ಸ್ ಮತ್ತು ಪ್ಯಾರಾ ಒಲಂಪಿಕ್ಸ್ ಕ್ರೀಡಾಕೂಟಗಳಲ್ಲಿ ಕರ್ನಾಟಕದಿಂದ ಒಟ್ಟು 05 ಕ್ರೀಡಾಪಟುಗಳು ಭಾಗವಹಿಸಿದ್ದು, ವಿವರ ಇಂತಿದೆ.<br><br>ಕ್ರಸ / ಹೆಸರು / ಕ್ರೀಡೆ<br>1 / ಕು\| ಅದಿತಿ ಅಶೋಕ್ / ಗಾಲ್ಫ್<br>2 / ಶ್ರೀ ಶ್ರೀಹರಿನಟರಾಜ್ / ಈಜು<br>3 / ಶ್ರೀ ಫೌವಾದ್ ಮಿರ್ಜಾ / ಈಕ್ವೆಸ್ಟ್ರೀಯನ್ (ಕುದುರೆ ಸವಾರಿ)<br>4 / ಕು\| ಶಕೀನ ಖಾತುನ್ / ಪ್ಯಾರಾ ಪವರ್ ಲಿಫ್ಟಿಂಗ್<br>5 / ಶ್ರೀ ನಿರಂಜನ್ ಎಂ / ಪ್ಯಾರಾ ಈಜು<br><br>2022ನೇ ಬರ್ಮಿಂಗ್‌ಹ್ಯಾಂನಲ್ಲಿ ನಡೆದ 22ನೇ ಕಾಮನ್ ವೆಲ್ತ್ ಕ್ರೀಡಾಕೂಟದಲ್ಲಿ ಭಾಗಹಿಸಿದ/ಪದಕ ಪಡೆದ ಕ್ರೀಡಾಪಟುಗಳ ವಿವರ ಕೆಳಕಂಡಂತಿದೆ.<br><br>ಕ್ರಸ / ಹೆಸರು / ಕ್ರೀಡೆ / ಪದಕದ ವಿವರ<br>1 / ಗುರುರಾಜ ಪೂಜಾರಿ / ಭಾರ ಎತ್ತುವುದು / ಕಂಚು<br>2 / ಅಶ್ವಿನಿ ಪೊನ್ನಪ್ಪ / ಮಿಕ್ಸ್ಡ್ ಬ್ಯಾಡ್ಮಿಂಟನ್ / ಬೆಳ್ಳಿ<br>3 / ರಾಜೇಶ್ವರಿ ಗಾಯಕ್ವಾಡ್ / ಕ್ರಿಕೆಟ್ / ಬೆಳ್ಳಿ |

<table>
<tr>
<td></td>
<td></td>
<td>
<table>
<tr><td>4</td><td>ಶ್ರೀ ಶ್ರೀಹರಿನಟರಾಜ್</td><td>ಈಜು</td><td>ಭಾಗವಹಿಸುವಿಕೆ</td></tr>
<tr><td>5</td><td>ಶ್ರೀನಿರಂಜನ್ ಎಂ</td><td>ಪ್ಯಾರಾ ಈಜು</td><td>ಭಾಗವಹಿಸುವಿಕೆ</td></tr>
<tr><td>6</td><td>ಕು|ಶಕೀನ ಖಾತುನ್</td><td>ಪ್ಯಾರಾ ಪವರ್ ಲಿಫ್ಟಿಂಗ್</td><td>ಭಾಗವಹಿಸುವಿಕೆ</td></tr>
<tr><td>7</td><td>ವೆಂಕಪ್ಪ ಕೆಂಗಲಗುತ್ತಿ</td><td>ಸೈಕ್ಲಿಂಗ್</td><td>ಭಾಗವಹಿಸುವಿಕೆ</td></tr>
</table>
ರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ್ದ ಕ್ರೀಡಾಪಟುಗಳ ವಿವರಗಳನ್ನು ಅನುಬಂಧ -1ರಲ್ಲಿ ನೀಡಲಾಗಿದೆ.
</td>
</tr>
<tr>
<td>ಇ)</td>
<td>ರಾಜ್ಯದಲ್ಲಿರುವ ಕ್ರೀಡಾಪಟುಗಳನ್ನು ಗುರುತಿಸಿ ಕ್ರೀಡೆಗಳ ಬಗ್ಗೆ ವಿಶೇಷವಾಗಿ ತರಬೇತಿ ನೀಡಲು ಮತ್ತು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಕ್ರೀಡಾಕೂಟಗಳಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು)</td>
<td>ರಾಜ್ಯದಲ್ಲಿರುವ ಕ್ರೀಡಾಪಟುಗಳನ್ನು ಗುರುತಿಸಿ ಕ್ರೀಡೆಗಳ ಬಗ್ಗೆ ವಿಶೇಷವಾಗಿ ತರಬೇತಿ ನೀಡಲು ಮತ್ತು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಕ್ರೀಡಾಕೂಟಗಳಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಲು ಅಗತ್ಯವಾದ ಅಂತರ-ರಾಷ್ಟ್ರೀಯ ಗುಣಮಟ್ಟದ ಮೂಲಸೌಕರ್ಯಗಳ ಸೃಜನೆ, ಕ್ರೀಡೋಪಕರಣಗಳು, ಕ್ರೀಡಾ ತರಬೇತಿ, ಕ್ರೀಡಾ ಪಂದ್ಯಾವಳಿಗಳ ಆಯೋಜನೆ, ಉನ್ನತ ಪ್ರದರ್ಶನಕ್ಕೆ ಕ್ರೀಡಾ ವಿಜ್ಞಾನ ಸೇವೆಗಳು, ಕ್ರೀಡಾ ಸಾಧನೆಗಾಗಿ ನಗದು ಪುರಸ್ಕಾರ, ಸಾಧಕ ಕ್ರೀಡಾಪಟುಗಳನ್ನು ಗುರುತಿಸಿ, ಗೌರವಿಸುವ ಪ್ರಶಸ್ತಿಗಳು ಹಾಗೂ ಅಂತರ-ರಾಷ್ಟ್ರೀಯ ಮಟ್ಟದ ಸ್ಪರ್ಧೆಗಳಲ್ಲಿ ಭಾಗವಹಿಸಲು ಅಗತ್ಯ ಸಿದ್ಧತೆಗಾಗಿ ಸಹಾಯಧನ ಹಾಗೂ ಮತ್ತಿತರ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಅಮೃತ ಕ್ರೀಡಾ ದತ್ತು ಯೋಜನೆ ಅಡಿಯಲ್ಲಿ ಮುಂದಿನ ಒಲಿಂಪಿಕ್ಸ್‌ನಲ್ಲಿ ಪದಕ ಪಡೆಯುವ ಸಂಭಾವ್ಯತೆಯುಳ್ಳ 75 ಯುವ ಪ್ರತಿಭಾವಂತ ಕ್ರೀಡಾಪಟುಗಳಿಗೆ ಉನ್ನತ ಕ್ರೀಡಾ ತರಬೇತಿ ಪಡೆಯಲು ಹಾಗೂ ಕ್ರೀಡಾಕೂಟಗಳಲ್ಲಿ ಭಾಗವಹಿಸುವ ವೆಚ್ಚಭರಿಸಲು ವಾರ್ಷಿಕ ತಲಾ ರೂ.10.00 ಲಕ್ಷ ಸಹಾಯ ಧನ ನೀಡಲಾಗುತ್ತಿದೆ.</td>
</tr>
<tr>
<td>ಈ)</td>
<td>ರಾಜ್ಯ ಮಟ್ಟದಲ್ಲಿ ಹಾಗೂ ಜಿಲ್ಲಾ ಹಂತದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ರೀಡಾ ವಸತಿ ಶಾಲೆಗಳು ಎಷ್ಟು; ಅವುಗಳು ಯಾವುವು; ಅವುಗಳ ನಿರ್ವಹಣೆಗೆ ಮಂಜೂರಾದ, ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳ ಸಂಪೂರ್ಣ ಮಾಹಿತಿಯನ್ನು ನೀಡುವುದು; ಖಾಲಿ ಇರುವ ಹುದ್ದೆಗಳಿಗೆ ಎದುರಾಗಿ ಗುತ್ತಿಗೆ/ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಹುದ್ದೆಗಳ ವಿವರ ನೀಡುವುದು; (ಅವರುಗಳ ಸಂಪೂರ್ಣ ಮಾಹಿತಿಯನ್ನು ಕ್ರೀಡಾ ವಸತಿ ಶಾಲೆವಾರು ನೀಡುವುದು)</td>
<td>ರಾಜ್ಯದಲ್ಲಿ ಒಟ್ಟು 34 ಕ್ರೀಡಾ ವಸತಿ ನಿಲಯಗಳು ಕಾರ್ಯನಿರ್ವಹಿಸುತ್ತಿದ್ದು, ವಿವರವನ್ನು ಅನುಬಂಧ-2 ರಲ್ಲಿ ಒದಗಿಸಿದೆ.<br><br>ಸರ್ಕಾರದ ಪತ್ರ ಸಂಖ್ಯೆ:ಯುಸೇಇ/253/ಯುಸೇಕ್ರೀ/2012, ದಿನಾಂಕ: 28-01-2015 ರನ್ವಯ ಕೊಡಗು, ಬಳ್ಳಾರಿ, ಯಾದಗಿರಿ, ಗುಲ್ಬರ್ಗಾ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ತಲಾ 01 ರಂತೆ 05 ಅಧೀಕ್ಷಕರ ಹುದ್ದೆ, ತಲಾ 02 ರಂತೆ 10 ತರಬೇತುದಾರರ ಹುದ್ದೆ ಹಾಗೂ ಹೊರಗುತ್ತಿಗೆ ಆಧಾರದ ಮೇಲೆ 03 ಡಾಟಾ ಎಂಟ್ರಿ ಆಪರೇಟರ್ ಗಳ ಹುದ್ದೆ ಒಟ್ಟು 18 ಹುದ್ದೆಗಳನ್ನು ಸೃಜಿಸಲು ಸಹಮತಿ ನೀಡಲಾಗಿರುತ್ತದೆ. ಸದರಿ ಹುದ್ದೆಗಳಲ್ಲಿ ಅಧೀಕ್ಷಕರು-4, ತರಬೇತುದಾರರು-10 ಮತ್ತು ಡಾಟಾ ಎಂಟ್ರಿ ಆಪರೇಟರ್-03 ಹುದ್ದೆಗಳು ಖಾಲಿ ಇರುತ್ತವೆ.<br><br>ಸರ್ಕಾರದ ಆದೇಶ ಸಂ: ಯುಸೇಇ/44/ಯುಸೇಕ್ರೀ/2015, ದಿನಾಂಕ: 04-12-2015 ರನ್ವಯ ಸಂತೇಮರನಹಳ್ಳಿ ಕ್ರೀಡಾ ಶಾಲೆಗೆ</td>
</tr>
</table>

| | | |
|---|---|---|
| | | ವಾರ್ಡನ್-01 ಹುದ್ದೆ ಮತ್ತು ತರಬೇತುದಾರರು-02 ಹುದ್ದೆಗಳು ಒಟ್ಟು 03 ಹುದ್ದೆಗಳನ್ನು ಸೃಜಿಸಲು ಅನುಮೋದನೆ ನೀಡಲಾಗಿದ್ದು, ಪ್ರಸ್ತುತ ಸದರಿ ಹುದ್ದೆಗಳು ಖಾಲಿ ಇರುತ್ತವೆ.<br><br>ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಗೆ ಒಟ್ಟು 34 ಅಧೀಕ್ಷಕರ ಹುದ್ದೆಗಳು ಮಂಜೂರಾಗಿದ್ದು, ಸರ್ಕಾರದ ಆದೇಶ ಸಂ: ವೈಎಸ್ ಡಿ-ಇವೈಡಬ್ಲ್ಯೂ/178/2021(ಭಾಗ-5), ದಿನಾಂಕ: 10-02-2023 ರನ್ವಯ 34 ಅಧೀಕ್ಷಕರ ಹುದ್ದೆಗಳನ್ನು ವಾರ್ಡನ್ ಕಂ ಕೋಚ್ ಎಂದು ಮರುಪದನಾಮೀಕರಿಸಲಾಗಿದೆ. ಸದರಿ ಹುದ್ದೆಗಳಲ್ಲಿ ಒಟ್ಟು 12ಜನ ಅಧೀಕ್ಷಕರು ಕಾರ್ಯನಿರ್ವಹಿಸುತ್ತಿದ್ದು, 22 ಹುದ್ದೆಗಳು ಖಾಲಿ ಇರುತ್ತವೆ. ಜಿಲ್ಲಾ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧೀಕ್ಷಕರುಗಳ ವಿವರವನ್ನು **ಅನುಬಂಧ-3** ರಲ್ಲಿ ಒದಗಿಸಲಾಗಿದೆ.<br><br>ಕರ್ನಾಟಕ ಕ್ರೀಡಾ ಪ್ರಾಧಿಕಾರದ ತರಬೇತುದಾರರುಕ್ರೀಡಾ ವಸತಿ ನಿಲಯಗಳಲ್ಲಿ ಮಾಸಿಕ ಸಂಚಿತ ವೇತನ ಹಾಗೂ ಗುತ್ತಿಗೆ ಆಧಾರದ ಮೇಲೆ ಒಟ್ಟು 75 ಜನ ತರಬೇತುದಾರರು ಕಾರ್ಯನಿರ್ವಹಿಸುತ್ತಿದ್ದು ವಿವರವನ್ನು **ಅನುಬಂಧ-4** ರಲ್ಲಿ ಒದಗಿಸಿದೆ. |
| ಉ) | ಜಿಲ್ಲಾ ಹಂತದಲ್ಲಿರುವಂತೆ ತಾಲ್ಲೂಕು ಹಂತದಲ್ಲಿ ಕ್ರೀಡಾ ವಸತಿ ಶಾಲೆಗಳನ್ನು ತೆರೆದು, ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ / ಕ್ರೀಡಾಪಟುಗಳಿಗೆ ತರಬೇತಿ ನೀಡುವ ಕುರಿತು ಪ್ರಸ್ತಾವನೆ ಸರ್ಕಾರದ ಮುಂದಿದೆಯೇ;<br><br>ಹಾಗಿದ್ದಲ್ಲಿ, ಪ್ರಸ್ತುತ ಯಾವ ಹಂತದಲ್ಲಿದೆ; ಈ ಕುರಿತು ಸರ್ಕಾರದ ನಿಲುವೇನು (ಸಂಪೂರ್ಣ ಮಾಹಿತಿ ನೀಡುವುದು) | ತಾಲ್ಲೂಕು ಮಟ್ಟದಲ್ಲಿ ಕ್ರೀಡಾ ವಸತಿ ಶಾಲೆಗಳನ್ನು ತೆರೆಯುವ ಪ್ರಸ್ತಾವನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |

**ವೈಎಸ್ ಡಿ/ಸಿಡಿಎನ್/41/2023**

**(ಡಾ|| ನಾರಾಯಣಗೌಡ)**
ರೇಷ್ಮೆ, ಯುವ ಸಬಲೀಕರಣ ಮತ್ತು
ಕ್ರೀಡಾ ಸಚಿವರು

| ಅನುಬಂಧ-1 | | | |
|---|---|---|---|
| ಗುಜರಾತ್ ನಲ್ಲಿ ನಡೆದ 36 ನೇ ರಾಷ್ಟ್ರೀಯ ಕ್ರೀಡಾಕೂಟ - 2022 ರಲ್ಲಿ ಪದಕ ವಿಜೇತರಾದ ಕರ್ನಾಟಕದ ಕ್ರೀಡಾಪಟುಗಳ ವಿವರ | | | |
| Sl No | Game | Name | Detailes of Medals and Event |
| 1 | Swimming | Aneesh S Gowda | 1) Gold-200 Free Style<br>2) Bronze-400 Free Style<br>3) Gold-4x100 Free Style Relay<br>4) Bronze-1500 Free Style<br>5) Gold-4x200 Free Style Relay |
| 2 | Swimming | Dhinidi Desingu | 1) Silver - 200 Free Style<br>2) Gold - 4x200 Free Style Relay |
| 3 | Swimming | Sambhav R | 1) Gold -4x100 Freestyle Relay<br>2) Gold - 4x100 Mixed Freestyle Relay<br>3) Gold - 4x200 Freestyle Relay<br>4) Bronze - 4x100 Medly Relay |
| 4 | Swimming | Prithvi M | 1) Gold - 4x100 Freestyle Relay<br>2) Bronze - 4x100 Medly Relay |
| 5 | Swimming | Sri Hari Nataraj | 1) Gold - 4x100 Freestyle Relay<br>2) Gold - 4x100 Mixed Freestyle Relay<br>3) Silver - 4x100 Medley<br>4) Gold - 50 Freestyle<br>5) Gold - 100 Back Stroke<br>6) Gold - 50 Back Stroke<br>7) Gold - 100 Freestyle |
| 6 | Swimming | Asmitha Chandra | 1) Gold - 800 Freestyle |
| 7 | Swimming | Ruzula | 1) Gold - 4x200 Freestyle Relay<br>2) Gold - 4x100 Freestyle Relay<br>3) Bronze - 100 Freestyle<br>4) Gold - 4x100 Freestyle Relay |
| 8 | Swimming | Shalini Dixit | 1) Gold - 4x200Freestyle Relay |
| 9 | Swimming | Hashika R Chandan | 1) Gold - 4x200 Freestyle Relay<br>2) Gold - 200 Freestyle<br>3) Gold - 400 Medley<br>4) Gold - 200 Butter Fly<br>5) Bronze - 1500 Freestyle<br>6) Gold - 400 Freestyle<br>7) Gold - 200 Medley |
| 10 | Swimming | Harsha Jayaram | 1) Bronze - 200 Breast Stroke |
| 11 | Swimming | Manavi Varma | 1) Bronze - 50 M Breast Stroke<br>2) Silver- 200 M Medley<br>3) Gold - 4x100 Medley Relay<br>4) Silver - 4x100 M Medley |
| 12 | Swimming | Nina Venkatesh | 1) Bronze - 100 Butterfly<br>2) Gold - 50 M Butterfly<br>3) Gold - 4x100 Medley<br>4) Gold - 4x100 Freestyle<br>5) 4x100 Freestyle Relay<br>6) Silver 4x100 Medley |

| | | | |
|---|---|---|---|
| 13 | Swimming | Ridhima Veerendra | 1) Silver - 100 Back Stroke<br>2) Silver - Back Stroke<br>3) Gold - 4x100 Medley<br>4) Gold - 4x100 Freestyle Relay |
| 14 | Swimming | Tanishi Gupta | 1) Gold - 4x100 Medley Relay<br>2) Bronze - 50 Butterfly<br>3) Silver - 100 Butter fly |
| 15 | Swimming | Lathisha Mandana | 1) Gold - 4x100 freestyle |
| 16 | Swimming | S Lakshya | 1) Gold - 200 Breast Stroke |
| 17 | Swimming | Shivank V | 1) Gold - 4x200 Freestyle Relay |
| 18 | Swimming | V Shiva | 1) Gold - 4x200 Freestyle<br>2) Bronze - 200 Back Stroke<br>3) Silver - 100 Back Stroke<br>4) Silver - 200 M Medley<br>5) Bronze - 50 M Back Stroke<br>6) Silver - 4x100 Medley |
| 19 | Swimming | Kalpa S Bora | 1) Bronze - 4x100 Medley Relay |
| 20 | Swimming | Utkarsh Patil | 1) Gold - 200 Back Stroke |
| 21 | Athletics | Sinchal Kaveramma | 1) Bronze - 4x400 Relay<br>2) Bronze - 400 Hardels |
| 22 | Athletics | Inchara | 1) Bronze - 4x400 relay<br>2) Silver - 400 m Relay |
| 23 | Athletics | N S Vijayakumari | 1) Bronze - 4x400 Relay |
| 24 | Athletics | Likhitha M | 1) Bronze -4x400 Relay |
| 25 | Athletics | Mahante Siddappa | Silver -400 m Relay |
| 26 | Athletics | Likhitha M Nihal | Silver -400 m Relay |
| 27 | Athletics | Joel W | Silver -400 m Relay |
| 28 | Athletics | Abhin B Devadiga | Silver - 200 m |
| 29 | Athletics | Abinaya Shetty | Silver - High Jump |
| 30 | Badminton | Ashwini Ponnappa | Gold - Mixed Doubles |
| 31 | Badminton | Sai Prateek | Gold - Mixed Doubles |
| 32 | Badminton | Ashwini Bhat | Silver - Women Doubles |
| 33 | Badminton | Shika Goutham | Silver - Women Doubles |
| 34 | Badminton | Raghu M | Bronze Men Singles |
| 35 | Badminton | Mithun M | Silver - Men Singles |
| 36 | Badminton | Tanya Hemanth | Bronze Womens Singles |
| 37 | Badminton | Vaibhav | Bronze - Men Doubles |
| 38 | Badminton | Nithin | Bronze - Men Doubles |
| 39 | Canoeing | Dhanalakshmi | Bronze Salom |
| 40 | Cycling | Keerthi Rangaswamy | Bronze - Track |
| 41 | Cycling | Venkappa Kengalagutti | 1) Bronze - Track<br>2) Bronze - Omnium event |
| 42 | Cycling | Navven John | Gold - 40 km TT |
| 43 | Golf | Avani Prashanth | 1) Gold- Team and Ind<br>2) Gold - Team |
| 44 | Golf | Aryan Roopa Anand | Silver - Golf |
| 45 | Golf | Trishul Chinnappa | Silver - Golf |
| 46 | Golf | Durga Nittur | Gold - Team event Ladies |
| 47 | Gymnastic | SriVarshini P S | 1) Bronze - Vault<br>2) Silver - Floor |
| 48 | Judo | Malaprabha Jadhav | Bronze - 48 kg |

| | | | |
|---|---|---|---|
| 49 | Tennis | Prajwal Dev | 1) Gold - Mens Doubles<br>2) Silver - Mixed<br>3) Bronze - Individual<br>4) Bronze - Team |
| 50 | Tennis | Adil Kalyanapur | 1) Gold - Mens Doubles<br>2) Bronze - Team |
| 51 | Tennis | Shramada Balu | 1) Silver - Mixed Doubles<br>2) Silver - Singles<br>3) Bronze - Team<br>4) Bronze - Doubles |
| 52 | Tennis | Rishi Reddy | Bronze - Team |
| 53 | Tennis | Manish G | 1) Bronze - Team<br>2) Bronze - Singels |
| 54 | Tennis | Rashin Samule | Bronze - Team |
| 55 | Tennis | Vidula Amar | Bronze - Team |
| 56 | Tennis | Soha Sadiq | 1) Bronze - Team<br>2) Bronze - Doubles |
| 57 | Tennis | Vanshita Pathania | Bronze - Team |
| 58 | Tennis | Reshma Maruri | Bronze - Team |
| 59 | Hockey | Jagdeep | Gold - Hockey |
| 60 | Hockey | Seshe Gowda | Gold - Hockey |
| 61 | Hockey | Pranam Gowda | Gold - Hockey |
| 62 | Hockey | Deekshith A H | Gold - Hockey |
| 63 | Hockey | Mohd Raheel | Gold - Hockey |
| 64 | Hockey | Bharath K R | Gold - Hockey |
| 65 | Hockey | Manjeet | Gold - Hockey |
| 66 | Hockey | Somaiah K P | Gold - Hockey |
| 67 | Hockey | Pruthviraj | Gold - Hockey |
| 68 | Hockey | Majji Ganesh | Gold - Hockey |
| 69 | Hockey | Surya N M | Gold - Hockey |
| 70 | Hockey | S V Sunil | Gold - Hockey |
| 71 | Hockey | Nikkin Thimmaiah | Gold - Hockey |
| 72 | Hockey | Abharan Sudev | Gold - Hockey |
| 73 | Hockey | Harish Mutagar | Gold - Hockey |
| 74 | Hockey | Nachappa I R | Gold - Hockey |
| 75 | Hockey | Nagasreenu | Gold - Hockey |
| 76 | Hockey | Sharath Somanna | Gold - Hockey |
| 77 | Roller Skating | Dhanush Babu | Bronze - 3000 m m Relay |
| 78 | Roller Skating | Ghanshyam Parbhu | Bronze - 3000 m m Relay |
| 79 | Roller Skating | Tejas P Ramesh | Bronze - 3000 m m Relay |
| 80 | Roller Skating | D Jhon | Bronze - Mens relay |
| 81 | Roller Skating | Varsha Puranik | Silver - 3000 MTS Relay |
| 82 | Roller Skating | Suvarnika | Silver - 3000 MTS Relay |
| 83 | Roller Skating | Rea | Silver - 3000 MTS Relay |
| 84 | Roller Skating | Poorvi Matte | Silver - 3000 MTS Relay |
| 85 | Roller Skating | Suvarnika Radhakrishna | Bronze - 1000 MTS Rink Race |
| 86 | Roller Skating | Mahim Ivan | Gold - Skate Board Park |
| 87 | Roller Skating | Mohan Kiran | Bronze - Artistic |
| 88 | Shooting | Tilottama Sen | Silver - 10 MTR Air Refle |
| 89 | Shooting | Divya T S | Bronze - 10 MTR Air Refle |
| 90 | Weight Lifting | Usha B N | Silver - Weightlifting |
| 91 | Wrestling | Paramananda Basavaraj Bujammag | Bronze - G R 77 kg |
| 92 | Yogasana | Nirmala | Bronze - Traditional |
| 93 | Yogasana | Aditya Prakash Jangam | 1) Silver - Artistic<br>2) Gold - Rhythmic |

| | | | |
|---|---|---|---|
| 94 | Yogasana | Mohammed Firoz Shik | 1) Gold - Rhythmic<br>2) Bronze - Iindividual |
| 95 | Yogasana | Kushi | Silver - Rhythmic Yogasana Pair |
| 96 | Kho-Kho | Sudarshan | Bronze - Kho-Kho Men |
| 97 | Kho-Kho | Gowtham M K | Bronze - Kho-Kho Men |
| 98 | Kho-Kho | Mohamed Taseen | Bronze Kho-Kho Men |
| 99 | Kho-Kho | Sobha V Srigandha | Bronze - Kho-Kho Men |
| 100 | Kho-Kho | Shashikumar A Talawar | Bronze Kho-Kho Men |
| 101 | Kho-Kho | Mahesh P | Bronze Kho-Kho Men |
| 102 | Kho-Kho | Dinesh Naik | Bronze Kho-Kho Men |
| 103 | Kho-Kho | Sanjay Kumar | Bronze - Kho-Kho Men |
| 104 | Kho-Kho | Venugopal S | Bronze - Kho-Kho Men |
| 105 | Kho-Kho | Veeresh Lotageri | Bronze - Kho-Kho Men |
| 106 | Kho-Kho | Prajwal K H | Bronze - Kho-Kho Men |
| 107 | Kho-Kho | Rohith V | Bronze - Kho-Kho Men |
| 108 | Kho-Kho | Vijay S | Bronze Kho-Kho Men |
| 109 | Kho-Kho | Veena | Bronze Kho-Kho Women |
| 110 | Kho-Kho | Chaitra | Bronze - Kho-Kho Women |
| 111 | Kho-Kho | Tejaswini | Bronze - Kho-Kho Women |
| 112 | Kho-Kho | Monika | Bronze - Kho-Kho Women |
| 113 | Kho-Kho | Vinutha | Bronze Kho-Kho Women |
| 114 | Kho-Kho | Vidya | Bronze Kho-Kho Women |
| 115 | Kho-Kho | Meghana | Bronze Kho-Kho Women |
| 116 | Kho-Kho | Nisarga | Bronze Kho-Kho Women |
| 117 | Kho-Kho | Gowrishree | Bronze Kho-Kho Women |
| 118 | Kho-Kho | Maheshwari | Bronze Kho-Kho Women |
| 119 | Kho-Kho | Sheethal | Bronze Kho-Kho Women |
| 120 | Kho-Kho | Chandana | Bronze Kho-Kho Women |
| 121 | Kho-Kho | Varalakshmi | Bronze Kho-Kho Women |
| 122 | Kho-Kho | Jyothi | Bronze Kho-Kho Women |
| 123 | Kho-Kho | Tulasi | Bronze Kho-Kho Women |
| 124 | Netball | Delcia Sherly A | Bronze - Women |
| 125 | Netball | Ganana K A | Bronze - Women |
| 126 | Netball | Harshitha V L | Bronze Women |
| 127 | Netball | Manasa L G | Bronze Women |
| 128 | Netball | Meghana B C | Bronze Women |
| 129 | Netball | Nandini L G | Bronze - Women |
| 130 | Netball | Pavitra N | Bronze - Women |
| 131 | Netball | Pavitra R | Bronze - Women |
| 132 | Netball | Ranjitha B G | Bronze - Women |
| 133 | Netball | Shalini K | Bronze - Women |
| 134 | Netball | Shiva Leela | Bronze - Women |
| 135 | Netball | Thanushree N | Bronze - Women |
| 136 | Table Teniss | Yashashwini Ghorpade | Silver - Women Doubles |
| 137 | Table Teniss | Kushi V | Silver - Women Doubles |
| | | | |

## ಅನುಬಂಧ-2

: ರಾಜ್ಯದಲ್ಲಿರುವ ಕ್ರೀಡಾ ವಸತಿ ಶಾಲೆ/ನಿಲಯಗಳ ವಿವರ:

| ಕ್ರ.ಸಂ | ಕ್ರೀಡಾ ಶಾಲೆ/ನಿಲಯಗಳ ಹೆಸರು |
|---|---|
| 1 | ಬೆಂಗಳೂರು ನಗರ |
| 2 | ವಿದ್ಯಾನಗರ, ಬೆಂಗಳೂರು |
| 3 | ಮೈಸೂರು |
| 4 | ಕೂಡಿಗೆ, ಕೊಡಗು |
| 5 | ಬೆಳಗಾವಿ |
| 6 | ದಾವಣಗೆರೆ |
| 7 | ಚಿಕ್ಕಮಗಳೂರು |
| 8 | ಹಾವೇರಿ |
| 9 | ಮಡಿಕೇರಿ, ಕೊಡಗು |
| 10 | ಮಂಡ್ಯ |
| 11 | ಮಂಗಳೂರು(ದ.ಕ) |
| 12 | ರಾಮನಗರ |
| 13 | ಶಿವಮೊಗ್ಗ |
| 14 | ಚಿತ್ರದುರ್ಗ |
| 15 | ಉಡುಪಿ |
| 16 | ಧಾರವಾಡ |
| 17 | ಕಲಬುರ್ಗಿ |
| 18 | ಬಳ್ಳಾರಿ |
| 19 | ಕೊಪ್ಪಳ |
| 20 | ರಾಯಚೂರು |
| 21 | ಹಾಸನ |
| 22 | ಚಿಕ್ಕಬಳ್ಳಾಪುರ |
| 23 | ಬಾಗಲಕೋಟೆ |
| 24 | ಕಾರವಾರ |
| 25 | ಹಳಿಯಾಳ, ಉತ್ತರ ಕನ್ನಡ ಜಿಲ್ಲೆ |
| 26 | ಪೊನ್ನಂಪೇಟೆ, ಕೊಡಗು |
| 27 | ಚಾಮರಾಜನಗರ |
| 28 | ಸಂತೇಮಾರಹಳ್ಳಿ, ಚಾಮರಾಜನಗರ |
| 29 | ಕೋಲಾರ |
| 30 | ಬೀದರ್ |
| 31 | ತುಮಕೂರು |
| 32 | ಯಾದಗಿರಿ |
| 33 | ವಿಜಯಪುರ |
| 34 | ಗದಗ |

## ಅನುಬಂಧ-3

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಜಿಲ್ಲಾ ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧೀಕ್ಷಕರುಗಳ ವಿವರ

| ಕ್ರ.ಸಂ | ಜಿಲ್ಲೆಯ ಹೆಸರು | ಅಧೀಕ್ಷಕರುಗಳ ಹೆಸರು |
|---|---|---|
| 1 | ರಾಮನಗರ | ಹೆಚ್. ವಿಜಯಕುಮಾರ್ |
| 2 | ಧಾರವಾಡ | ಸುರೇಂದ್ರ ಜಿ. ಭಾವಿಕಟ್ಟಿ |
| 3 | ಮಂಡ್ಯ | ನಾಗಭೂಷಣ |
| 4 | ಕೊಪ್ಪಳ | ಹೆಚ್. ನಾಗರಾಜ್ |
| 5 | ಬೆಳಗಾವಿ | ರಾಜೇಂದ್ರ ಮ. ಕೋಲ್ಕರ |
| 6 | ದಕ್ಷಿಣ ಕನ್ನಡ | ಎಲ್. ಮಂಜು |
| 7 | ರಾಯಚೂರು | ಸಂತೋಷ್ ಕುಮಾರ್ ಕರಮುಡಿ |
| 8 | ಬಾಗಲಕೋಟೆ | ರಂಗಪ್ಪ ಕ್ಯಾಲಕೊಂಡ |
| 9 | ದಾವಣಗೆರೆ | ಅರ್ಪಿತಾ ಕೆ.ಜೆ. |
| 10 | ಯಾದಗಿರಿ | ಜಿ.ಗೋವಿಂದಪ್ಪ |
| 11 | ವಿಜಯಪುರ | ಎನ್.ಕೆ. ನದಾಫ್ (ಕಂದಾಯ ಇಲಾಖೆ ಸಿಬ್ಬಂದಿ) |
| 12 | ಕೇಂದ್ರ ಕಛೇರಿ, ಬೆಂಗಳೂರು | ಬಿ.ಎನ್. ರಜನಿ |

# ಅನುಬಂಧ-4

## ಕರ್ನಾಟಕ ಕ್ರೀಡಾ ಪ್ರಾಧಿಕಾರದ ತರಬೇತುದಾರರು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳಗಳ ವಿವರ

| ಕ್ರ. ಸಂ | ತರಬೇತುದಾರರ ಹೆಸರು [ಶ್ರೀ / ಶ್ರೀಮತಿ] | ಕ್ರೀಡೆ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|
| 1 | ಕಾಡೇಶ್ ನ್ಯಾಮಗೌಡ | ಕುಸ್ತಿ | ಕ್ರೀಡಾ ವಸತಿ ನಿಲಯ ಬಾಗಲಕೋಟೆ ಜಿಲ್ಲೆ |
| 2 | ಅನಿತಾ ನಿಂಬರ್ಗಿ | ಸೈಕ್ಲಿಂಗ್ | ಕ್ರೀಡಾ ವಸತಿ ನಿಲಯ, ಬಾಗಲಕೋಟೆ ಜಿಲ್ಲೆ |
| 3 | ಶಾಂತಿ ಎಸ್ | ಫುಟ್ಬಾಲ್ | ಕ್ರೀಡಾ ವಸತಿ ನಿಲಯ ಬಳ್ಳಾರಿ ಜಿಲ್ಲೆ |
| 4 | ಬಾಲಕೃಷ್ಣ ಅವಲಕ್ಕಿ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಬೆಂಗಳೂರು ನಗರ ಜಿಲ್ಲೆ |
| 5 | ಎನ್ ಬಾಲಕೃಷ್ಣ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ನಿಲಯ, ಬೆಂಗಳೂರು ನಗರ ಜಿಲ್ಲೆ |
| 6 | ಟಿ ವಿಜಯಕೃಷ್ಣ | ಹಾಕಿ | ಕ್ರೀಡಾ ವಸತಿ ನಿಲಯ,<br>ಬೆಂಗಳೂರು ನಗರ ಜಿಲ್ಲೆ |
| 7 | ಎನ್ ಪ್ರಕಾಶ್ | ಜೂಡೋ | ಶ್ರೀ ಕಂಠೀರವ ಕ್ರೀಡಾಂಗಣ,<br>ಬೆಂಗಳೂರು ನಗರ ಜಿಲ್ಲೆ |
| 8 | ಅಶೋಕ್ ಕೆ ಸಿ | ವಾಲಿಬಾಲ್ | ಕ್ರೀಡಾ ವಸತಿ ನಿಲಯ,<br>ಬೆಂಗಳೂರು ನಗರ ಜಿಲ್ಲೆ |
| 9 | ಸಂಜೀವ್ ಕುಮಾರ್ ಎ ನಾಯಕ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಬೆಳಗಾವಿ ಜಿಲ್ಲೆ |
| 10 | ಕುತುಜಾ ಶಾರೀಫ್ ಮುಲ್ತಾನಿ | ಜೂಡೋ | ಕ್ರೀಡಾ ವಸತಿ ನಿಲಯ , ಬೆಳಗಾವಿ ಜಿಲ್ಲೆ |
| 11 | ರೋಹಿಣಿ ಬಾಬುರಾವ್ ಪಾಟೀಲ್ | ಜೂಡೋ | ಕ್ರೀಡಾ ವಸತಿ ನಿಲಯ , ಬೆಳಗಾವಿ ಜಿಲ್ಲೆ |
| 12 | ಬಸವರಾಜ್ ಸಿ ಹೊಸಮಠ್ | ವಾಲಿಬಾಲ್ | ಕ್ರೀಡಾ ವಸತಿ ನಿಲಯ , ಬೆಳಗಾವಿ ಜಿಲ್ಲೆ |
| 13 | ಹನುಮಂತ್ ಪಿ ಪಾಟೀಲ್ | ಕುಸ್ತಿ | ಕ್ರೀಡಾ ವಸತಿ ನಿಲಯ , ಬೆಳಗಾವಿ ಜಿಲ್ಲೆ |
| 14 | ಎ ಆರ್ ನಾಗರಾಜ್ | ಕುಸ್ತಿ | ಕ್ರೀಡಾ ವಸತಿ ನಿಲಯ , ಬೆಳಗಾವಿ ಜಿಲ್ಲೆ |
| 15 | ಜಾಕೀರ್ | ಹಾಕಿ | ಕ್ರೀಡಾ ವಸತಿ ನಿಲಯ, ಬಳ್ಳಾರಿ ಜಿಲ್ಲೆ |
| 16 | ನೂರ್ ಆಲೀಂ ಎ ಎಸ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಬೀದರ್ ಜಿಲ್ಲೆ |
| 17 | ರಾಘವೇಂದ್ರ ಬೆಣ್ಣೂರ್ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ನಿಲಯ, ಬೀದರ್ ಜಿಲ್ಲೆ |
| 18 | ಬಿ ಕೆ ಗೋಪಾಲ್ | ಫುಟ್ಬಾಲ್ | ಕ್ರೀಡಾ ವಸತಿ ನಿಲಯ,<br>ಚಾಮರಾಜನಗರ ಜಿಲ್ಲೆ |
| 19 | ಲೋಹಿತ್ ಎಸ್ | ಫೆನ್ಸಿಂಗ್ | ಕ್ರೀಡಾ ವಸತಿ ನಿಲಯ, ಚಾಮರಾಜನಗರ ಜಿಲ್ಲೆ |
| 20 | ಕಾರ್ತಿಕ್ ಬಿ ಎಸ್ | ಫೆನ್ಸಿಂಗ್ | ಕ್ರೀಡಾ ವಸತಿ ನಿಲಯ, ಚಾಮರಾಜನಗರ ಜಿಲ್ಲೆ |
| 21 | ಸಿ ಎಸ್ ವಿನುತ | ವಾಲಿಬಾಲ್ | ಕ್ರೀಡಾ ವಸತಿ ನಿಲಯ,<br>ಚಿಕ್ಕಮಗಳೂರು ಜಿಲ್ಲೆ |
| 22 | ಭರತ್ ಎಸ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಚಿಕ್ಕಮಗಳೂರು ಜಿಲ್ಲೆ |
| 23 | ರವಿ | ಜೂಡೋ | ಕ್ರೀಡಾ ವಸತಿ ನಿಲಯ, ಚಿಕ್ಕಮಗಳೂರು ಜಿಲ್ಲೆ |
| 24 | ತಿಪ್ಪಣ್ಣ ಎಸ್ ಮಾಲಿ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಚಿತ್ರದುರ್ಗ ಜಿಲ್ಲೆ |
| 25 | ಮೊಹಮ್ಮದ್ ಮುಹಿಬುಲ್ಲ | ವಾಲಿಬಾಲ್ | ಕ್ರೀಡಾ ವಸತಿ ನಿಲಯ,<br>ಚಿತ್ರದುರ್ಗ ಜಿಲ್ಲೆ |
| 26 | ವಿನೋದ್ ಕುಮಾರ್ ಕೆ | ಕುಸ್ತಿ | ಕ್ರೀಡಾ ವಸತಿ ನಿಲಯ, ದಾವಣಗೆರೆ ಜಿಲ್ಲೆ |
| 27 | ಶ್ರೀ ಶೈಲ್ | ಕಬಡ್ಡಿ | ಕ್ರೀಡಾ ವಸತಿ ನಿಲಯ,<br>ದಾವಣಗೆರೆ ಜಿಲ್ಲೆ |
| 28 | ಜೆ ರಾಮಲಿಂಗಪ್ಪ | ಖೊ-ಖೊ | ಕ್ರೀಡಾ ವಸತಿ ನಿಲಯ,<br>ದಾವಣಗೆರೆ ಜಿಲ್ಲೆ |
| 29 | ಶಿವನಂದಾ ಆರ್ | ಕುಸ್ತಿ | ಕ್ರೀಡಾ ವಸತಿ ನಿಲಯ,<br>ದಾವಣಗೆರೆ ಜಿಲ್ಲೆ |
| 30 | ಚಂದ್ರಶೇಖರ್ ನಾಯಕ್ | ಹಾಕಿ | ಕ್ರೀಡಾ ವಸತಿ ನಿಲಯ, ಧಾರವಾಡ ಜಿಲ್ಲೆ |

| ಕ್ರ. ಸಂ | ತರಬೇತುದಾರರ ಹೆಸರು [ಶ್ರೀ / ಶ್ರೀಮತಿ] | ಕ್ರೀಡೆ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|
| 31 | ಶಿವಪ್ಪ ಸಿದ್ರಾಮ್ ಪಾಟೀಲ್ | ಕುಸ್ತಿ | ಕ್ರೀಡಾ ವಸತಿ ನಿಲಯ, ಧಾರವಾಡ ಜಿಲ್ಲೆ |
| 32 | ಶ್ಯಾಮಲ ಪಾಟೀಲ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಧಾರವಾಡ ಜಿಲ್ಲೆ |
| 33 | ಅನಂತ್ ಶ್ರೀನಿವಾಸ್ ದೇಸಾಯಿ | ಸೈಕ್ಲಿಂಗ್ | ಕ್ರೀಡಾ ವಸತಿ ನಿಲಯ, ಗದಗ ಜಿಲ್ಲೆ |
| 34 | ವಿದ್ಯಾ ಜಿ ಕುಲಕರ್ಣಿ | ಸೈಕ್ಲಿಂಗ್ | ಕ್ರೀಡಾ ವಸತಿ ನಿಲಯ, ಗದಗ ಜಿಲ್ಲೆ |
| 35 | ಮಂಜುನಾಥ್ ಜಿ ಬಾಗಾಡೆ | ಹಾಕಿ | ಕ್ರೀಡಾ ವಸತಿ ನಿಲಯ, ಗದಗ ಜಿಲ್ಲೆ |
| 36 | ಹೆಚ್ ಎಲ್ ಸುಬ್ರಮಣ್ಯ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ನಿಲಯ, ಹಾಸನ ಜಿಲ್ಲೆ |
| 37 | ಹೆಚ್ ಬಿ ರವೀಶ್ | ಹಾಕಿ | ಕ್ರೀಡಾ ವಸತಿ ನಿಲಯ, ಹಾಸನ ಜಿಲ್ಲೆ |
| 38 | ಎಸ್ ಎನ್ ರಮೇಶ್ | ವಾಲಿಬಾಲ್ | ಕ್ರೀಡಾ ವಸತಿ ನಿಲಯ, ಹಾಸನ |
| 39 | ರಾಜು ಬಾಬು ಚೌಹಾಣ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಕಲಬುರಗಿ ಜಿಲ್ಲೆ |
| 40 | ಸಂಜಯ್ ಬಾಣದ್ | ಹಾಕಿ | ಕ್ರೀಡಾ ವಸತಿ ನಿಲಯ, ಕಲಬುರಗಿ ಜಿಲ್ಲೆ |
| 41 | ತುಕಾರಾಮ್ ಎಂ ಗೌಡ | ಕುಸ್ತಿ | ಕ್ರೀಡಾ ವಸತಿ ನಿಲಯ, ಕಾರಾವಾರ ಜಿಲ್ಲೆ |
| 42 | ಕೆ ಎಂ ಸುಬ್ಬಯ್ಯ | ಹಾಕಿ | ಕ್ರೀಡಾ ವಸತಿ ನಿಲಯ, ಪೊನ್ನಮ್ ಪೇಟೆ, ಮಡಿಕೇರಿ ಜಿಲ್ಲೆ |
| 43 | ವೆಂಕಟೇಶ್ ಎಂ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಕೋಲಾರ ಜಿಲ್ಲೆ |
| 44 | ಕಮಲ್ ಸಿಂಗ್ ಬಿಸ್ಟ್ | ವಾಲಿಬಾಲ್ | ಕ್ರೀಡಾ ವಸತಿ ನಿಲಯ, ಕೊಪ್ಪಳ ಜಿಲ್ಲೆ |
| 45 | ಮಂಜುನಾಥ್ ಬಿ ಜಿ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಕೂಡಿಗೆ, ಮಡಿಕೇರಿ ಜಿಲ್ಲೆ |
| 46 | ಸುರೇಶ್ ಜಿ | ಜಿಮ್ನಾಸ್ಟಿಕ್ಸ್ | ಕ್ರೀಡಾ ವಸತಿ ನಿಲಯ, ಕೂಡಿಗೆ, ಮಡಿಕೇರಿ ಜಿಲ್ಲೆ |
| 47 | ಬಿ ಎಸ್ ವೆಂಕಟೇಶ್ | ಹಾಕಿ | ಕ್ರೀಡಾ ವಸತಿ ನಿಲಯ, ಕೂಡಿಗೆ, ಮಡಿಕೇರಿ ಜಿಲ್ಲೆ |
| 48 | ಕೆ ಕೆ ಬಿಂದಿಯಾ | ಹಾಕಿ | ಕ್ರೀಡಾ ವಸತಿ ನಿಲಯ, ಮಡಿಕೇರಿ ಜಿಲ್ಲೆ |
| 49 | ಮಹಾಬಲ ಕೆ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಮಡಿಕೇರಿ ಜಿಲ್ಲೆ |
| 50 | ದೇವಸಿಗಾಮಣಿ ರಾಜಾಂಗಮ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಮಂಡ್ಯ ಜಿಲ್ಲೆ |
| 51 | ಭರತ್ ರಾಜ್ ಸಿ ಬಿ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ನಿಲಯ, ಮಂಡ್ಯ ಜಿಲ್ಲೆ |
| 52 | ಬಾಬು ಗುರುರಾಜ್ | ಫುಟ್ಬಾಲ್ | ಕ್ರೀಡಾ ವಸತಿ ನಿಲಯ, ಮಂಡ್ಯ ಜಿಲ್ಲೆ |
| 53 | ರೂಪಾಶ್ರೀ ಕೆ ಜಿ | ಕಬಡ್ಡಿ | ಕ್ರೀಡಾ ವಸತಿ ನಿಲಯ, ಮಂಡ್ಯ ಜಿಲ್ಲೆ |
| 54 | ಮೊಹಮ್ಮದ್ ಇಸ್ಮಾಯಿಲ್ | ಕಬಡ್ಡಿ | ಜಿಲ್ಲಾ ಕ್ರೀಡಾಂಗಣ, ತುಮಕೂರು ಜಿಲ್ಲೆ |
| 55 | ದೇವಣ್ಣ ನಾಯಕ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಮಂಗಳೂರು ಜಿಲ್ಲೆ |
| 56 | ಎ ಸಿ ದಿನಮಣಿ | ಹಾಕಿ | ಕ್ರೀಡಾ ವಸತಿ ಶಾಲೆ, ಕೂಡಿಗೆ, ಮಡಿಕೇರಿ ಜಿಲ್ಲೆ |
| 57 | ರಾಮಸ್ವಾಮಿ ಕೆ ಎನ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಮೈಸೂರು ಜಿಲ್ಲೆ |
| 58 | ಗಿರೀಶ್ ಬಿ ಎಸ್ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ನಿಲಯ, ಮೈಸೂರು ಜಿಲ್ಲೆ |
| 59 | ಬಿ ಲೋಕೇಶ್ | ಜಿಮ್ನಾಸ್ಟಿಕ್ಸ್ | ಕ್ರೀಡಾ ವಸತಿ ನಿಲಯ, ಮೈಸೂರು ಜಿಲ್ಲೆ |
| 60 | ಆರ್ ಸುಂದರೇಶ್ | ಹಾಕಿ | ಕ್ರೀಡಾ ವಸತಿ ನಿಲಯ, ಮೈಸೂರು ಜಿಲ್ಲೆ |
| 61 | ರವೀಂದ್ರ ಟಿ ಬಿ | ವಾಲಿಬಾಲ್ | ಕ್ರೀಡಾ ವಸತಿ ನಿಲಯ, ಮೈಸೂರು ಜಿಲ್ಲೆ |
| 62 | ಬಾಳಾಪ್ಪ ಟಿ ಮಾನೆ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಶಿವಮೊಗ್ಗ ಜಿಲ್ಲೆ |

| ಕ್ರ. ಸಂ | ತರಬೇತುದಾರರ ಹೆಸರು [ಶ್ರೀ / ಶ್ರೀಮತಿ] | ಕ್ರೀಡೆ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|
| 63 | ನಮ್ರತಾ ಸಿ ಕೆ | ವಾಲಿಬಾಲ್ | ಕ್ರೀಡಾ ವಸತಿ ನಿಲಯ, ತುಮಕೂರು ಜಿಲ್ಲೆ |
| 64 | ಶಿವಪ್ರಸಾದ್ ಎಂ ಆರ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ತುಮಕೂರು ಜಿಲ್ಲೆ |
| 65 | ಸುಧೀರ್ ದೇವದಾಸ್ | ಜಿಮ್ನಾಸ್ಟಿಕ್ಸ್ | ಕ್ರೀಡಾ ವಸತಿ ನಿಲಯ, ತುಮಕೂರು ಜಿಲ್ಲೆ |
| 66 | ಅನಂತ್ ರಾಮ್ ಕೆ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ಉಡುಪಿ ಜಿಲ್ಲೆ |
| 67 | ವಿಶ್ವನಾಥ್ ಪ್ರಹ್ಲಾದ್ ಗುಜರನ್ನಾನವರ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 68 | ಚೈತ್ರ ಆರ್ ಅಂಬಡಗಟ್ಟಿ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ನಿಲಯ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 69 | ಅಶೋಕ್ ಬಿ ಮಂಟೂರ್ | ಅಥ್ಲೆಟಿಕ್ಸ್ | ಕ್ರೀಡಾ ವಸತಿ ಶಾಲೆ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 70 | ಸತ್ಯನಾರಾಯಣ ಕೆ | ಬ್ಯಾಸ್ಕೆಟ್ ಬಾಲ್ | ಕ್ರೀಡಾ ವಸತಿ ಶಾಲೆ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 71 | ಧನಸಂಜಯ | ಬಾಕ್ಸಿಂಗ್ | ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 72 | ಮೊಹಮ್ಮದ್ ಮಸೂದ್ | ಫುಟ್ಬಾಲ್ | ಕ್ರೀಡಾ ವಸತಿ ನಿಲಯ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 73 | ಸುನೀತಾ ಎಂ ಸಿ | ಖೊ-ಖೊ | ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 74 | ಎನ್ ಆರ್ ಗೀತಾ | ವಾಲಿಬಾಲ್ | ಕ್ರೀಡಾ ವಸತಿ ಶಾಲೆ, ವಿದ್ಯಾನಗರ ತರಬೇತಿ ಕೇಂದ್ರ, ಬೆಂಗಳೂರು ಉತ್ತರ ತಾಲ್ಲೂಕು |
| 75 | ಅಲ್ಕಾ ಎನ್ ಫಡಾತಾರೆ | ಸೈಕ್ಲಿಂಗ್ | ಕ್ರೀಡಾ ವಸತಿ ನಿಲಯ, ವಿಜಯಪುರ ಜಿಲ್ಲೆ |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 621

ಸದಸ್ಯರ ಹೆಸರು : ಶ್ರೀ ಅಶ್ವಿನ್ ಕುಮಾರ್ ಎಂ. (ಟಿ .ನರಸಿಪುರ)

ಉತ್ತರಿಸುವ ದಿನಾಂಕ : 15-02-2023

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೃಷಿಯಲ್ಲಿ ಕೃಷಿ ತಾಂತ್ರಿಕತೆಯ ಅವಶ್ಯಕತೆ ಮತ್ತು ಅದರ ಅಳವಡಿಕೆ, ಪ್ರಸ್ತುತ ಹೆಚ್ಚುತ್ತಿರುವ ಜನಸಂಖ್ಯೆ ನಗರೀಕರಣದಿಂದ ಕಡಿಮೆಯಾಗುತ್ತಿರುವ ಕೃಷಿ ಭೂಮಿ ಹಾಗೂ ದೇಶದ ಆಹಾರ ಭದ್ರತೆಗಾಗಿ ಅತೀ ಅವಶ್ಯಕವಾಗಿ ಆಗಬೇಕಾಗಿರುವ ಕೃಷಿ ಉತ್ಪನ್ನಗಳ ಉತ್ಪಾದನೆ ಹೆಚ್ಚಿಸಲು ಇರುವ ಅತ್ಯಂತ ಪ್ರಬಲ, ಕ್ಷಮತೆಯ ಹಾಗೂ ಆರ್ಥಿಕವಾಗಿ ಅನುಕೂಲಕರವಾಗಬಹುದಾದ ಕ್ಷೇತ್ರವೆಂದರೆ ಅದು ಕೃಷಿ ತಾಂತ್ರಿಕ ಕ್ಷೇತ್ರ ಆದ್ದರಿಂದ ಸರ್ಕಾರ ಕೃಷಿ ತಾಂತ್ರಿಕ ಕ್ಷೇತ್ರಕ್ಕೆ ಹೆಚ್ಚು ಒತ್ತು ನೀಡುತ್ತಿದೆಯೇ; (ವಿವರ ಒದಗಿಸುವುದು) | ಕೇಂದ್ರ ಪುರಸ್ಕೃತ - ಆಹಾರ ಮತ್ತು ಪೌಷ್ಟಿಕ ಭದ್ರತಾ ಅಭಿಯಾನ ಯೋಜನೆಯಡಿ ರಾಜ್ಯದ ಆಯ್ದ ಜಿಲ್ಲೆಗಳಲ್ಲಿ ಸಾಗುವಳಿ ವಿಸ್ತೀರ್ಣ ಹಾಗೂ ಬೆಳೆಗಳ ಉತ್ಪಾದಕತೆ ಹೆಚ್ಚಿಸುವ ನಿಟ್ಟಿನಲ್ಲಿ ಅಕ್ಕಿ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ, ಒರಟುಧಾನ್ಯ ಹಾಗೂ ಎಣ್ಣೆಕಾಳು ಬೆಳೆಗಳಲ್ಲಿ ಪ್ರಾತ್ಯಕ್ಷಿಕೆ ಘಟಕಗಳನ್ನು ವಿವಿಧ ಸುಧಾರಿತ ತಾಂತ್ರಿಕತೆಗಳ ಅಳವಡಿಕೆಯಿಂದ ಅನುಷ್ಠಾನ ಮಾಡಲಾಗುತ್ತಿದೆ.<br><br>ಬಿತ್ತನೆ ಬೀಜ ವಿತರಣೆ ಘಟಕದಡಿ ಸಂಕರಣ ಬಿತ್ತನೆ ಬೀಜ, ಹತ್ತು ವರ್ಷದೊಳಗಿನ ಮತ್ತು ಹತ್ತು ವರ್ಷಗಳ ಮೇಲ್ಪಟ್ಟ ಬಿತ್ತನೆ ಬೀಜಗಳ ವಿತರಣೆ ಅನುಷ್ಠಾನ ಮಾಡಲಾಗುವುದರ ಜೊತೆಗೆ, ದ್ವಿದಳಧಾನ್ಯ, ನ್ಯೂಟ್ರಿ ಸಿರಿಧಾನ್ಯ ಮತ್ತು ಎಣ್ಣೆಕಾಳು ಬೆಳೆಗಳ ಧೃಡೀಕೃತ ಬೀಜೋತ್ಪಾದನೆಗಾಗಿ ಪ್ರೋತ್ಸಾಹಧನವನ್ನು ಒದಗಿಸಲಾಗಿದೆ.<br><br>ರೈತರ ಕ್ಷೇತ್ರ ಮಟ್ಟದಲ್ಲಿ ಮಣ್ಣಿನ ಫಲವತ್ತತೆಯನ್ನು ಪುನರ್ ಸ್ಥಾಪಿಸಿ ಬೆಳೆಗಳ ಉತ್ಪಾದಕತೆಯನ್ನು ಸ್ಥಿರಗೊಳಿಸಲು ಸಮಗ್ರ ಪೋಷಕಾಂಶ ಮತ್ತು ಸಮಗ್ರ ಪೀಡೆ ನಿರ್ವಹಣೆಗೆ ಗೊಬ್ಬರ ಮತ್ತು ಸಸ್ಯ ಸಂರಕ್ಷಣಾ ಔಷಧಿಗಳನ್ನು ಸಹಾಯಧನದಲ್ಲಿ ವಿತರಿಸಲಾಗುತ್ತಿದೆ.<br><br>ಮುಂದುವರೆದು, ಸೂಕ್ತ ಸಮಯದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗಲು ಕೃಷಿ ಯಾಂತ್ರಿಕರಣ ಮತ್ತು ಸಮರ್ಥ ನೀರಾವರಿ ಸಾಧನಗಳ ವಿತರಣೆಯನ್ನು ಸಹ ಕೈಗೊಳ್ಳಲಾಗುತ್ತಿದೆ.<br><br>ರೈತರಿಗೆ ತಾಂತ್ರಿಕತೆಗಳ ಬಗ್ಗೆ ಅರಿವು ಮೂಡಿಸುವುದು, ಸಹಾಯಧನದಲ್ಲಿ ಪರಿಕರಗಳನ್ನು ವಿತರಿಸುವುದು ಹಾಗೂ ಕ್ಷೇತ್ರೋತ್ಸವಗಳನ್ನು ಹಮ್ಮಿಕೊಂಡು ಇತರೆ ರೈತರಿಗೆ ತಿಳುವಳಿಕೆ ನೀಡುವ ಚಟುವಟಿಕೆಗಳಲ್ಲದೇ ಬೆಳೆ ಪದ್ಧತಿ ಆಧಾರಿತ ತರಬೇತಿಗಳನ್ನು ಸಹ ನೀಡಲಾಗುತ್ತಿದೆ. |

|  |  |  |
| --- | --- | --- |
|  |  | ಪ್ರಾತ್ಯಕ್ಷಿಕೆ ಘಟಕಗಳಡಿ ತಾಂತ್ರಿಕತೆವಾರು ಅನುಷ್ಠಾನ ಮಾಡುತ್ತಿರುವ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ) | ಕೃಷಿ ಇಲಾಖೆಯ ಶೇ.40ರಷ್ಟು ವಿವಿಧ ಯೋಜನೆಗಳು ಕೃಷಿ ತಾಂತ್ರಿಕತೆಗೆ ನೇರವಾಗಿ ಸಂಬಂಧಿಸಿದ್ದು, ಕೃಷಿ ಇಲಾಖೆಯ ಎಲ್ಲಾ ಸಹಾಯಕ ಕೃಷಿ ಅಧಿಕಾರಿ ಹಾಗೂ ಕೃಷಿ ಅಧಿಕಾರಿ ಹುದ್ದೆಗಳಿಗೆ ಸಮಾನಾಂತರವಾಗಿ ಕೃಷಿ ತಾಂತ್ರಿಕ ಪದವೀಧರರನ್ನು ಅತೀ ಅವಶ್ಯವಾಗಿ ಪರಿಗಣಿಸಲು ಕುಲಪತಿಗಳು ರಾಯಚೂರು ಮತ್ತು ಬೆಂಗಳೂರು ಕೃಷಿ ವಿಶ್ವವಿದ್ಯಾಲಯಗಳು ಇವರ ನೇತೃತ್ವದ ಸಮಿತಿ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಹೌದು |
| ಇ) | ಬಂದಿದ್ದಲ್ಲಿ ಈವರೆಗೂ ಶಿಫಾರಸ್ಸು ಜಾರಿಗೊಳಿಸದಿರಲು ಕಾರಣವೇನು? ವಿವರ ಒದಗಿಸುವುದು | ಸರ್ಕಾರದ ಅಧಿಸೂಚನೆ ಸಂಖ್ಯೆ ಅಗ್ರಿ 32/ಎ.ಎನ್.ಇ/2021 ದಿನಾಂಕ:02-12-2022ರನ್ವಯ ಕೃಷಿ ಇಲಾಖೆಯಲ್ಲಿನ ಕೃಷಿ ಅಧಿಕಾರಿ ಮತ್ತು ಸಹಾಯಕ ಕೃಷಿ ಅಧಿಕಾರಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಬಿ.ಟೆಕ್ ಅಗ್ರಿಕಲ್ಚರ್ ಇಂಜಿನಿಯರ್ ಮತ್ತು ಇನ್ನಿತರೆ ಪದವೀಧರರಿಗೆ ಪ್ರತ್ಯೇಕ ಮೀಸಲಾತಿಯನ್ನು ಒದಗಿಸಲಾಗಿದೆ. |
| ಈ) | ಕೇಂದ್ರ ಸರ್ಕಾರ ಹಾಗೂ ಅನೇಕ ರಾಜ್ಯಗಳು ಕೃಷಿ ತಾಂತ್ರಿಕತೆಗೆ ಹೆಚ್ಚು ಒತ್ತು ನೀಡಿದ್ದು ಈಗಾಗಲೇ ತಮಿಳನಾಡು, ಪಂಜಾಬ್, ಹರಿಯಾಣ, ಮಧ್ಯಪ್ರದೇಶ, ಛತ್ತೀಸ್ ಘಡ್, ಬಿಹಾರ, ಜಾರ್ಖಂಡ್, ಅಸ್ಸಾಂ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಪ್ರತ್ಯೇಕವಾಗಿ ಕೃಷಿ ಇಂಜಿನಿಯರಿಂಗ್ ಇಲಾಖೆ/ ನಿರ್ದೇಶನಾಲಯವು ಕಾರ್ಯ ನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ವಿವರ ಒದಗಿಸುವುದು) | ಹಲವು ರಾಜ್ಯಗಳಲ್ಲಿ ಪ್ರತ್ಯೇಕವಾಗಿ ಕೃಷಿ ಇಂಜಿನಿಯರಿಂಗ್ ಇಲಾಖೆ/ ನಿರ್ದೇಶನಾಲಯವು ಕಾರ್ಯ ನಿರ್ವಹಿಸುತ್ತಿರುವುದು ಗಮನಕ್ಕೆ ಬಂದಿದೆ. ಆದರೆ, ಪ್ರತ್ಯೇಕ ಕೃಷಿ ಇಂಜಿನಿಯರಿಂಗ್ ಇಲಾಖೆ/ ನಿರ್ದೇಶನಾಲಯದ ಸ್ಥಾಪಿಸುವ ಕುರಿತಂತೆ ಮನವಿಗಳು ಸ್ವೀಕೃತವಾಗಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ. |

ಸಂಖ್ಯೆ: AGRI-ASC/18/2023

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ವಿಶೇಷ ರಾಜ್ಯ ಪತ್ರಿಕೆ

| ಭಾಗ – ೪ ಎ<br>Part – IV A | ಬೆಂಗಳೂರು, ಶುಕ್ರವಾರ, ೦೨, ಡಿಸೆಂಬರ್, ೨೦೨೨( ಮಾರ್ಗಶಿರ, ೧೧, ಶಕವರ್ಷ, ೧೯೪೪)<br>BENGALURU, FRIDAY, 02, DECEMBER, 2022(MARGASHIRA , 11, SHAKAVARSHA, 1944) | ನಂ. ೫೯೧<br>No. 591 |
|---|---|---|

## GOVERNMENT OF KARNATAKA

No: AGRI- ANE/32/2021

Karnataka Government Secretariat,
M.S. Building,
Bengaluru, dated: 02-12-2022.

## NOTIFICATION

Whereas the draft of the Karnataka Agriculture Services (Cadre and Recruitment) (Amendment) Rules, 2022, was published as required by sub-section (1) of section 3 read with section 8 of the Karnataka State Civil Service Act, 1978 (Karnataka Act 14 of 1990) in Notification No: AGRI-32/ANE/2021, dated: 28-10-2022 in Part IV-A vide No.542 of Karnataka Extraordinary Gazette dated: 28-10-2022 inviting objections and suggestions from all persons likely to be affected thereby within fifteen days from the date of publication of the draft in the Official Gazette.

Whereas, the said Gazette was made available to public on 28-10-2022.

And whereas the objections and suggestions received have been considered by the State Government.

Now, therefore, in exercise of the powers conferred by sub-section (1) of Section 3 read with Section 8 of the Karnataka State Civil Services Act, 1978 (Karnataka Act 14 of 1990), the Government hereby makes the following rules, namely;

## RULES

**1. Title and commencement.-** (1) These rules may be called the Karnataka Agriculture Services (Cadre and Recruitment) (Amendment) Rules, 2022.

(2) They shall come into force from the date of their final publication in the Official Gazette.

**2. Amendment of Schedule.-** In the Karnataka Agriculture Services (Recruitment) Rules, 2021 in the schedule,-

(1) before the entries relating to the category of post of "Commissioner for Agriculture", at serial no. 1 the following shall be inserted, namely:-

| Part-1 |
|---|

(2) in Part-2 (TECHNICAL CADRE),-

(a) after the category of post of "Director of Agriculture", at serial no. 1, and entries relating there to following shall be inserted, namely:

| | | | | | | | |
|---|---|---|---|---|---|---|---|
| 1A | Director of Agriculture (Secondary Agriculture) (Rs.97,100-1,41,300) | 0 | 1 | 0 | 1 | By Promotion by selection from the cadre of Additional Director of Agriculture. | Must have put in a service of not less than three years in the cadre of Additional Director of Agriculture. |

(b) in the category of post of "Joint Director of Agriculture" at serial no. 3, entries relating to number of posts in column 3, for the figures "0,46,6,52" the figures **"0,44,14,58",** shall be substituted.

(c) in the category of post of "Deputy Director of Agriculture", at serial no. 4, entries relating to number of posts in column 3, for the figures "5,81,0,86" the figures **"5,83,0,88",** shall be substituted.

(d) for the category of post of "Assistant Director of Agriculture", at serial no. 5 and entries relating there to the following shall be substituted, namely:-

| 5 | Assistant Director of Agriculture (Rs.52,650-97,100/-) | 19 | 398 | 0 | 417 | (1) Twenty percent by direct Recruitment in accordance with the Karnataka Civil Services (Direct Recruitment) (General) Rules, 2021; and<br>(2) Eighty percent by promotion from the cadre of Agricultural Officer | **For Direct Recruitment:** Must be holder of Master Degree in Agriculture from an University established by Law and accredited by the Indian Council for Agricultural Research (ICAR).<br>**For Promotion:**<br>(1) Must have put in a service of not less than 5 years in the cadre of agricultural officer; and<br>(2) Must be holder of B.Sc in Agriculture or B.Sc (Hons.) Agriculture or B.Tech (Food Science and Technology)/ B.Tech(Food Technology) or B.Sc (Agriculture Marketing and Co-operation)/ B.Sc (Hons.) Agri Marketing and Co-operation / B.Sc (Hons.) Agri Business Management or B.Sc (Agri bio-technology)/ B.Tech (Bio-technology) or B.Sc (Agricultural Engineering)/ |
|---|---|---|---|---|---|---|---|

| | | | | | | | |
|---|---|---|---|---|---|---|---|
| | | | | | | | B.Tech (Agricultural Engineering);<br><br>Provided that, those possessing a qualification other than a Bachelors degree (B.Sc)/ B.Sc (Hons.) Agriculture shall not be considered against and/or promoted to any of the post notified by the Government of Karnataka vide Notifications AGD 3 AMS 2016, dated:01.09.2016, AGD 135 AMS 2016, dated:07.09.2016 and AGD 134 AMS 2016 dated:03.10.2016 or notified by Government from time to time. |

(e) in the category of post of "Agricultural Officer" at serial no. 7, in column 5,-

(i) under the heading "For Direct Recruitment", for the words " filled by holders of Bachelor Degree in Agriculture and remaining fifteen percent of post shall be filled by holders of B.Tech (Agricultural Engineering) or B.Tech (Food technology/Food Science and Technology) or B.Tech (Biotechnology)" the words "filled by holders of B.Sc in Agriculture or B.Sc (Hons.)Agriculture and remaining fifteen percent of post shall be filled by holders of B.Tech (Food Science and Technology)/B.Tech(Food Technology) or B.Sc (Agriculture Marketing and Co-operation)/ B.Sc (Hons.) Agri Marketing and Co-operation / B.Sc (Hons.) Agri Business Management or B.Sc (Agri bio-technology)/ B.Tech (Bio-technology) or B.Sc (Agricultural Engineering)/B.Tech (Agricultural Engineering) " shall be substituted.

(ii) under the heading "For Promotion", in the proviso for the words "other than a Bachelor Degree in Agriculture {B.Tech (Agricultural engineering) or B.Tech (Food technology/Food Science and Technology) or B.Tech (Biotechnology)}" the words "other than a B.Sc in Agriculture or B.Sc (Hons.)Agriculture or B.Tech (Food Science and Technology)/B.Tech(Food Technology) or B.Sc (Agriculture Marketing and Co-operation)/ B.Sc (Hons.) Agri Marketing and Co-operation / B.Sc (Hons.) Agri Business Management or B.Sc (Agri bio-technology)/ B.Tech (Bio-technology) or B.Sc (Agricultural Engineering)/B.Tech (Agricultural Engineering)" shall be substituted.

(f) in the category of post of "Assistant Agricultural Officer" at serial no. 9, in column 5, under the heading "For Direct Recruitment" for the words "filled by holders of Bachelor's Degree in Agriculture and remaining fifteen percent of post shall be filled by holders of B.Tech (Agricultural Engineering) or B.Tech (Food Technology/Food Science and Technology) or B.Tech (Biotechnology)" the words "filled by holders of B.Sc in Agriculture or B.Sc (Hons.)Agriculture and remaining fifteen percent of post shall be filled by holders of B.Tech (Food Science and Technology)/B.Tech(Food Technology) or B.Sc (Agriculture Marketing and Co-operation)/ B.Sc (Hons.) Agri Marketing and Co-operation / B.Sc (Hons.) Agri Business Management or B.Sc (Agri Bio-technology)/ B.Tech (Bio-technology) or B.Sc (Agricultural Engineering)/B.Tech (Agricultural Engineering)" shall be substituted.

(g) in Part-3 (MINISTERIAL STAFF CADRE) - in the category of post of 'Administrative Officer' at serial no. 1, in column 5, the following shall be inserted at the end namely,-

"Provided that, if an officer who has put in a service of not less than five years is not available, then an officer who has put in a service of not less than three years may be considered for promotion".

(h) in Part-3 (MINISTERIAL STAFF CADRE) - in the category of post of 'Assistant Administrative Officer' at serial no. 2, in column 5, the following shall be inserted at the end namely,-

"Provided that, if an official who has put in a service of not less than five years is not available, then an official who has put in a service of not less than three years may be considered for promotion".

By order and in the name of the
Governor of Karnataka

(SADANAND N. PAVASKAR)
Deputy Secretary to Government-1,
Agriculture Department.

**ಕರ್ನಾಟಕ ಸರ್ಕಾರ**

ಸಂಖ್ಯೆ: Agri-32/ANE/2021

ಕರ್ನಾಟಕ ಸರ್ಕಾರ ಸಚಿವಾಲಯ
ಬಹುಮಹಡಿಗಳ ಕಟ್ಟಡ,
ಬೆಂಗಳೂರು, ದಿನಾಂಕ: 02-12-2022.

**ಅಧಿಸೂಚನೆ**

"ಕರ್ನಾಟಕ ಕೃಷಿ ಸೇವೆಗಳು (ವೃಂದ ಹಾಗೂ ನೇಮಕಾತಿ) (ತಿದ್ದುಪಡಿ) ನಿಯಮಗಳು, 2022" ಇದನ್ನು ರಚಿಸುವುದಕ್ಕೆ ದಿನಾಂಕ: 28-10-2022ರ ಅಧಿಸೂಚನೆ ಸಂಖ್ಯೆ: AGRI-ANE/32/2021ರಲ್ಲಿ ಪ್ರಕಟಿಸಿರುವ ಈ ಮುಂದಿನ ತಿದ್ದುಪಡಿ ನಿಯಮಗಳ ಕರಡನ್ನು ವಿಶೇಷ ರಾಜ್ಯಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ, ಅದರಿಂದ ಬಾಧಿತರಾಗುವ ಸಂಭವವಿರುವ ಎಲ್ಲ ವ್ಯಕ್ತಿಗಳಿಂದ ಆಕ್ಷೇಪಣೆಗಳನ್ನು ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ: 28-10-2022ರ ಕರ್ನಾಟಕ ರಾಜ್ಯಪತ್ರದ ಭಾಗ-IV ಎ ರ ಸಂಖ್ಯೆ: 542ರಲ್ಲಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಅಧಿನಿಯಮ, 1978 (1990ರ 14ನೇ ಕರ್ನಾಟಕ ಅಧಿನಿಯಮ) 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡವನ್ನು ಪ್ರಕರಣ 8ರೊಂದಿಗೆ ಓದಿಕೊಂಡು ಅದರಲ್ಲಿ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ ;

ಸದರಿ ರಾಜ್ಯಪತ್ರವನ್ನು ದಿನಾಂಕ: 28-10-2022ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ ;

ಮತ್ತು, ಸದರಿ ಕರಡಿನ ಬಗ್ಗೆ ಆಕ್ಷೇಪಣೆ/ಸಲಹೆಗಳು ಸ್ವೀಕೃತವಾಗಿದ್ದು, ಅವುಗಳನ್ನು ರಾಜ್ಯ ಸರ್ಕಾರವು ಪರಿಶೀಲಿಸಿರುವುದರಿಂದ ;

ಈಗ, ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ, 1978, (1990ರ 14ನೇ ಕರ್ನಾಟಕ ಅಧಿನಿಯಮ) 3ನೇ ಪ್ರಕರಣದ (1)ನೇ ಉಪ ಪ್ರಕರಣವನ್ನು 8ನೇ ಪ್ರಕರಣದೊಂದಿಗೆ ಓದಿಕೊಂಡಂತೆ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ನಿಯಮಗಳನ್ನು ರಚಿಸುತ್ತದೆ ಎಂದರೆ :-

## ನಿಯಮಗಳು

**1. ಶೀರ್ಷಿಕೆ ಮತ್ತು ಪ್ರಾರಂಭ.-** (1) ಈ ನಿಯಮಗಳನ್ನು "ಕರ್ನಾಟಕ ಕೃಷಿ ಸೇವೆಗಳು (ವೃಂದ ಹಾಗೂ ನೇಮಕಾತಿ) (ತಿದ್ದುಪಡಿ) ನಿಯಮಗಳು, 2022" ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಅಂತಿಮವಾಗಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅನುಸೂಚಿಯ ತಿದ್ದುಪಡಿ.-** "ಕರ್ನಾಟಕ ಕೃಷಿ ಸೇವೆಗಳು (ವೃಂದ ಹಾಗೂ ನೇಮಕಾತಿ) ನಿಯಮಗಳು, 2021" ರ ಅನುಸೂಚಿಯಲ್ಲಿ,-

(1) "ಕೃಷಿ ಆಯುಕ್ತರು" ಹುದ್ದೆಯ ಪ್ರವರ್ಗಕ್ಕೆ ಸಂಬಂಧಿಸಿದ ನಮೂದುಗಳ ಮೊದಲು, ಕ್ರಮ ಸಂಖ್ಯೆ. 1ರ ಕೆಳಗೆ, ಈ ಕೆಳಗಿನವುಗಳನ್ನು ಸೇರಿಸತಕ್ಕದ್ದು, ಅವುಗಳೆಂದರೆ :

| ಭಾಗ-1 |
|---|

(2) ಭಾಗ -2 ರಲ್ಲಿ (ತಾಂತ್ರಿಕ ವೃಂದ) :-

(ಎ) "ಕೃಷಿ ನಿರ್ದೇಶಕರು" ಹುದ್ದೆಯ ಪ್ರವರ್ಗದ ನಂತರ, ಕ್ರಮ ಸಂಖ್ಯೆ. 1, ಮತ್ತು ಕೆಳಗಿನವುಗಳಿಗೆ ಸಂಬಂಧಿಸಿದ ನಮೂದುಗಳನ್ನು ಸೇರಿಸತಕ್ಕದ್ದು, ಅವುಗಳೆಂದರೆ:

| | | | | | | | |
|---|---|---|---|---|---|---|---|
| 1ಎ | ಕೃಷಿ ನಿರ್ದೇಶಕರು (ಸೆಕೆಂಡರಿ ಕೃಷಿ) (ರೂ.97,100-1,41,300) | 0 | 1 | 0 | 1 | ಅಪರ ಕೃಷಿ ನಿರ್ದೇಶಕರು ವೃಂದದಿಂದ ಆಯ್ಕೆ ಮೂಲಕ ಮುಂಬಡ್ತಿ | ಅಪರ ಕೃಷಿ ನಿರ್ದೇಶಕರು ವೃಂದದಲ್ಲಿ 3 ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆಯನ್ನು ಸಲ್ಲಿಸಿರತಕದ್ದು |

(ಬಿ) "ಜಂಟಿ ಕೃಷಿ ನಿರ್ದೇಶಕರು" ಹುದ್ದೆಯ ಪ್ರವರ್ಗದಲ್ಲಿ ಕ್ರಮ ಸಂಖ್ಯೆ. 3, ಅಂಕಣ 3 ರಲ್ಲಿನ ಹುದ್ದೆಗಳ ಸಂಖ್ಯೆಗೆ ಸಂಬಂಧಿಸಿದ ನಮೂದುಗಳು, "0,46,6,52" ಅಂಕಿಗಳಿಗೆ ಬದಲಾಗಿ "0,44,14,58" ಅಂಕಿಗಳೆಂದು ಬದಲಿಸಿಕೊಳ್ಳತಕ್ಕದ್ದು.

(ಸಿ) "ಉಪ ಕೃಷಿ ನಿರ್ದೇಶಕರು" ಹುದ್ದೆಯ ಪ್ರವರ್ಗದಲ್ಲಿ, ಕ್ರಮ ಸಂಖ್ಯೆ. 4, ಅಂಕಣ 3 ರಲ್ಲಿನ ಹುದ್ದೆಗಳ ಸಂಖ್ಯೆಗೆ ಸಂಬಂಧಿಸಿದ ನಮೂದುಗಳು, "5,81,0,86" ಅಂಕಿಗಳಿಗೆ ಬದಲಾಗಿ "**5,83,0,88**" ಅಂಕಿಗಳೆಂದು ಬದಲಿಸಿಕೊಳ್ಳತಕ್ಕದ್ದು.

(ಡಿ) "ಸಹಾಯಕ ಕೃಷಿ ನಿರ್ದೇಶಕ" ಹುದ್ದೆಯ ಪ್ರವರ್ಗಕ್ಕೆ, ಕ್ರಮ ಸಂಖ್ಯೆ. 5 ಮತ್ತು ಕೆಳಗಿನವುಗಳಿಗೆ ಸಂಬಂಧಿಸಿದ ನಮೂದುಗಳನ್ನು ಬದಲಿಸತಕ್ಕದ್ದು, ಅವುಗಳೆಂದರೆ:-

| 5 | ಸಹಾಯಕ ಕೃಷಿ ನಿರ್ದೇಶಕರು (ರೂ.52,650-97,100/-) | 19 | 398 | 0 | 417 | 1) ಶೇ.20ರಷ್ಟು ಹುದ್ದೆಗಳನ್ನು ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಗಳು ಮತ್ತು ಆಯ್ಕೆಯ ಮೂಲಕ ನೇರ ನೇಮಕಾತಿ) (ಸಾಮಾನ್ಯ) ನಿಯಮಗಳು, 2021 ರನ್ವಯ ನೇರ ನೇಮಕಾತಿ ಮೂಲಕ; ಮತ್ತು<br>2) ಶೇ.80 ರಷ್ಟು ಹುದ್ದೆಗಳನ್ನು ಕೃಷಿ ಅಧಿಕಾರಿ ವೃಂದದಿಂದ ಮುಂಬಡ್ತಿ ಮೂಲಕ. | **ನೇರ ನೇಮಕಾತಿಗಾಗಿ:**<br>ಕಾನೂನಿನ್ವಯ ಸ್ಥಾಪಿಸಲ್ಪಟ್ಟ ಮತ್ತು ಭಾರತೀಯ ಕೃಷಿ ಅನುಸಂಧಾನ ಪರಿಷತ್ತು ಇವರಿಂದ ಮಾನ್ಯತೆ ಪಡೆದ ವಿಶ್ವವಿದ್ಯಾಲಯದಿಂದ ಅರ್ಜಿಸಿದ ಕೃಷಿ ಸ್ನಾತಕೋತ್ತರ ಪದವಿ ಅಥವಾ ಸರ್ಕಾರದಿಂದ ಕಾಲ ಕಾಲಕ್ಕೆ ಅಧಿಸೂಚಿಸಲಾಗುವ ವಿದ್ಯಾರ್ಹತೆ ಹೊಂದಿರತಕ್ಕದ್ದು;<br><br>**ಮುಂಬಡ್ತಿಗಾಗಿ:-**<br><br>1) ಕೃಷಿ ಅಧಿಕಾರಿ ವೃಂದದಲ್ಲಿ 5 ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರತಕ್ಕದ್ದು; ಮತ್ತು<br>2) ಬಿ.ಎಸ್ಸಿ, (ಕೃಷಿ)/ ಬಿ.ಎಸ್ಸಿ (ಆನರ್ಸ್) ಕೃಷಿ ಅಥವಾ ಬಿ. ಟೆಕ್ (ಆಹಾರ ವಿಜ್ಞಾನ & ತಂತ್ರಜ್ಞಾನ)/ ಬಿ. ಟೆಕ್. (ಆಹಾರ ತಂತ್ರಜ್ಞಾನ) ಅಥವಾ ಬಿ.ಎಸ್ಸಿ (ಕೃಷಿ ಮಾರುಕಟ್ಟೆ ಮತ್ತು ಸಹಕಾರ)/ಬಿ.ಎಸ್ಸಿ (ಆನರ್ಸ್) ಕೃಷಿ ಮಾರಾಟ ಮತ್ತು ಸಹಕಾರ/ಬಿ.ಎಸ್ಸಿ (ಆನರ್ಸ್) ಅಗ್ರಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಅಥವಾ ಬಿ.ಎಸ್ಸಿ, (ಕೃಷಿ ಜೈವಿಕ ತಂತ್ರಜ್ಞಾನ)/ ಬಿ. ಟೆಕ್ (ಕೃಷಿ ಜೈವಿಕ ತಂತ್ರಜ್ಞಾನ)/ ಅಥವಾ ಬಿ.ಎಸ್ಸಿ (ಅಗ್ರಿಕಲ್ಚರಲ್ ಇಂಜಿನಿಯರಿಂಗ್)/ ಬಿ.ಟೆಕ್ (ಅಗ್ರಿಕಲ್ಚರಲ್‌ಇಂಜಿನಿಯರಿಂಗ್); ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು.<br><br>ಪರಂತು, ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಜಿಡಿ 3 ಎಎಂಎಸ್ 2016, ದಿನಾಂಕ: 01.09.2016, ಎಜಿಡಿ 135 ಎಎಂಎಸ್ 2016, ದಿನಾಂಕ: 07.09.2016 ಮತ್ತು |

| | | | | | | | |
|---|---|---|---|---|---|---|---|
| | | | | | | | ಎಜಿಡಿ 134 ಎಎಂಎಸ್ 2016, ದಿನಾಂಕ:03.10.2016 ರಲ್ಲಿ ಅಧಿಸೂಚಿಸಿರುವ ಹುದ್ದೆಗಳ ಮತ್ತು ಅಥವಾ/ ಸರ್ಕಾರದಿಂದ ಕಾಲಕಾಲಕ್ಕೆ ಅಧಿಸೂಚಿಸುವ ಹುದ್ದೆಗಳ ಎದುರಾಗಿ ಮುಂಬಡ್ತಿಗೆ ಬಿ.ಎಸ್ಸಿ (ಕೃಷಿ) / ಬಿ.ಎಸ್ಸಿ (ಆನರ್ಸ್) ಕೃಷಿ ಸ್ನಾತಕ ಪದವಿ ವಿದ್ಯಾರ್ಹತೆ ಹೊಂದಿರುವವರನ್ನು ಹೊರತುಪಡಿಸಿ, ಇತರೆ ವಿದ್ಯಾರ್ಹತೆಯನ್ನು ಪರಿಗಣಿಸತಕ್ಕದ್ದಲ್ಲ. |

(ಇ) "ಕೃಷಿ ಅಧಿಕಾರಿ" ಹುದ್ದೆಯ ಪ್ರವರ್ಗದಲ್ಲಿ ಕ್ರಮ ಸಂಖ್ಯೆ. 7, ಅಂಕಣ 5 ರಲ್ಲಿ,

(i) "ನೇರ ನೇಮಕಾತಿಗಾಗಿ" ಶೀರ್ಷಿಕೆಯಡಿಯಲ್ಲಿ, "ಬಿ.ಎಸ್ಸಿ (ಕೃಷಿ) ಅಥವಾ ಸರ್ಕಾರದಿಂದ ಕಾಲ ಕಾಲಕ್ಕೆ ಅಧಿಸೂಚಿಸಲಾಗುವ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು; ಮತ್ತು ಶೇ. 15 ರಷ್ಟು ಹುದ್ದೆಗಳನ್ನು ಬಿ.ಟೆಕ್ (ಕೃಷಿ ಇಂಜಿನಿಯರಿಂಗ್ ಅಥವಾ ಬಿ.ಟೆಕ್ (ಆಹಾರ ತಂತ್ರಜ್ಞಾನ/ ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ)/ಬಿ.ಟೆಕ್ (ಜೈವಿಕ ತಂತ್ರಜ್ಞಾನ) ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳತಕ್ಕದ್ದು" ಎಂಬ ಪದಗಳ ಬದಲಾಗಿ "ಬಿ.ಎಸ್ಸಿ, (ಕೃಷಿ) ಅಥವಾ ಬಿ.ಎಸ್ಸಿ (ಆನರ್ಸ್) ಕೃಷಿ ಮತ್ತು ಶೇ. 15 ರಷ್ಟು ಹುದ್ದೆಗಳನ್ನು ಬಿ. ಟೆಕ್ (ಆಹಾರ ವಿಜ್ಞಾನ & ತಂತ್ರಜ್ಞಾನ)/ ಬಿ. ಟೆಕ್. (ಆಹಾರ ತಂತ್ರಜ್ಞಾನ) ಅಥವಾ ಬಿ.ಎಸ್ಸಿ (ಕೃಷಿ ಮಾರುಕಟ್ಟೆ ಮತ್ತು ಸಹಕಾರ)/ಬಿ.ಎಸ್ಸಿ (ಆನರ್ಸ್) ಕೃಷಿ ಮಾರಾಟ ಮತ್ತು ಸಹಕಾರ/ಬಿ.ಎಸ್ಸಿ (ಆನರ್ಸ್) ಅಗ್ರಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಅಥವಾ ಬಿ.ಎಸ್ಸಿ (ಕೃಷಿ ಜೈವಿಕ ತಂತ್ರಜ್ಞಾನ)/ಬಿ.ಟೆಕ್ (ಜೈವಿಕ ತಂತ್ರಜ್ಞಾನ)/ ಅಥವಾ ಬಿ.ಎಸ್ಸಿ (ಅಗ್ರಿಕಲ್ಚರಲ್ ಇಂಜಿನಿಯರಿಂಗ್)/ ಬಿ.ಟೆಕ್ (ಅಗ್ರಿಕಲ್ಚರಲ್ ಇಂಜಿನಿಯರಿಂಗ್); ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳುವುದು" ಎಂದು ಬದಲಾಯಿಸಿಕೊಳ್ಳತಕ್ಕದ್ದು.

(ii) "ಮುಂಬಡ್ತಿಗಾಗಿ" ಶೀರ್ಷಿಕೆಯಡಿಯಲ್ಲಿ, "{ಬಿ.ಟೆಕ್ (ಕೃಷಿ ಇಂಜಿನಿಯರಿಂಗ್) ಅಥವಾ ಬಿ.ಟೆಕ್ (ಆಹಾರ ತಂತ್ರಜ್ಞಾನ/ ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ) ಅಥವಾ ಬಿ. ಟೆಕ್ (ಜೈವಿಕ ತಂತ್ರಜ್ಞಾನ)} ಕೃಷಿ ಪದವಿ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳತಕ್ಕದ್ದು" ಎಂಬ ಪದಗಳ ಬದಲಾಗಿ "ಬಿ.ಎಸ್ಸಿ, (ಕೃಷಿ) ಅಥವಾ ಬಿ.ಎಸ್ಸಿ (ಆನರ್ಸ್) ಕೃಷಿ, ಬಿ. ಟೆಕ್ (ಆಹಾರ ವಿಜ್ಞಾನ & ತಂತ್ರಜ್ಞಾನ)/ ಬಿ. ಟೆಕ್. (ಆಹಾರ ತಂತ್ರಜ್ಞಾನ) ಅಥವಾ ಬಿ.ಎಸ್ಸಿ (ಕೃಷಿ ಮಾರುಕಟ್ಟೆ ಮತ್ತು ಸಹಕಾರ)/ಬಿ.ಎಸ್ಸಿ (ಆನರ್ಸ್) ಕೃಷಿ ಮಾರಾಟ ಮತ್ತು ಸಹಕಾರ/ಬಿ.ಎಸ್ಸಿ (ಆನರ್ಸ್) ಅಗ್ರಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಅಥವಾ ಬಿ.ಎಸ್ಸಿ, (ಕೃಷಿ ಜೈವಿಕ ತಂತ್ರಜ್ಞಾನ)/ಬಿ. ಟೆಕ್ (ಜೈವಿಕ ತಂತ್ರಜ್ಞಾನ)/ ಅಥವಾ ಬಿ.ಎಸ್ಸಿ (ಅಗ್ರಿಕಲ್ಚರಲ್ ಇಂಜಿನಿಯರಿಂಗ್)/ ಬಿ.ಟೆಕ್ (ಅಗ್ರಿಕಲ್ಚರಲ್ ಇಂಜಿನಿಯರಿಂಗ್); ಎಂಬ ಪದಗಳನ್ನು ಬದಲಾಯಿಸಿಕೊಳ್ಳತಕ್ಕದ್ದು.

**(ಎಫ್)** "ಸಹಾಯಕ ಕೃಷಿ ಅಧಿಕಾರಿ" ಹುದ್ದೆಯ ಪ್ರವರ್ಗದಲ್ಲಿ ಕ್ರಮ ಸಂಖ್ಯೆ. 9, ಅಂಕಣ 5 ರಲ್ಲಿ, "ನೇರ ನೇಮಕಾತಿಗಾಗಿ" ಶೀರ್ಷಿಕೆಯಡಿಯಲ್ಲಿ, "ಬಿ.ಎಸ್ಸಿ (ಕೃಷಿ) ಅಥವಾ ಸರ್ಕಾರದಿಂದ ಕಾಲ ಕಾಲಕ್ಕೆ ಅಧಿಸೂಚಿಸಲಾಗುವ ತತ್ಸಮಾನ ವಿದ್ಯಾರ್ಹತೆ ಹೊಂದಿರಬೇಕು; ಮತ್ತು ಶೇ. 15 ರಷ್ಟು

R.N.I. No. KARBIL/2001/47147 POSTAL REGN. No. RNP/KA/BGS/2202/2017-19
Licensed to post without prepayment WPP No. 297



ಹುದ್ದೆಗಳನ್ನು ಬಿ.ಟೆಕ್ (ಜೈವಿಕ ತಂತ್ರಜ್ಞಾನ), ಬಿ.ಟೆಕ್ (ಕೃಷಿ ಇಂಜಿನಿಯರಿಂಗ್) ಅಥವಾ ಬಿ.ಟೆಕ್ (ಆಹಾರ ತಂತ್ರಜ್ಞಾನ/ ಆಹಾರ ವಿಜ್ಞಾನ ಮತ್ತು ತಂತ್ರಜ್ಞಾನ), ಬಿ. ಟೆಕ್ (ಜೈವಿಕ ತಂತ್ರಜ್ಞಾನ) ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳತಕ್ಕದ್ದು" ಎಂಬ ಪದಗಳ ಬದಲಾಗಿ "ಬಿ.ಎಸ್ಸಿ, (ಕೃಷಿ) ಅಥವಾ ಬಿ.ಎಸ್ಸಿ (ಆನರ್ಸ್) ಕೃಷಿ ಮತ್ತು ಶೇ. 15 ರಷ್ಟು ಹುದ್ದೆಗಳನ್ನು ಬಿ. ಟೆಕ್ (ಆಹಾರ ವಿಜ್ಞಾನ & ತಂತ್ರಜ್ಞಾನ)/ ಬಿ. ಟೆಕ್. (ಆಹಾರ ತಂತ್ರಜ್ಞಾನ) ಅಥವಾ ಬಿ.ಎಸ್ಸಿ (ಕೃಷಿ ಮಾರುಕಟ್ಟೆ ಮತ್ತು ಸಹಕಾರ)/ಬಿ.ಎಸ್ಸಿ (ಆನರ್ಸ್) ಕೃಷಿ ಮಾರಾಟ ಮತ್ತು ಸಹಕಾರ/ಬಿ.ಎಸ್ಸಿ (ಆನರ್ಸ್) ಅಗ್ರಿ ಬಿಸಿನೆಸ್ ಮ್ಯಾನೇಜ್‌ಮೆಂಟ್ ಅಥವಾ ಬಿ.ಎಸ್ಸಿ, (ಕೃಷಿ ಜೈವಿಕ ತಂತ್ರಜ್ಞಾನ)/ಬಿ. ಟೆಕ್ (ಜೈವಿಕ ತಂತ್ರಜ್ಞಾನ)/ ಅಥವಾ ಬಿ.ಎಸ್ಸಿ (ಅಗ್ರಿಕಲ್ಚರಲ್ ಇಂಜಿನಿಯರಿಂಗ್)/ ಬಿ.ಟೆಕ್ (ಅಗ್ರಿಕಲ್ಚರಲ್ ಇಂಜಿನಿಯರಿಂಗ್); ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳಿಂದ ಭರ್ತಿ ಮಾಡಿಕೊಳ್ಳುವುದು" ಎಂದು ಬದಲಾಯಿಸಿಕೊಳ್ಳತಕ್ಕದ್ದು.

**(ಜಿ)** ಭಾಗ-3 (ಲಿಪಿಕ ಹುದ್ದೆಗಳ ವೃಂದ)- "ಆಡಳಿತಾಧಿಕಾರಿ" ಹುದ್ದೆಯ ವರ್ಗದಲ್ಲಿ ಕ್ರಮ ಸಂಖ್ಯೆ. 1, ಅಂಕಣ 5 ರ ಕೊನೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಳ್ಳತಕ್ಕದ್ದು,-

> "ಪರಂತು, ಕನಿಷ್ಠ 05 ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಯು ಲಭ್ಯವಿಲ್ಲದೇ ಇದ್ದಲ್ಲಿ, ಕನಿಷ್ಠ 3 ವರ್ಷಗಳ ಸೇವೆಯನ್ನು ಪೂರೈಸಿರುವ ಅಧಿಕಾರಿಯವರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದಾಗಿದೆ".

**(ಹೆಚ್)** ಭಾಗ-3 (ಲಿಪಿಕ ಹುದ್ದೆಗಳ ವೃಂದ)- "ಸಹಾಯಕ ಆಡಳಿತಾಧಿಕಾರಿ" ಹುದ್ದೆಯ ಪ್ರವರ್ಗದಲ್ಲಿ ಕ್ರಮ ಸಂಖ್ಯೆ.2, ಅಂಕಣ 5 ರ ಕೊನೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಳ್ಳತಕ್ಕದ್ದು,-

> "ಪರಂತು, ಕನಿಷ್ಠ 05 ವರ್ಷಗಳ ಸೇವೆಯನ್ನು ಪೂರೈಸಿರುವ ಸಿಬ್ಬಂದಿಯು ಲಭ್ಯವಿಲ್ಲದೇ ಇದ್ದಲ್ಲಿ, ಕನಿಷ್ಠ 3 ವರ್ಷಗಳ ಸೇವೆಯನ್ನು ಪೂರೈಸಿರುವ ಸಿಬ್ಬಂದಿಯವರನ್ನು ಮುಂಬಡ್ತಿಗಾಗಿ ಪರಿಗಣಿಸಬಹುದಾಗಿದೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಸದಾನಂದ ಎನ್. ಪಾವಸ್ಕರ್)
ಸರ್ಕಾರದ ಉಪ ಕಾರ್ಯದರ್ಶಿ-1,
ಕೃಷಿ ಇಲಾಖೆ.

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು
SUNIL GARDE

# ಕರ್ನಾಟಕ ವಿಧಾನ ಸಭೆ

| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 622 |
|---|---|---|
| 2 | ಸದಸ್ಯರ ಹೆಸರು | ಶ್ರೀ ಅಶ್ವಿನ್ ಕುಮಾರ್ ಎಂ (ಟಿ. ನರಸೀಪುರ) |
| 3 | ವಿಷಯ | ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ಜಮೀನು ವರ್ಗಾಯಿಸುವುದು |
| 4 | ಉತ್ತರಿಸುವ ದಿನಾಂಕ | 15-02-2023 |
| 5 | ಉತ್ತರಿಸುವವರು | ಮಾನ್ಯ ರೇಷ್ಮೆ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು |
| | **ಪ್ರಶ್ನೆಗಳು** | **ಉತ್ತರಗಳು** |
| ಅ | ಮೈಸೂರು ಜಿಲ್ಲೆ ತಿ.ನರಸೀಪುರ ವಿಧಾನಸಭಾ ಕ್ಷೇತ್ರದ ಹೊರಳಹಳ್ಳಿ ಸರ್ಕಾರಿ ರೇಷ್ಮೆ ಕೃಷಿ ಸರ್ವೆ ನಂ.166/1ರ 10.00 ಎಕರೆ ಜಮೀನನ್ನು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿಗೆ ವರ್ಗಾಯಿಸಲು ಇರುವ ತೊಂದರೆಗಳೇನು: | ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನ ಸೋಸಲೆ ಹೋಬಳಿಯ ಹೊರಳಹಳ್ಳಿ ಗ್ರಾಮದ ಸರ್ವೆ ನಂಬರ್ 166/1 ರಲ್ಲಿನ 33 ಎಕರೆ 01 ಗುಂಟೆ ಜಮೀನನ್ನು ರೇಷ್ಮೆ ಇಲಾಖೆಗೆ ಮೂಲ ಬಿತ್ತನೆ ಗೂಡು ಉತ್ಪಾದನೆಗಾಗಿ ಕಂದಾಯ ಇಲಾಖೆಯಿಂದ ಹಸ್ತಾಂತರಿಸಲಾಗಿರುತ್ತದೆ. ಇದರಲ್ಲಿನ 10 ಎಕರೆ ಜಮೀನನ್ನು 'ಸರ್ಕಾರದ ಆದೇಶ ಸಂಖ್ಯೆ ತೋಇ 04 ರೇಯೋವಿ 2012, ಬೆಂಗಳೂರು ದಿನಾಂಕ 20-08-2016 ರಂತೆ ರೇಷ್ಮೆ ಇಲಾಖೆಯಿಂದ ಹಿಂಪಡೆದು ನೊರಾರ್ಜಿ ದೇಸಾಯಿ ವಸತಿ ಶಾಲೆ ಮತ್ತು ಶೈಕ್ಷಣಿಕ ಉದ್ದೇಶಕ್ಕಾಗಿ ಸಮಾಜ ಕಲ್ಯಾಣ ಇಲಾಖೆಗೆ ಹಸ್ತಾಂತರಿಸಲಾಗಿದೆ.<br>ಹೊರಳಹಳ್ಳಿ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರವು ದ್ವಿತಳಿ ಬಿತ್ತನೆ ಗೂಡುಗಳನ್ನು ಬೆಳೆಯುವ ಉದ್ದೇಶದಿಂದ ಪ್ರಾರಂಭ ಮಾಡಿದ್ದು, ಬಿತ್ತನೆ ಗೂಡುಗಳನ್ನು ಬೆಳೆದು ಬಿತ್ತನೆ ಮೊಟ್ಟೆಗಳನ್ನು ತಯಾರಿಸಿ, ಆ ಭಾಗದ ರೈತರಿಗೆ ಅನುಕೂಲ ಮಾಡುವ ಉದ್ದೇಶ ಹೊಂದಿರುತ್ತದೆ. ರಾಜ್ಯದ ಕಚ್ಚಾ ರೇಷ್ಮೆ ಬೇಡಿಕೆಯನ್ನು ಯಶಸ್ವಿಯಾಗಿ ಪೂರೈಸಲು ಗುಣಮಟ್ಟದ ಮೂಲ ಬಿತ್ತನೆ /ವಾಣಿಜ್ಯ ಗೂಡು ಹಾಗೂ ರೋಗ ರಹಿತ ಮೊಟ್ಟೆಗಳ ಉತ್ಪಾದನೆಯೂ ಅನಿವಾರ್ಯವಾಗಿದ್ದು, ಮೈಸೂರು ಭಾಗದಲ್ಲಿ ಹೆಚ್ಚಿನ ರೇಷ್ಮೆ ಬೆಳೆಗಾರರು ಇದ್ದು, ರೇಷ್ಮೆ ಕೃಷಿಯಲ್ಲಿ ಹೆಚ್ಚಿನ ಆಸಕ್ತಿ ಹೊಂದಿರುತ್ತಾರೆ. ಈ ರೈತರಿಗೆ ಮೊಟ್ಟೆಗಳನ್ನು ಉತ್ಪಾದಿಸಲು ಬಿತ್ತನೆಗೂಡು ಬೆಳೆಯುವ ಪ್ರದೇಶವು ತುಂಬಾ ಅವಶ್ಯಕವಾಗಿರುತ್ತದೆ.<br><br>ಇತ್ತೀಚಿನ ದಿವಸಗಳಲ್ಲಿ ಆಟೋಮೆಟಿಕ್ ರೀಲಿಂಗ್ ಮೆಷೀನ್‌ಗಳನ್ನು ರೀಲರ್‌ಗಳು ಸ್ಥಾಪನೆ ಮಾಡುತ್ತಲಿದ್ದು ಅದರ ಯಶಸ್ವಿ ಕಾರ್ಯಚರಣೆಗೆ ಅತ್ಯವಶ್ಯಕವಾಗಿ ಹೆಚ್ಚಿನ ಪ್ರಮಾಣದ ಗೂಡನ್ನು ಒದಗಿಸಬೇಕಾಗಿರುತ್ತದೆ. |

(b) who takes up expansion, moderniation and diversification of existing units but not availed the interest subsidy earlier from KSFC.

(c) the entrepreneurs are eligible to avail the benefit only once.

2. The unit shall be fully owned i.e., 100% by Scheduled Caste / Scheduled Tribe entrepreneurs respectively. The Ownership / share holding of units even in part by other than Scheduled Caste /Scheduled Tribe are not eligible for interest subsidy. All the applicants must belong, to SC/ST and produce the SC/ST caste certificates issued by the competent authority in Karnataka. The personal verification of original caste certificate is required to be done. The affidavit may be obtained from the applicants to the effect that they belong to SC/ST. In case of doubt, before releasing of loan the genuineness of caste certificate may be verified with the competent authority. In case of any complaint regarding caste certificate against loanees, the same may be referred to Social Welfare Department for further action (These are necessary to avoid false caste certificate cases). The applicants are also liable for prosecution as well as to pay back the entire Interest subsidy availed, in case the caste certificate found to be false.

3. The interest subsidy, loan amount – maximum loan limit is upto Rs.10.00 crores only.

4. The maximum loan limit of Rs. 10.00 crores includes term loan and one time working capital based on the project proposal but working capital is restricted to maximum of Rs.50.00 lakhs. Repetition of working capital sanction is not allowed.

5. The proposal should be for minimum loan amount is Rs. 20.00 lakhs under this scheme. (This is prescribed because there are other scheme were subsidy is given on the unit cost and also from the point of easy monitoring).

6. The beneficiary/applicant has to pay only 4% interest on the loan amount and the remaining interest out of the total chargeble interest will be reimbursed to the banks by the Government.

7. The repayment period is 8 years including moritorium in case of loan upto Rs. 5.00 crores and upto 10 years in case of loan above Rs.5.00 crores but below Rs.10.00 crores.

8. The banks are at liberty to consider any amount of project cost/loan. However, the interest subsidy is restricted up to Rs. 10.00 crores only. If the loan amount is more than Rs. 10.00 crores, then the full interest amount on the balance loan over and above Rs. 10.00 crores is required to be borne by the entrepreneurs.

9. The units will be eligible for interest subsidy from the date of first disbursement of the loan amount and on the quantum of disbursement.

10. Banks may sanction loans with normal applicable rate of interest. The effective interest rate to be paid by the barrower is 4% only. The difference

between the normal lending rate of banks and effective interest rate of 4% will be reimbursed by the Government of Karnataka.

11. Banks will be fully responsible for recovery of the principle and interest @ 4% from the barrower. Government shall release these subsidy over and above 4% interest only after paying the principle installments due along with interest by the borrower. Further, in case of defalts in payment of instalment and interest the Government will not extend interest subsidy for that period. But once the instalments are regularized but again the interest subsidy is eligible.

12. The units which availed the interest subsidy under any other scheme of Government of Karnataka / Government of India are not eligible for interest subsidy under this scheme.

13. The smooth functioning of the scheme the exsisting committee as per SLBCs decision for monitoring weaker section loans under the chairmanship of Principal Secretary/Secretary, Social Welfare in which the bankers are members will monitor this scheme also.

14. The banks should also prescribe a condition that the unit availing the interest subsidy scheme should provide employment to SC / ST persons to the extend of 50% of the employees to be employed. This may be verified by the Commissioner/Director while releasing the interest subsidy.

15. The interest subsidy amount shall be reimbursed to the banks by the Commissioner for Social Welfare for Scheduled Caste applicants and Director for Scheduled Tribes for Scheduled Tribe applicants on receiving the claims from the banks through their Nodal officer. The banks are requested to send the name and address (Bengaluru) of Nodal officer to the Principal Secretary/Secretary of Social Welfare Department, Room No.232, 2nd Floor, Vikasa Soudha, Bengaluru-560 001.

16. The Nationalized Banks/Apex Bank/Dcc Banks shall appoint the nodal officer for the purpose of collecting the details and submitting the interest subsidy claims to the Commissioner / Director Tribal Welfare for reimbursement of interest subsidy amount.

This issues with the concurrence of Finance Department vide No. FD 408 Exp.3/16, dated: 28.05.2016.

By order and in the name of
Governor of Karnataka

(SHAMBHULINGAIAH)
Deputy Secretary to Government-1,
Social Welfare Department.

To:

1) Accountant General (A & E, Audit-1, Audit-2), Karnataka, Bangalore
2) Commissioner for Social Welfare, Bangalore
3) Director for Tribal Welfare, Bangalore
4) Managing Director, Dr. B.r. Ambedkar Development Corporation Limited Bangalore.
5) Managing Director, Karnataka Maharshi Valmiki Scheduled Tribes Development Corporation Limited, Bangalore.
6) Managing Director/Zonal Manager/Regional Manager of Nationized Banks of located in Bengaluru, Karnataka.
7) Manager Director, The Karnataka State Cooperative Apex Bank Limited, Bengaluru
8) Manager Director, District Co-operative Central Banks of all Districts
9) Conviner, Syndicate Bank, Bengaluru
10) Under Secretary to Government (Exp. 3,9), Finance Department, Vidhana Soudha, Bangalore.
11) Spare Copies Department.

*****

(105)

<u>ಕರ್ನಾಟಕ ಸರ್ಕಾರ ನಡವಳಿಗಳು</u>

ವಿಷಯ : ಮೂಲನಿವಾಸಿ ಪರಿಶಿಷ್ಟ ಪಂಗಡದವರಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಮತ್ತು ನಿರುದ್ಯೋಗಿಗಳಿಗೆ ಜೀವನ ಭತ್ಯೆ ನೀಡುವ ಬಗ್ಗೆ.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆಸಕಇ 296 ಪವಯೋ 2016 ದಿನಾಂಕ: 17-12-2016

2) ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರಸಂಖ್ಯೆ ಸಂಖ್ಯೆಪಪಕಇ/ಸಮನ್ವಯ/ಸಿಆರ್-136/2016-17 ದಿನಾಂಕ:28-01-2017

******

<u>ಪ್ರಸ್ತಾವನೆ:</u>

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ17.12.2016ರ ಸರ್ಕಾರದ ಆದೇಶದಲ್ಲಿ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿ ಪರಿಶಿಷ್ಟ ಪಂಗಡದವರಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ 2 ವರ್ಷಗಳ ಅವಧಿಗೆ 2016-17ನೇ ಸಾಲಿನ ಲೆಕ್ಕಶೀರ್ಷಿಕೆ: 2225-02-794-0-05 ರಡಿ ಪರಿಶಿಷ್ಟ ಪಂಗಡದ ವಿವಿಧ ಅಭಿವೃದ್ಧಿ ಯೋಜನೆಯಡಿ ಅಂಶ-3ರಲ್ಲಿ ಇತರ ಕಾರ್ಯಕ್ರಮಗಳಿಗೆ ನಿಗದಿಪಡಿಸಿಕೊಂಡಿರುವ ರೂ.10.00 ಕೋಟಿಗಳಲ್ಲಿ ಅನುದಾನದ ಲಭ್ಯತೆಯನುಸಾರ ಸ್ಟೈಫಂಡ್ ನೀಡಲು ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿದೆ.

| ಕ್ರಸಂ. | ವಿದ್ಯಾರ್ಹತೆ | ಸ್ಟೈಫಂಡ್ ಮೊತ್ತ (ಮಾಹೆಯಾನ) ರೂಗಳಲ್ಲಿ |
|---|---|---|
| 1 | ಪಿ.ಯು.ಸಿ | 1500/- |
| 2 | ಪದವಿ | 2000/- |
| 3 | ಸ್ನಾತಕೋತ್ತರ | 2500/- |

ಈ ಸಂಬಂಧ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ:2225-02-794-0-05 ರಡಿ 2016-17ನೇ ಸಾಲಿನಲ್ಲಿ ಪರಿಶಿಷ್ಟ ಪಂಗಡದ ವಿವಿಧ ಅಭಿವೃದ್ಧಿ ಯೋಜನೆಯಡಿ ಇತರ ಕಾರ್ಯಕ್ರಮಗಳಿಗೆ ನಿಗದಿಪಡಿಸಿಕೊಂಡಿರುವ ರೂ.10.00 ಕೋಟಿಗಳಲ್ಲಿ ಭರಿಸತಕ್ಕದ್ದು ಎಂದು ಆದೇಶಿಸಲಾಗಿದೆ.

ಆದರೆ ಸದರಿ ಆದೇಶದಲ್ಲಿ ಅನುದಾನದ ಲಭ್ಯತೆಯನುಸಾರ ಸ್ಟೈಫಂಡ್ ನೀಡುವ ಉದ್ದೇಶ, ತರಬೇತಿ ನೀಡಲು ಉದ್ದೇಶವಿದೆಯೇ ಎಂಬುದರ ಬಗ್ಗೆ ಖಚಿತಪಡಿಸಿಕೊಳ್ಳುವ ಹಾಗೂ ಪ್ರತಿ ಜಿಲ್ಲೆಗೆ ಪ್ರತಿ ವಿಷಯದಲ್ಲಿ ಸ್ಟೈಫಂಡ್ ಪಡೆಯಲು ಅರ್ಹರಿರುವ ಸದರಿ ಸಮುದಾಯದ ನಿರುದ್ಯೋಗಿಗಳ ಸಂಖ್ಯೆ, ಆಯ್ಕೆಯ ವಿಧಾನ ಮತ್ತು ಇದಕ್ಕೆ ತಗಲುವ ಅಂದಾಜು ವೆಚ್ಚದ ಬಗ್ಗೆ ಪರಿಶೀಲಿಸುವ ಷರತ್ತಿಗೆ ಒಳಪಟ್ಟು ಮಾಸಿಕ ಸ್ಟೈಫಂಡ್ ನೀಡುವುದು ಎಂದು ಆದೇಶಿಸಲಾಗಿದೆ.

ಆದ್ದರಿಂದ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ, ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿ ಪಂಗಡದವರಾದ ಜೇನುಕುರುಬ ಹಾಗೂ ಕೊರಗ ಸಮುದಾಯದ

Scanned with CamScanner

ನಿರುದ್ಯೋಗಿ ಯುವಕ/ಯುವತಿಯರಿಗೆ ಯಾವ ಯಾವ ತರಬೇತಿಗಳನ್ನು ನೀಡಬೇಕು, ಯಾವ ಸಂಸ್ಥೆಗಳು ನೀಡಬೇಕು ಮತ್ತು ತರಬೇತಿಗೆ ಅಭ್ಯರ್ಥಿಗಳನ್ನು ಯಾವ ಸಮಿತಿಯ ಮುಖಾಂತರ ಆಯ್ಕೆ ಮಾಡಬೇಕು ಎಂಬುದರ ಬಗ್ಗೆ ಸ್ಪಷ್ಟವಾಗಿ ನಿರ್ದೇಶಿಸದೇ ಇರುವುದರಿಂದ ಸದರಿ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸದರಿ ಸರ್ಕಾರದ ಆದೇಶವನ್ನು ಮಾರ್ಪಡಿಸಿ ಆದೇಶ ಹೊರಡಿಸುವಂತೆ ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದಂತೆ ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ಇವರು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಕಇ 296 ಪವಯೋ 2016, ಬೆಂಗಳೂರು ದಿನಾಂಕ:31-01-2017**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿಗಳಾದ ಪರಿಶಿಷ್ಟ ಪಂಗಡದವರಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಮತ್ತು ನಿರುದ್ಯೋಗಿಗಳಿಗೆ ಜೀವನ ಭತ್ಯೆಗಳನ್ನು ಈ ಕೆಳಕಂಡ ಷರತ್ತುಗಳನ್ವಯ ನೀಡಲು ಸರ್ಕಾರವು ಆದೇಶಿಸಿದೆ.

I. 1) ಉಲ್ಲೇಖ(1)ರಲ್ಲಿರುವ ಸರ್ಕಾರದ ಆದೇಶದಂತೆ ಸ್ಟೈಫಂಡ್ ಎಂಬ ಪದಕ್ಕೆ ಬದಲಿಗೆ ಶೈಕ್ಷಣಿಕ ಪ್ರೋತ್ಸಾಹ ಧನ/ನಿರುದ್ಯೋಗಿ ಜೀವನ ಭತ್ಯೆ ಎಂದು ಉಪಯೋಗಿಸುವುದು.

2) ಪ್ರಸ್ತುತ ಸಮಾಜ ಕಲ್ಯಾಣ ಇಲಾಖೆಯಲ್ಲಿ ಜಾರಿಯಲ್ಲಿರುವ ಶೈಕ್ಷಣಿಕ ಪ್ರೋತ್ಸಾಹ ಧನ ಯೋಜನೆಯಲ್ಲಿರುವ ಷರತ್ತುಗಳನ್ನು ಜೇನುಕುರುಬ ಮತ್ತು ಕೊರಗ ಸಮುದಾಯದ ವಿದ್ಯಾರ್ಥಿಗಳು ಪೂರೈಸಲು ಸಾಧ್ಯವಾಗುತ್ತಿಲ್ಲವಾದ್ದರಿಂದ, ಈಗಾಗಲೇ ಎಸ್.ಎಸ್.ಎಲ್.ಸಿ. ಮತ್ತು ನಂತರದ ಕೋರ್ಸ್‌ಗಳನ್ನು ವ್ಯಾಸಂಗ ಮಾಡುತ್ತಿರುವ ಜೇನುಕುರುಬ ಮತ್ತು ಕೊರಗ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ಯಶಸ್ವಿಯಾಗಿ ಪೂರೈಸಲು ಪ್ರೋತ್ಸಾಹ ಧನವೆಂದು ಈ ಕೆಳಗಿನಂತೆ ವರ್ಷದಲ್ಲಿ 2 ಬಾರಿ ನೀಡುವುದು.

| ಕ್ರಸಂ. | ವಿದ್ಯಾರ್ಹತೆ | ಶೈಕ್ಷಣಿಕ ಪ್ರೋತ್ಸಾಹ ಧನ ವಾರ್ಷಿಕ ರೂ.ಗಳಲ್ಲಿ |
|---|---|---|
| 1 | ಎಸ್.ಎಸ್.ಎಲ್.ಸಿ. | 10,000/- |
| 2 | ಪಿಯುಸಿ ಮತ್ತು ತತ್ಸಮಾನ ಕೋರ್ಸ್‌ಗಳು-ಪ್ರತೀ ವರ್ಷಕ್ಕೆ | 12,000/- |
| 3 | ಎಲ್ಲಾ ಪದವಿ ಕೋರ್ಸುಗಳು-ಪ್ರತೀ ವರ್ಷಕ್ಕೆ | 15,000/- |
| 4 | ಎಲ್ಲಾ ಸ್ನಾತಕೋತ್ತರ ಕೋರ್ಸುಗಳು-ಪ್ರತೀ ವರ್ಷಕ್ಕೆ | 18,000/- |

3) ಅಭ್ಯರ್ಥಿಗಳು ವ್ಯಾಸಂಗ ಮಾಡುತ್ತಿರುವ ಬಗ್ಗೆ ಸಂಬಂಧಿಸಿದ ಶಿಕ್ಷಣ ಸಂಸ್ಥೆಯ ಮುಖ್ಯಸ್ಥರಿಂದ ದೃಢೀಕರಣ ಪತ್ರ ಪಡೆದು ಶೈಕ್ಷಣಿಕ ಪ್ರೋತ್ಸಾಹ ಧನವನ್ನು ಮಂಜೂರು ಮಾಡುವುದು.

4) ಮೇಲ್ಕಂಡ ಕೋರ್ಸುಗಳಲ್ಲಿ ಅಭ್ಯರ್ಥಿಗಳು ವ್ಯಾಸಂಗವನ್ನು ಮುಂದುವರಿಸದೆ ನಿಲ್ಲಿಸಿದಲ್ಲಿ, ಅಂತಹ ಅಭ್ಯರ್ಥಿಗಳಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ರದ್ದುಪಡಿಸುವುದು. ಆದರೆ, ನಿರುದ್ಯೋಗಿ ಭತ್ಯೆಗೆ ಅರ್ಹರಿದ್ದಲ್ಲಿ ಅದರಲ್ಲಿ ಜೀವನ ಭತ್ಯೆ ನೀಡುವುದು.

Scanned with CamScanner

103

11. ಜೇನುಕುರುಬ ಮತ್ತು ಕೊರಗ ವಿದ್ಯಾವಂತ ಯುವಕ/ಯುವತಿಯರು ನಿರುದ್ಯೋಗಿಯಾಗಿದ್ದು, ಅವರುಗಳಿಗೆ ಯಾವುದೇ ಆದಾಯ ಇಲ್ಲದೇ ಇರುವುದರಿಂದ ಜೀವನೋಪಾಯಕ್ಕೆ ಪ್ರತೀ ತಿಂಗಳು ಆರ್ಥಿಕ ಸಹಾಯವನ್ನು ಒದಗಿಸುವಂತೆ ಕೋರಿರುವ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಮಾಸಿಕ ನಿರುದ್ಯೋಗಿ ಜೀವನ ಭತ್ಯೆ ನೀಡುವುದು.

| ಕ್ರ.ಸಂ. | ವಿದ್ಯಾರ್ಹತೆ | ಮಾಸಿಕ ನಿರುದ್ಯೋಗಿ ಜೀವನ ಭತ್ಯೆ ರೂ.ಗಳಲ್ಲಿ. |
|---|---|---|
| 1 | ಎಸ್.ಎಸ್.ಎಲ್.ಸಿ. ತೇರ್ಗಡೆ | 2,000/- |
| 2 | ಪಿ.ಯು.ಸಿ ಮತ್ತು ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆ | 2,500/- |
| 3 | ಎಲ್ಲಾ ಪದವಿ ಕೋರ್ಸುಗಳಲ್ಲಿ ತೇರ್ಗಡೆ | 3,500/- |
| 4 | ಎಲ್ಲಾ ಸ್ನಾತಕೋತ್ತರ ಕೋರ್ಸುಗಳಲ್ಲಿ ತೇರ್ಗಡೆ | 4,500/- |

ಮೇಲ್ಕಂಡಂತೆ ನಿರುದ್ಯೋಗಿ ಜೀವನ ಭತ್ಯೆಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟಿರುತ್ತದೆ:-

1) ನಿರುದ್ಯೋಗಿ ಜೀವನ ಭತ್ಯೆಗೆ ಗರಿಷ್ಠ ವಯೋಮಿತಿ – 40 ವರ್ಷದ ಒಳಗಿರತಕ್ಕದ್ದು. ಅಭ್ಯರ್ಥಿಗಳು ನಿರುದ್ಯೋಗಿ ಎಂದು ನೋಟರಿಯಿಂದ ಅಫಿಡವಿಟ್ಟನ್ನು ಪಡೆದು, ಬಯೋ ಡೇಟಾದೊಂದಿಗೆ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಗೆ ಸಲ್ಲಿಸತಕ್ಕದ್ದು. ಸುಳ್ಳು ದಾಖಲೆಗಳನ್ನು ಸಲ್ಲಿಸಿದಲ್ಲಿ, ಅಂತಹವರು ಕ್ರಿಮಿನಲ್ ಕ್ರಮಕ್ಕೆ ಬದ್ಧರಾಗಿರುತ್ತಾರೆ.
2) ಸದರಿ ಜೀವನ ಭತ್ಯೆಯನ್ನು ಸರ್ಕಾರ/ಖಾಸಗಿ/ಸ್ವಯಂ ಉದ್ಯೋಗಗಳಡಿ ಉದ್ಯೋಗ ದೊರಕಿದ ಅಥವಾ 3 ವರ್ಷಗಳ ಅವಧಿಗೆ ಯಾವುದು ಮೊದಲು ಅಲ್ಲಿಯವರೆಗೆ ಮಾತ್ರ ಸೀಮಿತಗೊಳಿಸತಕ್ಕದ್ದು.
3) ಸದರಿ ಜೀವನ ಭತ್ಯೆಯನ್ನು ಪಡೆಯುವ ಅಭ್ಯರ್ಥಿಗಳು ಮೇಲ್ಕಂಡ ಅವಧಿಯಲ್ಲಿ ಕೌಶಲ್ಯಾಭಿವೃದ್ಧಿ/ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕಡ್ಡಾಯವಾಗಿ ತರಬೇತಿ ಪಡೆಯತಕ್ಕದ್ದು.
4) ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ/ಜಿಲ್ಲಾಧಿಕಾರಿಗಳು ಈ ಕೆಳಕಂಡ ಸ್ಪರ್ಧಾತ್ಮಕ ಪರೀಕ್ಷೆ/ಕೌಶಲ್ಯಾಭಿವೃದ್ಧಿಗಳಲ್ಲಿ ತರಬೇತಿ ನೀಡಲು ಸೂಕ್ತ ವ್ಯವಸ್ಥೆ ಮಾಡತಕ್ಕದ್ದು.

   (ಎ) ಕೇಂದ್ರ ಮತ್ತು ರಾಜ್ಯ ಸರ್ಕಾರದ ಇಲಾಖೆಗಳು/ಕರ್ನಾಟಕ ಲೋಕಸೇವಾ ಆಯೋಗ/ಕೇಂದ್ರ ಲೋಕಸೇವಾ ಆಯೋಗ/ಸ್ಟಾಫ್ ಸೆಲೆಕ್ಷನ್ ಕಮೀಷನ್/ಬ್ಯಾಂಕಿಂಗ್/ಪೋಲೀಸ್ ಇವರುಗಳು ವಿವಿಧ ಹುದ್ದೆಗಳನ್ನು ಭರ್ತಿ ಮಾಡಲು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವುದು.

   (ಬಿ) ಉದ್ಯೋಗ ಸಿಗುವಂತಹ ವಿವಿಧ ಕೌಶಲ್ಯಾಭಿವೃದ್ಧಿ/ವೃತ್ತಿಪರ ಕೋರ್ಸ್‌ಗಳಲ್ಲಿ ತರಬೇತಿ ನೀಡುವುದು.

   (ಸಿ) ಅಭ್ಯರ್ಥಿಗಳನ್ನು ತರಬೇತಿಗೆ ಆಯ್ಕೆ ಮಾಡುವ ಸಂದರ್ಭದಲ್ಲಿ ವಿದ್ಯಾರ್ಹತೆಗೆ ಅನುಸಾರವಾಗಿ ಅವರು ಬಯಸುವ ಕೋರ್ಸು/ಕೌಶಲ್ಯಾಭಿವೃದ್ಧಿ ಗಳಲ್ಲಿ ಒಂದು ಬಾರಿ ತರಬೇತಿ ನೀಡಲು ಅವಕಾಶವಿದೆ. ಅವಶ್ಯಕತೆ ಇದ್ದಲ್ಲಿ, ತರಬೇತಿ ಪಡೆದಿರುವ ಕೋರ್ಸು ಅಥವಾ ಕೌಶಲ್ಯಾಭಿವೃದ್ಧಿಗಳಲ್ಲಿ ಮುಂದುವರಿದ ತರಬೇತಿ (Advance Training) ಅಥವಾ ಸಂದರ್ಶನಕ್ಕೆ ತರಬೇತಿ ನೀಡಬಹುದು.

Scanned with CamScanner

5) ನಿರುದ್ಯೋಗಿ ಅಭ್ಯರ್ಥಿಗಳಿಗೆ ಮಾಸಿಕ ಜೀವನ ಭತ್ಯೆ ಮಂಜೂರು ಮಾಡಲು ಮತ್ತು ತರಬೇತಿಗಳಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯನ್ನು ರಚಿಸಲಾಗಿದೆ.

| ಕ್ರ.ಸಂ | ಅಧಿಕಾರಿಗಳು | ಸಮಿತಿ |
|---|---|---|
| 1. | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಮುಖ್ಯ ಕಾರ್ಯನಿರ್ವಾಹಕಾಧಿಕಾರಿ, ಜಿಲ್ಲಾ ಪಂಚಾಯತ್ | ಸದಸ್ಯರು |
| 3. | ಜಂಟಿ ನಿರ್ದೇಶಕರು, ಕೈಗಾರಿಕಾ ಇಲಾಖೆ. | ಸದಸ್ಯರು |
| 4. | ಜಿಲ್ಲಾ ಎಸ್.ಐ.ಸಿ ಮುಖ್ಯಸ್ಥರು. | ಸದಸ್ಯರು |
| 5. | ಜಿಲ್ಲಾ ಕಾರ್ಮಿಕ/ಉದ್ಯೋಗ ಮತ್ತು ತರಬೇತಿ ಇಲಾಖೆಯ ಪ್ರತಿನಿಧಿಗಳು | ಸದಸ್ಯರು. |
| 6. | ಯೋಜನಾ ಸಮನ್ವಯಾಧಿಕಾರಿಗಳು, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು | ಸದಸ್ಯ ಕಾರ್ಯದರ್ಶಿ |

6) ನಿರುದ್ಯೋಗಿ ಜೀವನ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳ ವಿವರಗಳಾದ ಶೈಕ್ಷಣಿಕ ವಿದ್ಯಾರ್ಹತೆ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಅಫಿಡವಿಟ್ ಹಾಗೂ ಇನ್ನಿತರೆ ದಾಖಲಾತಿಗಳನ್ನು ಪಡೆದು ಮೇಲ್ಕಂಡ ಜಿಲ್ಲಾ ಮಟ್ಟದ ಸಮಿತಿಯು ಮಂಜೂರು ಮಾಡುವುದು. ಇದಕ್ಕೆ ಬೇಕಾಗುವ ನಮೂನೆಯನ್ನು ನಿರ್ದೇಶಕರು, ಪರಿಶಿಷ್ಟ ವಂಗಡಗಳ ಕಲ್ಯಾಣ ಇಲಾಖೆ ಇವರಿಂದ ಒದಗಿಸುವುದು.

7) ಜಿಲ್ಲಾ ಮಟ್ಟದಲ್ಲಿ ತರಬೇತಿ ಸಂಸ್ಥೆಗಳನ್ನು ಆಯಾ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯು ಆಯ್ಕೆ ಮಾಡಿ ತರಬೇತಿ ವ್ಯವಸ್ಥೆ ಮಾಡುವುದು.

8) ಅವಶ್ಯಕತೆ ಇದ್ದಲ್ಲಿ, ರಾಜ್ಯಮಟ್ಟದಲ್ಲಿ ನಿರ್ದೇಶಕರು, ಪರಿಶಿಷ್ಟ ವಂಗಡಗಳ ಕಲ್ಯಾಣ ಇಲಾಖೆ ಇವರು ತರಬೇತಿ ಸಂಸ್ಥೆಗಳನ್ನು ಆಯ್ಕೆ ಮಾಡಿ ತರಬೇತಿ ವ್ಯವಸ್ಥೆ ಮಾಡುವುದು. ಕೌಶಲ್ಯಾಭಿವೃದ್ಧಿ ಇಲಾಖೆ ಮತ್ತು ನಿಗಮಗಳನ್ನು ಸಂಪರ್ಕಿಸಿ ಸೂಕ್ತ ತರಬೇತಿ ವ್ಯವಸ್ಥೆ ಮಾಡುವುದು.

9) ತರಬೇತಿ ಸಂಸ್ಥೆಗಳಿಗೆ ತರಬೇತಿ ಶುಲ್ಕ ನೀಡಲು ತಗಲುವ ವೆಚ್ಚವನ್ನು ಪ್ರತ್ಯೇಕವಾಗಿ ಪರಿಶಿಷ್ಟ ವಂಗಡಗಳ ಕಲ್ಯಾಣ ಇಲಾಖೆಯಿಂದ ಭರಿಸುವುದು.

10) ವಸತಿ ಸಹಿತ ತರಬೇತಿ ಕೋರ್ಸ್‌ಗಳಲ್ಲಿ ತರಬೇತಿ ಅವಧಿಯಲ್ಲಿ ನೀಡಲಾಗುತ್ತಿರುವ ಸ್ಟೈಫಂಡ್ ಇತ್ಯಾದಿ ಮೊತ್ತ, ಅಭ್ಯರ್ಥಿಗಳಿಗೆ ನೀಡಲಾಗುತ್ತಿರುವ ಜೀವನ ಭತ್ಯೆಕ್ಕಿಂತ ಹೆಚ್ಚಾದಲ್ಲಿ ಮಾತ್ರ ಸದರಿ ಹೆಚ್ಚಿನ ಮೊತ್ತವನ್ನು ಪರಿಶಿಷ್ಟ ವಂಗಡಗಳ ಕಲ್ಯಾಣ ಇಲಾಖೆಯಿಂದ ಭರಿಸುವುದು.

11) ನಿರುದ್ಯೋಗಿ ಅಭ್ಯರ್ಥಿಗಳಿಗೆ ತರಬೇತಿ ನೀಡುವುದರ ಜೊತೆಗೆ ಉದ್ಯೋಗಾವಕಾಶಗಳ ಬಗ್ಗೆ ಕಾಲ-ಕಾಲಕ್ಕೆ ಮಾಹಿತಿ ನೀಡಿ ಕೌನ್ಸಿಲಿಂಗ್ ಮಾಡುವ ಕಾರ್ಯವನ್ನು ಸಂಬಂಧಿಸಿದ ಯೋಜನಾ ಸಮನ್ವಯಾಧಿಕಾರಿ, ಪರಿಶಿಷ್ಟ ವಂಗಡಗಳ ಅಭಿವೃದ್ಧಿ ಯೋಜನೆ/ಜಿಲ್ಲಾ ಪರಿಶಿಷ್ಟ ವಂಗಡಗಳ ಕಲ್ಯಾಣ ಅಧಿಕಾರಿಗಳು ನಿರ್ವಹಿಸತಕ್ಕದ್ದು.

Scanned with CamScanner

12) ತರಬೇತಿ ಪಡೆದ ಅಭ್ಯರ್ಥಿಗಳನ್ನು ಉದ್ಯೋಗ ಮೇಳ ಇತ್ಯಾದಿ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ಜಿಲ್ಲಾ ಮಟ್ಟದ ಸಮಿತಿ ಕ್ರಮ ಜರುಗಿಸುವುದು.

13) ಶೈಕ್ಷಣಿಕ ಪ್ರೋತ್ಸಾಹಧನವನ್ನು ಮತ್ತು ನಿರುದ್ಯೋಗಿ ಜೀವನ ಭತ್ಯೆಯನ್ನು ಅಭ್ಯರ್ಥಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ ಜಮಾ ಮಾಡತಕ್ಕದ್ದು.

14) ಮೇಲ್ಕಂಡ ಸೌಲಭ್ಯಗಳನ್ನು ಉದ್ದೇಶಿತ ಗುರಿಗೆ ಬಳಸಿಕೊಳ್ಳಲು ಹಾಗು ಇದನ್ನು ದುರುಪಯೋಗ ಮಾಡಿಕೊಳ್ಳದೆ ಇರಲು ಅವಶ್ಯಕತೆಗೆ ಅನುಗುಣವಾಗಿ ಅರ್ಜಿ ನಮೂನೆ/ದಾಖಲಾತಿಗಳನ್ನು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ನಿರ್ದೇಶಕರು ತಯಾರಿಸಲು ಕ್ರಮ ವಹಿಸುವುದು.

ಈ ಮೇಲ್ಕಂಡಂತೆ ಪರಿಷ್ಕರಿಸಲ್ಪಟ್ಟ ಮೈಸೂರು, ಚಾಮರಾಜನಗರ, ಕೊಡಗು, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಮೂಲನಿವಾಸಿ ಪಂಗಡದವರಾದ ಜೇನುಕುರುಬ ಹಾಗೂ ಕೊರಗ ಸಮುದಾಯದ ವಿದ್ಯಾವಂತ/ನಿರುದ್ಯೋಗಿ ಯುವಕ/ಯುವತಿಯರಿಗೆ ಶೈಕ್ಷಣಿಕ ಪ್ರೋತ್ಸಾಹ ಧನ ಮತ್ತು ಜೀವನ ಭತ್ಯೆ ಹಾಗೂ ತರಬೇತಿ ನೀಡುವ ಸಲುವಾಗಿ ತಗಲುವ ವೆಚ್ಚವನ್ನು 2016-17ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ:2225-02-794-0-05 ರಡಿ ಪರಿಶಿಷ್ಟ ಪಂಗಡದ ವಿವಿಧ ಅಭಿವೃದ್ಧಿ ಯೋಜನೆಯಡಿ ಉಂಶ-31 ರಲ್ಲಿ ಇತರ ಕಾರ್ಯಕ್ರಮಗಳಿಗೆ ಹಂಚಿಕೆಯಾದ ರೂ.10.00 ಕೋಟಿಗಳಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 06 ಟಿಎಫ್‌ಪಿ 2016 ದಿನಾಂಕ: 27-12-2016 ಮತ್ತು ದಿನಾಂಕ05-01-2017ರನ್ವಯ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ರಾಜಶ್ರೀ ಹೆಚ್.ಕುಲಕರ್ಣಿ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಗೆ:

1) ಮಹಾಲೇಖಪಾಲರು (ಲೆಕ್ಕಪರಿಶೋಧನೆ-I ಮತ್ತು 2), ಕರ್ನಾಟಕ, ಬೆಂಗಳೂರು
2) ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು
3) ಜಿಲ್ಲಾಧಿಕಾರಿಗಳು, ಚಾಮರಾಜನಗರ/ಮೈಸೂರು/ಕೊಡಗು/ದಕ್ಷಿಣ ಕನ್ನಡ/ಉಡುಪಿ
4) ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಚಾಮರಾಜನಗರ/ಮೈಸೂರು/ಕೊಡಗು/ದಕ್ಷಿಣ ಕನ್ನಡ/ಉಡುಪಿ
5) ಜಂಟಿನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು
6) ಯೋಜನಾ ಸಮನ್ವಯಾಧಿಕಾರಿ, ಸಮಗ್ರ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಯೋಜನೆ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿ, ಚಾಮರಾಜನಗರ/ಮೈಸೂರು/ಕೊಡಗು/ದಕ್ಷಿಣ ಕನ್ನಡ/ಉಡುಪಿ
7) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು

ಪ್ರತಿಗಳು:

1) ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
2) ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
3) ಸಲಹೆಗಾರರು, ಎಸ್.ಸಿ.ಎಸ್.ಪಿ./ಟಿ.ಎಸ್.ಪಿ. ನೋಡಲ್ ಏಜೆನ್ಸಿ, ಸಮಾಜ ಕಲ್ಯಾಣ ಇಲಾಖೆ.

Scanned with CamScanner

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳ ಕಟ್ಟಡ, ಶಾಲಾ-ಕಾಲೇಜುಗಳ ಕಟ್ಟಡ ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ನೀಡುವ ಕುರಿತು ಪರಿಷ್ಕೃತ ಮಾರ್ಗಸೂಚಿಗಳು.

ಓದಲಾಗಿದೆ:
1) ಸರ್ಕಾರದ ಆದೇಶ ಸಂಖ್ಯೆ: ಸಕಇ 159 ಪಕವಿ 2011, ದಿನಾಂಕ: 06-03-2012
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ:ಸಕನಿ/ಸಿಐಸಿ-3/ಸಿಆರ್-09/2013-14, ದಿನಾಂಕ: 03-10-2013.

****

**ಪ್ರಸ್ತಾವನೆ:-**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಖಾಸಗಿ ಸಂಸ್ಥೆಗಳಿಗೆ ಅನುದಾನಿತ ವಸತಿ ನಿಲಯಗಳ ಕಟ್ಟಡ ನಿರ್ಮಾಣ/ ಬದಲಾವಣೆ/ ರಿಪೇರಿ/ ವಿಸ್ತರಣಾ ಕಾರ್ಯಗಳಿಗೆ ಅಂದಾಜು ಮೊತ್ತದ 75% ರಷ್ಟು ಅಥವಾ 25 ಲಕ್ಷ, ಇವುಗಳಲ್ಲಿ ಯಾವುದು ಕಡಿಮೆಯೋ ಆ ಮೊತ್ತವನ್ನು ಅನುದಾನವಾಗಿ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು.

2013-14ನೇ ಸಾಲಿನ ಆಯವ್ಯಯದ ಭಾಷಣದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಸಂಸ್ಥೆಗಳು ನಡೆಸುವ ವಿದ್ಯಾರ್ಥಿ ನಿಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳು, ಸಮುದಾಯ ಭವನಗಳ ನಿರ್ಮಾಣ ಇತ್ಯಾದಿಗಳಿಗೆ ಆರ್ಥಿಕ ನೆರವು ನೀಡಲು ರೂ.50.00 ಕೋಟಿಗಳನ್ನು ಒದಗಿಸಲಾಗುವುದೆಂದು ಘೋಷಿಸಲಾಗಿರುತ್ತದೆ.

2014-15 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಹಾಗೂ ಇತರ ಸಂಘ-ಸಂಸ್ಥೆಗಳು ನಡೆಸುವ ಶೈಕ್ಷಣಿಕ ಸಂಸ್ಥೆಗಳಿಗೆ ಶಾಲೆ ಮತ್ತು ವಿದ್ಯಾರ್ಥಿ ನಿಲಯ ಕಟ್ಟಡಗಳಿಗೆ ಮತ್ತು ಸಮುದಾಯ ಭವನಗಳಿಗಾಗಿ ಆರ್ಥಿಕ ನೆರವು ನೀಡಲಾಗುವುದೆಂದು ಘೋಷಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಸಂಖ್ಯೆ (2) ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಪರಿಶಿಷ್ಟ ಜಾತಿಯ ಧಾರ್ಮಿಕ ಸಂಸ್ಥೆಗಳು ನಡೆಸುವ ವಿದ್ಯಾರ್ಥಿ ನಿಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳು, ಸಮುದಾಯ ಭವನಗಳ ನಿರ್ಮಾಣ ಇತ್ಯಾದಿಗಳಿಗೆ ಆರ್ಥಿಕ ನೆರವು ನೀಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಮಾರ್ಗಸೂಚಿಗಳನ್ನು ಹೊರಡಿಸಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳು/ಶಾಲಾ ಕಾಲೇಜುಗಳು ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರಾತಿ ನೀಡುವ ಸಂಬಂಧ ಮಾರ್ಗಸೂಚಿಗಳನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

<u>ಸರ್ಕಾರಿ ಆದೇಶ ಸಂಖ್ಯೆ:ಸಕಇ 44 ಪಕವಿ 2014, ಬೆಂಗಳೂರು ದಿನಾಂಕ: 15-05-2014</u>

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳು/ಶಾಲಾ-ಕಾಲೇಜುಗಳು ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕಾಗಿ ಸಹಾಯಧನ ನೀಡುವ ಕುರಿತು ಅನುಬಂಧ (1), (2), (3), ಮತ್ತು (4) ರಲ್ಲಿ ಲಗತ್ತಿಸಿರುವಂತೆ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಆದೇಶಿಸಲಾಗಿದೆ. ಸದರಿ ಮಾರ್ಗಸೂಚಿಗಳು ಈ ತಕ್ಷಣದಿಂದ ಜಾರಿಗೆ ಬರುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 121 ವೆಚ್ಚ-3/2014, ದಿನಾಂಕ: 13-03-2014 ರಲ್ಲಿ ನೀಡಿರುವ ಸಹಮತಿಯನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

(ಎನ್.ನರಸಿಂಹಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

<u>ಇವರಿಗೆ:-</u>
ಸಂಕಲನಕಾರರು, ಕರ್ನಾಟಕ ರಾಜ್ಯ ಪತ್ರ ಬೆಂಗಳೂರು. ಇವರಿಗೆ ಮುಂದಿನ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಿ, 5,000 ಪ್ರತಿಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, 2ನೇ ಮಹಡಿ ವಿಕಾಸಸೌಧ, ಬೆಂಗಳೂರು ಇವರಿಗೆ ಕಳುಹಿಸಲು ಕೋರಿದೆ.

ಗೆ,

1) ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು.
2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ.
3) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ.
4) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
5) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
6) ಖಜಾನಾಧಿಕಾರಿಗಳು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
7) ಎಲ್ಲಾ ಜಿಲ್ಲಾಧಿಕಾರಿಗಳು.
8) ಎಲ್ಲಾ ಜಿಲ್ಲೆಗಳ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು.
9) ಎಲ್ಲಾ ಜಿಲ್ಲೆಗಳ ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿಗಳು.
(ಕ್ರ.ಸಂ.7, 8 ಮತ್ತು 9 ನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಮುಖಾಂತರ).
10) ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
11) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ರವರ ಆಪ್ತ ಕಾರ್ಯದರ್ಶಿ.
12) ಸರ್ಕಾರದ ಉಪ ಕಾರ್ಯದರ್ಶಿ-1 ಮತ್ತು 2, ಸಮಾಜ ಕಲ್ಯಾಣ ಇಲಾಖೆ ರವರ ಆಪ್ತ ಸಹಾಯಕರು.
13) ಶಾಖಾ ರಕ್ಷಾ ಕಡತ.
14) ಹೆಚ್ಚುವರಿ ಪ್ರತಿಗಳು-03

ಅನುಬಂಧ 1

## ಸಮಾಜ ಕಲ್ಯಾಣ ಇಲಾಖೆ

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳು/ಶಾಲಾ-ಕಾಲೇಜುಗಳು ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕೆ ಸಹಾಯಧನ ಮಂಜೂರು ಮಾಡುವ ಬಗ್ಗೆ ಮಾರ್ಗಸೂಚಿಗಳು :

1. **ಅರ್ಹತೆ:**

ಈ ಕಾರ್ಯಕ್ರಮದಡಿ ಸಹಾಯಧನ ಪಡೆಯಲು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ನೋಂದಣಿಯಾಗಿರುವ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ಅರ್ಹರಿರುತ್ತವೆ.

2. **ಸಹಾಯಧನ ಮಂಜೂರಾತಿಗಾಗಿ ನಿಬಂಧನೆಗಳು:**

1. ಸಹಾಯಧನ ಪಡೆಯುವ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ/ನೋಂದಣಿ ನಿಯಮಗಳನ್ವಯ ನೋಂದಾಯಿತ ಸಂಸ್ಥೆಯಾಗಿರಬೇಕು. ಸಂಸ್ಥೆಯು ನೋಂದಣಿಯಾಗಿ ಕನಿಷ್ಠ ಮೂರು ವರ್ಷಗಳಾಗಿರಬೇಕು.
2. ಟ್ರಸ್ಟ್‌ನ ಸದಸ್ಯರು ಒಂದೇ ಕುಟುಂಬದವರಾಗಿರಬಾರದು.
3. ಸಹಾಯಧನ ಬಯಸುವ ಸಂಸ್ಥೆಯು ಹಿಂದಿನ ಮೂರು ವರ್ಷಗಳ ಆಡಿಟ್ ವರದಿಗಳನ್ನು ಚಾರ್ಟರ್ಡ್ ಅಕೌಂಟೆಂಟ್‌ರವರಿಂದ ಆಡಿಟ್ ಮಾಡಿಸಿ ಅರ್ಜಿಯೊಂದಿಗೆ ಸಲ್ಲಿಸಬೇಕು.
4. ಉದ್ದೇಶಿತ ವಿದ್ಯಾರ್ಥಿ ನಿಲಯ/ಶಾಲಾ ಕಾಲೇಜು-ಕಟ್ಟಡ/ಸಮುದಾಯ ಭವನ ಕಟ್ಟಡದ ಅಂದಾಜು ವೆಚ್ಚದಲ್ಲಿ ಶೇಕಡ 75 ರಷ್ಟು ಅಥವಾ ಗರಿಷ್ಠ ರೂ.50.00 ಲಕ್ಷ ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ಮೊತ್ತವನ್ನು ಸರ್ಕಾರದಿಂದ ಸಹಾಯಧನ ನೀಡಬಹುದಾಗಿದ್ದು, ಉಳಿದ ಮೊತ್ತವನ್ನು ಸಂಬಂಧಿಸಿದ ಸಂಸ್ಥೆಯು ಭರಿಸತಕ್ಕದ್ದು.
5. ಸಹಾಯಧನ ಬಯಸುವ ಸಂಸ್ಥೆಗಳು/ಟ್ರಸ್ಟ್‌ಗಳು ಉದ್ದೇಶಿಸಿರುವ ಕಟ್ಟಡ ನಿರ್ಮಾಣಕ್ಕೆ ಅವರ ಸಂಸ್ಥೆಯ ಹೆಸರಿನಲ್ಲಿ ಜಮೀನು/ನಿವೇಶನವನ್ನು ಹೊಂದಿರಬೇಕು ಅಥವಾ ಇತರೆ ಸರ್ಕಾರಿ/ಸರ್ಕಾರೇತರ ಸಂಸ್ಥೆಗಳಿಂದ ಕನಿಷ್ಠ ಮೂವತ್ತು ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆ(ಲೀಸ್) ಪಡೆದಿರಬೇಕು.
6. ಕಟ್ಟಡ ನಕ್ಷೆಗೆ ಸ್ಥಳೀಯ ನಗರಪಾಲಿಕೆ/ನಗರಸಭೆ/ಪುರಸಭೆ/ಪಂಚಾಯಿತಿಯಿಂದ ಅನುಮೋದನೆ ಮತ್ತು ಪರವಾನಗಿಯನ್ನು ಪಡೆದಿರಬೇಕು ಹಾಗೂ ಅಂದಾಜು ಪಟ್ಟಿಯು ಸರ್ಕಾರಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ಕಾರ್ಯಪಾಲಕ ಅಭಿಯಂತರರಿಂದ/ಕಾರ್ಯಪಾಲಕ ಅಭಿಯಂತರರಿಂದ ದೃಢೀಕರಣಗೊಂಡಿರಬೇಕು.
7. ಸಮುದಾಯ ಭವನಗಳ ನಿರ್ಮಾಣಕ್ಕೆ ಮಾತ್ರ ಸಂಬಂಧಿಸಿದ ಪ್ರಕರಣಗಳಲ್ಲಿ ಈ ಕೆಳಗಿನ ಪ್ರದೇಶ/ಸ್ಥಳಗಳಿಗೆ ಈ ಕೆಳಗಿನ ಗರಿಷ್ಠ ಮಿತಿಗೊಳಪಟ್ಟು ಸಹಾಯಧನ ಮಂಜೂರು ಮಾಡಲಾಗುವುದು.

| ಕ್ರ.ಸಂ. | ಸ್ಥಳ | ಗರಿಷ್ಠ ಸಹಾಯಧನ |
|---|---|---|
| 1. | ಪಟ್ಟಣ ಪಂಚಾಯಿತಿ/ಗ್ರಾಮ ಪಂಚಾಯಿತಿ | ರೂ.10.00 ಲಕ್ಷ |
| 2. | ತಾಲ್ಲೂಕು ಕೇಂದ್ರ ಸ್ಥಾನ | ರೂ.25.00 ಲಕ್ಷ |
| 3. | ಜಿಲ್ಲಾ ಕೇಂದ್ರ ಸ್ಥಾನ | ರೂ.50.00 ಲಕ್ಷ |

8. ಸಹಾಯಧನ ಪಡೆಯಬಿಚ್ಚಿಸುವ ಸಂಸ್ಥೆಯು ಅನುಬಂಧ-2ರ ಅರ್ಜಿ ನಮೂನೆಯಲ್ಲಿ ನಿಗದಿತ ದಾಖಲಾತಿಯೊಂದಿಗೆ, ಅರ್ಜಿಯನ್ನು ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

9. ಒಂದು ಸಂಘ ಅಥವಾ ಸಂಸ್ಥೆಯು ಈ ಕಾರ್ಯಕ್ರಮದಡಿ ಒಂದು ಬಾರಿ ಮಾತ್ರ ಸಹಾಯಧನ ಪಡೆಯಲು ಅರ್ಹವಾಗಿರುತ್ತವೆ.

10. ಸಹಾಯಧನ ಮಂಜೂರು ಆದೇಶ ಮಾಡಿದ ಕೂಡಲೇ ಸದರಿ ಸಂಸ್ಥೆಯು ಅನುಬಂಧ-3 ರಲ್ಲಿರುವಂತೆ ಕನಿಷ್ಠ ರೂ.100/- ರ ಛಾಪಾ ಕಾಗದದಲ್ಲಿ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಿಸಿದ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳಿಗೆ ಸಲ್ಲಿಸಬೇಕು.

11. ಸಂಬಂಧಿಸಿದ ಸಂಸ್ಥೆಗೆ ಜಿಲ್ಲಾಧಿಕಾರಿಗಳ ಮೂಲಕ ಕಟ್ಟಡದ ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಮೂರು ಕಂತುಗಳಲ್ಲಿ ಸಹಾಯಧನವನ್ನು ಬಿಡುಗಡೆ ಮಾಡಲಾಗುವುದು (ಮಂಜೂರಾತಿ ಆದೇಶದೊಂದಿಗೆ, ಮೇಲ್ಛಾವಣಿ ಮತ್ತು ಮುಕ್ತಾಯದ ನಂತರ, 25:50:25 ರ ಅನುಪಾತದಂತೆ).

12. ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ನಾಲ್ಕು ತಿಂಗಳೊಳಗಾಗಿ ಕಟ್ಟಡದ ಕಾಮಗಾರಿಯನ್ನು ಪ್ರಾರಂಭಿಸದಿದ್ದಲ್ಲಿ, ಬಿಡುಗಡೆ ಮಾಡಲಾಗಿದ್ದ ಪೂರ್ಣ ಮೊತ್ತವನ್ನು ಸಂಸ್ಥೆಯಿಂದ ಜಿಲ್ಲಾಧಿಕಾರಿಗಳು ಹಿಂದಕ್ಕೆ ಪಡೆಯತಕ್ಕದ್ದು.

13. ಕಟ್ಟಡ ನಿರ್ಮಾಣಕ್ಕೆ ಮೊದಲನೇ ಕಂತಿನ ಸಹಾಯಧನ ಪಡೆದ ದಿನಾಂಕದಿಂದ ಎರಡು ವರ್ಷಗಳೊಳಗಾಗಿ ನಿರ್ಮಾಣವನ್ನು ಪೂರ್ಣಗೊಳಿಸತಕ್ಕದ್ದು. ಎರಡು ವರ್ಷಗಳೊಳಗಾಗಿ ಕಟ್ಟಡವನ್ನು ಪೂರ್ಣಗೊಳಿಸದಿದ್ದಲ್ಲಿ, ಅದುವರೆಗೆ ಮಂಜೂರು ಮಾಡಿದ ಮೊತ್ತವನ್ನು ಮತ್ತು ಅದರ ಮೇಲೆ ಶೇ.10 ರಷ್ಟು ಬಡ್ಡಿಯನ್ನು ಸಂಬಂಧಪಟ್ಟ ಸಂಸ್ಥೆಯಿಂದ ವಸೂಲು ಮಾಡಲಾಗುವುದು. ಆದರೆ, ಸಂಸ್ಥೆಯು ನೀಡುವ ವಿವರಣೆಯನ್ನು ಪರಿಶೀಲಿಸಿ ಕಟ್ಟಡ ನಿರ್ಮಾಣಕ್ಕೆ ಹೆಚ್ಚುವರಿ ಕಾಲಾವಕಾಶವನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ನೀಡಬಹುದು. ಆದರೆ, ಇದು ಒಟ್ಟಾರೆ 3 ವರ್ಷಗಳಿಗೆ ಮೀರಿರಬಾರದು.

14. ಕಟ್ಟಡದ ಕಾಮಗಾರಿಯ ಪ್ರಗತಿಯ ಬಗ್ಗೆ ಆರ್ಥಿಕ ಹಾಗೂ ಭೌತಿಕ ಪ್ರಗತಿಯ ವರದಿಯನ್ನು ಎಂಟು ವಿವಿಧ ಕೋನಗಳಿಂದ ತೆಗೆದ ಛಾಯಾಚಿತ್ರಗಳ ಸಮೇತ ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಪ್ರತಿ ತ್ರೈಮಾಸಿಕದ ಕೊನೆಗೆ ಸಲ್ಲಿಸಬೇಕು.

15. ಸಮುದಾಯ ಭವನದ ಕಟ್ಟಡಗಳನ್ನು ಸಮುದಾಯದ ಕಲ್ಯಾಣ ಕಾರ್ಯಕ್ರಮಗಳಿಗೆ ಮಾತ್ರ ಉಪಯೋಗಿಸತಕ್ಕದ್ದು, ರಾಜಕೀಯ ಉದ್ದೇಶಗಳಿಗೆ ಬಳಸತಕ್ಕದ್ದಲ್ಲ.

16. ಪರಿಶಿಷ್ಟ ಜಾತಿಗೆ ಸೇರಿದ ಸಂಸ್ಥೆಯು ಸಮುದಾಯ ಭವನದ ಕಟ್ಟಡವನ್ನು ಸಾಮಾಜಿಕ/ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೊದಲನೇ ಆದ್ಯತೆಯಾಗಿ ಪರಿಶಿಷ್ಟ ಜಾತಿಯವರಿಗೆ, ಎರಡನೇ ಆದ್ಯತೆಯಾಗಿ ಪರಿಶಿಷ್ಟ ವರ್ಗದವರಿಗೆ ಹಾಗೂ ಮೂರನೇ ಆದ್ಯತೆಯಾಗಿ ಇತರೆ ಸಮುದಾಯದವರಿಗೂ ರಿಯಾಯಿತಿ ದರದಲ್ಲಿ ನೀಡತಕ್ಕದ್ದು. ಹಾಗೆಯೇ ಪರಿಶಿಷ್ಟ ಪಂಗಡಕ್ಕೆ ಸೇರಿದ ಸಮುದಾಯ ಭವನದ ಕಟ್ಟಡವನ್ನು ಸಾಮಾಜಿಕ/ಸಾಂಸ್ಕೃತಿಕ ಚಟುವಟಿಕೆಗಳಿಗೆ ಮೊದಲನೇ ಆದ್ಯತೆಯಾಗಿ ಪರಿಶಿಷ್ಟ ಪಂಗಡದವರಿಗೆ, ಎರಡನೇ ಆದ್ಯತೆಯಾಗಿ ಪರಿಶಿಷ್ಟ ಜಾತಿಯವರಿಗೆ ಹಾಗೂ ಮೂರನೇ ಆದ್ಯತೆಯಾಗಿ ಇತರೆ ಸಮುದಾಯದವರಿಗೂ ರಿಯಾಯಿತಿ ದರದಲ್ಲಿ ನೀಡತಕ್ಕದ್ದು.

17. ನಿರ್ಮಾಣ ಮಾಡಿರುವ ಕಟ್ಟಡದಿಂದ ಬರುವ ಆದಾಯದ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸಬೇಕು ಮತ್ತು ಇದನ್ನು ಸಂಘ/ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಮಾತ್ರ ಬಳಸಬೇಕು. ಈ ರೀತಿ ಮಾಡುತ್ತಿರುವ ಬಗ್ಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಪ್ರತಿ 6 ತಿಂಗಳಿಗೊಮ್ಮೆ ಭೇಟಿ ನೀಡಿ ಪರಿಶೀಲನೆ ಮಾಡಬೇಕು.

18. ಶಾಲಾ-ಕಾಲೇಜು ಕಟ್ಟಡ/ವಿದ್ಯಾರ್ಥಿ ನಿಲಯ/ಸಮುದಾಯ ಭವನದ ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಖಾಲಿ ಬಿಟ್ಟಲ್ಲಿ ಅಥವಾ ಸರಿಯಾದ ರೀತಿಯಲ್ಲಿ ಲೆಕ್ಕಪತ್ರಗಳನ್ನು ನಿರ್ವಹಿಸದೇ ಇದ್ದಲ್ಲಿ, ಅದರಿಂದ ಬರುವ ಆದಾಯವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಬಳಸದೇ ಇದ್ದಲ್ಲಿ, ಇಲಾಖೆಯು ಸದರಿ ಶಾಲಾ-ಕಾಲೇಜು ಕಟ್ಟಡ/ಸಮುದಾಯ ಭವನ/ವಿದ್ಯಾರ್ಥಿ ನಿಲಯವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವ ಅಧಿಕಾರವನ್ನು ಹೊಂದಿರುತ್ತದೆ.

19. ಈ ಮೇಲಿನ ಸಹಾಯಧನದಿಂದ ವಿದ್ಯಾರ್ಥಿ ನಿಲಯವನ್ನು ನಿರ್ಮಿಸಿದಲ್ಲಿ, ಪ್ರವೇಶ ನೀಡುವ ವಿದ್ಯಾರ್ಥಿಗಳ ಪೈಕಿ ಶೇ.50 ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯವನ್ನು ನೀಡಬೇಕು. ಶಾಲಾ ಕಾಲೇಜು ನಿರ್ಮಿಸಿದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಆದ್ಯತೆ ಮೇಲೆ ಪ್ರವೇಶ ನೀಡಬೇಕು. ಈ ಸಂಸ್ಥೆಗಳ ನೇಮಕಾತಿಯಲ್ಲಿ ಶೇಕಡಾ 50 ರಷ್ಟು ಹುದ್ದೆಗಳನ್ನು ಪರಿಶಿಷ್ಟ ಜಾತಿ/ಪಂಗಡದವರಿಗೆ ಮೀಸಲಿರಿಸಬೇಕು.

3. ಇಲಾಖಾಧಿಕಾರಿಗಳಿಗೆ ಸೂಚನೆಗಳು:-

1. ಈ ಕೆಳಗೆ ನಮೂದಿಸಿರುವ ಸಹಾಯಧನವನ್ನು ಮಂಜೂರು ಮಾಡುವ ಅಧಿಕಾರವನ್ನು ಈ ಕೆಳಗಿನವರಿಗೆ ಈ ಕೆಳಗಿನಂತೆ ವಹಿಸಲಾಗಿದೆ.

ಅ. ರೂ.10.00 ಲಕ್ಷಗಳವರೆಗೆ – ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.

ಆ. ರೂ.10.00 ಲಕ್ಷಗಳ ಮೇಲ್ಪಟ್ಟು ಹಾಗೂ ಗರಿಷ್ಠ 50.00 ಲಕ್ಷಗಳವರೆಗೆ – ಸರ್ಕಾರದ ಪ್ರಧಾನ ಕಾರ್ಯದರ್ಶಿ/ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ

ಇ. ರೂ.50.00 ಲಕ್ಷಗಳಿಗೆ ಮೇಲ್ಪಟ್ಟ ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಯ ಅಭಿಪ್ರಾಯಕ್ಕೆ ಸಲ್ಲಿಸುವುದು.

2. ಈ ಕಾರ್ಯಕ್ರಮದಡಿ ಸರ್ಕಾರದಿಂದ ಬಿಡುಗಡೆಯಾಗುವ ಮೊತ್ತವನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಪಿ.ಡಿ.ಖಾತೆಗೆ ಜಮಾ ಮಾಡಿಕೊಂಡು, ಪ್ರಗತಿಗೆ ಅನುಗುಣವಾಗಿ ಸಹಾಯಧನವನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಗೆ ಮರು ಬಿಡುಗಡೆ ಮಾಡಬೇಕು.

3. ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳು/ಶಾಲಾ-ಕಾಲೇಜುಗಳು ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕಾಗಿ ಸಲ್ಲಿಸುವ ಪ್ರಸ್ತಾವನೆಯ ಸಂಬಂಧ ಜಿಲ್ಲೆಯ ಜಿಲ್ಲಾ ಸಮಾಜ

.....4

ಕಲ್ಯಾಣಾಧಿಕಾರಿಗಳು / ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಸ್ಥಳ ಪರಿಶೀಲನೆ ಮಾಡಿ ತಮ್ಮ ಶಿಫಾರಸ್ಸಿನೊಂದಿಗೆ (ಚೆಕ್‌ಲಿಸ್ಟ್ ನಮೂನೆಯೊಂದಿಗೆ) ಮತ್ತು ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ಪ್ರಸ್ತಾವನೆಯನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು. ಆಯುಕ್ತರು/ ನಿರ್ದೇಶಕರು ಪ್ರಸ್ತಾವನೆಯನ್ನು ಅವರಿಗೆ ಪ್ರದತ್ತವಾದ ಆರ್ಥಿಕ ಅಧಿಕಾರ ಪರಿಮಿತಿಯೊಳಗೆ ಸಹಾಯಧನವನ್ನು ಮಂಜೂರು ಮಾಡಿ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವುದು. ಆಯುಕ್ತರು/ನಿರ್ದೇಶಕರಿಗೆ ಪ್ರದತ್ತವಾದ ಆರ್ಥಿಕ ಮಿತಿ ಮೀರಿದ್ದಲ್ಲಿ ಅಂತಹ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸುವುದು.

4. ಸಹಾಯಧನವನ್ನು ಮಂಜೂರು ಮಾಡಿದ ಸಂಸ್ಥೆಗೆ ಬಿಡುಗಡೆ ಮಾಡುವ ಮುಂಚೆ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಸಂಸ್ಥೆಯಿಂದ ಅನುಬಂಧ-3 ರಲ್ಲಿರುವಂತೆ ಕನಿಷ್ಠ ರೂ.100/- ಗಳ ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಪಡೆಯಬೇಕು.

5. ನಿರ್ಮಾಣ ಮಾಡಿರುವ ಕಟ್ಟಡದಿಂದ ಬರುವ ಆದಾಯದ ಬಗ್ಗೆ ಸೂಕ್ತ ಲೆಕ್ಕಪತ್ರಗಳನ್ನು ನಿರ್ವಹಿಸುವ ಬಗ್ಗೆ ಹಾಗೂ ಇದನ್ನು ಸಂಘ ಅಥವಾ ಸಂಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ಸಾರ್ವಜನಿಕರ ಉದ್ದೇಶಕ್ಕಾಗಿ ಮಾತ್ರ ಬಳಸುತ್ತಿರುವ ಬಗ್ಗೆ ವಿದ್ಯಾರ್ಥಿ ನಿಲಯವಾಗಿದ್ದಲ್ಲಿ ಮೀಸಲಾತಿ ಪ್ರಕಾರ ಪ್ರವೇಶ ನೀಡಿರುವ ಬಗ್ಗೆ ಉಚಿತವಾಗಿ ವಸತಿ ಸೌಲಭ್ಯ ನೀಡಿರುವ ಬಗ್ಗೆ ಸಂಬಂಧಿಸಿದ ಜಿಲ್ಲೆಯ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಪ್ರತಿ 6 ತಿಂಗಳಿಗೊಮ್ಮೆ ಸಂಘ/ಸಂಸ್ಥೆಗೆ ಭೇಟಿ ನೀಡಿ ಪರಿಶೀಲನೆ ಮಾಡಬೇಕು ಮತ್ತು ಈ ಬಗ್ಗೆ ವರದಿಯನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಬೇಕು.

6. ಕಟ್ಟಡವನ್ನು ಕಟ್ಟಿದ ನಂತರ ಸಂಸ್ಥೆಯು ಉಪಯೋಗಿಸದೇ ಸತತವಾಗಿ ಒಂದು ವರ್ಷ ಕಾಲ ಬಿಟ್ಟಿದ್ದಲ್ಲಿ ಅಥವಾ ಸೂಕ್ತವಾಗಿ ಲೆಕ್ಕಪತ್ರಗಳನ್ನು ನಿರ್ವಹಿಸದೇ ಇದ್ದಲ್ಲಿ, ಅದರಿಂದ ಬರುವ ಆದಾಯವನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಬಳಸದೇ ಇದ್ದಲ್ಲಿ, ಇಲಾಖೆಯು ಸದರಿ ಶಾಲಾ-ಕಾಲೇಜು ಕಟ್ಟಡ/ಸಮುದಾಯ ಭವನದ ಕಟ್ಟಡ /ವಿದ್ಯಾರ್ಥಿ ನಿಲಯದ ಕಟ್ಟಡವನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳತಕ್ಕದ್ದು.

(ಸಹಿ)
(ಎನ್.ನರಸಿಂಹಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

ಅನುಬಂಧ – 2

ಅರ್ಜಿ ನಮೂನೆ

ಸಮಾಜ ಕಲ್ಯಾಣ ಇಲಾಖೆ

(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ನೋಂದಾಯಿತ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳ/ಶಾಲಾ ಕಾಲೇಜುಗಳ/ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕಾಗಿ ಸಹಾಯಧನ ನೆರವು ನೀಡಲು ಸಲ್ಲಿಸಬೇಕಾದ ಅರ್ಜಿ ನಮೂನೆ)

ಗೆ,

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿ

-------------------------- ಜಿಲ್ಲೆ

ಮಾನ್ಯರೆ,

ವಿಷಯ:-------------------------- ನಗರ/ಗ್ರಾಮದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ನೋಂದಾಯಿತ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳ/ಶಾಲಾ ಕಾಲೇಜುಗಳ/ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕಾಗಿ ಸಹಾಯಧನ ಮಂಜೂರು ಮಾಡುವ ಬಗ್ಗೆ.

| ಕ್ರ.ಸಂ. | ವಿವರ | ಉತ್ತರ |
|---|---|---|
| 1 | ಸಂಸ್ಥೆಯ ಪೂರ್ಣ ಹೆಸರು ಮತ್ತು ವಿಳಾಸ | |
| 2 | ಸಂಸ್ಥೆಯು ನೋಂದಣಿಯಾದ ವರ್ಷ ಮತ್ತು ಆದೇಶ ಸಂಖ್ಯೆ (ನೋಂದಣಿ ಪ್ರಮಾಣ ಪತ್ರದ ಪ್ರತಿ ಲಗತ್ತಿಸುವುದು). | |
| 3 | ಸಂಸ್ಥೆಯ ಆಡಳಿತ ಮಂಡಳಿಯ ಅಧ್ಯಕ್ಷರು ಮತ್ತು ಸದಸ್ಯರ ಹೆಸರು ಹಾಗೂ ಪೂರ್ಣ ವಿಳಾಸ (ಮಾಹಿತಿ ಲಗತ್ತಿಸುವುದು) | |
| 4 | ಸಂಸ್ಥೆಯು ಬೈಲಾಗಳನ್ನು ಅಳವಡಿಸಿಕೊಂಡಿದೆಯೇ? (ಬೈಲಾ ಪ್ರತಿ ಲಗತ್ತಿಸುವುದು). | |
| 5 | ಸಂಸ್ಥೆಯ ಕಳೆದ 3 ವರ್ಷಗಳ ವಾರ್ಷಿಕ ಲೆಕ್ಕಪತ್ರ/ಆಡಿಟ್ ವರದಿಯನ್ನು ಲಗತ್ತಿಸುವುದು. | |
| 6 | ಸಂಸ್ಥೆಯು ಕಳೆದ 3 ವರ್ಷಗಳಲ್ಲಿ ನಡೆಸಿದ ವಿದ್ಯಾರ್ಥಿ ನಿಲಯಗಳು/ಶಾಲಾ-ಕಾಲೇಜುಗಳು ಮತ್ತು ಸಮುದಾಯ ಭವನಗಳ ಕಟ್ಟಡ ನಿರ್ಮಾಣಕ್ಕೆ ಆರ್ಥಿಕ ನೆರವು ನೀಡಲು ಅನುಷ್ಠಾನಗೊಳಿಸಿದ ಕಾರ್ಯಕ್ರಮಗಳ ಬಗ್ಗೆ ವಿವರ. | |

----2

| | | |
|---|---|---|
| 7 | ಸಂಸ್ಥೆಯು ಕಳೆದ 3 ವರ್ಷಗಳಲ್ಲಿ ನಡೆಸುತ್ತಿರುವ ವಿದ್ಯಾರ್ಥಿನಿಲಯಗಳು/ಶಾಲಾ-ಕಾಲೇಜುಗಳ ಕಟ್ಟಡ/ಸಮುದಾಯ ಭವನಗಳ ನಿರ್ಮಾಣಕ್ಕೆ ಆರ್ಥಿಕ ನೆರವು ನೀಡುವ ಉದ್ದೇಶಕ್ಕಾಗಿ ಸ್ವಂತ ಜಮೀನು ಹೊಂದಿದೆಯೇ? (ಇದ್ದರೆ ಅದರ ವಿವರ ಸಮೂದಿಸುವುದು).<br><br>ಸಂಸ್ಥೆಯು ಸ್ವಂತವಾಗಿ ಹೊಂದಿರುವ ನಿವೇಶನ/ ಜಮೀನಿನ ವಿವರ. | |
| 8 | ಜಮೀನನ್ನು ಸರ್ಕಾರದಿಂದ ಲೀಸ್ ಪಡೆಯಲಾಗಿದೆಯೇ? ಲೀಸ್‌ಗೆ ಪಡೆಯಲಾಗಿದ್ದಲ್ಲಿ ಅದರ ದಾಖಲೆ ಮತ್ತು ವಿವರ. | |
| 9 | ಜಮೀನಿಗೆ ಸಂಬಂಧಿಸಿದ ಖಾತಾ ಮತ್ತು ಋಣಭಾರ ಪ್ರಮಾಣ ಪತ್ರ (ರಿಜಿಸ್ಟರ್ ಡೀಡ್) ಲಗತ್ತಿಸಲಾಗಿದೆಯೇ? | |
| 10 | ಪ್ರಸ್ತಾಪಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ನಕ್ಷೆ ಮತ್ತು ಒಟ್ಟು ಅಂದಾಜು ಪಟ್ಟಿ (ಅಧಿಕೃತ ಅಭಿಯಂತರರಿಂದ ಅನುಮೋದಿಸಲ್ಪಟ್ಟಿರಬೇಕು) | |
| 11 | ಪ್ರಸ್ತಾಪಿಸಿದ ಕಾಮಗಾರಿಗಳಿಗೆ ಸಂಸ್ಥೆಯು ಸ್ಥಳೀಯ ಸಂಸ್ಥೆಗಳಿಂದ/ಸಕ್ಷಮ ಪ್ರಾಧಿಕಾರದಿಂದ ಪರವಾನಗಿ ಪಡೆಯಲಾಗಿದೆಯೇ? (ಮಾಹಿತಿ ಲಗತ್ತಿಸುವುದು). | |
| 12 | ಕಾಮಗಾರಿಗಳ ಒಟ್ಟು ವೆಚ್ಚದಲ್ಲಿ ಸರ್ಕಾರದ ಅನುದಾನದ ಹೊರತು ಬಾಕಿ ಮೊತ್ತವನ್ನು ಭರಿಸುವ ಮೂಲಗಳ ವಿವರ. | |
| 13 | ಸಂಸ್ಥೆಯು ನಡೆಸುತ್ತಿರುವ ವಿದ್ಯಾಸಂಸ್ಥೆಗಳ ವಿವರ (ಈ ವಿದ್ಯಾಸಂಸ್ಥೆಗಳ ಬಗ್ಗೆ ಕೇಂದ್ರ/ರಾಜ್ಯ ಸರ್ಕಾರದ ಅನುಮತಿ ಪಡೆದಿರುವ ಬಗ್ಗೆ ದಾಖಲಾತಿ) ವಿದ್ಯಾರ್ಥಿ ನಿಲಯವಾಗಿದ್ದಲ್ಲಿ, ವಿದ್ಯಾರ್ಥಿ ನಿಲಯ ನಡೆಸಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಅನುಮತಿ ಪತ್ರ ಒದಗಿಸುವುದು.<br><br>ಶೈಕ್ಷಣಿಕ ಸಂಸ್ಥೆಯಾಗಿದ್ದಲ್ಲಿ, ಶೈಕ್ಷಣಿಕ ಕೋರ್ಸುಗಳನ್ನು ನಡೆಸಲು ಶಿಕ್ಷಣ ಇಲಾಖೆಯಿಂದ ಅಥವಾ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರದಿಂದ ಪಡೆದ ಅನುಮತಿ ಪತ್ರ ಒದಗಿಸುವುದು. | |

-3-

ಮೇಲ್ಕಂಡ ವಿವರಗಳಂತೆ ನಾವು/ನೀವುಗಳು ಸಮಾಜ ಕಲ್ಯಾಣ ಇಲಾಖೆ/ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯಿಂದ ನೋಂದಾಯಿತ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳ/ಶಾಲಾ ಕಾಲೇಜುಗಳ/ ಸಮುದಾಯ ಭವನಗಳ ಕಟ್ಟಡ ನಿರ್ಮಾಣಗಳಿಗೆ ನೀಡುವ ಆರ್ಥಿಕ ನೆರವು, ಅಡಿಯಲ್ಲಿ ಮೇಲ್ಕಂಡ ಉದ್ದೇಶಕ್ಕೆ ರೂ.---------- ಅನುದಾನ ಮಂಜೂರು ಮಾಡಬೇಕೆಂದು ಕೋರುತ್ತೇನೆ/ವೆ.

ಗೆಜೆಟೆಡ್ ಅಧಿಕಾರಿಗಳಿಂದ ದೃಢೀಕರಿಸಿದ ಈ ಕೆಳಕಂಡ ದಾಖಲೆಗಳನ್ನು ಸಲ್ಲಿಸುತ್ತಿದ್ದೇವೆ

1. ಸಂಸ್ಥೆಯ ನೋಂದಣಿ ಪ್ರಮಾಣ ಪತ್ರ
2. ಸಂಘ ಸಂಸ್ಥೆಗಳ ಕಾಯಿದೆ ಮತ್ತು ನಿಯಮಗಳನ್ವಯ ನೋಂದಣಿ ದೃಢೀಕರಣ ಪತ್ರ
3. ಬೈಲಾ ಪ್ರತಿ
4. ಕಾರ್ಯಕಾರಿ ಮಂಡಳಿಯ ಸದಸ್ಯರ ಪಟ್ಟಿ ಮತ್ತು ವಿಳಾಸ
5. ಸರ್ಕಾರದಿಂದ ಅನುದಾನ ಪಡೆಯುವ ಬಗ್ಗೆ ಮಂಡಳಿ ಸಭೆಯಲ್ಲಿ ಚರ್ಚಿಸಿ ತೀರ್ಮಾನಿಸಿದ ನಡವಳಿಗಳು,
6. ಸಂಸ್ಥೆಯ ಆರ್ಥಿಕ ಪರಿಸ್ಥಿತಿಯ ಬಗೆಗಂತೆ ಕಳೆದ 3 ವರ್ಷಗಳ ಲೆಕ್ಕಪತ್ರ/ಆಡಿಟ್ ವರದಿ (ಚಾರ್ಟರ್ಡ್ ಅಕೌಂಟೆಂಟ್ ದೃಢೀಕರಿಸಬೇಕು).
7. ಸ್ಥಳೀಯ ಸಂಸ್ಥೆಗಳಿಂದ ಕಟ್ಟಡದ/ನಕ್ಷೆಗೆ (ಮೂಲ ಪ್ರತಿ) ಪಡೆದ ಪರವಾನಗಿ.
8. ಅಧಿಕೃತ ಅಭಿಯಂತರರಿಂದ ದೃಢೀಕರಿಸಿದ ಅಂದಾಜು ಪಟ್ಟಿಯ ಪ್ರತಿ.
9. ಸಂಸ್ಥೆಯ ಹೆಸರಿನಲ್ಲಿ ಜಮೀನು ಹೊಂದಿರುವ ಬಗ್ಗೆ ಖಾತಾ ಪ್ರತಿ ಹಾಗೂ ಈವರೆಗೆ ಕಂದಾಯ ಪಾವತಿಸಿರುವ ಬಗ್ಗೆ ರಶೀದಿ ಪ್ರತಿಗಳು.

1. ಸಂಸ್ಥೆಯು ನಡೆಸುವ ವಿದ್ಯಾರ್ಥಿ ನಿಲಯದ ಕಟ್ಟಡ/ಶಾಲಾ-ಕಾಲೇಜು ಕಟ್ಟಡ/ಸಮುದಾಯ ಭವನ ಕಟ್ಟಡ ನಿರ್ಮಾಣಗಳಿಗೆ ಆರ್ಥಿಕ ನೆರವು ನೀಡುವ ಸಂಬಂಧ ಸರ್ಕಾರದ ಅನುದಾನ ಪಡೆಯುವ ಸಲುವಾಗಿ ಮೇಲೆ ತಿಳಿಸಿದ ವಿವರಗಳು ಸತ್ಯವಾಗಿರುತ್ತದೆಯೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

2. ನೋಂದಾಯಿತ ಧಾರ್ಮಿಕ ಸಂಸ್ಥೆಗಳು/ಸಂಘ-ಸಂಸ್ಥೆಗಳು/ಸ್ವಯಂ ಸೇವಾ ಸಂಸ್ಥೆಗಳು/ ಟ್ರಸ್ಟ್‌ಗಳು ನಡೆಸುವ ವಿದ್ಯಾರ್ಥಿ ನಿಲಯಗಳು, ಶಾಲಾ ಕಾಲೇಜುಗಳು ಹಾಗೂ ಸಮುದಾಯ ಭವನಗಳ ಕಟ್ಟಡ ನಿರ್ಮಾಣಗಳಿಗೆ ಆರ್ಥಿಕ ನೆರವು ನೀಡುವ ಅನುದಾನವನ್ನು ಕಲ್ಪಿಸಲು ನಿಗದಿತ ಉದ್ದೇಶಕ್ಕೆ ಉಪಯೋಗಿಸಲಾಗುವುದೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

3. ಮಂಜೂರಾದ ನಂತರ ಅನುಬಂಧ-3 ರಂತೆ ಕರಾರು ಪತ್ರವನ್ನು ಸಲ್ಲಿಸಲಾಗುವುದು.

ದಿನಾಂಕ:

ತಮ್ಮ ವಿಶ್ವಾಸಿ,

ಸ್ಥಳ :

(ಅಧ್ಯಕ್ಷರು)

## ಕಛೇರಿ ಉಪಯೋಗಕ್ಕಾಗಿ

1) ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿ ಇವರ ವರದಿಗಳು ಮತ್ತು ಶಿಫಾರಸ್ಸು . . . . . .

ಸಹಿ ಮತ್ತು ಪದನಾಮ

2) ಜಿಲ್ಲಾಧಿಕಾರಿಗಳ ಶಿಫಾರಸ್ಸು . . . . . . .

ಸಹಿ ಮತ್ತು ಪದನಾಮ

(ಈ ಅರ್ಜಿಯನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ಸಲ್ಲಿಸುವುದು)

ಅನುಬಂಧ 3

ಕರಾರು ಪತ್ರ

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿಗಳ ಸಹಿತ ----------
---------- ಜಿಲ್ಲೆ ಇವರಿಗೆ ----------------------------------------

ಸಂಸ್ಥೆಯ ಅಧ್ಯಕ್ಷರು/ಕಾರ್ಯದರ್ಶಿ ----------------------------------------

ಆದ ನಾನು/ನಾವು ---------------------------------------- ಜಿಲ್ಲೆಯ ----------------

ತಾಲ್ಲೂಕಿನ---------------------- ಗ್ರಾಮದಲ್ಲಿ ನಮ್ಮ ಸಂಸ್ಥೆಯ ವತಿಯಿಂದ ನಡೆಸುವ ವಿದ್ಯಾರ್ಥಿ ನಿಲಯ/ಶಾಲಾ-ಕಾಲೇಜು ಕಟ್ಟಡ/ಸಮುದಾಯ ಭವನದ ಕಟ್ಟಡ/ಇತರೆ ಕಾಮಗಾರಿಗಳಿಗಾಗಿ ರೂ.---------- ಲಕ್ಷಗಳ ಅನುದಾನವನ್ನು ಸರ್ಕಾರದಿಂದ ಬಿಡುಗಡೆ ಮಾಡಲು ಅರ್ಜಿ ಸಲ್ಲಿಸಿದ್ದು, ಅನುದಾನ ಮಂಜೂರು ಮಾಡುವುದಕ್ಕೆ ಸಂಬಂಧಿಸಿದ ನಿಯಮಗಳನ್ವಯ ಈ ಕೆಳಕಂಡಂತೆ ಷರತ್ತುಗಳನ್ನು ಒಪ್ಪಿಕೊಂಡು ಬರೆದುಕೊಟ್ಟಿರುವ ಮುಚ್ಚಳಿಕೆ ಪತ್ರ.

| | |
|---|---|
| 1. | ಮಂಜೂರು ಮಾಡಿರುವ ಅನುದಾನವನ್ನು ಉದ್ದೇಶಿತ ಕಾರ್ಯಕ್ಕೆ ಮಾತ್ರ ಉಪಯೋಗಿಸಲಾಗುವುದು |
| 2. | ಸರ್ಕಾರದಿಂದ ಪಡೆಯುವ ಅನುದಾನ ಹೊರತುಪಡಿಸಿ ಕಟ್ಟಡ/ಕಾಮಗಾರಿಯ ಅಂದಾಜು ವೆಚ್ಚದ ಬಾಕಿ ಮೊಬಲಗನ್ನು ಸ್ವಂತ ಭರಿಸಿ ಕಟ್ಟಡ/ಕಾಮಗಾರಿಯನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸಲಾಗುವುದು |
| 3. | ಸರ್ಕಾರದ ಅನುದಾನ ಪಡೆದು ನಮ್ಮ ಸಂಸ್ಥೆಯಿಂದ ನಡೆಸುವ ವಿದ್ಯಾರ್ಥಿ ನಿಲಯ/ಶಾಲಾ-ಕಾಲೇಜು/ಸಮುದಾಯ ಭವನ ಕಟ್ಟಡವನ್ನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನಾಂಗದವರು ಉಪಯೋಗಿಸಲು ಬಯಸಿದಲ್ಲಿ ರಿಯಾಯಿತಿ ದರದಲ್ಲಿ ನೀಡಲು ಆದ್ಯತೆ ನೀಡಲಾಗುವುದು |
| 4. | ಸರ್ಕಾರದಿಂದ ಅನುದಾನ ಪಡೆದು ನಡೆಸುವ ವಿದ್ಯಾರ್ಥಿ ನಿಲಯ/ಶಾಲಾ-ಕಾಲೇಜು/ಸಮುದಾಯ ಭವನಗಳ ಕಟ್ಟಡವನ್ನು ಯಾವುದೇ ರಾಜಕೀಯ ಚಟುವಟಿಕೆಗಳಿಗೆ ಉಪಯೋಗಿಸುವುದಿಲ್ಲ. |
| 5. | ಒಂದು ವೇಳೆ ನಮ್ಮ ಸಂಸ್ಥೆಯು ನಡೆಸುವ ವಿದ್ಯಾರ್ಥಿ ನಿಲಯ/ಶಾಲಾ-ಕಾಲೇಜು/ಸಮುದಾಯ ಭವನಗಳ ಕಟ್ಟಡವನ್ನು ಸತತವಾಗಿ ಒಂದು ವರ್ಷದ ಕಾಲ ನಮ್ಮ ಸಂಸ್ಥೆಯು ಉಪಯೋಗಿಸದೇ ಇದ್ದಲ್ಲಿ ಸದರಿ ಕಟ್ಟಡವನ್ನು ಸಮಾಜ ಕಲ್ಯಾಣ ಇಲಾಖೆಯ ಸ್ವಾಧೀನಕ್ಕೆ ಬಿಟ್ಟು ಕೊಡಲು ಒಪ್ಪಿರುತ್ತೇವೆ. |
| 6. | ಎರಡು ವರ್ಷದ ಒಳಗೆ ಅಥವಾ ಅವಶ್ಯವಾಗಿ ಕಾಲಾವಕಾಶವನ್ನು ವಿಸ್ತರಿಸಿದ ಅವಧಿಯೊಳಗೆ ಕಟ್ಟಡ/ಕಾಮಗಾರಿಯನ್ನು ಪೂರ್ಣಗೊಳಿಸದೇ ಇದ್ದಲ್ಲಿ ಸರ್ಕಾರದಿಂದ ಬಿಡುಗಡೆಯಾದ ಅನುದಾನವನ್ನು ಶೇಕಡ 10% ರಷ್ಟು ಬಡ್ಡಿ ಸಹಿತ ಸರ್ಕಾರಕ್ಕೆ ವಾಪಸ್ಸು ಮಾಡಲು ಒಪ್ಪಿರುತ್ತೇನೆ |

---2

| | |
|---|---|
| 7. | ಈ ಕರಾರಿನ ಯಾವುದೇ ಷರತ್ತು ಉಲ್ಲಂಘಿಸಿದಲ್ಲಿ ಸರ್ಕಾರವು ಸಂಸ್ಥೆಯ ವಿರುದ್ಧ ಕ್ರಮ ತೆಗೆದುಕೊಳ್ಳಬಹುದಾಗಿರುತ್ತದೆ |
| 8. | ಈ ಕುರಿತು ಏನಾದರೂ ವ್ಯಾಜ್ಯ ಉದ್ಭವಿಸಿದ್ದಲ್ಲಿ ಸರ್ಕಾರದ ತೀರ್ಮಾನವೇ ಅಂತಿಮವಾಗಿರುತ್ತದೆ |

ಈ ಕರಾರನ್ನು -------------------- ವಾರ -------------------- ನೇ ತಾರೀಖು --------------
ವರ್ಷ ದಂದು ಸಹಿ ಮಾಡಲಾಗಿದೆ.

.....

ಸಹಿ:

1) ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿ - ಹೆಸರು ಮತ್ತು ವಿಳಾಸ

2) ನೋಂದಾಯಿತ ಧಾರ್ಮಿಕ ಸಂಸ್ಥೆ/ಸಂಘ-ಸಂಸ್ಥೆಯ ಅಧ್ಯಕ್ಷರು ಮತ್ತು ಕಾರ್ಯದರ್ಶಿ - - ಹೆಸರು ಮತ್ತು ವಿಳಾಸ

3) ಸಾಕ್ಷಿದಾರರು :- ಹೆಸರು ಮತ್ತು ವಿಳಾಸ

(1)

(2)

ಸಂಖ್ಯೆ:ಸಕಇ 112 ಎಸ್‌ಎಲ್‌ಪಿ 2018

ಬೆಂಗಳೂರು, ದಿನಾಂಕ:[illegible]-03-2019

## ತಿದ್ದುಪಡಿ

ಸರ್ಕಾರದ ಆದೇಶ ಸಂಖ್ಯೆ: ಸಕಇ 112 ಎಸ್‌ಎಲ್‌ಪಿ 2018 ದಿನಾಂ:24-12-2018 ರ ಆದೇಶ ಭಾಗದ ಎರಡನೇ ಪ್ಯಾರಾದಲ್ಲಿ ನಮೂದಿಸಿರುವ "2018-19 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಗುರುತಿಸಲ್ಪಟ್ಟ ದೇವದಾಸಿಯರ ಗಂಡು ಮಕ್ಕಳು ಇತರ ಜಾತಿಯ ಹುಡುಗಿಯನ್ನು ವಿವಾಹವಾದಲ್ಲಿ ರೂ.3.00 ಲಕ್ಷ ಹಾಗೂ ದೇವದಾಸಿಯರ ಹೆಣ್ಣು ಮಕ್ಕಳು ಇತರೆ ಜಾತಿಯ ಹುಡುಗನನ್ನು ವಿವಾಹವಾದ ಪ್ರಕರಣಗಳಲ್ಲಿ ರೂ.5.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲು ಸರ್ಕಾರವು ಆದೇಶಿಸಿದೆ" ಎಂಬುದರ ಬದಲಾಗಿ "2018-19 ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ದೇವದಾಸಿಯರ ಗಂಡು ಮಕ್ಕಳು ಸ್ವಜಾತಿ/ಇತರೆ ಜಾತಿಯ ಹುಡುಗಿಯನ್ನು ವಿವಾಹವಾದಲ್ಲಿ ರೂ.3.00 ಲಕ್ಷ ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ದೇವದಾಸಿಯರ ಹೆಣ್ಣು ಮಕ್ಕಳು ಸ್ವಜಾತಿ/ಇತರ ಜಾತಿಯ ಹುಡುಗನನ್ನು ವಿವಾಹವಾದ ಪ್ರಕರಣಗಳಲ್ಲಿ ರೂ.5.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲು ಸರ್ಕಾರವು ಆದೇಶಿಸಿದೆ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ರಘುಪತಿ[illegible])
ಸರ್ಕಾರ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

1. ಮಹಾಲೇಖಪಾಲರು, (ಎ&ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು
4. ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5. ನಿರ್ದೇಶಕರು, ಪಿಎಂಐ ವಿಭಾಗ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ
6. ಎಲ್ಲಾ ಜಂಟಿ/ಉಪ ನಿರ್ದೇಶಕರು,/ಸಹಾಯಕ ನಿರ್ದೇಶಕರು (ಗ್ರೇಡ್+-1 & 2), ಸಮಾಜ ಕಲ್ಯಾಣ ಇಲಾಖೆ. (ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ)
7. ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು
8. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು

ಇವರಿಗೆ:-

1. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ
2. ಸರ್ಕಾರದ ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
3. ಸರ್ಕಾರದ ಅಧೀನ ಕಾರ್ಯದರ್ಶಿ-2 & 3, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು

Scanned with CamScanner

(11)

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ ಧನ ಹೆಚ್ಚಿಸುವ ಮತ್ತು ದೇವದಾಸಿಯರ ಮಕ್ಕಳ ಮದುವೆಗೆ ಪ್ರೋತ್ಸಾಹಧನವನ್ನು ನೀಡುವ ಬಗ್ಗೆ.

ಓದಲಾಗಿದೆ:
1. ಸರ್ಕಾರದ ಆದೇಶ ಸಂಖ್ಯೆ: ಸಕಇ 200 ಎಸ್‌ಎಲ್‌ಪಿ 2015 ದಿನಾಂಕ. 29-07-2015.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 149 ಎಸ್‌ಎಲ್‌ಪಿ 2017 ದಿನಾಂಕ:17-04-2017
3. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಸಕಇ 200 ಎಸ್‌ಎಲ್‌ಪಿ 2015 ದಿನಾಂಕ:02-01-2017
4. ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಮಂತ್ರಾಲಯ, ಭಾರತ ಸರ್ಕಾರ. ನವದೆಹಲಿ ಇವರ ಪತ್ರ ಸಂಖ್ಯೆ: 11014/1/2017-ಪಿ.ಸಿ.ಆರ್.(ಡೆಸ್ಕ್) ದಿನಾಂಕ:14-09-2017
5. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂಖ್ಯೆ: ಸಕಇ/ ಸಿಎಸ್-2/ ಸಿಆರ್-01/ 2018-19 ದಿನಾಂಕ: 24-04-2018
6. ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕಇ/ ಸಿಎಸ್-1/ಸಿಆರ್-79/2017-18 ದಿನಾಂಕ:23-11-2017

1309/1817
28/12/18

ಅ.ನಿ.
ಆಡಳಿತ

*****

ಪ್ರಸ್ತಾವನೆ:-

ಉ.ನಿ.
ಸಮನ್ವಯ

ಅಂತರ್ಜಾತಿ ವಿವಾಹ ಯೋಜನೆ ಅಡಿಯಲ್ಲಿ ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ:29-07-2015 ರ ಸರ್ಕಾರದ ಆದೇಶದಲ್ಲಿ ಪ್ರೋತ್ಸಾಹಧನವನ್ನು ಹೆಚ್ಚಿಸಲಾಗಿದೆ. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್ಜಾತಿ ವಿವಾಹವಾದಲ್ಲಿ ರೂ.2.00 ಲಕ್ಷ ಪ್ರೋತ್ಸಾಹ ಧನ ನೀಡುವ ಬಗ್ಗೆ ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ:17-04-2017 ರಲ್ಲಿ ಆದೇಶಿಸಲಾಗಿರುತ್ತದೆ. ಸದರಿ ವಿಷಯ ಕುರಿತು ಕೆಲವು ಸ್ಪಷ್ಟೀಕರಣಗಳನ್ನು ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ:02-01-2017 ರ ತಿದ್ದುಪಡಿಯಲ್ಲಿ ನೀಡಲಾಗಿದೆ.

ಪ್ರಸ್ತುತ 2018-19ನೇ ಸಾಲಿನ (ಫೆಬ್ರವರಿ) ಆಯವ್ಯಯದಲ್ಲಿ ಅಂತರ್ಜಾತಿ ವಿವಾಹ ಯೋಜನೆ ಅಡಿಯಲ್ಲಿ ಪ್ರೋತ್ಸಾಹ ಧನ ನೀಡುವ ಬಗ್ಗೆ ಪ್ರಸ್ತಾಪಿಸಲಾಗಿರುತ್ತದೆ. ಇದಲ್ಲದೇ, ಮೇಲೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ದಿನಾಂಕ: 14-09-2017 ಪತ್ರದಲ್ಲಿ ಭಾರತ ಸರ್ಕಾರ ಪ್ರೋತ್ಸಾಹಧನವನ್ನು ರೂ.2.50 ಲಕ್ಷಗಳಿಗೆ ಹೆಚ್ಚಿಸಿರುವುದರಿಂದ, ರಾಜ್ಯ ಸರ್ಕಾರವು ಸಹ ಇದೇ ರೀತಿ ಹೆಚ್ಚಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರಿ ಆದೇಶ ಸಂಖ್ಯೆ: ಸಕಇ 112 ಎಸ್‌ಎಲ್‌ಪಿ 2018, ಬೆಂಗಳೂರು, ದಿನಾಂಕ:24-12-2018

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಸಲುವಾಗಿ ಪರಿಶಿಷ್ಟ ಜಾತಿ ಯುವಕ ಬೇರೆ ಜಾತಿಯ ಯುವತಿಯನ್ನು ಮದುವೆ ಮಾಡಿಕೊಂಡರೆ, ಕ್ರ.ಸಂ.1 ರ

--2

Scanned with CamScanner

ಸರ್ಕಾರದ ಆದೇಶದನ್ವಯ ಹಾಲಿ ನೀಡುತ್ತಿರುವ ಪ್ರೋತ್ಸಾಹಧನ ಮೊತ್ತ ರೂ.2.00 ಲಕ್ಷಗಳನ್ನು ರೂ.2.50 ಲಕ್ಷಗಳಿಗೆ ಹೆಚ್ಚಿಸಲಾಗಿದೆ. ಪರಿಶಿಷ್ಟ ಜಾತಿಯ ಮಹಿಳೆಯರು ಬೇರೆ ಜಾತಿಯ ಪುರುಷನನ್ನು ಮದುವೆ ಮಾಡಿಕೊಂಡರೆ ಅದೇ ಆದೇಶದಲ್ಲಿ ಹಾಲಿ ನೀಡುತ್ತಿರುವ ರೂ.3.00 ಲಕ್ಷಗಳ ಪ್ರೋತ್ಸಾಹಧನವನ್ನು ಯಾವುದೇ ಬದಲಾವಣೆ ಇಲ್ಲದೇ ಮುಂದುವರೆಸಲಾಗಿದೆ.

2018-19ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಿಂದ ಗುರ್ತಿಸಲ್ಪಟ್ಟ ದೇವದಾಸಿಯರ ಗಂಡು ಮಕ್ಕಳು ಇತರ ಜಾತಿ ಹುಡುಗಿಯನ್ನು ವಿವಾಹವಾದಲ್ಲಿ ರೂ.3.00 ಲಕ್ಷ ಹಾಗೂ ದೇವದಾಸಿಯರ ಹೆಣ್ಣು ಮಕ್ಕಳು ಇತರ ಜಾತಿಯ ಹುಡುಗನನ್ನು ವಿವಾಹವಾದ ಪ್ರಕರಣಗಳಲ್ಲಿ ರೂ.5.00 ಲಕ್ಷಗಳ ಪ್ರೋತ್ಸಾಹಧನವನ್ನು ನೀಡಲು ಸರ್ಕಾರವು ಆದೇಶಿಸಿದೆ.

ಮೇಲ್ಕಂಡ ಪ್ರೋತ್ಸಾಹಧನ ನೀಡಿಕೆ ಬಗ್ಗೆ ಕ್ರ.ಸಂ.1. 2 ಮತ್ತು 3ರಲ್ಲಿನ ಆದೇಶಗಳಲ್ಲಿರುವ ಷರತ್ತುಗಳನ್ನು ಮಾರ್ಪಡಿಸಿ. ಈ ಕೆಳಕಂಡಂತೆ ಪರಿಷ್ಕೃತ ಷರತ್ತುಗಳನ್ನು ವಿಧಿಸಿ ಆದೇಶಿಸಲಾಗಿದೆ.

<u>ಷರತ್ತುಗಳು:-</u>

1. ಪತ್ನಿ ಅಥವಾ ಪತ್ನಿ ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿ ಪಟ್ಟಿಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿದವರಾಗಿರಬೇಕು ಮತ್ತು ಕರ್ನಾಟಕ ರಾಜ್ಯದ ಸಕ್ಷಮ ಪ್ರಾಧಿಕಾರಿಗಳಿಂದ ಜಾತಿ ಪ್ರಮಾಣ ಪತ್ರ ಪಡೆದಿರತಕ್ಕದ್ದು. ದಂಪತಿಗಳು ಕರ್ನಾಟಕ ರಾಜ್ಯದ ಖಾಯಂ ವಾಸಿಯಾಗಿರಬೇಕು. ಆದರೆ ಇತರ ರಾಜ್ಯದ ಪುರುಷ/ಮಹಿಳೆಯನ್ನು ಮದುವೆಯಾದಲ್ಲಿ ಪತಿ/ಪತ್ನಿ ಇಬ್ಬರಲ್ಲಿ ಒಬ್ಬರು ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿಗೆ ಸೇರಿರಬೇಕು ಮತ್ತು ಖಾಯಂ ವಾಸಿಯಾಗಿರಬೇಕು.
2. ಗುರ್ತಿಸಲ್ಪಟ್ಟ ದೇವದಾಸಿಯವರ ಮಕ್ಕಳನ್ನು ಗುರ್ತಿಸಲ್ಪಟ್ಟ ಇನ್ನೊಬ್ಬ ದೇವದಾಸಿಯವರ ಮಕ್ಕಳು ಮದುವೆ ಮಾಡಿಕೊಂಡರೆ ಪ್ರೋತ್ಸಾಹಧನ ಪಡೆಯಲು ಅರ್ಹರಿರುವುದಿಲ್ಲ.
3. ಅಂತರ್ಜಾತಿ ವಿವಾಹ, ದೇವದಾಸಿಯವರ ಮಕ್ಕಳ ವಿವಾಹ ಮತ್ತು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಒಳ ಸಮುದಾಯಗಳ ವಿವಾಹ ಪ್ರಕರಣಗಳಲ್ಲಿ ಪ್ರೋತ್ಸಾಹ ಧನದಲ್ಲಿ ಶೇ.50% ರ ಮೊತ್ತವನ್ನು RTGS/NEFT ಮುಖಾಂತರ ಒಂದೇ ಕಂತಿನಲ್ಲಿ ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ಜಮೆ ಮಾಡುವುದು. ಉಳಿದ ಶೇ.50%ರ ಮೊತ್ತವನ್ನು ಪತ್ನಿ-ಪತಿ ಇಬ್ಬರ ಹೆಸರಿನಲ್ಲಿ 3 ವರ್ಷಗಳ ಮುಂಚೆ ಈ ಮೊತ್ತವನ್ನು ನಗದೀಕರಿಸಿಕೊಳ್ಳಲು ಅವಕಾಶವಿರುವುದಿಲ್ಲ ಎಂಬ ಷರತ್ತಿನೊಂದಿಗೆ ಸರ್ಕಾರ/ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ 3 ವರ್ಷಗಳ ಅವಧಿಗೆ ಸೀಮಿತಗೊಳಿಸಿ ನಿಶ್ಚಿತ ಠೇವಣಿಯನ್ನು (Fixed Deposit) ಇಡತಕ್ಕದ್ದು.
4. ನಿಶ್ಚಿತ ಠೇವಣಿ ಅವಧಿಯೊಳಗೆ ಪತಿ ನಿಧನರಾಗಿದ್ದಲ್ಲಿ ಪತ್ನಿ ಹೆಸರಿಗೆ ಮತ್ತು ಪತ್ನಿ ನಿಧನರಾದಲ್ಲಿ, ಮಕ್ಕಳಿದ್ದರೆ, ಅವರ ಮಕ್ಕಳ ಹೆಸರಿಗೆ, ವರ್ಗಾಯಿಸುವುದು. ಮಕ್ಕಳು ಇಲ್ಲದಿದ್ದಲ್ಲಿ ಪತಿ ಹೆಸರಿಗೆ ವರ್ಗಾಯಿಸುವುದು.
5. ಅಂತರ್ಜಾತಿ ವಿವಾಹವಾಗಿ ಈ ಸೌಲಭ್ಯ ಪಡೆಯುವ ಯುವತಿಯರ ವಯೋಮಿತಿ ಕನಿಷ್ಠ 18 ವರ್ಷದಿಂದ ಗರಿಷ್ಠ 42 ವರ್ಷಗಳ ಒಳಗಿರತಕ್ಕದ್ದು.



Scanned with CamScanner

6. ಯುವಕರು ಕನಿಷ್ಠ 21 ವರ್ಷದಿಂದ 45 ವರ್ಷ ವಯೋಮಿತಿಯೊಳಗಿರತಕ್ಕದ್ದು.
7. ದಂಪತಿಗಳ ಒಟ್ಟಾರೆ ವಾರ್ಷಿಕ ಆದಾಯವು ರೂ. 5.00 ಲಕ್ಷಗಳ ಒಳಗಿರತಕ್ಕದ್ದು. ಈ ಆದಾಯ ಮಿತಿ ಕ್ರ.ಸಂ.2ರ ಸರ್ಕಾರದ ಆದೇಶದಲ್ಲಿನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್ಜಾತಿ ವಿವಾಹವಾದ ಪ್ರಕರಣಗಳಿಗೆ ಸಹ ಅನ್ವಯಿಸುತ್ತದೆ.
8. ಸಮಾಜ ಕಲ್ಯಾಣ ಇಲಾಖೆಯ ವೆಬ್‌ಸೈಟ್ www.sw.kar.nic.in ವಿಳಾಸದಲ್ಲಿ ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಧನದ ಆನ್‌ಲೈನ್ ತಂತ್ರಾಂಶದಲ್ಲಿ ಅರ್ಜಿದಾರರು ಅರ್ಜಿ ಸಲ್ಲಿಸುವುದು.
9. ಎಲ್ಲಾ ಅಂತರ್ಜಾತಿ ವಿವಾಹ ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಒಳ ಸಮುದಾಯಗಳ ವಿವಾಹ ಪ್ರಕರಣಗಳಲ್ಲಿ ದಂಪತಿಗಳು ಮಠ/ಮಂದಿರ ಮತ್ತು ಯಾವುದೇ ಸ್ಥಳದಲ್ಲಿ ಮದುವೆಯಾದರು. ಮದುವೆಯಾದ ದಿನದಿಂದ 18 ತಿಂಗಳ ಒಳಗೆ ವಿವಾಹದ ಬಗ್ಗೆ ಉಪನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಣಿ ಮಾಡಿಕೊಂಡು ಪ್ರೋತ್ಸಾಹಧನಕ್ಕಾಗಿ ಅರ್ಜಿ ಸಲ್ಲಿಸತಕ್ಕದ್ದು. ಈ ಅವಧಿ ಮೀರಿದ ನಂತರ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸುವಂತಿಲ್ಲ.
10. ಆನ್‌ಲೈನ್‌ನಲ್ಲಿ ಸ್ವೀಕೃತವಾಗಿರುವ ಅರ್ಜಿ ಪರಿಶೀಲಿಸಿ ಅನುದಾನ ಲಭ್ಯತೆ ಮತ್ತು ಅರ್ಜಿಯ ಅರ್ಹತೆ ಹಾಗೂ ಜೇಷ್ಠತೆಯ ಆಧಾರದಲ್ಲಿ ಪ್ರೋತ್ಸಾಹಧನವನ್ನು ಜಿಲ್ಲಾ/ತಾಲ್ಲೂಕು ಮಟ್ಟದ ಅಧಿಕಾರಿಗಳು ಮಂಜೂರು ಮಾಡುವುದು.
11. ಅಂತರ್ಜಾತಿ ವಿವಾಹ ಯೋಜನೆ ಅಡಿಯಲ್ಲಿ ಜೀವನದಲ್ಲಿ ಗಂಡು/ಹೆಣ್ಣು ಒಮ್ಮೆ ಮಾತ್ರ ಪ್ರೋತ್ಸಾಹಧನ ಸೌಲಭ್ಯ ಪಡೆಯಲು ಅರ್ಹರು. (2ನೇ ಬಾರಿ ಮದುವೆಯಾದಲ್ಲಿ ಅರ್ಹರಿರುವುದಿಲ್ಲ).
12. ಅಂತರ್ಜಾತಿ ವಿವಾಹ ಯೋಜನೆ ಅಡಿ ಪ್ರೋತ್ಸಾಹ ಧನ ಪಡೆದವರು ಸರಳ ವಿವಾಹ ಕಾರ್ಯಕ್ರಮದಡಿ ಧನ ಸಹಾಯ ಪಡೆಯಲು ಅರ್ಹರಿರುವುದಿಲ್ಲ.
13. ಅಂತರ್ಜಾತಿ ವಿವಾಹ ಯೋಜನೆ ಅಡಿ ಮದುವೆಯಾದವರು ನಿರುದ್ಯೋಗಿ ಆಗಿದ್ದಲ್ಲಿ ಸ್ವಯಂ ಉದ್ಯೋಗ ಇತ್ಯಾದಿ ಯೋಜನೆಗಳಲ್ಲಿ ಇವರುಗಳಿಗೆ ಆದ್ಯತೆ ನೀಡುವುದು.
14. ರಾಜ್ಯ ಸರ್ಕಾರದಿಂದ ಈ ಯೋಜನೆ ಅಡಿ ಪ್ರೋತ್ಸಾಹ ಧನ ಪಡೆದವರು ಡಾ:ಅಂಬೇಡ್ಕರ್ ಫೌಂಡೇಶನ್, ನವದೆಹಲಿ ಇವರಿಂದ ಮತ್ತೆ ಪ್ರೋತ್ಸಾಹಧನ ಪಡೆಯಲು ಅರ್ಹರಿರುವುದಿಲ್ಲ.
15. 2018-19ನೇ ಸಾಲಿನ ಆಯವ್ಯಯ ಘೋಷಣೆಯಾಗಿರುವ ಕಾರಣ ದಿನಾಂಕ:01-04-2018 ರಿಂದ ಅಂತರ್ಜಾತಿ ವಿವಾಹವಾದ ದಂಪತಿಗಳು ಮೇಲ್ಕಂಡ ಪ್ರೋತ್ಸಾಹ ಧನ ಪಡೆಯಲು ಅರ್ಹರಿರುತ್ತಾರೆ.
16. ಪರಿಶಿಷ್ಟ ಜಾತಿಯ ಪುರುಷ/ಮಹಿಳೆಯು ಅಂತರ್ ಧರ್ಮಿಯ (Religion) ವಿವಾಹವಾದ ಪ್ರಕರಣಗಳನ್ನು ಪ್ರೋತ್ಸಾಹ ಧನಕ್ಕಾಗಿ ಪರಿಗಣಿಸುವಂತಿಲ್ಲ.

--4

Scanned with CamScanner

ಇದಕ್ಕೆ ತಗಲುವ ವೆಚ್ಚವನ್ನು ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಧನ ರಾಜ್ಯವಲಯ ಲೆಕ್ಕ ಶೀರ್ಷಿಕೆ: 2225-01-277-0-67 ತಾಲ್ಲೂಕು ಪಂಚಾಯತ್ ಕೇಂದ್ರ ಪುರಸ್ಕೃತ ಯೋಜನೆ ಲೆಕ್ಕ ಶೀರ್ಷಿಕೆ:2225-00-101-0-05 ಹಾಗೂ ರಾಜ್ಯ ವಲಯ ಪರಿಶಿಷ್ಟ ಜಾತಿ ಉಪಯೋಜನ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಲೆಕ್ಕ ಶೀರ್ಷಿಕೆ: 2225-01-796-0-02 ರಡಿ ಒದಗಿಸುವ ಅನುದಾನದಲ್ಲಿ ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 565 ವೆಚ್ಚ-3/2018 ದಿನಾಂಕ:14-09-2018 ರಂದು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

24/12

(ಗೋಪಾಲ್)
ಸರ್ಕಾರದ ಜಂಟಿ ಕಾರ್ಯದರ್ಶಿ.
ಸಮಾಜ ಕಲ್ಯಾಣ ಇಲಾಖೆ.

ಗೆ:-

1) ಮಹಾಲೇಖಪಾಲರು, (ಎ&ಇ. ಲೆಕ್ಕಪರಿಶೋಧನೆ-1 ಮತ್ತು 2). ಕರ್ನಾಟಕ. ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು
6) ಸರ್ಕಾರದ ಪ್ರಧಾನ ಕಾರ್ಯದರ್ಶಿ ರವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
7) ಸರ್ಕಾರದ ಉಪ ಕಾರ್ಯದರ್ಶಿ ರವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
8) ಸರ್ಕಾರದ ಅಧೀನ ಕಾರ್ಯದರ್ಶಿ-2 & 3, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು
9) ನಿರ್ದೇಶಕರು, ಪಿಎಂಐ ವಿಭಾಗ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
10) ಎಲ್ಲಾ ಜಂಟಿ/ಉಪನಿರ್ದೇಶಕರು/ಸಹಾಯಕ ನಿರ್ದೇಶಕರು (ಗ್ರೇಡ್-1 & 2), ಸಮಾಜ ಕಲ್ಯಾಣ ಇಲಾಖೆ (ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ)
11) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

Scanned with CamScanner

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪರಿಶಿಷ್ಟ ಪಂಗಡದ ಸಮುದಾಯದವರು ಅಂತರ್ಜಾತಿ ವಿವಾಹವಾದಲ್ಲಿ ಪ್ರೋತ್ಸಾಹಧನ ಹೆಚ್ಚಿಸುವ ಕುರಿತು.

ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಸಕಇ 231 ಪವಯೋ 2018 ದಿನಾಂಕ: 07.02.2019.

2)ಸರ್ಕಾರದ ಆದೇಶ ಸಂಖ್ಯೆ:112 ಎಸ್ ಎಲ್ ಪಿ 2018 ದಿನಾಂಕ:07.02.2019

3)ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ : ಪವಕನಿ:ಗಿಲುಯೋ:ಸಿಆರ್-06:2018-19 ದಿನಾಂಕ:26.08.2020.

************

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(1) ರ ಆದೇಶದಲ್ಲಿ ಅಂತರ್ಜಾತಿ ವಿವಾಹವಾಗುವ ಪರಿಶಿಷ್ಟ ಪಂಗಡದ ಸಮುದಾಯದವರಿಗೆ ಪ್ರೋತ್ಸಾಹಧನವನ್ನು ನೀಡಲು ಕೆಲವು ಷರತ್ತುಗಳನ್ನು ವಿಧಿಸಿ ಮಂಜೂರಾತಿ ನೀಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ.(2) ರಲ್ಲಿ ಪರಿಶಿಷ್ಟ ಜಾತಿ ಸಮುದಾಯದವರಿಗೆ ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಧನವನ್ನು ಹೆಚ್ಚಿಸಿ ಪರಿಷ್ಕೃತ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ.(3) ರಲ್ಲಿ ನಿರ್ದೇಶಕರು. ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ರವರು ಪರಿಶಿಷ್ಟ ಪಂಗಡ ಸಮುದಾಯದ ಅಂತರ್ಜಾತಿ ವಿವಾಹವಕ್ಕೆ ಪ್ರೋತ್ಸಾಹ ಧನವನ್ನು ಹೆಚ್ಚಿಸಿ ಷರತ್ತುಗಳೊಂದಿಗೆ ಪರಿಷ್ಕೃತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 231 ಪವಯೋ 2018, ಬೆಂಗಳೂರು, ದಿನಾಂಕ;13.11.2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಪರಿಶಿಷ್ಟ ಪಂಗಡದ ಸಮುದಾಯದವರಿಗೆ ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹಧನ ಹೆಚ್ಚಿಸುವ ಕುರಿತು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

1. ಪರಿಶಿಷ್ಟ ಪಂಗಡದ ಪುರುಷರು ಬೇರೆ ಜಾತಿಯ ಹೆಣ್ಣು ಮಕ್ಕಳನ್ನು ಮದುವೆ ಆದಲ್ಲಿ ರೂ.2.50ಲಕ್ಷಗಳ ಪ್ರೋತ್ಸಾಹ ಧನವನ್ನು ನೀಡುವುದು.
2. ಅಂತರ್ಜಾತಿ ವಿವಾಹವಾದ ಪರಿಶಿಷ್ಟ ಪಂಗಡದ ದಂಪತಿಗಳು ಮದುವೆಯಾದ ದಿನದಿಂದ 18 ತಿಂಗಳೊಳಗಾಗಿ ವಿವಾಹದ ಬಗ್ಗೆ ಉಪ ನೋಂದಣಾಧಿಕಾರಿಗಳ ಕಛೇರಿಯಲ್ಲಿ ನೋಂದಣಿ ಮಾಡಿಕೊಂಡು ಪ್ರೋತ್ಸಾಹ ಧನಕ್ಕಾಗಿ ಅರ್ಜಿ ಸಲ್ಲಿಸತಕ್ಕದ್ದು. ಈ ಅವಧಿ ಮೀರಿದ ನಂತರ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸುವಂತಿಲ್ಲ.
3. ಇತರೆ ಸವರ್ಣಿಯ ಜಾತಿಯ ಹೆಣ್ಣು, ಪರಿಶಿಷ್ಟ ಪಂಗಡದ ಪುರುಷರನ್ನು ವಿವಾಹವಾದಲ್ಲಿ ಒಂದೇ ಕಂತಿನಲ್ಲಿ ರೂ.2.50ಲಕ್ಷಗಳಲ್ಲಿ ರೂ.1.25ಲಕ್ಷಗಳನ್ನು ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ಆರ್ ಟಿ ಜಿ ಎಸ್ ಮೂಲಕ ನೀಡುವುದು ಮತ್ತು ರೂ.1.25ಲಕ್ಷಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ನಿಶ್ಚಿತ ಠೇವಣಿಯನ್ನು ( Fixed deposit) ದಂಪತಿಗಳ ಹೆಸರಿನಲ್ಲಿ ಇಡತಕ್ಕದ್ದು.
4. ಇತರೆ ಪರಿಶಿಷ್ಟ ಪಂಗಡದ ಹೆಣ್ಣು, ಇತರೆ ಸವರ್ಣಿಯ ಜಾತಿಯ ಪುರುಷರನ್ನು ವಿವಾಹವಾದಲ್ಲಿ ಒಂದೇ ಕಂತಿನಲ್ಲಿ ರೂ.3.00ಲಕ್ಷಗಳಲ್ಲಿ ರೂ1.50ಲಕ್ಷಗಳನ್ನು ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ಆರ್ ಟಿ ಜಿ ಎಸ್ ಮೂಲಕ ನೀಡುವುದು ಮತ್ತು ರೂ.1.50ಲಕ್ಷಗಳನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ನಿಶ್ಚಿತ ಠೇವಣಿಯನ್ನು ( Fixed deposit) ದಂಪತಿಗಳ ಹೆಸರಿನಲ್ಲಿ ಇಡತಕ್ಕದ್ದು, ಮೂರು ವರ್ಷಗಳ ಮುಂಚೆ ಈ ಮೊತ್ತವನ್ನು ನಗದೀಕರಿಸಿಕೊಳ್ಳಲು ಅವಕಾಶವಿರುವುದಿಲ್ಲ.

5. ಪತಿ ಅಥವಾ ಪತ್ನಿ ಕರ್ನಾಟಕ ರಾಜ್ಯದ ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರುವ ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು. ಮತ್ತು ಕರ್ನಾಟಕ ರಾಜ್ಯದ ಸಕ್ಷಮ ಪ್ರಾಧಿಕಾರಗಳಿಂದ ಜಾತಿ ಪ್ರಮಾಣ ಪತ್ರ ಪಡೆದಿರತಕ್ಕದ್ದು. ದಂಪತಿಗಳು ಕರ್ನಾಟಕ ರಾಜ್ಯದ ಖಾಯಂ ವಾಸಿಯಾಗಿರಬೇಕು. ಆದರೆ ಇತರೆ ರಾಜ್ಯದ ಪುರುಷ/ಮಹಿಳೆಯನ್ನು ಮದುವೆಯಾದಲ್ಲಿ ಪತಿ/ಪತ್ನಿ ಇಬ್ಬರಲ್ಲಿ ಒಬ್ಬರು ಕರ್ನಾಟಕ ರಾಜ್ಯದ ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು ಮತ್ತು ಖಾಯಂ ವಾಸಿಯಾಗಿರಬೇಕು.
6. ದಂಪತಿಗಳ ವಾರ್ಷಿಕ ಆದಾಯವು ರೂ.5.00 ಲಕ್ಷಗಳ ಒಳಗಿರತಕ್ಕದ್ದು.
7. ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ವೆಬ್‌ಸೈಟ್ www.tw.kar.nic.in ವಿಳಾಸದಲ್ಲಿ ಅಂತರ್ಜಾತಿ ವಿವಾಹ ಪ್ರೋತ್ಸಾಹಧನಕ್ಕಾಗಿ ಆನ್‌ಲೈನ್ ತಂತ್ರಾಂಶದಲ್ಲಿ ಅರ್ಜಿದಾರರು ಅರ್ಜಿ ಸಲ್ಲಿಸುವುದು.

ಈ ಯೋಜನೆಯಡಿ ತಗುಲುವ ವೆಚ್ಚವನ್ನು ಜಿಲ್ಲಾವಲಯ ಲೆಕ್ಕಶೀರ್ಷಿಕೆ:2225-00-102-0-38ರಡಿ (ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ ನಿರ್ವಹಣೆ, ಸಹಾಯಧನ ಮತ್ತು ಪ್ರೋತ್ಸಾಹಧನ) ಅನುದಾನವನ್ನು ಒದಗಿಸಿಕೊಂಡು ಅಂತರ್ಜಾತಿ ವಿವಾಹ ಪ್ರೋತ್ಸಾಹಧನಕ್ಕೆ ಮಂಜೂರಾತಿ ನೀಡಿದೆ.

ಮೇಲೆ ಉಲ್ಲೇಖ (1)ರ ಸರ್ಕಾರದ ಆದೇಶದ ಕ್ರ.ಸಂ:4, 5 & 7ರ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಟಿ ಎಫ್ ಪಿ 2020 ದಿನಾಂಕ:30.05.2020ರಲ್ಲಿ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ರಾಜಶ್ರೀ ಹೆಚ್.ಕುಲಕರ್ಣಿ),
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಇವರಿಗೆ:

1. ಮಹಾಲೇಖಪಾಲರು(ಎ&ಇ,ಲೆಕ್ಕಪರಿಶೋಧನೆ-1 ಮತ್ತು 2) ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಪರಿಶಿಷ್ಟ ವರ್ಗಗಳ ನಿರ್ದೇಶನಾಲಯ, ಬೆಂಗಳೂರು.
3. ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳು.
4. ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
5. ಖಜಾನಾಧಿಕಾರಿ, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
6. ಎಲ್ಲಾ ಜಂಟಿ ನಿರ್ದೇಶಕರು/ಎಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು/ಯೋಜನಾ ಸಮನ್ವಯಾಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆ/ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
7. ಶಾಖಾ ರಕ್ಷ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿ:

1. ಮಾನ್ಯ ಸಮಾಜ ಕಲ್ಯಾಣ ಇಲಾಖಾ ಸಚಿವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಕಾರ್ಯದರ್ಶಿ.
3. ಸರ್ಕಾರದ ಉಪ ಕಾರ್ಯದರ್ಶಿ-2, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಸಹಾಯಕರು.

******

ವಿಷಯ: ಪರಿಶಿಷ್ಟ ಪಂಗಡ ಸಮುದಾಯದವರು ಅಂತರ್‌ಜಾತಿ ವಿವಾಹವಾದಲ್ಲಿ ಪ್ರೋತ್ಸಾಹ ಧನ ನೀಡುವ ಕುರಿತು.

ಓದಲಾಗಿದೆ: ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಇವರ ಏಕ ಕಡತ ಸಂಖ್ಯೆ: ಪವಕನಿ: ಬುಉಯೋ: ಸಿಆರ್-04/ 2018-19, ದಿನಾಂಕ:29.06.2018.

********

ಪ್ರಸ್ತಾವನೆ:

ಅಂತರ್ ಜಾತಿ ವಿವಾಹವಾಗುವ ಪರಿಶಿಷ್ಟ ಜಾತಿ ಸಮುದಾಯದವರಿಗೆ ಪ್ರೋತ್ಸಾಹ ಧನವನ್ನು ಮಂಜೂರು ಮಾಡಲಾಗುತ್ತಿದೆ. ಆದರೆ ಪರಿಶಿಷ್ಟ ಪಂಗಡದವರು ಇತರೆ ಸವರ್ಣೀಯ ಜಾತಿಯ ಪುರುಷ ಅಥವಾ ಮಹಿಳೆಯನ್ನು ಅಂತರ್‌ಜಾತಿ ವಿವಾಹವಾದಲ್ಲಿ ಪ್ರೋತ್ಸಾಹ ಧನ ಮಂಜೂರು ಮಾಡುವ ಕಾರ್ಯಕ್ರಮ ಇರುವುದಿಲ್ಲ. ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಪರಿಶಿಷ್ಟ ಪಂಗಡದ ಯುವಕ/ಯುವತಿಯರು ಸಹ ಇತರ ಸವರ್ಣೀಯ ಜಾತಿಯ ಯುವಕ/ಯುವತಿಯರನ್ನು ವಿವಾಹವಾಗುತ್ತಿದ್ದು, ಪರಿಶಿಷ್ಟ ಜಾತಿಯ ಸಮುದಾಯದವರಿಗೆ ಇರುವಂತೆ ಪರಿಶಿಷ್ಟ ಪಂಗಡದವರಿಗೂ ಸಹ ಅಂತರ್‌ಜಾತಿ ವಿವಾಹ ಕಾರ್ಯಕ್ರಮದಡಿ ನೀಡುವ ಪ್ರೋತ್ಸಾಹ ಧನವನ್ನು ಮಂಜೂರು ಮಾಡುವಂತೆ ಅಂತರ್ಜಾತಿ ವಿವಾಹವಾದ ಪರಿಶಿಷ್ಟ ಪಂಗಡದ ದಂಪತಿಗಳು, ಪರಿಶಿಷ್ಟ ಪಂಗಡಗಳ ವಿವಿಧ ಸಂಘಟನೆಗಳು ಹಾಗೂ ಜಿಲ್ಲಾಮಟ್ಟದ ಇಲಾಖಾಧಿಕಾರಿಗಳಿಂದ ಇಲಾಖೆಯ ಪ್ರಗತಿ ಪರಿಶೀಲನಾ ಸಭೆಯಲ್ಲಿ, ಕೇಂದ್ರ ಕಛೇರಿಗೆ ಭೇಟಿ ನೀಡಿ ಹಾಗೂ ದೂರವಾಣಿ ಮೂಲಕ ಮನವಿಗಳು ಸ್ವೀಕೃತವಾಗುತ್ತಿರುತ್ತವೆ. ಆದ್ದರಿಂದ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಪರಿಶಿಷ್ಟ ಪಂಗಡದ ಪುರುಷರು ಇತರೆ ಜಾತಿಯ ಹೆಣ್ಣು ಮಕ್ಕಳನ್ನು ಅಂತರ್ಜಾತಿ ವಿವಾಹವಾದಲ್ಲಿ ಪ್ರೋತ್ಸಾಹ ಧನವನ್ನು ಮಂಜೂರು ಮಾಡುವ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸುವಂತೆ ಮೇಲೆ ಓದಲಾದ ದಿನಾಂಕ:29.06.2018ರ ಏಕ ಕಡತದಲ್ಲಿ ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರಿ ಆದೇಶ ಸಂಖ್ಯೆ:ಸಕಇ 231 ಪವಯೋ 2018 ದಿನಾಂಕ:07.02.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಂತರ್ ಜಾತಿ ವಿವಾಹವಾಗುವ ಪರಿಶಿಷ್ಟ ಜಾತಿಯವರಿಗೆ ಪ್ರೋತ್ಸಾಹ ಧನವನ್ನು ನೀಡುತ್ತಿರುವಂತೆ ಪರಿಶಿಷ್ಟ ಪಂಗಡದ ಸಮುದಾಯದವರಿಗೂ ಪ್ರೋತ್ಸಾಹ ಧನವನ್ನು ನೀಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಿದೆ.

ಷರತ್ತುಗಳು:

1. ಪರಿಶಿಷ್ಟ ಪಂಗಡದ ಪುರುಷರು ಇತರೆ ಜಾತಿಯ ಹೆಣ್ಣು ಮಕ್ಕಳನ್ನು ವಿವಾಹವಾದಲ್ಲಿ ರೂ.2,00,000/- (ಎರಡು ಲಕ್ಷ ರೂಪಾಯಿಗಳು ಮಾತ್ರ) ಹಾಗೂ ಪರಿಶಿಷ್ಟ ವರ್ಗದ ಹೆಣ್ಣುಮಕ್ಕಳನ್ನು ಇತರೆ ಜಾತಿಯ ಪುರುಷರು ವಿವಾಹವಾದಲ್ಲಿ ರೂ.3,00,000/- (ಮೂರು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಒಂದು ಬಾರಿಗೆ ಮಾತ್ರ ನೀಡುವುದು.
2. ಇತರೆ ಸವರ್ಣೀಯ ಜಾತಿಯ ಹೆಣ್ಣು, ಪರಿಶಿಷ್ಟ ಪಂಗಡದ ಪುರುಷರನ್ನು ವಿವಾಹವಾದಲ್ಲಿ ರೂ.2.00 ಲಕ್ಷಗಳನ್ನು ಮಂಜೂರು ಮಾಡುವುದು.- ಪ್ರೋತ್ಸಾಹ ಧನ ಮಂಜೂರಾದ ವರ್ಷದಲ್ಲಿ ಮೊದಲನೇ ಕಂತಾಗಿ ರೂ.1.00 ಲಕ್ಷಗಳಲ್ಲಿ ರೂ.50,000/-ಗಳನ್ನು ಬ್ಯಾಂಕ್ ಚೆಕ್ ಮುಖಾಂತರ ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ನೀಡುವುದು ಮತ್ತು ರೂ.50,000/-ಗಳನ್ನು ರಾಷ್ಟ್ರೀಯ ಉಳಿತಾಯ ಪತ್ರದ ರೂಪದಲ್ಲಿ (ಎನ್.ಎಸ್.ಸಿ) ಜಂಟಿಯಾಗಿ ಪತಿ-ಪತ್ನಿ ಇಬ್ಬರ ಹೆಸರಿನಲ್ಲಿ ನೀಡುವುದು. ಮೊದಲನೇ ಕಂತಿನ ಹಣ ನೀಡಿದ ದಿನದಿಂದ ಒಂದು ವರ್ಷಕ್ಕೆ ಎರಡನೇ ಕಂತಾಗಿ ರೂ.1.00 ಲಕ್ಷಗಳಲ್ಲಿ ರೂ.50,000/-- ಗಳನ್ನು ಬ್ಯಾಂಕ್ ಚೆಕ್ ಮುಖಾಂತರ ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ನೀಡುವುದು ಮತ್ತು ರೂ.50,000/-ಗಳನ್ನು ರಾಷ್ಟ್ರೀಯ ಉಳಿತಾಯ ಪತ್ರದ ರೂಪದಲ್ಲಿ (ಎನ್.ಎಸ್.ಸಿ) ಜಂಟಿಯಾಗಿ ಪತಿ-ಪತ್ನಿ ಇಬ್ಬರ ಹೆಸರಿನಲ್ಲಿ ನೀಡುವುದು.

--2

3. ಪರಿಶಿಷ್ಟ ಪಂಗಡದ ಹೆಣ್ಣು ಇತರೆ ಸವರ್ಣೀಯ ಜಾತಿಯ ಪುರುಷನನ್ನು ವಿವಾಹವಾದಲ್ಲಿ ರೂ.3.00 ಲಕ್ಷಗಳನ್ನು ಮಂಜೂರು ಮಾಡುವುದು. ಪ್ರೋತ್ಸಾಹ ಧನ ಮಂಜೂರಾದ ವರ್ಷದಲ್ಲಿ ಮೊದಲನೇ ಕಂತಾಗಿ ರೂ.1.50 ಲಕ್ಷಗಳಲ್ಲಿ ರೂ.75,000/-ಗಳನ್ನು ಬ್ಯಾಂಕ್ ಚೆಕ್ ಮುಖಾಂತರ ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ನೀಡುವುದು ಮತ್ತು ರೂ.75,000/-ಗಳನ್ನು ರಾಷ್ಟ್ರೀಯ ಉಳಿತಾಯ ಪತ್ರದ ರೂಪದಲ್ಲಿ (ಎನ್.ಎಸ್.ಸಿ) ಜಂಟಿಯಾಗಿ ಪತಿ-ಪತ್ನಿ ಇಬ್ಬರ ಹೆಸರಿನಲ್ಲಿ ನೀಡುವುದು. ಮೊದಲನೇ ಕಂತಿನ ಹಣ ನೀಡಿದ ದಿನದಿಂದ ಒಂದು ವರ್ಷಕ್ಕೆ ಎರಡನೇ ಕಂತಾಗಿ ರೂ.1.50 ಲಕ್ಷಗಳಲ್ಲಿ ರೂ.75,000/-ಗಳನ್ನು ಬ್ಯಾಂಕ್ ಚೆಕ್ ಮುಖಾಂತರ ದಂಪತಿಗಳ ಹೆಸರಿನಲ್ಲಿ ಇರುವ ಜಂಟಿ ಖಾತೆಗೆ ನೀಡುವುದು ಮತ್ತು ರೂ.75,000/-ಗಳನ್ನು ರಾಷ್ಟ್ರೀಯ ಉಳಿತಾಯ ಪತ್ರದ ರೂಪದಲ್ಲಿ (ಎನ್.ಎಸ್.ಸಿ) ಜಂಟಿಯಾಗಿ ಪತಿ-ಪತ್ನಿ ಇಬ್ಬರ ಹೆಸರಿನಲ್ಲಿ ನೀಡುವುದು.

4. ಒಟ್ಟು ಮೊತ್ತ ನೀಡುವ ಪೂರ್ವದಲ್ಲಿ ಪತಿ ನಿಧನರಾಗಿದ್ದಲ್ಲಿ ಉಳಿದ ಹಣವನ್ನು ಪತ್ನಿ ಹೆಸರಿಗೆ ರಾಷ್ಟ್ರೀಯ ಉಳಿತಾಯ ಪತ್ರದ (ಎನ್.ಎಸ್.ಸಿ) ರೂಪದಲ್ಲಿ ನೀಡುವುದು. ಒಂದು ವೇಳೆ ಪತ್ನಿ ನಿಧನರಾಗಿದ್ದಲ್ಲಿ ಉಳಿದ ಹಣವನ್ನು ಅವರ ಮಕ್ಕಳ ಹೆಸರಿಗೆ ರಾಷ್ಟ್ರೀಯ ಉಳಿತಾಯ ಪತ್ರದ ರೂಪದಲ್ಲಿ (ಎನ್.ಎಸ್.ಸಿ) ನೀಡುವುದು, ಮಕ್ಕಳು ಇಲ್ಲದಿದ್ದಲ್ಲಿ ಉಳಿದ ಹಣ ನೀಡಲು ಬರುವುದಿಲ್ಲ.

5. ದಂಪತಿಗಳ ವಯೋಮಿತಿ:- ಹೆಣ್ಣಿಗೆ ಕನಿಷ್ಠ 18 ವರ್ಷದಿಂದ ಗರಿಷ್ಠ 42 ವರ್ಷ, ಗಂಡಿಗೆ ಕನಿಷ್ಠ 21 ವರ್ಷದಿಂದ 45 ವರ್ಷ ಇರುವವರು ಮಾತ್ರ ಅರ್ಹರು.

6. ಪತಿ-ಪತ್ನಿ ಇಬ್ಬರ ವಾರ್ಷಿಕ ಆದಾಯ ಸೇರಿ ರೂ.50,000/-ಗಳಗೆ ಒಳಪಟ್ಟಿರಬೇಕು. ಉಪ ನೋಂದಣಾಧಿಕಾರಿಗಳು ನೀಡಿರುವ ಮೂಲ ಅಂತರ್ಜಾತಿ ವಿವಾಹ ಪ್ರಮಾಣ ಪತ್ರಗಳನ್ನು ಜಂಟಿ/ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ / ಯೋಜನಾ ಸಮನ್ವಾಧಿಕಾರಿಗಳು, ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ / ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಪಡೆದು ಪ್ರೋತ್ಸಾಹ ಧನ ಮಂಜೂರು ಮಾಡತಕ್ಕದ್ದು.

7. ಸದರಿ ಯೋಜನೆಯಡಿ ಪ್ರಯೋಜನ ಪಡೆಯುವ ದಂಪತಿಗಳು ಸ್ವಂತ ಜಿಲ್ಲೆಯಲ್ಲಿ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.

ಈ ಸಂಬಂಧ ತಗಲುವ ವೆಚ್ಚವನ್ನು 2018-19ನೇ ಸಾಲಿನಲ್ಲಿ 2225-02-794-0-05ರಡಿ ನಿಗಧಿಪಡಿಕೊಳ್ಳುವ ಅನುದಾನದಲ್ಲಿ ಭರಿಸುವುದು. 2019-20ನೇ ಸಾಲಿನಿಂದ ಜಿಲ್ಲಾವಲಯ ಲೆಕ್ಕ ಶೀರ್ಷಿಕೆ 2225-00-102-0-38 ರಡಿ (ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯ ನಿರ್ವಹಣೆ, ಸಹಾಯಧನ ಮತ್ತು ಪ್ರೋತ್ಸಾಹ ಧನ) ಅನುದಾನ ನಿಗಧಿಪಡಿಸಿಕೊಳ್ಳುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 04 ಟಿಎಫ್‌ಪಿ 2018, ದಿ:08.01.2019 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ

(ರಾಜಶ್ರೀ ಹೆಚ್.ಕುಲಕರ್ಣಿ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

ಇವರಿಗೆ:

1. ಮಹಾಲೇಖಪಾಲರು, (ಎ ಮತ್ತು ಇ) (ಲೆಕ್ಕಪರಿಶೋಧನೆ-2)ಕರ್ನಾಟಕ, ಬೆಂಗಳೂರು.
2. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು.

--3

3. ಎಲ್ಲಾ ಜಿಲ್ಲಾಧಿಕಾರಿಗಳು.
4. ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
5. ಖಜಾನಾಧಿಕಾರಿ, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
6. ಉಪ ನಿರ್ದೇಶಕರು, ಖಜಾನೆ ಗಣಕ ಜಾಲ, ಖನಿಜಭವನ, ರೇಸ್ ಕೋರ್ಸ್ ರಸ್ತೆ, ಬೆಂಗಳೂರು.
7. ಎಲ್ಲಾ ಜಂಟಿ/ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
8. ಎಲ್ಲಾ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ/ಯೋಜನಾ ಸಮನ್ವಯಾಧಿಕಾರಿ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
9. ಎಲ್ಲಾ ಸಹಾಯಕ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
10. ಎಲ್ಲಾ ತಾಲ್ಲೂಕು ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
11. ಶಾಖಾ ರಕ್ಷ ಕಡತ/ಹೆಚ್ಚುವರಿ ಪ್ರತಿ.

(Items 3–10: ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರ ಮೂಲಕ)

ಪ್ರತಿ:-

1. ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಕಾರ್ಯದರ್ಶಿ.
3. ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಸಹಾಯಕರು.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಮರು ಮದುವೆಯಾಗುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿಧವೆಯರಿಗೆ ಪ್ರೋತ್ಸಾಹ ಧನ ನೀಡುವ ಬಗ್ಗೆ.

ಓದಲಾಗಿದೆ:
1) 2017-18ನೇ ಸಾಲಿನಲ್ಲಿ ಆಯವ್ಯಯ ಭಾಷಣದ ಘೋಷಣೆ ಕಂಡಿಕೆ (180)
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಏಕ ಕಡತ ಸಂಖ್ಯೆ: ಸಕಇ/ಸಿ.ಎಸ್-2/ಸಿ.ಆರ್-01/ವಿ.ವಿ./2017-18. ದಿನಾಂಕ: 03-04-2017
3) ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ಬೆಂಗಳೂರು ಇವರ ಏಕ ಕಡತ ಸಂಖ್ಯೆ:ಪವಕನಿ/ಗಿಉಯೋ/ಸಿಆರ್-02/2017-18, ದಿನಾಂಕ:14-04-2017

******

ಪ್ರಸ್ತಾವನೆ:-

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ 2017-18ನೇ ಸಾಲಿನಲ್ಲಿ ಆಯವ್ಯಯ ಭಾಷಣದ ಘೋಷಣೆ ಕಂಡಿಕೆ (180) ರನ್ವಯ "ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ವಿಧವೆಯರು ಮರು ವಿವಾಹವಾದಲ್ಲಿ ಅವರಿಗೆ ರೂ. 3.00 ಲಕ್ಷಗಳ ಪ್ರೋತ್ಸಾಹ ಧನ ನೀಡಲಾಗುವುದು" ಎಂದು ಘೋಷಿಸಲಾಗಿದೆ.

ಮೇಲೆ ಕ್ರಮಾಂಕ (2) ಮತ್ತು (3) ರಲ್ಲಿ ಓದಲಾದ ದಿನಾಂಕ: 03-04-2017 ಮತ್ತು 14-04-2017 ರಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಮತ್ತು ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ ಬೆಂಗಳೂರು ರವರ ಏಕ ಕಡತ ಪ್ರಸ್ತಾವನೆಗಳಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿಧವೆಯರ ಮನೋಸ್ಥೈರ್ಯವನ್ನು ಬಲಪಡಿಸಿ ಅವರಿಗೆ ಜೀವನೋಪಾಯದಲ್ಲಿ ನೆರವಾಗುವ ನಿಟ್ಟಿನಲ್ಲಿ ಪುನರ್ ವಿವಾಹವಾಗುವ ವಿಧವೆಯರಿಗೆ ರೂ. 3.00 ಲಕ್ಷಗಳ ಪ್ರೋತ್ಸಾಹ ಧನ ನೀಡಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ರವರಿಂದ ಯಾವುದೇ ಪ್ರಸ್ತಾವನೆ ಸ್ವೀಕೃತಗೊಂಡಿರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 148 ಎಸ್‌ಎಲ್‌ಪಿ 2017, ಬೆಂಗಳೂರು, ದಿನಾಂಕ:17-04-2017**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ವಿಧವೆಯರು ಮರು ವಿವಾಹವಾದಲ್ಲಿ ಅವರಿಗೆ ರೂ. 3.00 ಲಕ್ಷಗಳ ಪ್ರೋತ್ಸಾಹ ಧನ ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಷರತ್ತುಗಳು:-

1. ಮರು ವಿವಾಹವಾಗುವ ವಿಧವೆಯರು ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು.

----2

2. ಈ ಸೌಲಭ್ಯ ಪಡೆಯುವ ವಿಧವೆಯ ವಯೋಮಿತಿ ಕನಿಷ್ಠ 18 ವರ್ಷದಿಂದ ಗರಿಷ್ಠ 42 ವರ್ಷಗಳಾಗಿದ್ದು. ವರನಿಗೆ ಕನಿಷ್ಠ 21 ವರ್ಷದಿಂದ ಗರಿಷ್ಠ 45 ವರ್ಷ ವಯಸ್ಸು ಆಗಿರತಕ್ಕದ್ದು.
3. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಮದುವೆಯಾದ ಒಂದು ವರ್ಷದ ಅವಧಿಯೊಳಗೆ ಪ್ರೋತ್ಸಾಹ ಧನಕ್ಕಾಗಿ ಅರ್ಜಿ ಸಲ್ಲಿಸತಕ್ಕದ್ದು.
4. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಪ್ರೋತ್ಸಾಹ ಧನಕ್ಕಾಗಿ ಅರ್ಜಿ ಸಲ್ಲಿಸುವ ಮುಂಚೆ ಉಪ ನೋಂದಾಣಾಧಿಕಾರಿಗಳ ಕಛೇರಿಯಲ್ಲಿ ವಿವಾಹದ ಬಗ್ಗೆ ನೋಂದಾಯಿಸಿರಬೇಕು.
5. ಈ ಸೌಲಭ್ಯವನ್ನು ಒಮ್ಮೆ ಮಾತ್ರ ಪಡೆಯಬಹುದಾಗಿದೆ.
6. ಪುನರ್ ವಿವಾಹವಾದ ವಿಧವೆಯು ವಾಸ್ತವ್ಯವಿರುವ ಜಿಲ್ಲೆಯಲ್ಲಿ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.
7. ವಿಧವಾ ಮಹಿಳೆಯು ಅಂತರ್ ಜಾತಿ ವಿವಾಹವಾದಲ್ಲಿ. ಸದರಿ ಯೋಜನೆಯಲ್ಲಿ ಪ್ರೋತ್ಸಾಹ ಧನ ಪಡೆದಿದ್ದಲ್ಲಿ. ಅಂತರ್ ಜಾತಿ ವಿವಾಹ ಯೋಜನೆಯಡಿ ಪ್ರೋತ್ಸಾಹ ಧನ ಪಡೆಯಲು ಅರ್ಹರಿರುವುದಿಲ್ಲ.
8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಸರಳ ವಿವಾಹ ಕಾರ್ಯಕ್ರಮದಡಿ ಮದುವೆಯಾದಲ್ಲಿ. ಅಂತಹವರುಗಳು ಈ ಯೋಜನೆಯಡಿಯಲ್ಲಿ ಸರಳ ವಿವಾಹದ ರೂ.50.000/- ಹೊರತುಪಡಿಸಿ ಉಳಿದ ರೂ.2.50 ಲಕ್ಷ ಪ್ರೋತ್ಸಾಹ ಧನವನ್ನು ಪಡೆಯಲು ಅರ್ಹರಿರುತ್ತಾರೆ.
9. ಮಂಜೂರಾದ ಪ್ರೋತ್ಸಾಹಧನದ ಹಣವನ್ನು ಪುನರ್ ವಿವಾಹವಾದ ವಿಧವೆಯ ಹೆಸರಿನ್ಲಲಿರುವ ಬ್ಯಾಂಕ್ ಖಾತೆಗೆ NEFT ಮೂಲಕ ಜಮಾ ಮಾಡುವುದು.

<u>ಅನುಷ್ಠಾನ ವಿಧಾನ:</u>

1. ಈ ಆದೇಶವು ಹೊರಡಿಸಿದ ದಿನಾಂಕದ ಬಳಿಕ ಪುನರ್ ವಿವಾಹವಾದ ವಿಧವೆಯರು ಈ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.
2. ಈ ಸೌಲಭ್ಯದ ಬಗ್ಗೆ ಆಯಾ ಜಿಲ್ಲಾ ಮಟ್ಟದಲ್ಲಿ ಜಂಟಿ / ಉಪ ನಿರ್ದೇಶಕರು. ಸಮಾಜ ಕಲ್ಯಾಣ ಇಲಾಖೆ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣ ಅಧಿಕಾರಿ ಇವರು ವ್ಯಾಪಕ ಪ್ರಚಾರವನ್ನು ನೀಡಿ ಅರ್ಜಿಗಳನ್ನು ಆಹ್ವಾನಿಸಬೇಕು
3. ಸೂಕ್ತ ದಾಖಲೆಗಳೊಂದಿಗೆ ಸಲ್ಲಿಕೆಯಾದ ಅರ್ಜಿಗಳನ್ನು ಪರಿಶೀಲಿಸಿ ಅಗತ್ಯವಿರುವ ಅನುದಾನದ ಬಗ್ಗೆ ಬೇಡಿಕೆಯನ್ನು ಆಯುಕ್ತರ ಕಛೇರಿ. ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು/ನಿರ್ದೇಶಕರು. ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ. ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು
4. ಅನುದಾನ ಲಭ್ಯತೆಯ ಆಧಾರದಲ್ಲಿ ರೂ. 3.00ಲಕ್ಷ ಪ್ರೋತ್ಸಾಹ ಧನವನ್ನು ಒಂದೇ ಕಂತಿನಲ್ಲಿ ಮರು ವಿವಾಹವಾದ ವಿಧವೆಯ ಬ್ಯಾಂಕ್ ಖಾತೆಗೆ NEFT ಮೂಲಕ ಜಿಲ್ಲಾ ಮಟ್ಟದ ಜಂಟಿ/ ಉಪ ನಿರ್ದೇಶಕರು. ಸಮಾಜ ಕಲ್ಯಾಣ ಇಲಾಖೆ/ ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣ ಅಧಿಕಾರಿ ಇವರು ಜಮಾ ಮಾಡುವುದು.

---3

ಇದಕ್ಕೆ ತಗಲುವ ವೆಚ್ಚವನ್ನು 2017-18ನೇ ಸಾಲಿನ ಸಮಾಜ ಕಲ್ಯಾಣ ಇಲಾಖೆ ರಾಜಸ್ವ ಲೆಕ್ಕಶೀರ್ಷಿಕೆ: 2225-01-796-0-02 (ಪರಿಶಿಷ್ಟ ಜಾತಿಯವರಿಗಾಗಿ ವಿವಿಧ ಅಭಿವೃದ್ಧಿ ಯೋಜನೆ) ರಡಿ ಮತ್ತು ಲೆಕ್ಕಶೀರ್ಷಿಕೆ 2225-01-794-0-05 (ಪರಿಶಿಷ್ಟ ಪಂಗಡದವರಿಗಾಗಿ ವಿವಿಧ ಅಭಿವೃದ್ಧಿ ಯೋಜನೆ)ರಡಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಘಟನೋತ್ತರ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

(ಗಿರಿಜಮ್ಮ) 18/7/2017
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

ಇವರಿಗೆ:-

1) ಮಹಾಲೇಖಪಾಲರು. (ಎ&ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು
6) ಸರ್ಕಾರದ ಕಾರ್ಯದರ್ಶಿ ರವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
7) ಸರ್ಕಾರದ ಉಪ ಕಾರ್ಯದರ್ಶಿ-1 ರವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
8) ಸರ್ಕಾರದ ಅಧೀನ ಕಾರ್ಯದರ್ಶಿ-2 & 3, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು
9) ನಿರ್ದೇಶಕರು, ಪಿಎಂಐ ವಿಭಾಗ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
10) ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು } ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ
11) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

*****

ಕರ್ನಾಟಕ ಸರ್ಕಾರ

ಸಂಖ್ಯೆ: ಸಕಇ 262 ಎಸ್‌ಎಲ್‌ಪಿ 2015

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 24-01-2018.

**ಸೇರ್ಪಡೆ**

ಸರ್ಕಾರದ ಆದೇಶ ಸಂಖ್ಯೆ: ಸಕಇ 262 ಎಸ್‌ಎಲ್‌ಪಿ 2015, ದಿನಾಂಕ: 11-08-2015 ರ ಈ ಕೆಳಕಂಡ ಅಂಶಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

| ಈಗ ಇರುವ ಷರತ್ತು | ಬದಲಾಗಿ ಓದಿಕೊಳ್ಳುವ ಷರತ್ತು |
|---|---|
| ಷರತ್ತಿನ ಕ್ರಮ ಸಂಖ್ಯೆ: (8) ಪ್ರೋತ್ಸಾಹ ಧನ ಪಡೆಯಲು ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಸರಳ ವಿವಾಹವಾದ 3 ತಿಂಗಳೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಗೆ ಅಂಚೆಯಾಗಿ ನಿಗದಿತ ನಮೂನೆಯಲ್ಲಿ ಮತ್ತು ಅಗತ್ಯ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು. | ಷರತ್ತಿನ ಕ್ರಮ ಸಂಖ್ಯೆ: (8) ಪ್ರೋತ್ಸಾಹ ಧನ ಪಡೆಯಲು ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಸರಳ ವಿವಾಹವಾದ 1 ವರ್ಷದೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಗೆ ಅಂಚೆಯಾಗಿ ನಿಗದಿತ ನಮೂನೆಯಲ್ಲಿ ಮತ್ತು ಅಗತ್ಯ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಎಂ.ಸುಮಿತ್ರ)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

ಗೆ:-

1) ಮಹಾಲೇಖಪಾಲರು, (ಎ.ಇ., ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು

ಕರ್ನಾಟಕ ಸರ್ಕಾರ

ಸಂಖ್ಯೆ: ಸಕಇ 262 ಎಸ್‌ಎಲ್‌ಪಿ 2015

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ: 17-09-2016.

**ಸೇರ್ಪಡೆ**

ಸರ್ಕಾರದ ಆದೇಶ ಸಂಖ್ಯೆ: ಸಕಇ 262 ಎಸ್‌ಎಲ್‌ಪಿ 2015, ದಿನಾಂಕ: 11-08-2015 ರ ಈ ಕೆಳಕಂಡ ಅಂಶಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

1) ಷರತ್ತಿನ ಕ್ರಮ ಸಂಖ್ಯೆ: (6) ರ ಬದಲಾಗಿ
"ಖಾಸಗಿ ಟ್ರಸ್ಟ್‌ಗಳು (ಮಠ ಇತ್ಯಾದಿ), ದೇವಸ್ಥಾನದ ಟ್ರಸ್ಟ್‌ಗಳು, ಸಂಘ -ಸಂಸ್ಥೆಗಳು ನಡೆಸುವ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಅಥವಾ ಸಮಾಜ ಸೇವಕರು / ವ್ಯಕ್ತಿಗಳು ನಡೆಸುವ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ವಿವಾಹವಾದಲ್ಲಿ ಮಾತ್ರ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ. ವಿವಾಹಿತ ದಂಪತಿಗಳು ಉಪನೋಂದಣಿ ಕಛೇರಿಯಲ್ಲಿ ನೋಂದಣಿಯಾಗಿರತಕ್ಕದ್ದು".

2) ಸಾಮೂಹಿಕ ವಿವಾಹಗಳನ್ನು ಏರ್ಪಡಿಸುವ ಆಯೋಜಕರುಗಳಿಗೆ ಪ್ರೋತ್ಸಾಹ ಹಾಗೂ ವಿವಾಹದ ಖರ್ಚು-ವೆಚ್ಚಗಳಿಗಾಗಿ ಪ್ರತಿ ಜೋಡಿಗೆ ರೂ. 2,000/-ಗಳನ್ನು ನೀಡುವುದು

3) ಕ್ರಮ ಸಂಖ್ಯೆ: 15ರ ಷರತ್ತನ್ನು ಕೈಬಿಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

(ಗಿರಿಜಮ್ಮ) 17/9/2016
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

ಗೆ:-

1) ಮಹಾಲೇಖಪಾಲರು, (ಎ&ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು.
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು

6) ಸರ್ಕಾರದ ಕಾರ್ಯದರ್ಶಿ ರವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
7) ಸರ್ಕಾರದ ಉಪ ಕಾರ್ಯದರ್ಶಿ-1 ರವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು
8) ಸರ್ಕಾರದ ಅಧೀನ ಕಾರ್ಯದರ್ಶಿ-2 & 3, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು
9) ಸರ್ಕಾರದ ಅಧೀನ ಕಾರ್ಯದರ್ಶಿ (ವೆಚ್ಚ-3), ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು
10) ನಿರ್ದೇಶಕರು, ಪಿಎಂಐ ವಿಭಾಗ, ಯೋಜನೆ ಕಾರ್ಯಕ್ರಮ ಸಂಯೋಜನ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
11) ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು
12) ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು } ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ
13) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

[illegible]

ವಿಷಯ: 2015-16ನೇ ಸಾಲಿನ ಆಯವ್ಯಯ [illegible] ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ದಂಪತಿಗಳಿಗೆ ಸರಳ ವಿವಾಹ ಯೋಜನೆಯಡಿ ಆರ್ಥಿಕ ನೆರವು ಮಂಜೂರು ಮಾಡುವ ಕುರಿತು.

ಓದಲಾಗಿದೆ:
1) ಸನ್ಮಾನ್ಯ ಮುಖ್ಯಮಂತ್ರಿಗಳು ದಿನಾಂಕ: 13-03-2015ರಂದು ವಿಧಾನಮಂಡಲದಲ್ಲಿ ಮಂಡಿಸಿದ ಆಯವ್ಯಯ ಭಾಷಣ ಕಂಡಿಕೆ 192ರಂತೆ
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆ ದಿನಾಂಕ: 17-06-2015
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ರವರ ಪ್ರಸ್ತಾವನೆ ದಿನಾಂಕ: 29-06-2015.

ಪ್ರಸ್ತಾವನೆ:-

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 13-03-2015ರಂದು ವಿಧಾನ ಮಂಡಲದಲ್ಲಿ ಮಂಡಿಸಿದ 2015-16ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ 192ರನ್ವಯ **"ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಸರಳವಾಗಿ ಮದುವೆ ಮಾಡಿಕೊಳ್ಳುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ದಂಪತಿಗಳಿಗೆ 'ಸರಳ ವಿವಾಹ ಯೋಜನೆಯಡಿ ಒಂದು ಬಾರಿಗೆ 50,000/- ರೂ.ಗಳ ಆರ್ಥಿಕ ನೆರವನ್ನು ಅವರ ಜೀವನೋಪಾಯಕ್ಕಾಗಿ ನೀಡಲಾಗುವುದು."** ಎಂದು ಘೋಷಣೆ ಮಾಡಿರುತ್ತಾರೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 17-06-2015ರ ಪ್ರಸ್ತಾವನೆಯಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರು ಪರಿಶಿಷ್ಟ ಜಾತಿಗೆ ಸೇರಿದ ಬಡ ಕುಟುಂಬಗಳು ಮದುವೆಯ ವಯಸ್ಸಿಗೆ ಬಂದ ಹೆಣ್ಣು ಮಕ್ಕಳಿಗೆ ಸಾಂಪ್ರದಾಯಿಕವಾಗಿ ಮದುವೆ ಮಾಡಿಕೊಡಲು, ಒಡವೆ-ವಸ್ತ್ರಗಳನ್ನು ಕೊಂಡುಕೊಳ್ಳಲು ಸಾಮರ್ಥ್ಯವಿಲ್ಲದ ಕಾರಣ ಮದುವೆ ಮಾಡಲು ವಿಳಂಬವಾಗುತ್ತಿರುವುದು ಸಾಮಾಜಿಕ ಅಸಮತೋಲನೆಗೆ ಕಾರಣವಾಗಿರುತ್ತದೆ. ಈ ನಿಟ್ಟಿನಲ್ಲಿ ಸಾಮೂಹಿಕ ಸರಳ ವಿವಾಹಕ್ಕೆ ಪ್ರೋತ್ಸಾಹಿಸಿದಲ್ಲಿ ವರದಕ್ಷಿಣೆ ಪಿಡುಗನ್ನು ಹಾಗೂ ದುಂದುವೆಚ್ಚವನ್ನು ತಡೆಗಟ್ಟಲು ಸಾಧ್ಯವಾಗುವುದೆಂದು ತಿಳಿಸುತ್ತಾ, ಈ ಹಿನ್ನೆಲೆಯಲ್ಲಿ ಸರ್ಕಾರವು ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಸರಳ ವಿವಾಹ ಆದ ಆದರ್ಶ ದಂಪತಿಗಳಿಗೆ ರೂ. 50,000/-ಗಳ ಆರ್ಥಿಕ ನೆರವನ್ನು ನೀಡಲು ಸೂಕ್ತ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ: 29-06-2015ರ ಪ್ರಸ್ತಾವನೆಯಲ್ಲಿ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ರವರು ಪರಿಶಿಷ್ಟ ಪಂಗಡಕ್ಕೆ ಸೇರಿದ ಬಡಕುಟುಂಬಗಳು ಹೆಣ್ಣು ಮಕ್ಕಳಿಗೆ ಸಾಂಪ್ರದಾಯಿಕವಾಗಿ ಮದುವೆ ಮಾಡಿಕೊಡಲು, ಒಡವೆ-ವಸ್ತ್ರಗಳನ್ನು ಕೊಂಡುಕೊಳ್ಳುವ ಸಾಮರ್ಥ್ಯವಿಲ್ಲದ ಕಾರಣ ಮದುವೆ ಮಾಡಲು ವಿಳಂಬವಾಗುತ್ತಿರುವುದು ಸಾಮಾಜಿಕ ಅಸಮತೋಲನೆಗೆ ಕಾರಣವಾಗಿರುತ್ತದೆ. ಹಾಗೂ ವರದಕ್ಷಿಣೆ ಪಿಡುಗು ಮತ್ತು ದುಂದುವೆಚ್ಚವನ್ನು ತಡೆಗಟ್ಟಲು ಸಾಧ್ಯವಾಗುತ್ತದೆ ಎಂದು ತಿಳಿಸುತ್ತಾ, ಸರಳ ವಿವಾಹ ಆದ ಆದರ್ಶ ಪರಿಶಿಷ್ಟ ಪಂಗಡದ ದಂಪತಿಗಳಿಗೆ ರೂ. 50,000/-ಗಳ ಆರ್ಥಿಕ ನೆರವನ್ನು ನೀಡುವ ಕುರಿತು ಸೂಕ್ತ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಸರ್ಕಾರಿ ಆದೇಶ ಸಂಖ್ಯೆ: ಸಕಇ 212 ಎಸ್‌ಎಲ್‌ಪಿ 2015, ಬೆಂಗಳೂರು, ದಿನಾಂಕ: 11-08-2015

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಸರಳವಾಗಿ ಮದುವೆ ಮಾಡಿಕೊಳ್ಳುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ದಂಪತಿಗಳಿಗೆ ಸರಳ ವಿವಾಹ ಯೋಜನೆಯಡಿ ಒಂದು ಬಾರಿಗೆ ರೂ. 50,000/- (ಐವತ್ತು ಸಾವಿರ ರೂಪಾಯಿಗಳು ಮಾತ್ರ) ಆರ್ಥಿಕ ನೆರವನ್ನು ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಇದಕ್ಕಾಗಿ ತಗಲುವ ವೆಚ್ಚವನ್ನು 2015-16ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆಯ (Schemes under various Development Programmes for SCs) ರಾಜಸ್ವ ಲೆಕ್ಕಶೀರ್ಷಿಕೆ 2225-01-800-0-19 ಹಾಗೂ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ (Schemes under various Development Programmes for STs) ರಾಜಸ್ವ ಲೆಕ್ಕಶೀರ್ಷಿಕೆ 2225-02-800-0-06 ರಲ್ಲಿ ಒದಗಿಸಿರುವ ಅನುದಾನದ ಮಿತಿಯಲ್ಲಿಯೇ ಭರಿಸತಕ್ಕದ್ದು.

<u>ಷರತ್ತುಗಳು:</u>

1) ಅರ್ಜಿದಾರ ದಂಪತಿಗಳು ಕರ್ನಾಟಕ ರಾಜ್ಯಕ್ಕೆ ಸೇರಿದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ್ದವರಾಗಿರಬೇಕು.
2) ಸಾಮೂಹಿಕ ವಿವಾಹಗಳಲ್ಲಿ ಕನಿಷ್ಟ 10 ಜೋಡಿಗಳು ಭಾಗವಹಿಸಿರತಕ್ಕದ್ದು.
3) ಈ ಸೌಲಭ್ಯ ಪಡೆಯುವ ವಧುವಿಗೆ ಕನಿಷ್ಟ 18 ವರ್ಷದಿಂದ ಗರಿಷ್ಟ 42 ವರ್ಷಗಳು, ವರನಿಗೆ ಕನಿಷ್ಟ 21 ವರ್ಷದಿಂದ ಗರಿಷ್ಟ 45ವರ್ಷ ವಯಸ್ಸು ಆಗಿರತಕ್ಕದ್ದು.
4) ಈ ಯೋಜನೆಯಡಿ ಧನ ಸಹಾಯ ಪಡೆಯಲು ವಧು ಮತ್ತು ವರನ ಒಟ್ಟಾರೆ ವಾರ್ಷಿಕ ಆದಾಯವು ರೂ. 2.00 ಲಕ್ಷಗಳನ್ನು ಮೀರತಕ್ಕದ್ದಲ್ಲ.
5) ಈ ಸೌಲಭ್ಯವನ್ನು ಜೀವನದಲ್ಲಿ ಒಮ್ಮೆ ಮಾತ್ರ ಪಡೆಯಬಹುದಾಗಿದೆ.
6) ಜಿಲ್ಲಾ ನೋಂದಣಿ ಕಛೇರಿಯಲ್ಲಿ ಸಾಮೂಹಿಕ ವಿವಾಹಗಳ ಆಯೋಜಕರೆಂದು ನೋಂದಣಿಯಾಗಿರುವ ಖಾಸಗಿ ಟ್ರಸ್ಟ್‌ಗಳು, ದೇವಸ್ಥಾನದ ಟ್ರಸ್ಟ್‌ಗಳು, ಸಂಘಗಳು, ಸೊಸೈಟಿಗಳು ಮತ್ತು ಖಾಸಗಿ ವ್ಯಕ್ತಿಗಳು ನಡೆಸುವ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ವಿವಾಹವಾದಲ್ಲಿ ಮಾತ್ರ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.
7) ಸದರಿ ಸಂಸ್ಥೆಗಳು ಆಯೋಜಿಸಿರುವ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ವಿವಾಹವಾಗಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
8) ಪ್ರೋತ್ಸಾಹ ಧನ ಪಡೆಯಲು ಸಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಸರಳ ವಿವಾಹವಾದ 3 ತಿಂಗಳೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಗೆ ಜಂಟಿಯಾಗಿ ನಿಗದಿತ ನಮೂನೆಯಲ್ಲಿ ಮತ್ತು ಅಗತ್ಯ ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸತಕ್ಕದ್ದು.
9) ವಧು-ವರನು ವಿವಾಹವಾದ ಬಳಿಕ ವಾಸ್ತವ್ಯವಿರುವ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

ಬ್ಯಾಂಕ್ ಖಾತೆಗೆ (ಫಲಾನುಭವಿಗಳ) ಆನ್‌ಲೈನ್ ಮೂಲಕ ... ಜಮಾ ಮಾಡುವುದು.

11) ಅರ್ಜಿಗಳನ್ನು ಪರಿಶೀಲಿಸುತ್ತಿರುವ/ಪರಿಶೀಲಿಸಿದ ಅಧಿಕಾರಿಗಳ/ಪ್ರಾಧಿಕಾರಿಗಳ ಮೇಲೆ ಯಾವುದೇ ರೀತಿಯ ಒತ್ತಡವನ್ನು ತಂದಲ್ಲಿ ಅರ್ಜಿಗಳನ್ನು ಯಾವುದೆ ಕಾರಣ ನೀಡದೆ ತಿರಸ್ಕರಿಸಲಾಗುವುದು.

12) ಅಂತರ ಜಾತಿ ವಿವಾಹಗಳು ಇದ್ದಲ್ಲಿ, ರಾಜ್ಯ ಮತ್ತು ಕೇಂದ್ರ ಸರ್ಕಾರದ ಅಸ್ಪೃಶ್ಯತಾ ನಿವಾರಣಾ ಕಾರ್ಯಕ್ರಮದಡಿ ಅಂತರಜಾತಿ ವಿವಾಹ ಪ್ರೋತ್ಸಾಹಧನಕ್ಕೋಸ್ಕರ ಈ ಯೋಜನೆಯಡಿ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ. ಅಂತರ ಜಾತಿ ವಿವಾಹ ಪ್ರೋತ್ಸಾಹಧನ ಯೋಜನೆಯಲ್ಲಿ ಅರ್ಜಿ ಸಲ್ಲಿಸಬಹುದು.

13) ಮಂಜೂರಾದ ಪ್ರೋತ್ಸಾಹಧನದ ಹಣವನ್ನು ವಧು ಹಾಗೂ ವರನಿಗೆ ಜಂಟಿಯಾಗಿ ಮಂಜೂರು ಮಾಡಲಾಗುವುದು ಹಾಗೂ ಮಂಜೂರಾದ ಮೊತ್ತವನ್ನು ವಧು ಮತ್ತು ವರನ ಹೆಸರಿನಲ್ಲಿರುವ ಜಂಟಿ ಬ್ಯಾಂಕ್ ಖಾತೆಗೆ ಜಮಾ ಮಾಡಲಾಗುವುದು.

14) ಇಂತಹ ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಯಾವುದೇ ತರಹದ ಬಾಲ್ಯ ವಿವಾಹ ಅಥವಾ ಅಪ್ರಾಪ್ತ ವಯಸ್ಸಿನ ವಿವಾಹಗಳು ಜರುಗದಿರುವಂತೆ ಖಾತ್ರಿಪಡಿಸಿಕೊಳ್ಳುವ ಹಾಗೂ ಶಿಶು ಅಭಿವೃದ್ಧಿ ಯೋಜನಾಧಿಕಾರಿ (CDPO) ರವರನ್ನು ಈ ಪ್ರಕ್ರಿಯೆಯ ಭಾಗವನ್ನಾಗಿಸತಕ್ಕದ್ದು

15) ವಿಧಾನಸಭಾ ಕ್ಷೇತ್ರವಾರು ನಿಗದಿಪಡಿಸುವ ಭೌತಿಕ ಗುರಿಗೆ ಅನುಗುಣವಾಗಿ ಆರ್ಥಿಕ ನೆರವನ್ನು ಮಂಜೂರು ಮಾಡಲಾಗುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ (ವೆಚ್ಚ 3 & 9)ರವರ ಟಿಪ್ಪಣಿ ಸಂಖ್ಯೆ: ಆಇ 664 ವೆಚ್ಚ-3/2015, ದಿನಾಂಕ: 15-07-2015 ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಪಿಡಿ 67 ಐಎಂಎಂ 2015, ದಿನಾಂಕ: 27-07-2015ರಲ್ಲಿ ನೀಡಿರುವ ಸಹಮತಿಯೊಂದಿಗೆ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಗಿರಿಜಮ್ಮ) 11/8/2015
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

ಗೆ:-

1) ಮಹಾಲೇಖಪಾಲರು, (ಎ&ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ, ಬೆಂಗಳೂರು

[illegible]

7) ಸರ್ಕಾರದ ಉಪ ಕಾರ್ಯದರ್ಶಿ-1 ರವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು

8) ಸರ್ಕಾರದ ಅಧೀನ ಕಾರ್ಯದರ್ಶಿ-2 & 3, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ, ಬೆಂಗಳೂರು

9) ಸರ್ಕಾರದ ಅಧೀನ ಕಾರ್ಯದರ್ಶಿ (ವೆಚ್ಚ-3), ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು

10) ನಿರ್ದೇಶಕರು, ಪಿಎಂಐ ವಿಭಾಗ, ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು

11) ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಬೆಂಗಳೂರು

12) ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು } ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ

13) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಯುವಕ / ಯುವತಿರು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್ ಜಾತಿ ವಿವಾಹವಾದಲ್ಲಿ ಪ್ರೋತ್ಸಾಹ ಧನ ನೀಡುವ ಬಗ್ಗೆ.

ಓದಲಾಗಿದೆ: 1) 2017-18ನೇ ಸಾಲಿನಲ್ಲಿ ಆಯವ್ಯಯ ಭಾಷಣದ ಘೋಷಣೆ ಕಂಡಿಕೆ (181)

2) ಆಯುಕ್ತರು. ಸಮಾಜ ಕಲ್ಯಾಣ ಇಲಾಖೆ ರವರ ಏಕ ಕಡತ ಸಂಖ್ಯೆ: ಸಕಇ/ಸಿ.ಎಸ್-2/ಸಿ.ಆರ್-02/ಪ.ಜಾ.ಸಂ.ಅಂ/2017-18. ದಿನಾಂಕ: 04-04-2017

......

ಪ್ರಸ್ತಾವನೆ:-

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ 2017-18ನೇ ಸಾಲಿನಲ್ಲಿ ಆಯವ್ಯಯ ಭಾಷಣದ ಘೋಷಣೆ ಕಂಡಿಕೆ (181) ರನ್ವಯ **"ಪರಿಶಿಷ್ಟ ಜಾತಿಯ / ಪರಿಶಿಷ್ಟ ಪಂಗಡದ ಯುವಕ / ಯುವತಿಯರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್‌ಜಾತಿ ವಿವಾಹವಾದಲ್ಲಿ ಅಂತಹವರಿಗೆ ರೂ. 2.00 ಲಕ್ಷಗಳ ಪ್ರೋತ್ಸಾಹ ಧನ ನೀಡಲಾಗುವುದು" ಎಂದು ಘೋಷಿಸಲಾಗಿದೆ.**

ಮೇಲೆ ಕ್ರಮಾಂಕ (2) ರಲ್ಲಿ ಓದಲಾದ ದಿನಾಂಕ: 04-04-2017 ರಲ್ಲಿ ಆಯುಕ್ತರು. ಸಮಾಜ ಕಲ್ಯಾಣ ಇಲಾಖೆ ಮತ್ತು ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ಇವರ ಏಕ ಕಡತದಲ್ಲಿ ಪ್ರಸ್ತಾವನೆಗಳನ್ನು ಸಲ್ಲಿಸಿ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ನಡುವಿನ ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಸಮುದಾಯದ ಒಳಗೆ ಅಂತರ್‌ಜಾತಿ ವಿವಾಹವಾದ ಯುವಕ / ಯುವತಿಯರಿಗೆ ರೂ. 2.00 ಲಕ್ಷಗಳ ಪ್ರೋತ್ಸಾಹ ಧನ ನೀಡಲು ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ರವರಿಂದ ಯಾವುದೇ ಪ್ರಸ್ತಾವನೆ ಸ್ವೀಕೃತಗೊಂಡಿರುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 149 ಎಸ್‌ಎಲ್‌ಪಿ 2017, ಬೆಂಗಳೂರು, ದಿನಾಂಕ:17-04-2017**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2017-18ನೇ ಸಾಲಿನಲ್ಲಿ ಆಯವ್ಯಯ ಭಾಷಣದ ಘೋಷಣೆಯನ್ವಯ ಪರಿಶಿಷ್ಟ ಜಾತಿಯ / ಪರಿಶಿಷ್ಟ ಪಂಗಡದ ಯುವಕ / ಯುವತಿಯರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್ ಜಾತಿ ವಿವಾಹವಾದಲ್ಲಿ ಅಂತಹವರಿಗೆ ರೂ. 2.00 ಲಕ್ಷಗಳ ಪ್ರೋತ್ಸಾಹ ಧನ ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

---2

ಷರತ್ತುಗಳು:-

1. ಅಂತರ್ ಜಾತಿ ವಿವಾಹವಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಯುವಕ / ಯುವತಿಯರು ಕರ್ನಾಟಕ ರಾಜ್ಯದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಾಂಗಕ್ಕೆ ಸೇರಿದವರಾಗಿರಬೇಕು.
2. ಈ ಸೌಲಭ್ಯ ಪಡೆಯುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಯುವತಿಯರ ವಯೋಮಾನವು ಕನಿಷ್ಟ 18 ವರ್ಷದಿಂದ ಗರಿಷ್ಟ 42 ವರ್ಷಗಳಾಗಿರತಕ್ಕದ್ದು. ಯುವಕನಿಗೆ ಕನಿಷ್ಟ 21 ವರ್ಷದಿಂದ ಗರಿಷ್ಟ 45 ವರ್ಷ ವಯಸ್ಸು ಆಗಿರತಕ್ಕದ್ದು.
3. ಈ ಯೋಜನೆಯಡಿ ಪ್ರೋತ್ಸಾಹ ಧನ ಪಡೆಯಲು ದಂಪತಿಗಳ ಒಟ್ಟಾರೆ ವಾರ್ಷಿಕ ಆದಾಯವು ರೂ. 2.00 ಲಕ್ಷಗಳನ್ನು ಮೀರತಕ್ಕದ್ದಲ್ಲ.
4. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಮದುವೆಯಾದ ಒಂದು ವರ್ಷದ ಅವಧಿಯೊಳಗೆ ಪ್ರೋತ್ಸಾಹ ಧನಕ್ಕಾಗಿ ಅರ್ಜಿ ಸಲ್ಲಿಸತಕ್ಕದ್ದು.
5. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಪ್ರೋತ್ಸಾಹ ಧನಕ್ಕಾಗಿ ಅರ್ಜಿ ಸಲ್ಲಿಸುವ ಮುಂಚೆ ಉಪ ನೋಂದಾಣಾಧಿಕಾರಿಗಳ ಕಛೇರಿಯಲ್ಲಿ ವಿವಾಹದ ಬಗ್ಗೆ ನೋಂದಾಯಿಸಿರಬೇಕು.
6. ಈ ಸೌಲಭ್ಯವನ್ನು ಒಮ್ಮೆ ಮಾತ್ರ ಪಡೆಯಬಹುದಾಗಿದೆ.
7. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್ ಜಾತಿ ವಿವಾಹವಾದ ಯುವಕ ವಾಸ್ತವ್ಯವಿರುವ ಜಿಲ್ಲೆಯಲ್ಲಿ ಮಾತ್ರ ಅರ್ಜಿ ಸಲ್ಲಿಸತಕ್ಕದ್ದು.
8. ರಾಜ್ಯ ಮತ್ತು ಕೇಂದ್ರ ಸರ್ಕಾರದ ಅಸ್ಪೃಶ್ಯತಾ ನಿವಾರಣಾ ಕಾರ್ಯಕ್ರಮದಡಿ ಅಂತರ್ ಜಾತಿ ವಿವಾಹ ಅಥವಾ ವಿಧವೆಯರ ಮರು ವಿವಾಹ ಯೋಜನೆಗಳಡಿ ಪ್ರೋತ್ಸಾಹ ಧನ ಪಡೆದವರು ಈ ಯೋಜನೆಯಲ್ಲಿ ಸೌಲಭ್ಯ ಪಡೆಯಲು ಅರ್ಹರಲ್ಲ.
9. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು ಸರಳ ವಿವಾಹ ಕಾರ್ಯಕ್ರಮದಡಿ ಮದುವೆಯಾದಲ್ಲಿ, ಅಂತಹವರುಗಳು ಈ ಯೋಜನೆಯಡಿಯಲ್ಲಿ ಸರಳ ವಿವಾಹದ ರೂ.50,000/- ಹೊರತುಪಡಿಸಿ ಉಳಿದ ರೂ.1.50 ಲಕ್ಷ ಪ್ರೋತ್ಸಾಹ ಧನವನ್ನು ಪಡೆಯಲು ಅರ್ಹರಿರುತ್ತಾರೆ.
10. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಯುವಕ / ಯುವತಿಯರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಭಾರತ ಸರ್ಕಾರದ ಅಧಿಸೂಚನೆಯಂತೆ ಪ್ರಕಟಿಸಲಾದ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಬುಡಕಟ್ಟುಗಳ ಪಟ್ಟಿಯಲ್ಲಿ ಒಂದೇ ಸಂಖ್ಯೆಯಲ್ಲಿ ನಮೂದಿಸಿರುವ ಸಮನಾಂತರ ಜಾತಿಗಳ ಒಳಗೆ ಮದುವೆಯಾದಲ್ಲಿ ಈ ಪ್ರೋತ್ಸಾಹ ಧನ ಪಡೆಯಲು ಅರ್ಹರಿರುವುದಿಲ್ಲ.
11. ಮಂಜೂರಾದ ಪ್ರೋತ್ಸಾಹಧನದ ಹಣವನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ವಿವಾಹವಾದ ದಂಪತಿಗಳ ಜಂಟಿ ಹೆಸರಿನಲ್ಲಿರುವ ಬ್ಯಾಂಕ್ ಖಾತೆಗೆ NEFT ಮೂಲಕ ಜಮಾ ಮಾಡುವುದು.

ಅನುಷ್ಠಾನ ವಿಧಾನ:

1. ಈ ಆದೇಶವು ಹೊರಡಿಸಿದ ದಿನಾಂಕದಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಮುದಾಯದ ಒಳಗೆ ಅಂತರ್‌ಜಾತಿ ವಿವಾಹವಾದ ಯುವಕ / ಯುವತಿಯರು ಈ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.
2. ಈ ಸೌಲಭ್ಯದ ಬಗ್ಗೆ ಆಯಾ ಜಿಲ್ಲಾ ಮಟ್ಟದಲ್ಲಿ ಜಂಟಿ / ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣ ಅಧಿಕಾರಿ ಇವರು ವ್ಯಾಪಕ ಪ್ರಚಾರವನ್ನು ನೀಡಿ ಅರ್ಜಿಗಳನ್ನು ಆಹ್ವಾನಿಸಬೇಕು

--3

3. ಸೂಕ್ತ ದಾಖಲೆಗಳೊಂದಿಗೆ ಸಲ್ಲಿಕೆಯಾದ ಅರ್ಜಿಗಳನ್ನು ಪರಿಶೀಲಿಸಿ ಅಗತ್ಯವಿರುವ ಅನುದಾನದ ಬಗ್ಗೆ ಬೇಡಿಕೆಯನ್ನು ಆಯುಕ್ತರ ಕಛೇರಿ. ಸಮಾಜ ಕಲ್ಯಾಣ ಇಲಾಖೆ ಬೆಂಗಳೂರು/ನಿರ್ದೇಶಕರು. ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ/ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿ. ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು
4. ಅನುದಾನ ಲಭ್ಯತೆಯ ಆಧಾರದಲ್ಲಿ ರೂ. 2.00ಲಕ್ಷ ಪ್ರೋತ್ಸಾಹ ಧನವನ್ನು ಒಂದೇ ಕಂತಿನಲ್ಲಿ ದಂಪತಿಗಳ ಜಂಟಿ ಬ್ಯಾಂಕ್ ಖಾತೆಗೆ NEFT ಮೂಲಕ ಜಿಲ್ಲಾ ಮಟ್ಟದ ಜಂಟಿ/ ಉಪ ನಿರ್ದೇಶಕರು. ಸಮಾಜ ಕಲ್ಯಾಣ ಇಲಾಖೆ ಇವರು ಜಮಾ ಮಾಡುವುದು.

ಇದಕ್ಕೆ ತಗಲುವ ವೆಚ್ಚವನ್ನು 2017-18ನೇ ಸಾಲಿನ ಸಮಾಜ ಕಲ್ಯಾಣ ಇಲಾಖೆ ರಾಜಸ್ವ ಲೆಕ್ಕಶೀರ್ಷಿಕೆ: 2225-01-796-0-02 (ಪರಿಶಿಷ್ಟ ಜಾತಿಯವರಿಗಾಗಿ ವಿವಿಧ ಅಭಿವೃದ್ಧಿ ಯೋಜನೆ) ರಡಿ ಮತ್ತು ಲೆಕ್ಕಶೀರ್ಷಿಕೆ 2225-01-794-0-05 (ಪರಿಶಿಷ್ಟ ಪಂಗಡದವರಿಗಾಗಿ ವಿವಿಧ ಅಭಿವೃದ್ಧಿ ಯೋಜನೆ)ರಡಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಘಟನೋತ್ತರ ಅನುಮೋದನೆ ಪಡೆಯುವ ಷರತ್ತಿಗೊಳಪಟ್ಟು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

(ಗಿರಿಜಮ್ಮ) 17/4/2017
ಸರ್ಕಾರದ ಅಧೀನ ಕಾರ್ಯದರ್ಶಿ-1.
ಸಮಾಜ ಕಲ್ಯಾಣ ಇಲಾಖೆ.

ಗೆ:-

1) ಮಹಾಲೇಖಪಾಲರು, (ಎ&ಇ. ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು
2) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ನಿರ್ದೇಶನಾಲಯ, ಕೃಷಿ ಭವನ, ಬೆಂಗಳೂರು
4) ಜಂಟಿ ನಿರ್ದೇಶಕರು, ರಾಜ್ಯ ಹುಜೂರ್ ಖಜಾನೆ, ಕೆ.ಆರ್.ವೃತ್ತ, ಬೆಂಗಳೂರು
5) ಉಪ ನಿರ್ದೇಶಕರು, ಗಣಕ ಜಾಲ ನಿರ್ವಹಣಾ ಕೇಂದ್ರ, ಖಜಾನೆ ಇಲಾಖೆ, ಖನಿಜ ಭವನ. ಬೆಂಗಳೂರು
6) ಸರ್ಕಾರದ ಕಾರ್ಯದರ್ಶಿ ರವರ ಆಪ್ತ ಕಾರ್ಯದರ್ಶಿ. ಸಮಾಜ ಕಲ್ಯಾಣ ಇಲಾಖೆ. ಬೆಂಗಳೂರು
7) ಸರ್ಕಾರದ ಉಪ ಕಾರ್ಯದರ್ಶಿ-1 ರವರ ಆಪ್ತ ಸಹಾಯಕರು. ಸಮಾಜ ಕಲ್ಯಾಣ ಇಲಾಖೆ. ಬೆಂಗಳೂರು
8) ಸರ್ಕಾರದ ಅಧೀನ ಕಾರ್ಯದರ್ಶಿ-2 & 3. ಸಮಾಜ ಕಲ್ಯಾಣ ಇಲಾಖೆ. ವಿಕಾಸಸೌಧ. ಬೆಂಗಳೂರು
9) ನಿರ್ದೇಶಕರು. ಪಿಎಂಐ ವಿಭಾಗ. ಯೋಜನೆ ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ. ಬಹುಮಹಡಿಗಳ ಕಟ್ಟಡ. ಬೆಂಗಳೂರು
10) ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು } ಆಯುಕ್ತರು. ಸಮಾಜ ಕಲ್ಯಾಣ ಇಲಾಖೆ ಇವರ ಮುಖಾಂತರ
11) ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

****

## ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನರಿಗೆ ಸ್ಮಶಾನ ಭೂಮಿ ಅಭಿವೃದ್ಧಿಪಡಿಸುವ ಕುರಿತು.

ಓದಲಾಗಿದೆ:
1. ಸರ್ಕಾರದ ಆದೇಶ ಸಂಖ್ಯೆ: ಸಕಇ 322 ಪವಯೋ 2015 ದಿನಾಂಕ:19.10.2015.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರ ಪತ್ರ ಸಂಖ್ಯೆ: ಸಕನಿ:ಸ್ಮಭೂ:ಸಿಆರ್-04:2018-19, ದಿನಾಂಕ:01.10.2018 ಮತ್ತು 16.10.2018.

********

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ 2015-16ನೇ ಸಾಲಿನ ಆಯವ್ಯಯ ಭಾಷಣ ಕಂಡಿಕೆ 190 ರನ್ವಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಸ್ಮಶಾನ ಭೂಮಿ ಇಲ್ಲದ ಸ್ಥಳಗಳಲ್ಲಿ ಸ್ಮಶಾನ ಭೂಮಿಗಾಗಿ ಸರ್ಕಾರಿ ಜಮೀನು ಪಡೆಯುವ/ಖಾಸಗಿ ಜಮೀನು ಖರೀದಿಸುವ ಬಗ್ಗೆ, ಸ್ಮಶಾನ ಭೂಮಿಗೆ ಒದಗಿಸಬೇಕಾದ ಸೌಲಭ್ಯಗಳು ಜಿಲ್ಲಾವಾರು ಅನುದಾನದ ಹಂಚಿಕೆ, ಯೋಜನೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ ಸಮಿತಿಯ ರಚನೆ, ಸಮಿತಿಯ ಕರ್ತವ್ಯಗಳು ಮೊದಲಾದವುಗಳನ್ನು ಒಳಗೊಂಡಂತೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು.

ಸ್ಮಶಾನ ಭೂಮಿ ಅಭಿವೃದ್ಧಿ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಇಲಾಖೆಯಲ್ಲಿ ಸ್ವೀಕೃತವಾಗುತ್ತಿರುವ ಪ್ರಸ್ತಾವನೆಗಳಲ್ಲಿ, ಸ್ಮಶಾನ ಭೂಮಿ ಇಲ್ಲದ ಸ್ಥಳಗಳಲ್ಲಿ ಹೊಸದಾಗಿ ಜಮೀನು ಖರೀದಿಸುವ ಪ್ರಸ್ತಾವನೆಗಳಿಗಿಂತ, ಹಾಲಿ ಇರುವ ಸ್ಮಶಾನ ಭೂಮಿಯಲ್ಲಿ ಮೂಲಭೂತ ಸೌಕರ್ಯ ಒದಗಿಸಲು ಅನುದಾನ ಬಿಡುಗಡೆ ಕೋರಿ ಹೆಚ್ಚಿನ ಪ್ರಸ್ತಾವನೆಗಳು ಸ್ವೀಕೃತವಾಗುತ್ತಿರುವುದರಿಂದ, ಹೊಸದಾಗಿ ಜಮೀನು ಖರೀದಿ ಮಾಡಿ ಮೂಲಭೂತ ಸೌಲಭ್ಯ ಒದಗಿಸುವ ಜೊತೆಗೆ ಹಾಲಿ ಇರುವ ಸ್ಮಶಾನ ಭೂಮಿಗಳಲ್ಲಿ ಮೂಲಭೂತ ಸೌಲಭ್ಯ ಒದಗಿಸಲು ಪರಿಷ್ಕೃತ ಮಾರ್ಗಸೂಚಿ ಹೊರಡಿಸುವಂತೆ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಇವರು ಕೋರಿರುವಂತೆ ಸ್ಮಶಾನ ಭೂಮಿ ಉದ್ದೇಶಕ್ಕಾಗಿ ಹೊಸದಾಗಿ ಜಮೀನು ಖರೀದಿಸಿ ಮೂಲಭೂತ ಸೌಲಭ್ಯ ಒದಗಿಸುವ ಜೊತೆಗೆ ಅಸ್ತಿತ್ವದಲ್ಲಿರುವ/ಹಾಲಿ ಇರುವ ಸ್ಮಶಾನ ಭೂಮಿಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಅನುದಾನ ಬಿಡುಗಡೆ ಮಾಡಲು ಅವಕಾಶ ಕಲ್ಪಿಸಲು ನಿರ್ಣಯಿಸಿ ಈ ಕೆಳಕಂಡಂತೆ ಆದೇಶ

**ಸರ್ಕಾರಿ ಆದೇಶ ಸಂಖ್ಯೆ:ಸಕಇ 10 ಪವಯೋ 2019 ಬೆಂಗಳೂರು, ದಿನಾಂಕ: 18.06.2019**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಸ್ಮಶಾನ ಭೂಮಿ ಅಭಿವೃದ್ಧಿ ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ ಸ್ಮಶಾನ ಭೂಮಿ ಉದ್ದೇಶಕ್ಕಾಗಿ ಹೊಸದಾಗಿ ಜಮೀನು ಖರೀದಿಸಿ ಮೂಲಭೂತ ಸೌಲಭ್ಯ ಒದಗಿಸುವ ಜೊತೆಗೆ ಅಸ್ತಿತ್ವದಲ್ಲಿರುವ/ಹಾಲಿ ಇರುವ ಸ್ಮಶಾನ ಭೂಮಿಗಳಿಗೆ ಮೂಲಭೂತ ಸೌಕರ್ಯ ಒದಗಿಸುವ ಸಲುವಾಗಿ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಿ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ: ಸಕಇ 322 ಪವಯೋ 2015 ದಿನಾಂಕ:19.10.2015 ಮತ್ತು ಸುತ್ತೋಲೆ ದಿನಾಂಕ:28.02.2017ರಲ್ಲಿನ ಮಾರ್ಗಸೂಚಿಗಳನ್ನು ಕಟ್ಟು ನಿಟ್ಟಾಗಿ ಅನುಸರಿಸುವುದು ಹಾಗೂ ಆದೇಶದ ಕ್ರಮ ಸಂಖ್ಯೆ 2 ರಲ್ಲಿನ ಸೌಲಭ್ಯಗಳೊಂದಿಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾಲೋನಿ/ಗ್ರಾಮಗಳಿಂದ ಸ್ಮಶಾನ ಭೂಮಿಗೆ ಹೋಗುವ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 04 ಟಿಎಫ್‌ಪಿ 2018, ದಿನಾಂಕ:08.01.2019ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ.

(ರಾಜಶ್ರೀ ಹೆಚ್.ಕುಲಕರ್ಣಿ)
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಮಾಜ ಕಲ್ಯಾಣ ಇಲಾಖೆ.

<u>ಇವರಿಗೆ:</u>

1. ಮಹಾಲೇಖಪಾಲರು, (ಎ ಮತ್ತು ಇ) (ಲೆಕ್ಕಪರಿಶೋಧನೆ-2)ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು.
4. ಎಲ್ಲಾ ಜಿಲ್ಲಾಧಿಕಾರಿಗಳು.
5. ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
6. ಸಂಬಂಧಿಸಿದ ಜಂಟಿ/ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
7. ಸಂಬಂಧಿಸಿದ ಯೋಜನಾ ಸಮನ್ವಯಾಧಿಕಾರಿ/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
8. ಶಾಖಾ ರಕ್ಷ ಕಡತ/ಹೆಚ್ಚುವರಿ ಪ್ರತಿ.

<u>ಪ್ರತಿ:</u>

1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಕಾರ್ಯದರ್ಶಿ.
2. ಸರ್ಕಾರದ ಉಪ ಕಾರ್ಯದರ್ಶಿ-1&2, ಸಮಾಜ ಕಲ್ಯಾಣ ಇಲಾಖೆ ಇವರ ಆಪ್ತ ಸಹಾಯಕರು.

# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: 2015-16ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಸ್ಮಶಾನ ಭೂಮಿ ಇಲ್ಲದ ಕಡೆ ಹಂತ ಹಂತವಾಗಿ ಭೂಮಿಯನ್ನು ಖರೀದಿಸಿ ಕಾಯ್ದಿರಿಸುವ ಕುರಿತು.

**ಪ್ರಸ್ತಾವನೆ:**

2015-16ನೇ ಸಾಲಿನ ಆಯವ್ಯಯದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಸ್ಮಶಾನ ಭೂಮಿ ಇಲ್ಲದ ಕಡೆಗಳಲ್ಲಿ ಹಂತ ಹಂತವಾಗಿ ಭೂಮಿಯನ್ನು ಖರೀದಿಸಿ ಸ್ಮಶಾನಕ್ಕಾಗಿ ಕಾಯ್ದಿರಿಸಲು ಘೋಷಿಸಲಾಗಿದೆ. ಸದರಿ ವಿಷಯವನ್ನು 26-05-2015ರಂದು ರಾಜ್ಯ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳ ಅಭಿವೃದ್ಧಿ ಪರಿಷತ್ತಿನಲ್ಲಿ ಸಹ ಅನುಮೋದಿಸಿ, ರೂ.40.00 ಕೋಟಿಗಳನ್ನು ಕಾಯ್ದಿರಿಸಲಾಗಿದೆ. ಈ ಅನುದಾನವನ್ನು ಜನಸಂಖ್ಯೆಯ ಆಧಾರದ ಮೇಲೆ 30 ಜಿಲ್ಲೆಗಳಿಗೆ ನೀಡಿ, ಯೋಜನೆಯನ್ನು ಅನುಷ್ಠಾನಗೊಳಿಸಲು ಪ್ರಸ್ತಾಪಿಸಲಾಗಿದೆ. ಸದರಿ ವಿಷಯವನ್ನು ಪರಿಶೀಲಿಸಿ, ಈ ಕೆಳಕಂಡಂತೆ ಸರ್ಕಾರಿ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 322 ಪವಯೋ 2015,**
**ಬೆಂಗಳೂರು, ದಿನಾಂಕ:19-10-2015**

1) ಸ್ಮಶಾನ ಜಾಗ ಇಲ್ಲದ ಕಡೆ, ಸರ್ಕಾರಿ ಜಮೀನನ್ನು ಗುರುತಿಸಿ ಆ ಊರಿನ ಎಸ್.ಸಿ/ಎಸ್.ಟಿ ಜನಸಂಖ್ಯೆ ಆಧಾರದ ಮೇಲೆ ಬೇಕಾಗುವ ಜಮೀನನ್ನು ನಿಗಧಿಪಡಿಸುವುದು. ಸರ್ಕಾರಿ ಜಮೀನು ಲಭ್ಯವಿಲ್ಲದೇ ಇದ್ದಲ್ಲಿ, ಖಾಸಗಿ ಜಮೀನನ್ನು ಭೂಸ್ವಾಧೀನ ಕಾಯಿದೆ ಅಡಿಯಲ್ಲಿ ಅಥವಾ ಖಾಸಗಿಯವರಿಂದ ಖರೀದಿಸುವುದು. ಜಿಲ್ಲಾಧಿಕಾರಿಗಳು ಖಾಸಗಿ ಜಮೀನನ್ನು ಸಂಬಂಧಿಸಿದ ಪ್ರಾದೇಶಿಕ ಆಯುಕ್ತರಿಂದ ಅನುಮೋದನೆ ಪಡೆದು ಜಮೀನನ್ನು ಖರೀದಿಸುವುದು. ಖರೀದಿಸುವಾಗ ಪ್ರಚಲಿತ ಮಾರ್ಗಸೂಚಿ ಬೆಲೆಯನ್ನು ಗಮನದಲ್ಲಿಟ್ಟುಕೊಂಡು ಜನಸಂಖ್ಯೆ ಆಧಾರದ ಮೇಲೆ ಒಂದು ಅಥವಾ ಎರಡು ಎಕರೆ ಜಮೀನನ್ನು ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮ ವತಿಯಿಂದ ವಸತಿ ಸೌಕರ್ಯಕ್ಕಾಗಿ ಖಾಸಗಿ ಜಮೀನು ಖರೀದಿಸಲು ನಿರ್ಣಯಿಸಿದ ಬೆಲೆಯಂತೆ ದರಗಳನ್ನು ನೀಡಿ ಖರೀದಿಸುವುದು.

2) ಸ್ಮಶಾನಕ್ಕಾಗಿ ಸರ್ಕಾರಿ ಜಮೀನು ಅಥವಾ ಖಾಸಗಿಯವರಿಂದ ಖರೀದಿಸಿದ ಜಮೀನುಗಳಲ್ಲಿ ಈ ಕೆಳಕಂಡ ಸವಲತ್ತುಗಳನ್ನು ಒದಗಿಸುವುದು;-

1) ನೀರಿನ ವ್ಯವಸ್ಥೆಗಾಗಿ ಕೊಳವೆ ಬಾವಿ ಅಥವಾ ಪೈಪುಗಳ ಮೂಲಕ ನೀರನ್ನು ಒದಗಿಸುವ ವ್ಯವಸ್ಥೆ;
2) ಸ್ಮಶಾನದಲ್ಲಿ ಅಂತ್ಯ ಕ್ರಿಯೆ, ಇತ್ಯಾದಿಗಳನ್ನು ನಡೆಸಲು ಅನುಕೂಲವಾಗುವಂತೆ ಒಂದು ಮಂಟಪ ನಿರ್ಮಾಣ;

...2

3) ಸ್ಮಶಾನ ಜಮೀನಿನ ರಕ್ಷಣೆಗಾಗಿ ಸುತ್ತಲೂ ತಂತಿ ಬೇಲಿ ಅಥವಾ ಕಾಂಪೌಂಡು ಗೋಡೆ ನಿರ್ಮಾಣ,
4) ಸ್ಮಶಾನದ ಅಂಚಿನಲ್ಲಿ ಮರಗಿಡಗಳನ್ನು ಬೆಳೆಸುವುದು.
5) ಸ್ಮಶಾನದ ಜಮೀನೆಂದು ನಾಮಫಲಕ ಹಾಕುವುದು.

3) ಮೇಲ್ಕಂಡ ಯೋಜನೆಗೆ ಬೇಕಾಗುವ ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡಿ ಅನುಬಂಧ-1ರಲ್ಲಿ ನೀಡಲಾಗಿದೆ.

4) ಅನುಬಂಧ-1ರಂತೆ ಸದರಿ ಅನುದಾನವನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಮತ್ತು ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ಇವರು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡುವುದು ಮತ್ತು ಕಾರ್ಯಕ್ರಮದ ಅನುಷ್ಠಾನಗೊಳಿಸುವ ಬಗ್ಗೆ ಕ್ರಮ ಜರುಗಿಸುವುದು.

5) ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದಲ್ಲಿ ಕೆಳಕಂಡ ಸಮಿತಿಯನ್ನು ರಚಿಸಲಾಗಿದೆ.

1. ಜಿಲ್ಲಾಧಿಕಾರಿಗಳು : ಅಧ್ಯಕ್ಷರು
2. ಸಿ.ಇ.ಓ., ಜಿಲ್ಲಾ ಪಂಚಾಯತ್ : ಸದಸ್ಯರು
3. ಜಿಲ್ಲಾ ಆರೋಗ್ಯಾಧಿಕಾರಿಗಳು : ಸದಸ್ಯರು
4. ಸಂಬಂಧಪಟ್ಟ ಉಪವಿಭಾಗಾಧಿಕಾರಿಗಳು : ಸದಸ್ಯರು
5. ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ : ಸದಸ್ಯ ಕಾರ್ಯದರ್ಶಿ
6. ಜಿಲ್ಲಾ ಪರಿಶಿಷ್ಟ ವರ್ಗದ ಕಲ್ಯಾಣಾಧಿಕಾರಿಗಳು/ ಯೋಜನಾ ಸಮನ್ವಯಾಧಿಕಾರಿಗಳು/ಐ.ಟಿ.ಡಿ.ಪಿ. : ಸದಸ್ಯ ಕಾರ್ಯದರ್ಶಿ

6) ಸಮಿತಿಯ ಕಾರ್ಯವೈಖರಿ-

1) ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜನರಿಗೆ ಸ್ಮಶಾನ ಭೂಮಿ ಇಲ್ಲದ ಗ್ರಾಮಗಳನ್ನು ಗುರುತಿಸಿ ಅಲ್ಲಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಜನಸಂಖ್ಯೆಯ ಆಧಾರದ ಮೇಲೆ ಬೇಕಾಗುವ ಜಮೀನನ್ನು ಕಾಯ್ದಿರಿಸುವುದು.

2) ಸರ್ಕಾರಿ ಜಮೀನು ಇಲ್ಲದಿದ್ದಲ್ಲಿ ಮೇಲ್ಕಂಡಂತೆ ಖಾಸಗಿಯವರಿಂದ ನಿಯಮಾನುಸಾರ ಖರೀದಿಸುವುದು. ಅವಶ್ಯಕ ಸವಲತ್ತುಗಳನ್ನು ಒದಗಿಸುವುದು.

3) ಈ ಕಾರ್ಯಕ್ರಮವನ್ನು ಆದ್ಯತೆ ಮೇಲೆ ಅನುಷ್ಠಾನಗೊಳಿಸುವುದು.

7) ಕಂದಾಯ ಇಲಾಖೆ ವತಿಯಿಂದ ಸ್ಮಶಾನ ಉದ್ದೇಶಕ್ಕಾಗಿ ಎರಡು ಎಕರೆ ಸರ್ಕಾರಿ ಜಮೀನನ್ನು ಕಾಯ್ದಿರಿಸುವ ಬಗ್ಗೆ ಈಗಾಗಲೇ ಸುತ್ತೋಲೆ ಸಂಖ್ಯೆ: ಆರ್‌ಡಿ 149 ಎಲ್‌ಜಿಪಿ 2014, ದಿನಾಂಕ: 11-09-2014ರಲ್ಲಿ ನೀಡಲಾಗಿದೆ. ಸದರಿ ಸುತ್ತೋಲೆಯಂತೆ ಈ ಕಾರ್ಯಕ್ರಮದಲ್ಲಿ ಸಹ ಕ್ರಮ ಜರುಗಿಸುವುದು.

8) ಖಾಸಗಿ ಜಮೀನಿನ ಮಾಲೀಕರಿಂದ ಖರೀದಿಸುವ ಜಮೀನನ್ನು ಸ್ವಾಧೀನ ಪಡಿಸಿಕೊಂಡು ಸಮಾಜ ಕಲ್ಯಾಣ ಇಲಾಖೆಯ ಹೆಸರಲ್ಲಿ ನೊಂದಣಿ ಮಾಡಿ ಭೂ ದಾಖಲೆಗಳಲ್ಲಿ ನಮೂದಿಸುವುದು.

...3

9) ಈ ಯೋಜನೆಗೆ ತಗಲುವ ವೆಚ್ಚವನ್ನು ಪರಿಶಿಷ್ಟ ಜಾತಿಗೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ: 4225-01-800-0-07 ಮತ್ತು ಪರಿಶಿಷ್ಟ ಪಂಗಡಕ್ಕೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ: 4225-02-800-0-07 ರಲ್ಲಿ ಭರಿಸುವುದು.

10) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 783 ವೆಚ್ಚ-3/2015, ದಿನಾಂಕ:04-09-2015 ಹಾಗೂ ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 109 ಐಎಂಎಂ 2015, ದಿನಾಂಕ:05-10-2015ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಹೆಚ್.ವನಿತ)
ಸರ್ಕಾರದ ಅಧೀನ ಕಾರ್ಯದರ್ಶಿ-2,(ಪ್ರ)
ಸಮಾಜ ಕಲ್ಯಾಣ ಇಲಾಖೆ.

ಇವರಿಗೆ ಪ್ರತಿ:-

1. ಮಹಾಲೇಖಪಾಲರು, (ಎ & ಇ,ಲೆಕ್ಕಪರಿಶೋಧನೆ-1, ಲೆಕ್ಕ ಪರಿಶೋಧನೆ-2) ಕರ್ನಾಟಕ, ಬೆಂಗಳೂರು.
2. ಪ್ರಾದೇಶಿಕ ಆಯುಕ್ತರು, ಬೆಳಗಾವಿ, ಗುಲ್ಬರ್ಗಾ, ಮೈಸೂರು ಮತ್ತು ಬೆಂಗಳೂರು.
3. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
4. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು.
5. ಎಲ್ಲಾ ಜಿಲ್ಲಾಧಿಕಾರಿಗಳು.
6. ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು.
7. ಎಲ್ಲಾ ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳು/ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿಗಳು/ ಯೋಜನಾ ಸಮನ್ವಯಾಧಿಕಾರಿಗಳು/ ಸಮಗ್ರ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ಯೋಜನೆ

(2-7: ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ಮುಖಾಂತರ)

8. ಎಲ್ಲಾ ಉಪ ವಿಭಾಗಾಧಿಕಾರಿಗಳು, ಕಂದಾಯ ಇಲಾಖೆ.
9. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿ.

ಪ್ರತಿ ಇವರಿಗೆ ಮಾಹಿತಿಗಾಗಿ:

1. ಮಾನ್ಯ ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ, ಬಹುಮಹಡಿ ಕಟ್ಟಡ.
3. ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ.

****

## ಅನುಬಂಧ-1

| ಕ್ರ.ಸಂ. | ಜಿಲ್ಲೆ ಹೆಸರು | ಬಿಡುಗಡೆ ಮಾಡಲಾಗುವ ಅನುದಾನ (ಲಕ್ಷಗಳಲ್ಲಿ) | |
|---|---|---|---|
| | | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
| 1. | ಬೆಂಗಳೂರು ನಗರ (ಗ್ರಾಮೀಣ ಪ್ರದೇಶ) | 100.00 | – |
| 2. | ಬೆಂಗಳೂರು ಗ್ರಾಮಾಂತರ | 150.00 | – |
| 3. | ಬಾಗಲಕೋಟೆ | 100.00 | – |
| 4. | ಬೆಳಗಾಂ | 200.00 | 25.00 |
| 5. | ಬಳ್ಳಾರಿ | 100.00 | 25.00 |
| 6. | ಬೀದರ್ | 100.00 | – |
| 7. | ಬಿಜಾಪುರ | 200.00 | – |
| 8. | ಚಾಮರಾಜನಗರ | 100.00 | 25.00 |
| 9. | ಚಿಕ್ಕಮಗಳೂರು | 150.00 | – |
| 10. | ಚಿಕ್ಕಬಳ್ಳಾಪುರ | 100.00 | – |
| 11. | ಚಿತ್ರದುರ್ಗ | 200.00 | 25.00 |
| 12. | ದಕ್ಷಿಣ ಕನ್ನಡ | 100.00 | – |
| 13. | ದಾವಣಗೆರೆ | 100.00 | 25.00 |
| 14. | ಧಾರವಾಡ | 100.00 | – |
| 15. | ಗದಗ್ | 100.00 | – |
| 16. | ಕಲ್ಬುರ್ಗಿ | 200.00 | – |
| 17. | ಹಾಸನ | 150.00 | – |
| 18. | ಹಾವೇರಿ | 100.00 | – |
| 19. | ಕೊಡಗು | 100.00 | – |
| 20. | ಕೋಲಾರ | 200.00 | – |
| 21. | ಕೊಪ್ಪಳ | 100.00 | 25.00 |
| 22. | ಮಂಡ್ಯ | 150.00 | – |
| 23. | ಮೈಸೂರು | 200.00 | – |
| 24. | ರಾಯಚೂರು | 150.00 | 25.00 |
| 25. | ರಾಮನಗರ | 100.00 | – |
| 26. | ಶಿವಮೊಗ್ಗ | 100.00 | – |
| 27. | ತುಮಕೂರು | 200.00 | – |
| 28. | ಉತ್ತರ ಕನ್ನಡ | 100.00 | – |
| 29. | ಉಡುಪಿ | 100.00 | – |
| 30. | ಯಾದಗಿರಿ | 150.00 | 25.00 |
| | ಒಟ್ಟು | 4000.00 | 200.00 |

ಟಿಪ್ಪಣಿ: ಪರಿಶಿಷ್ಟ ಪಂಗಡ ಜನರಿಗೆ ಹೆಚ್ಚಿನ ಅನುದಾನ ಬೇಕಾದಲ್ಲಿ ಸೂಕ್ತ ಪ್ರಸ್ತಾವನೆಯನ್ನು ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಗೆ ಸಲ್ಲಿಸುವುದು.

**ಕರ್ನಾಟಕ ಸರ್ಕಾರ**

ಸಂಖ್ಯೆ:ಸಕಇ 322 ಪವಯೋ 2015

ಕರ್ನಾಟಕ ಸರ್ಕಾರ ಸಚಿವಾಲಯ
ವಿಕಾಸಸೌಧ,
ಬೆಂಗಳೂರು,ದಿನಾಂಕ:28.02.2017

**ಸುತ್ತೋಲೆ**

ವಿಷಯ: 2015-16ನೇ ಸಾಲಿನ ಆಯವ್ಯಯದಲ್ಲಿ ಘೋಷಿಸಿರುವಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ ಸ್ಮಶಾನ ಭೂಮಿ ಇಲ್ಲದ ಕಡೆ ಹಂತ ಹಂತವಾಗಿ ಭೂಮಿಯನ್ನು ಖರೀದಿಸಿ ಕಾಯ್ದಿರಿಸುವ ಕುರಿತು.

ಉಲ್ಲೇಖ: ಸರ್ಕಾರದ ಆದೇಶ ಸಂಖ್ಯೆ:ಸಕಇ 322 ಪವಯೋ 2015, ದಿನಾಂಕ:19.10.2015.

******

ಗ್ರಾಮಾಂತರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ/ಪಂಗಡದವರಿಗೆ ಸ್ಮಶಾನ ಭೂಮಿ ಇಲ್ಲದ ಸ್ಥಳಗಳಲ್ಲಿ ಭೂಮಿಯನ್ನೂ ಖರೀದಿಸಿ ಸ್ಮಶಾನಕ್ಕಾಗಿ ಕಾಯ್ದಿರಿಸಲು ಉಲ್ಲೇಖಿತ ಆದೇಶದಲ್ಲಿ ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡಿ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಸಮಿತಿಯನ್ನು ರಚಿಸಿ ಕೈಗೊಳ್ಳಬೇಕಾದ ಕಾರ್ಯಗಳನ್ನು ತಿಳಿಸಲಾಗಿತ್ತು. ಮುಂದುವರೆದು ಸ್ಮಶಾನ ಭೂಮಿ ಖರೀದಿ ಹಾಗೂ ಅಭಿವೃದ್ಧಿಗೆ ಅನುದಾನ ಬಿಡುಗಡೆಗೆ ಈ ಕೆಳಕಂಡಂತೆ ಕ್ರಮ ವಹಿಸಲು ತಿಳಿಸಲಾಗಿದೆ.

1) ಸ್ಮಶಾನ ಜಾಗ ಇಲ್ಲದ ಕಡೆ, ಸರ್ಕಾರಿ ಜಮೀನನ್ನು ಗುರುತಿಸಿ ಆ ಊರಿನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಆಧಾರದ ಮೇಲೆ ಬೇಕಾಗುವ ಜಮೀನಿನ ಪ್ರಮಾಣವನ್ನು ನಿಗದಿಪಡಿಸುವುದು.

2) ಕಂದಾಯ ಇಲಾಖೆ ವತಿಯಿಂದ ಸ್ಮಶಾನ ಉದ್ದೇಶಕ್ಕಾಗಿ ಎರಡು ಎಕರೆ ಸರ್ಕಾರಿ ಜಮೀನನ್ನು ಕಾಯ್ದಿರಿಸುವ ಬಗ್ಗೆ ಈಗಾಗಲೇ ಸುತ್ತೋಲೆ ಸಂಖ್ಯೆ: ಆರ್‌ಡಿ 149 ಎಲ್‌ಜಿಪಿ 2014, ದಿನಾಂಕ: 11-09-2014ರಲ್ಲಿ ನೀಡಲಾಗಿದೆ. ಸದರಿ ಸುತ್ತೋಲೆಯಂತೆ ಈ ಕಾರ್ಯಕ್ರಮದಲ್ಲಿ ಸಹ ಕ್ರಮ ಜರುಗಿಸುವುದು.

3) ಸರ್ಕಾರಿ ಜಮೀನು ಲಭ್ಯವಿಲ್ಲದೇ ಇದ್ದಲ್ಲಿ, ಖಾಸಗಿ ಜಮೀನನ್ನು ಭೂಸ್ವಾಧೀನ ಕಾಯಿದೆ ಅಡಿಯಲ್ಲಿ ಅಥವಾ ಖಾಸಗಿಯವರಿಂದ ಖರೀದಿಸುವುದು.

4) ಜಿಲ್ಲಾಧಿಕಾರಿಗಳು ಖಾಸಗಿ ಜಮೀನನ್ನು ಸಂಬಂಧಿಸಿದ ಪ್ರಾದೇಶಿಕ ಆಯುಕ್ತರಿಂದ ಅನುಮೋದನೆ ಪಡೆದು ಜಮೀನನ್ನು ಖರೀದಿಸುವುದು.

5) ಖರೀದಿಸುವಾಗ ಪ್ರಚಲಿತ ಮಾರ್ಗಸೂಚಿ ಬೆಲೆಯನ್ನು ಗಮನದಲ್ಲಿಟ್ಟುಕೊಂಡು ಜನಸಂಖ್ಯೆ ಆಧಾರದ ಮೇಲೆ ಒಂದು ಅಥವಾ ಎರಡು ಎಕರೆ ಜಮೀನನ್ನು ರಾಜೀವ ಗಾಂಧಿ ಗ್ರಾಮೀಣ ವಸತಿ ನಿಗಮ ವತಿಯಿಂದ ವಸತಿ ಸೌಕರ್ಯಕ್ಕಾಗಿ ಖಾಸಗಿ ಜಮೀನು ಖರೀದಿಸಲು ನಿರ್ಣಯಿಸಿದ ಬೆಲೆಯಂತೆ ದರಗಳನ್ನು ನೀಡಿ ಖರೀದಿಸುವುದು.

6) ಖಾಸಗಿ ಜಮೀನಿನ ಮಾಲೀಕರಿಂದ ಖರೀದಿಸುವ ಜಮೀನನ್ನು ಸ್ವಾಧೀನ ಪಡಿಸಿಕೊಂಡು ಸಮಾಜ ಕಲ್ಯಾಣ ಇಲಾಖೆಯ ಹೆಸರಲ್ಲಿ ನೊಂದಣಿ ಮಾಡಿ ಭೂ ದಾಖಲೆಗಳಲ್ಲಿ ನಮೂದಿಸುವುದು.

7) ಸ್ಮಶಾನಕ್ಕಾಗಿ ಸರ್ಕಾರಿ ಜಮೀನು ಅಥವಾ ಖಾಸಗಿಯವರಿಂದ ಖರೀದಿಸಿದ ಜಮೀನುಗಳಲ್ಲಿ ಈ ಕೆಳಕಂಡ ಸವಲತ್ತುಗಳನ್ನು ಒದಗಿಸುವುದು:-

- ನೀರಿನ ವ್ಯವಸ್ಥೆಗಾಗಿ ಕೊಳವೆ ಬಾವಿ ಅಥವಾ ಪೈಪುಗಳ ಮೂಲಕ ನೀರನ್ನು ಒದಗಿಸುವ ವ್ಯವಸ್ಥೆ;

--2

- ❖ ಸ್ಮಶಾನದಲ್ಲಿ ಅಂತ್ಯ ಕ್ರಿಯೆ. ಇತ್ಯಾದಿಗಳನ್ನು ನಡೆಸಲು ಅನುಕೂಲವಾಗುವಂತೆ ಒಂದು ಮಂಟಪ ನಿರ್ಮಾಣ;
- ❖ ಸ್ಮಶಾನ ಜಮೀನಿನ ರಕ್ಷಣೆಗಾಗಿ ಸುತ್ತಲೂ ತಂತಿ ಬೇಲಿ ಅಥವಾ ಕಾಂಪೌಂಡು ಗೋಡೆ ನಿರ್ಮಾಣ.
- ❖ ಸ್ಮಶಾನದ ಅಂಚಿನಲ್ಲಿ ಮರಗಿಡಗಳನ್ನು ಬೆಳೆಸುವುದು.
- ❖ ಸ್ಮಶಾನದ ಜಮೀನೆಂದು ನಾಮಫಲಕ ಹಾಕುವುದು.

8) ಸಮಾಜ ಕಲ್ಯಾಣ/ಪರಿಶಿಷ್ಟ ಕಲ್ಯಾಣ ಇಲಾಖೆಯ ಅಧಿಕಾರಿಗಳು ಜನಸಂಖ್ಯೆ ಆಧಾರದ ಮೇಲೆ ಅಗತ್ಯವಾದ ಜಮೀನಿನ ಪ್ರಮಾಣವನ್ನು ಗುರುತಿಸಿ ಭೂಮಿಯ ಮೌಲ್ಯಕ್ಕನುಗುಣವಾಗಿ ಬೇಕಾಗುವ ಅನುದಾನ ಮೊದಲಾದವುಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಮೂಲಕ ಆಯುಕ್ತರು ಸಮಾಜ ಕಲ್ಯಾಣ ಇಲಾಖೆ ಹಾಗೂ ನಿರ್ದೇಶಕರು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸುವುದು.

9) ಅನುದಾನ ಬಿಡುಗಡೆಗೆ ಹಾಗೂ ಖರ್ಚು ವೆಚ್ಚಗಳಿಗೆ ಸಂಬಂಧಿಸಿದ ಕಾಗದ ಪತ್ರ/ದಾಖಲೆಗಳನ್ನು ನಿಗಧಿತ ನಮೂನೆಯಲ್ಲಿ ಸಂಗ್ರಹಿಸಿಡುವುದು.

10) ಈ ಕಾರ್ಯಕ್ರಮದ ಅನುಷ್ಠಾನದ ಬಗ್ಗೆ ಕಾಲಕಾಲಕ್ಕೆ ಪ್ರಗತಿ ವರದಿಯನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ/ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸುವುದು.

11) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ಹಾಗೂ ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಇವರು ಯೋಜನೆ ಅನುಷ್ಠಾದ ಬಗ್ಗೆ ನಿಯಮಿತವಾಗಿ ಪರಿಶೀಲನೆ ನಡೆಸುವುದು.

12) ಕಾರ್ಯಕ್ರಮದ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಇತರ ವಿಷಯಗಳಿದ್ದರೆ ಸರ್ಕಾರದ ಕಾರ್ಯದರ್ಶಿಯವರ ಅವಗಾಹನೆಗೆ ತರುವ ಬಗ್ಗೆ ಅಗತ್ಯ ಕ್ರಮವಹಿಸುವುದು.

(ರಾಜಶ್ರೀ ಹೆಚ್.ಕುಲಕರ್ಣಿ)
ಸರ್ಕಾರದ ಅಧೀನ ಕಾರ್ಯದರ್ಶಿ-2
ಸಮಾಜಕಲ್ಯಾಣ ಇಲಾಖೆ.

<u>ಇವರಿಗೆ:</u>

1) ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
2) ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು.
3) ಎಲ್ಲಾ ಜಿಲ್ಲಾಧಿಕಾರಿಗಳು.
4) ಎಲ್ಲಾ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.
5) ಸಂಬಂಧಿಸಿದ ಜಂಟಿ/ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
6) ಸಂಬಂಧಿಸಿದ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣಾಧಿಕಾರಿ/ಯೋಜನಾ ಸಮನ್ವಯಾಧಿಕಾರಿಗಳು.

} ಆಯುಕ್ತರು, ಸಮಾಜ ಕಲ್ಯಾಣ ಇಲಾಖೆಯ ಮುಖಾಂತರ

ಪ್ರತಿ :-

1. ಸರ್ಕಾರದ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ಇವರ ಆಪ್ತ ಕಾರ್ಯದರ್ಶಿ.ವಿಕಾಶ ಸೌಧ, ಬೆಂಗಳೂರು.
2. ಸರ್ಕಾರದ ಜಂಟಿ ಕಾರ್ಯದರ್ಶಿ-2, ಸಮಾಜ ಕಲ್ಯಾಣ ಇಲಾಖೆ.
3. ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: 'ಪ್ರಗತಿ ಕಾಲೋನಿ ಯೋಜನೆ' ಅಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವ ಕಾಲೋನಿ/ತಾಂಡಗಳನ್ನು ಸಮಗ್ರವಾಗಿ ಅಭಿವೃದ್ಧಿಪಡಿಸುವ ಬಗ್ಗೆ.

ಓದಲಾಗಿದೆ: 2018-19ನೇ ಸಾಲಿನ (ಜುಲೈ) ಆಯವ್ಯಯದ ಕಂಡಿಕೆ - 82ರ ಘೋಷಣೆಯಂತೆ.

******

**ಪ್ರಸ್ತಾವನೆ:**

2018-19ನೇ (ಜುಲೈ) ಆಯವ್ಯಯದಲ್ಲಿನ ಕಂಡಿಕೆ-82ರಲ್ಲಿ 'ಪ್ರಗತಿ ಕಾಲೋನಿ ಯೋಜನೆ' ರೂಪಿಸಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿರುವ ಕಾಲೋನಿ/ತಾಂಡಗಳನ್ನು ಹಂತ-ಹಂತವಾಗಿ ಸಮಗ್ರ ಅಭಿವೃದ್ಧಿಪಡಿಸಲು ತಲಾ ಕನಿಷ್ಠ ರೂ.1.00 ಕೋಟಿ ಗರಿಷ್ಠ ರೂ.5.00 ಕೋಟಿಗಳವರೆಗೆ ಅನುದಾನ ಒದಗಿಸಲಾಗುವುದೆಂದು ಘೋಷಿಸಲಾಗಿದೆ.

ಈಗಾಗಲೇ ಎಸ್.ಸಿ/ಎಸ್.ಟಿ. ಕಾಲೋನಿಗಳನ್ನು ಅಭಿವೃದ್ಧಿಪಡಿಸಲು ಕಾರ್ಯಕ್ರಮವನ್ನು ಸಮಾಜ ಕಲ್ಯಾಣ ಇಲಾಖೆಯಿಂದ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ. ರಡಿಯಲ್ಲಿ ನೀಡಿದ ಅನುದಾನದಿಂದ ಜಾರಿಗೊಳಿಸಲಾಗುತ್ತಿದೆ. ಅಲ್ಲದೇ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ. ರಡಿಯಲ್ಲಿ ಕಾಲೋನಿಗಳ ಅಭಿವೃದ್ಧಿಗಾಗಿ ಲೋಕೋಪಯೋಗಿ ಇಲಾಖೆಗೆ ಸಹ ಅನುದಾನ ನೀಡಲಾಗುತ್ತಿದೆ.

ಆದರೆ 2018-19ನೇ ಸಾಲಿನ ಆಯವ್ಯಯದಲ್ಲಿ ಮೇಲ್ಕಂಡಂತೆ ಸದರಿ ಯೋಜನೆಗೆ 'ಪ್ರಗತಿ ಕಾಲೋನಿ ಯೋಜನೆ' ಎಂದು ರೂಪಿಸಿ ಸಮಗ್ರ ಅಭಿವೃದ್ಧಿಪಡಿಸಲು ಪ್ರಸ್ತಾಪಿಸಲಾಗಿದೆ. ಈ ಯೋಜನೆ ಅಡಿಯಲ್ಲಿ ಎಸ್.ಸಿ/ಎಸ್.ಟಿ. ಕಾಲೋನಿಗಳು ಹಾಗೂ ಬಂಜಾರ ತಾಂಡಗಳು ಸೇರಿರುತ್ತವೆ.

2011 ರ ಜನಗಣತಿಯಂತೆ ರಾಜ್ಯದ ಎಲ್ಲಾ ಗ್ರಾಮಗಳಲ್ಲಿ ಎಸ್.ಸಿ/ಎಸ್.ಟಿ. ಜನಸಂಖ್ಯೆಯ ವಿವರಗಳು ಲಭ್ಯವಿರುತ್ತವೆ. ಅಲ್ಲದೇ ತಾಂಡಗಳ ಪಟ್ಟಿ ಸಹ ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಲಭ್ಯವಿರುತ್ತದೆ. ತಾಂಡಗಳಲ್ಲಿರುವ ಎಲ್ಲಾ ಜನರು ಬಂಜಾರ/ಲಮಾಣಿ/ಲಂಬಾಣಿ ಪರಿಶಿಷ್ಟ ಜಾತಿಗೆ ಸೇರಿರುತ್ತಾರೆ. 2011ರ ಜನಗಣತಿ ಪ್ರಕಾರ ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.50%ಕ್ಕಿಂತ ಹೆಚ್ಚಿಗೆ ಎಸ್.ಸಿ/ಎಸ್.ಟಿ. ಜನರು ಇರುವ ಕಾಲೋನಿ/ತಾಂಡಗಳನ್ನು ಆಯ್ಕೆ ಮಾಡಿ ಸದರಿ ಕಾಲೋನಿ/ತಾಂಡಗಳಲ್ಲಿ ಕುಡಿಯುವ ನೀರು, ರಸ್ತೆ, ವಿದ್ಯುತ್, ಒಳಚರಂಡಿ, ಸಂಪರ್ಕ ರಸ್ತೆ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಸಮಗ್ರ ಅಭಿವೃದ್ಧಿಪಡಿಸಲಾಗುವುದು. ಆಯ್ಕೆಯಾದ ಕಾಲೋನಿ/ತಾಂಡಗಳಲ್ಲಿ ಈಗಾಗಲೇ ಕಲ್ಪಿಸಿರುವ ಮೂಲಭೂತ ಸೌಕರ್ಯಗಳನ್ನು ಹೊರತುಪಡಿಸಿ, ಕೊರತೆ ಇರುವ ಮೂಲಭೂತ ಸೌಕರ್ಯಗಳನ್ನು ಮಾತ್ರ ಗುರ್ತಿಸಿ ಅಂದಾಜು ಪಟ್ಟಿಗಳನ್ನು ತಯಾರಿಸಿ ಅದರ ಮೊತ್ತಕ್ಕೆ ಮಾತ್ರ ಸೀಮಿತಗೊಳಿಸಿ ಕೆ.ಟಿ.ಪಿ.ಪಿ. ಕಾಯ್ದೆಯಂತೆ ಟೆಂಡರ್ ಕರೆದು ಕಾಮಗಾರಿಗಳನ್ನು ಪೂರ್ಣಗೊಳಿಸಲಾಗುವುದು. ಒಮ್ಮೆ ಸಮಗ್ರವಾಗಿ ಅಭಿವೃದ್ಧಿಪಡಿಸುವ ಮೂಲಕ ಅವಶ್ಯ ಮೂಲಭೂತ ಸೌಕರ್ಯಗಳನ್ನು ಒದಗಿಸಿದಂತಾಗುತ್ತದೆ.

ಪ್ರಸ್ತಾಪಿಸಿದ ಮೇಲ್ಕಂಡ ಯೋಜನೆಯಡಿ ಪ್ರತಿ ಜಿಲ್ಲೆಯಲ್ಲಿ ಎಸ್.ಸಿ/ಎಸ್.ಟಿ. ಜನಸಂಖ್ಯೆ ಆಧಾರದ ಮೇಲೆ, ಸಮಾಜ ಕಲ್ಯಾಣ ಇಲಾಖೆಗೆ ಒದಗಿಸಿದ ಅನುದಾನದ ಲಭ್ಯತೆ ಆಧಾರದ ಮೇಲೆ ಕಾಲೋನಿ/ತಾಂಡಗಳನ್ನು ಆಯ್ಕೆ ಮಾಡಿ ಸಮಗ್ರವಾಗಿ ಅಭಿವೃದ್ಧಿಪಡಿಸಲಾಗುವುದು.

ಆದ್ದರಿಂದ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 375 ಎಸ್‌ಡಿಸಿ 2018, ದಿನಾಂಕ10.10.2018**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪ್ರಗತಿ ಕಾಲೋನಿ ಯೋಜನೆಯನ್ನು ಕೆಳಕಂಡ ಮಾರ್ಗಸೂಚಿಗಳಂತೆ ಜಾರಿಗೊಳಿಸಲು ಸರ್ಕಾರದ ಆದೇಶ ಹೊರಡಿಸಲಾಗಿದೆ.

**ಮಾರ್ಗಸೂಚಿಗಳು:**

(1) 2011 ರ ಜನಗಣತಿಯಂತೆ ರಾಜ್ಯದ ಎಲ್ಲಾ ಗ್ರಾಮಗಳಲ್ಲಿ ಎಸ್.ಸಿ/ಎಸ್.ಟಿ. ಜನಸಂಖ್ಯೆಯ ವಿವರಗಳು ಲಭ್ಯವಿರುತ್ತವೆ. ಅಲ್ಲದೇ ತಾಂಡಗಳ ಪಟ್ಟಿ ಸಹ ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತದಲ್ಲಿ ಲಭ್ಯವಿರುತ್ತದೆ. ಕಾರಣ 2011ರ ಜನಗಣತಿ ಪ್ರಕಾರ ಗ್ರಾಮದ ಒಟ್ಟು ಜನಸಂಖ್ಯೆಯಲ್ಲಿ ಶೇ.50%ಕ್ಕಿಂತ ಹೆಚ್ಚಿಗೆ ಎಸ್.ಸಿ/ಎಸ್.ಟಿ. ಜನರು ಇರುವ ಕಾಲೋನಿ/ತಾಂಡಗಳನ್ನು ಸರ್ಕಾರದ ಮಟ್ಟದಲ್ಲಿ ಆಯ್ಕೆ ಮಾಡಲಾಗುವುದು.

(2) ಆಯ್ಕೆಯಾದ ಕಾಲೋನಿ/ತಾಂಡಗಳಲ್ಲಿ ಕುಡಿಯುವ ನೀರು, ರಸ್ತೆ, ವಿದ್ಯುತ್, ಒಳಚರಂಡಿ, ಸಂಪರ್ಕ ರಸ್ತೆ, ಸಮುದಾಯ ಭವನ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಕನಿಷ್ಠ ರೂ.1.00 ಕೋಟಿ, ಗರಿಷ್ಠ ರೂ.5.00 ಕೋಟಿ ವೆಚ್ಚದಲ್ಲಿ ಸಮಗ್ರವಾಗಿ ಅಭಿವೃದ್ಧಿಪಡಿಸುವುದು. ಆದರೆ, ಸದರಿ ಕಾಲೋನಿ / ತಾಂಡಗಳಲ್ಲಿ ಅಗತ್ಯವಿರುವ ಕಾಮಗಾರಿಗಳನ್ನು ಮಾತ್ರ ಕೈಗೊಳ್ಳುವುದು.

(3) ಆಯ್ಕೆಯಾದ ಕಾಲೋನಿ/ತಾಂಡಗಳಲ್ಲಿ ಈಗಾಗಲೇ ಕಲ್ಪಿಸಿರುವ ಮೂಲಭೂತ ಸೌಕರ್ಯಗಳನ್ನು ಹೊರತುಪಡಿಸಿ, ಕೊರತೆ ಇರುವ ಮೂಲಭೂತ ಸೌಕರ್ಯಗಳನ್ನು ಮಾತ್ರ ಗುರ್ತಿಸಿ ಅಂದಾಜು ಪಟ್ಟಿಗಳನ್ನು ತಯಾರಿಸಿ ಅದರ ಮೊತ್ತಕ್ಕೆ ಮಾತ್ರ ಸೀಮಿತಗೊಳಿಸಿ ಕೆ.ಟಿ.ಪಿ.ಪಿ. ಕಾಯ್ದೆಯಂತೆ ಟೆಂಡರ್ ಕರೆದು ಕಾಮಗಾರಿಗಳನ್ನು ಪೂರ್ಣಗೊಳಿಸುವುದು.

(4) ಈ ಯೋಜನೆ ಅಡಿಯಲ್ಲಿ ಸಮಗ್ರ ಅಭಿವೃದ್ಧಿಪಡಿಸಿದ ಕಾಲೋನಿ/ತಾಂಡಗಳಿಗೆ ಮತ್ತೊಮ್ಮೆ ಯಾವುದೇ ಅನುದಾನ ನೀಡುವ ಅವಶ್ಯಕತೆ ಇರುವುದಿಲ್ಲ.

(5) ಎಸ್.ಸಿ.ಎಸ್.ಪಿ/ಟಿ.ಎಸ್.ಪಿ. ಅಡಿಯಲ್ಲಿ ಲೋಕೋಪಯೋಗಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮತ್ತು ಇತರ ಇಲಾಖೆಗಳಿಗೆ ನೀಡಿದ ಅನುದಾನದಿಂದ ಅವಶ್ಯಕವಿರುವ ಕೆಲವು ಸೌಕರ್ಯಗಳನ್ನು ಒದಗಿಸಲು ಅವಕಾಶವಿರುತ್ತದೆ.

(6) ಸಮಾಜ ಕಲ್ಯಾಣ ಇಲಾಖೆಗೆ ನೀಡಿದ ಅನುದಾನದಿಂದ ಈ ಯೋಜನೆಗೆ ತಗಲುವ ವೆಚ್ಚವನ್ನು ಭರಿಸುವುದು.

(7) ಆಯ್ಕೆಯಾದ ಕಾಲೋನಿ/ತಾಂಡಗಳಲ್ಲಿ ಅವಶ್ಯಕತೆ ಇರುವ ಮೂಲಭೂತ ಸೌಲಭ್ಯಗಳನ್ನು ಗುರ್ತಿಸಿ ರೇಖಾ ಅಂದಾಜು ಪಟ್ಟಿಯೊಂದಿಗೆ ಪ್ರಸ್ತಾವನೆಗಳನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ ಇವರುಗಳ ಮೂಲಕ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುವುದು.

(8) ಪ್ರಗತಿ ಕಾಲೋನಿ ಯೋಜನೆ ಅಡಿ ಆಯ್ಕೆಯಾದ ಕಾಲೋನಿ/ತಾಂಡಗಳನ್ನು ಹೊರತುಪಡಿಸಿ, ಉಳಿದ ಕಾಲೋನಿ/ತಾಂಡಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಜಾರಿಯಲ್ಲಿರುವ ಯೋಜನೆ ಮುಂದುವರಿಯುತ್ತದೆ.

ಈ ಯೋಜನೆಗೆ ತಗಲುವ ವೆಚ್ಚವನ್ನು ಪರಿಶಿಷ್ಟ ಜಾತಿ ಜನರಿಗೆ, ಸಮಾಜ ಕಲ್ಯಾಣ ಇಲಾಖೆಯ ಲೆಕ್ಕಶೀರ್ಷಿಕೆ 2225-01-796-0-02 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು)ರಡಿ ಮತ್ತು ಪರಿಶಿಷ್ಟ ಪಂಗಡದ ಜನರಿಗೆ, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆಯ ಲೆಕ್ಕಶೀರ್ಷಿಕೆ 2225-02-794-0-05 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು)ರಡಿ ಒದಗಿಸಿದ ಅನುದಾನದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಎನ್. ಸುಮತಿ) 10/10/18
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಮಾಜ ಕಲ್ಯಾಣ ಇಲಾಖೆ.

ಇವರಿಗೆ:

1. ಮಹಾಲೇಖಪಾಲರು, (ಎ&ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು.
5. ಎಲ್ಲಾ ಜಿಲ್ಲಾಧಿಕಾರಿಗಳಿಗೆ.
6. ಎಲ್ಲಾ ಮುಖ್ಯ ಕಾರ್ಯನಿರ್ವಾಹಕಾಧಿಕಾರಿಗಳು, ಜಿಲ್ಲಾ ಪಂಚಾಯತ್.
7. ಎಲ್ಲಾ ಜಂಟಿ/ಉಪನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
8. ಎಲ್ಲಾ ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿಗಳಿಗೆ.
9. ಎಲ್ಲಾ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ.
10. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

ಪ್ರತಿಗಳು:

1. ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.
3. ಸರ್ಕಾರದ ಜಂಟಿ/ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ.
4. ಶಾಖಾ ರಕ್ಷಾ ಕಡತ/ಹೆಚ್ಚುವರಿ ಪ್ರತಿಗಳು.

## ಕರ್ನಾಟಕ ಸರ್ಕಾರ

ಸಂಖ್ಯೆ:ಸಕಇ 375 ಎಸ್‌ಡಿಸಿ 2018

ಕರ್ನಾಟಕಸರ್ಕಾರದ ಸಚಿವಾಲಯ.
ವಿಕಾಸ ಸೌಧ. 2ನೇ ಮಹಡಿ.
ಬೆಂಗಳೂರು.ದಿನಾಂಕ: 23-11-2018.

28/11/18

### ತಿದ್ದುಪಡಿ ಆದೇಶ

ಸರ್ಕಾರದ ಆದೇಶ ಸಂಖ್ಯೆ: ಸಕಇ 375 ಎಸ್‌ಡಿಸಿ 2018. ದಿನಾಂಕ: 10.10.2018 ರಂದು ಹೊರಡಿಸಲಾದ ಆದೇಶದಲ್ಲಿನ / ಲೆಕ್ಕಶೀರ್ಷಿಕೆ "2225-01-796-0-02 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು) ಮತ್ತು 2225-02-794-0-05 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು) ಎಂಬುದರ ಬದಲಿಗೆ ಅನುಕ್ರಮವಾಗಿ "4225-01-796-0-01 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು 4225-02-794-0-01 (ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು)" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ,

(ಬಿ.ಎನ್.ಸುಮತಿ) 23/11/18
ಸರ್ಕಾರದ ಅಧೀನ ಕಾರ್ಯದರ್ಶಿ-3,
ಸಮಾಜ ಕಲ್ಯಾಣ ಇಲಾಖೆ.

ಗೆ:-

1. ಮಹಾಲೇಖಪಾಲರು, (ಎ ಮತ್ತು ಇ, ಲೆಕ್ಕಪರಿಶೋಧನೆ-1 ಮತ್ತು 2), ಕರ್ನಾಟಕ ಬೆಂಗಳೂರು.
2. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು.
3. ನಿರ್ದೇಶಕರು, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ, ಬೆಂಗಳೂರು.
4. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು.
5. ಎಲ್ಲಾ ಜಿಲ್ಲಾಧಿಕಾರಿಗಳಿಗೆ.
6. ಎಲ್ಲಾ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್.
7. ಎಲ್ಲಾ ಜಂಟಿ/ಉಪ ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ.
8. ಎಲ್ಲಾ ಜಿಲ್ಲಾ ಪರಿಶಿಷ್ಟ ಪಂಗಡಗಳ ಕಲ್ಯಾಣಾಧಿಕಾರಿಗಳಿಗೆ.
9. ಎಲ್ಲಾ ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ
10. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.

ಪ್ರತಿಗಳು:

1. ಮಾನ್ಯ ಸಮಾಜ ಕಲ್ಯಾಣ ಸಚಿವರ ಆಪ್ತ ಕಾರ್ಯದರ್ಶಿ, ವಿಕಾಸಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿರವರ ಆಪ್ತ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ.
3. ಸರ್ಕಾರದ ಜಂಟಿ/ಉಪ ಕಾರ್ಯದರ್ಶಿಯವರ ಆಪ್ತ ಸಹಾಯಕರು, ಸಮಾಜ ಕಲ್ಯಾಣ ಇಲಾಖೆ, ವಿಕಾಸಸೌಧ.
4. ಶಾಖಾ ರಕ್ಷಾ ಕಡತ / ಹೆಚ್ಚುವರಿ ಪ್ರತಿಗಳು.

ಅನುಬಂಧ

ಸರ್ಕಾರದ ಆದೇಶ ಸಂಖ್ಯೆ: ಸಕಇ 468 ಪಕವಿ 2021 ದಿನಾಂಕ: 11-08-2021.

"ಪ್ರಬುದ್ಧ" ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗ ಯೋಜನೆ :-

## 1. ಯೋಜನೆಯ ಉದ್ದೇಶ

ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಿದೇಶದಲ್ಲಿ ಉನ್ನತ ವ್ಯಾಸಂಗಕ್ಕೆ ಅಗತ್ಯವಾದ ಧನ ಸಹಾಯ ನೀಡುವ ಉದ್ದೇಶದಿಂದ ಪ್ರಬುದ್ಧ ಯೋಜನೆಯನ್ನು ಜಾರಿಗೆ ತರಲಾಗಿದೆ.

ಈ ಕೆಳಕಂಡ ಕೋರ್ಸ್‌ಗಳನ್ನು ಸರ್ಕಾರ ಕಾಲಕಾಲಕ್ಕೆ ಹೊರಡಿಸಬಹುದಾದ ವಿದೇಶ/ವಿದೇಶಿ ವಿಶ್ವ ವಿದ್ಯಾಲಯ/ ಸಂಸ್ಥೆಗಳಲ್ಲಿ ಅಧ್ಯಯನ ಮಾಡಲು ಅವಕಾಶವಿದೆ.

| Sl. No. | Fields of Study (ಅಧ್ಯಯನದ ಕ್ಷೇತ್ರಗಳು) |
|---|---|
| a. | Engineering and Management |
| b. | Pure Sciences and Applied Sciences |
| c. | Agriculture Sciences and Medicine |
| d. | International Commerce, Economics, Accounting Finance |
| e. | Humanities, Social Science, Fine Arts and Law |

ಯಾವುದೇ ಅಧ್ಯಯನ ಕ್ಷೇತ್ರ ಸೇರಿಸುವ ಅಥವಾ ತೆಗೆದು ಹಾಕುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

## 2. ಸ್ಥಾನ ಹಂಚಿಕೆ:

| ಕ್ರ. ಸಂ. | ವರ್ಗ | ಸ್ಥಾನ ಹಂಚಿಕೆ ಶೇ. | ಷರಾ. |
|---|---|---|---|
| 1 | ಮಹಿಳಾ ಅಭ್ಯರ್ಥಿ | 33% | ನಿಗದಿತ ಗುರಿಗನುಗುಣವಾಗಿ ಅರ್ಹ ಮಹಿಳಾ ಅಭ್ಯರ್ಥಿ ಆಯ್ಕೆಗೆ ಲಭ್ಯವಿಲ್ಲದಿದ್ದರೆ, ಅಂತಹ ಸ್ಥಾನವನ್ನು ಆಯಾ ವರ್ಗದ ಪುರುಷ ಅಭ್ಯರ್ಥಿಗಳಿಂದ ಭರ್ತಿ ಮಾಡುವುದು. |
| 2 | ಅಂಗವಿಕಲ ವಿದ್ಯಾರ್ಥಿ | 05% | ನಿಗದಿತ ಗುರಿಗನುಗುಣವಾಗಿ ಅರ್ಹ ಅಂಗವಿಕಲ ಅಭ್ಯರ್ಥಿ ಆಯ್ಕೆಗೆ ಲಭ್ಯವಿಲ್ಲದಿದ್ದರೆ, ಅಂತಹ ಸ್ಥಾನವನ್ನು ಆಯಾ ವರ್ಗದ ಸಾಮಾನ್ಯ ಅಭ್ಯರ್ಥಿಗಳಿಂದ ಭರ್ತಿ ಮಾಡುವುದು. |
| 3 | ಹಾಸ್ಟೆಲ್ ವಿದ್ಯಾರ್ಥಿ | 10% | ರಾಜ್ಯ ಸರ್ಕಾರದಿಂದ ನಡೆಸಲ್ಪಡುವ ಸರ್ಕಾರಿ ವಿದ್ಯಾರ್ಥಿ ನಿಲಯದಲ್ಲಿ ಕನಿಷ್ಠ 03 ವರ್ಷ ಅಧ್ಯಯನ ಮಾಡಿರಬೇಕು, ನಿಗದಿತ ಸಂಖ್ಯೆಯ ಹಾಸ್ಟೆಲ್ ವಿದ್ಯಾರ್ಥಿಗಳು ಆಯ್ಕೆಗೆ ಲಭ್ಯವಿಲ್ಲದಿದ್ದರೆ, ಅಂತಹ |

|  |  |  | ಸ್ಥಾನಗಳಿಗೆ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯ ವಸತಿ ಶಾಲೆಯಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗೆ ಅವಕಾಶ ಕಲ್ಪಿಸಲಾಗುವುದು. |
|---|---|---|---|
| 4 | ವಸತಿ ಶಾಲೆ | 10% | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವಸತಿ ಶಾಲೆ/ ಕಾಲೇಜುಗಳಲ್ಲಿ ಕನಿಷ್ಠ 03 ವರ್ಷಗಳ ಅಧ್ಯಯನ ಮಾಡಿದ ವಿದ್ಯಾರ್ಥಿಗಳಿಗೆ ಶೇ10 ರಷ್ಟು ಸ್ಥಾನವನ್ನು ಭರ್ತಿ ಮಾಡುವುದು.<br>ನಿಗದಿತ ಸಂಖ್ಯೆಯ ಅರ್ಹ ವಸತಿ ಶಾಲೆಯ (KREIS) ಅಭ್ಯರ್ಥಿಗಳು ಲಭ್ಯವಿಲ್ಲದಿದ್ದರೆ, ಸರ್ಕಾರಿ ವಿದ್ಯಾರ್ಥಿ ನಿಲಯದಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳಿಗೆ ಅವಕಾಶ ಕಲ್ಪಿಸುವುದು. |
| 5 | ಸಫಾಯಿ ಕರ್ಮಚಾರಿ ಮಕ್ಕಳು/ಸೂಕ್ಷ್ಮ, ಅತಿ ಸೂಕ್ಷ್ಮ ವರ್ಗದ ವಿದ್ಯಾರ್ಥಿಗಳು | 5% | ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದರೆ ಸರ್ಕಾರಿ ಶಾಲೆಯಲ್ಲಿ ಕನಿಷ್ಠ 03 ವರ್ಷ ಅಧ್ಯಯನ ಮಾಡಿದ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸುವುದು. |

* ಸರ್ಕಾರಿ ವಿದ್ಯಾರ್ಥಿ ನಿಲಯ / ವಸತಿ ಶಾಲೆ / ಸಫಾಯಿ ಕರ್ಮಚಾರಿ ಮಕ್ಕಳು/ಸೂಕ್ಷ್ಮ, ಅತಿ ಸೂಕ್ಷ್ಮ ವರ್ಗದ ವಿದ್ಯಾರ್ಥಿಗಳಿಗೆ ನಿಗದಿಪಡಿಸಲಾದ ಗುರಿಗೆ ಅನುಗುಣವಾಗಿ ಅಭ್ಯರ್ಥಿಗಳು ಲಭ್ಯವಿಲ್ಲದೇ ಇದ್ದಲ್ಲಿ, ರಾಜ್ಯ ಸರ್ಕಾರ ನಡೆಸುವ ಸರ್ಕಾರಿ ಶಾಲೆಗಳಲ್ಲಿ ಕನಿಷ್ಠ ಮೂರು ವರ್ಷ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೊದಲ ಆದ್ಯತೆ ನೀಡುವುದು, ಒಂದೊಮ್ಮೆ ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು ದೊರೆಯದೇ ಇದ್ದಲ್ಲಿ, ಇತರೆ ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ಅವಕಾಶ ಕಲ್ಪಿಸುವುದು.

* ಸ್ಥಾನ ಹಂಚಿಕೆಯ ಸಂಖ್ಯೆಯನ್ನು ಹೆಚ್ಚಿಸುವ ಅಥವಾ ಕೈಬಿಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

### 3. ಅರ್ಜಿ ಸಲ್ಲಿಸಲು ಹೊಂದಿರಬೇಕಾದ ಅರ್ಹತೆಗಳು

1. ಅಭ್ಯರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
2. ಕರ್ನಾಟಕ ರಾಜ್ಯ ಪ್ರಕಟಿಸುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
3. ಇಲಾಖೆಯಿಂದ ಪ್ರಕಟಿಸಲಾದ ವಿದೇಶಿ ವಿಶ್ವವಿದ್ಯಾಲಯದಿಂದ ಆಫರ್ ಲೆಟರ್ ಪಡೆದಿರಬೇಕು.

----------3

4. ವಿದೇಶಿ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಅಧ್ಯಯನ ಮಾಡಲು ಉದ್ದೇಶಿಸಿರುವ ಅಭ್ಯರ್ಥಿಯು ಯು.ಜಿ.ಸಿ ಮಾನ್ಯತೆ ಪಡೆದ ವಿಶ್ವ ವಿದ್ಯಾಲಯದಿಂದ ಪದವಿಯನ್ನು ಪಡೆದಿರಬೇಕು. ಪಿ.ಹೆಚ್.ಡಿ ಅಧ್ಯಯನಕ್ಕೆ ತೆರಳುವ ಅಭ್ಯರ್ಥಿಗಳು ಸ್ನಾತಕೋತ್ತರ ಪದವಿ ಪಡೆದಿರಬೇಕು.

5. ವಾರ್ಷಿಕ ರೂ.25.00ಲಕ್ಷ ವರೆಗಿನ ಕೌಟುಂಬಿಕ ಆದಾಯ ಹೊಂದಿರುವವರು ಅರ್ಜಿ ಸಲ್ಲಿಸಬಹುದು. ಆದರೆ ಕಂಡಿಕೆ (4) ರಲ್ಲಿ ವಿವರಿಸಿರುವಂತೆ ಮಿತಿಯಾಧಾರಿತ ಧನಸಹಾಯವನ್ನು ಬಿಡುಗಡೆ ಮಾಡಲಾಗುವುದು.

6. ಅರ್ಹತೆಯಲ್ಲಿ ಯಾವುದೇ ರೀತಿಯ ಬದಲಾವಣೆ ತರುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.

4. ಧನ ಸಹಾಯ ಬಿಡುಗಡೆ:

| ಕ್ರ. ಸಂ. | ವಾರ್ಷಿಕ ಆದಾಯ | ಧನ ಸಹಾಯ |
|---|---|---|
| 1 | 8.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ವಿಶ್ವವಿದ್ಯಾನಿಲಯದ ಕೋರ್ಸ್ ಶುಲ್ಕ - ಶೇ. 100<br>ನಿರ್ವಹಣಾ ವೆಚ್ಚ ವಾರ್ಷಿಕ ಗರಿಷ್ಠ - 8.00ಲಕ್ಷಗಳು (ನಿರ್ವಹಣಾ ವೆಚ್ಚದ ಶೇ.75 ಅಥವಾ 8.00 ಲಕ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಪಾವತಿಸುವುದು)<br>ವೀಸಾ ಶುಲ್ಕ (ವಾಸ್ತವಿಕ) - ಶೇ. 100<br>ವಿಮಾ ಶುಲ್ಕ (ವಾಸ್ತವಿಕ) - ಶೇ. 100<br>ಪುಸ್ತಕ ಮತ್ತು ಇತರ ಶುಲ್ಕ(ವಾರ್ಷಿಕ)- 1.00 ಲಕ್ಷ<br>ವಿಮಾನ ಪ್ರಯಾಣ ವೆಚ್ಚ - ಶೇ.100<br>(ಕೋರ್ಸ್ ಪೂರ್ಣಾವಧಿಯಲ್ಲಿ ಒಂದು ಬಾರಿ ಮಾತ್ರ ಎಕನಾಮಿಕ್ ಕ್ಲಾಸ್ ನಲ್ಲಿ ವಿದೇಶದಲ್ಲಿ ವ್ಯಾಸಂಗಕ್ಕೆ ಪ್ರಯಾಣಿಸಲು ಮತ್ತು ವಿದೇಶದಿಂದ ಒಂದು ಬಾರಿ ಸ್ವದೇಶಕ್ಕೆ ಪ್ರಯಾಣಿಸಲು ಅವಕಾಶವಿರುತ್ತದೆ.) |
| 2 | 8.00 ಲಕ್ಷದಿಂದ 15.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ಈ ಮೇಲ್ಕಂಡ ಎಲ್ಲಾ ವೆಚ್ಚದಲ್ಲಿ ಶೇ. 50 ರಷ್ಟು ವೆಚ್ಚವನ್ನು ಪಾವತಿಸಲಾಗುವುದು. |
| 3 | 15.00 ಲಕ್ಷದಿಂದ 25.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ಈ ಮೇಲ್ಕಂಡ ಎಲ್ಲಾ ವೆಚ್ಚದಲ್ಲಿ ಶೇ. 33 ರಷ್ಟು ವೆಚ್ಚವನ್ನು ಪಾವತಿಸಲಾಗುವುದು. |

------------4

1. ಅಭ್ಯರ್ಥಿಗಳು ವಿದೇಶಕ್ಕೆ ತೆರಳಿ ವಿದೇಶಿ ಬ್ಯಾಂಕ್ ಖಾತೆಯನ್ನು ತೆರೆದ ನಂತರ, ಇಲಾಖೆಯು ಕೇಳಬಹುದಾದ ಎಲ್ಲಾ ದಾಖಲೆಗಳನ್ನು ಒದಗಿಸಿದ ಮೇಲೆ ಅನುದಾನದ ಲಭ್ಯತೆಗೆ ಅನುಗುಣವಾಗಿ ಧನಸಹಾಯವನ್ನು ಅಭ್ಯರ್ಥಿಯ ವಿದೇಶಿ ಬ್ಯಾಂಕ್ ಖಾತೆಗೆ ಬಿಡುಗಡೆ ಮಾಡುವುದು.

2. ಸೆಮಿಸ್ಟರ್ ವಾರು ವರ್ಷದಲ್ಲಿ 2 ಬಾರಿ ಅಥವಾ ವಿಶ್ವ ವಿದ್ಯಾಲಯಗಳು ಕೇಳಬಹುದಾದ ಅವಧಿಗೆ ಅನುಗುಣವಾಗಿ ಕೋರ್ಸ್ ಶುಲ್ಕ ಬಿಡುಗಡೆ ಮಾಡುವುದು. ಆದರೆ, ನಿರ್ವಹಣಾ ವೆಚ್ಚವನ್ನು ವರ್ಷದಲ್ಲಿ 2 ಬಾರಿ ಮಾತ್ರ ಬಿಡುಗಡೆ ಮಾಡುವುದು.

5. <u>ಸಹಾಯ ಧನ ಬಿಡುಗಡೆ:</u>

1. ವಿಶ್ವವಿದ್ಯಾಲಯದ ಶುಲ್ಕ/ ನಿರ್ವಹಣಾ ವೆಚ್ಚ, ವೀಸಾ ಶುಲ್ಕ, ವಿಮಾ ವೆಚ್ಚ ಹಾಗೂ ಇತರೆ ವೆಚ್ಚವನ್ನು ಬಿಡುಗಡೆ ಮಾಡುವ ಪೂರ್ವದಲ್ಲಿ ಅಭ್ಯರ್ಥಿಯಿಂದ I-20/ಆಫರ್ ಲೆಟರ್/VISA/Passport/Boarding Pass/ವಿದ್ಯಾರ್ಥಿ ವಿಶ್ವವಿದ್ಯಾಲಯ ಪ್ರವೇಶ ಪಡೆದ ದಾಖಲೆ ಸೇರಿದಂತೆ ಇಲಾಖೆ ಕಾಲಕಾಲಕ್ಕೆ ನಿಗದಿಪಡಿಸಿದ ದಾಖಲೆಗಳನ್ನು ಪಡೆದ ನಂತರ ಅಭ್ಯರ್ಥಿಯ ವಿದೇಶಿ ಬ್ಯಾಂಕ್ ಖಾತೆಗೆ ಧನ ಸಹಾಯ ಬಿಡುಗಡೆ ಮಾಡುವುದು.

2. ಅಭ್ಯರ್ಥಿಯು ಆಫರ್ ಲೆಟರ್/ I-20/VISA/Passport ಸೇರಿದಂತೆ ಎಲ್ಲಾ ದಾಖಲೆಗಳನ್ನು ತನ್ನ ಸ್ವಂತ ಪ್ರಯತ್ನ ಮತ್ತು ವೆಚ್ಚದಿಂದ ಭರಿಸಿ ಪಡೆಯಬೇಕು. ಇವುಗಳನ್ನು ಪಡೆಯಲು ಇಲಾಖೆಯಿಂದ ಯಾವುದೇ ಸಹಾಯ ಹಾಗೂ ಧನ ಸಹಾಯ ನೀಡಲಾಗುವುದಿಲ್ಲ.

3. ಧನ ಸಹಾಯವನ್ನು ಸೆಮಿಸ್ಟರ್ ವಾರು ವಿಂಗಡಿಸಿ ಬಿಡುಗಡೆ ಮಾಡಬೇಕು. ಮೊದಲ ಸೆಮಿಸ್ಟರ್ ಹೊರತು ಪಡಿಸಿ ಉಳಿದ ಸೆಮಿಸ್ಟರ್‌ಗಳ ಧನ ಸಹಾಯ ಬಿಡುಗಡೆ ಪೂರ್ವದಲ್ಲಿ ಅಭ್ಯರ್ಥಿ ಹಿಂದಿನ ಸೆಮಿಸ್ಟರ್‌ನಲ್ಲಿ ಶೈಕ್ಷಣಿಕ ಪ್ರಗತಿ ಹಾಗೂ ಮುಂದಿನ ಸೆಮಿಸ್ಟರ್‌ಗೆ ಪ್ರವೇಶ ಪಡೆದಿರುವುದನ್ನು ಖಚಿತ ಪಡಿಸಿಕೊಂಡು ಧನ ಸಹಾಯ ಬಿಡುಗಡೆ ಮಾಡಬೇಕು.

4. ಅಭ್ಯರ್ಥಿಯು ಒಂದು ಸೆಮಿಸ್ಟರ್‌ನಲ್ಲಿ ಕೆಲವೊಂದು ವಿಷಯದಲ್ಲಿ ಅನುತ್ತೀರ್ಣನಾಗಿದ್ದಾಗ್ಯೂ ಮುಂದಿನ ಸೆಮಿಸ್ಟರ್‌ಗೆ ಪ್ರವೇಶ ಪಡೆಯಲು ಅರ್ಹನಾಗಿರುವ ಬಗ್ಗೆ ವಿಶ್ವವಿದ್ಯಾಲಯ ದೃಢೀಕರಿಸಿದರೆ ಅಂತಹ ಅಭ್ಯರ್ಥಿಗೆ ನಿಗದಿತ ಧನ ಸಹಾಯವನ್ನು ಬಿಡುಗಡೆ ಮಾಡುವುದು.

----------5

5. ಒಂದೊಮ್ಮೆ ಅಭ್ಯರ್ಥಿಗೆ ಮುಂದಿನ ಸೆಮಿಸ್ಟರ್‌ಗೆ ಅರ್ಹತೆ ಪಡೆಯದಿದ್ದರೆ, ಅಂತಹ ಅಭ್ಯರ್ಥಿಗೆ ಸರ್ಕಾರದಿಂದ ನೀಡಬಹುದಾದ ಎಲ್ಲಾ ಧನ ಸಹಾಯವನ್ನು ಸ್ಥಗಿತಗೊಳಿಸತಕ್ಕದ್ದು, ಬಾಕಿ ಸೆಮಿಸ್ಟರ್ ಅನ್ನು ಅಭ್ಯರ್ಥಿಯು ತನ್ನ ಸ್ವಂತ ಖರ್ಚಿನಿಂದ ಪೂರ್ಣಗೊಳಿಸಬೇಕು. ಇಲಾಖೆಯಿಂದ ಯಾವುದೇ ಧನ ಸಹಾಯ ನೀಡಬಾರದು.

6. ಅಭ್ಯರ್ಥಿಯು ತನ್ನ ಕೋರ್ಸ್ ಅನ್ನು ಪೂರ್ಣಗೊಳಿಸಿದ ತರುವಾಯ ಇಲಾಖೆಗೆ ಪದವಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು ಹಾಗೂ ಉದ್ಯೋಗ ಸಂಬಂಧಿತ ಮಾಹಿತಿಯನ್ನು ಕಾಲಕಾಲಕ್ಕೆ ಸರ್ಕಾರ ಕೇಳಿದಾಗ ಒದಗಿಸಬೇಕು.

ಸೂಚನೆ:- ಕೋವಿಡ್–19 ರ ಸಾಂಕ್ರಾಮಿಕ ರೋಗದ ಹಿನ್ನೆಲೆಯಲ್ಲಿ ಉಂಟಾಗಿರುವ ಜಾಗತಿಕ ವಿಪ್ಲವದ ಕಾರಣದಿಂದಾಗಿ 2020-21 ನೇ ಸಾಲಿನಲ್ಲಿ ಪ್ರಬುದ್ಧ ಯೋಜನೆಯಡಿ ರೆಗ್ಯೂಲರ್ ಕೋರ್ಸ್‌ಗಳಲ್ಲಿ ವ್ಯಾಸಂಗಕ್ಕೆ ಆಯ್ಕೆಯಾಗಿ ಆನ್-ಲೈನ್ ಮೂಲಕ ತರಗತಿಗಳನ್ನು ಪಡೆಯುತ್ತಿರುವ ಅಭ್ಯರ್ಥಿಗಳಿಗೆ ಕೋರ್ಸ್ ಶುಲ್ಕವನ್ನು ವಿಶ್ವವಿದ್ಯಾಲಯಕ್ಕೆ ಬಿಡುಗಡೆ ಮಾಡುವುದು. ಒಂದೊಮ್ಮೆ ವಿದ್ಯಾರ್ಥಿಯು ತನ್ನ ಸ್ವಂತ ಹಣದಿಂದ ಕೋರ್ಸ್ ಶುಲ್ಕವನ್ನು ಭರಿಸಿದ್ದರೆ, ಅಗತ್ಯ ದಾಖಲೆಗಳನ್ನು ಪಡೆದು ಅಭ್ಯರ್ಥಿಯ ಸ್ಥಳೀಯ ಬ್ಯಾಂಕ್ ಖಾತೆಗೆ ಕೋರ್ಸ್ ಶುಲ್ಕದ ವೆಚ್ಚವನ್ನು ಬಿಡುಗಡೆ ಮಾಡುವುದು. ಆದರೆ ನಿರ್ವಹಣಾ ವೆಚ್ಚ ಸೇರಿದಂತೆ ಇತರೆ ಯಾವುದೇ ವೆಚ್ಚಗಳನ್ನು ಪಾವತಿಸಲು ಅವಕಾಶವಿರುವುದಿಲ್ಲ.

ಮುಂದುವರೆದು, 2021-22 ನೇ ಸಾಲಿಗೆ ವಿದೇಶಿ ವಿಶ್ವ ವಿದ್ಯಾಲಯಗಳಲ್ಲಿ ರೆಗ್ಯೂಲರ್ ಸ್ನಾತಕೋತ್ತರ ಪದವಿ / ಪಿ.ಹೆಚ್.ಡಿ ಅಧ್ಯಯನಕ್ಕೆ ಪ್ರವೇಶ ಪಡೆದು, ಪ್ರಬುದ್ಧ ಯೋಜನೆಯಡಿ ಆಯ್ಕೆಯಾದಂತಹ ಅಭ್ಯರ್ಥಿಗಳು ಕೋವಿಡ್-19 ರ ಹಿನ್ನೆಲೆಯಲ್ಲಿ ಆನ್-ಲೈನ್ ಮೂಲಕ ತರಗತಿಗಳನ್ನು ಪಡೆದಲ್ಲಿ, ಅಂತಹ ವಿದ್ಯಾರ್ಥಿಗಳ ಕೋರ್ಸ್ ಶುಲ್ಕವನ್ನು ವಿದೇಶಿ ವಿಶ್ವವಿದ್ಯಾಲಯಗಳಿಗೆ ಪಾವತಿ ಮಾಡುವುದು. ಒಂದು ವೇಳೆ ಅಭ್ಯರ್ಥಿಗಳು ವಿಶ್ವ ವಿದ್ಯಾಲಯ ಶುಲ್ಕ ಪಾವತಿಸಿದ್ದಲ್ಲಿ ಅಭ್ಯರ್ಥಿಗಳ ಬ್ಯಾಂಕ್ ಖಾತೆಗೆ ಸದರಿ ಶುಲ್ಕವನ್ನು ಜಮೆ ಮಾಡುವುದು. ಆದರೆ, ಆನ್-ಲೈನ್ ತರಗತಿಗಳನ್ನು ಪಡೆದ ಅವಧಿಯ ನಿರ್ವಹಣಾ ವೆಚ್ಚ ಸೇರಿದಂತೆ ಇತರೆ ವೆಚ್ಚಗಳನ್ನು ಪಾವತಿ ಮಾಡಲು ಅವಕಾಶವಿರುವುದಿಲ್ಲ. ಕಡ್ಡಾಯವಾಗಿ ಪೂರ್ಣಪ್ರಮಾಣದ ರೆಗ್ಯೂಲರ್ ಸ್ನಾತಕೋತ್ತರ ಪದವಿ / ಪಿ.ಹೆಚ್.ಡಿ ಅಧ್ಯಯನಕ್ಕೆ ಪ್ರವೇಶ ಪಡೆದ ಅಭ್ಯರ್ಥಿಗಳು ಪ್ರಬುದ್ಧ ಯೋಜನೆಯಡಿ ಅರ್ಜಿ ಸಲ್ಲಿಸಬಹುದು. ಆನ್-ಲೈನ್ ತರಬೇತಿಯನ್ನು 2021-22 ನೇ ಸಾಲಿಗೆ ಮಾತ್ರ ಸೀಮಿತಗೊಳಿಸುವುದು.

------------6

## 6. ಅಭ್ಯರ್ಥಿಯ ಆಯ್ಕೆ:

1. ಕಂಡಿಕೆ (3) ರ ಉಪ ಕಂಡಿಕೆ (1) ರಿಂದ (5) ರ ವರೆಗಿನ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳನ್ನು ಪದವಿಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದ ಮೇಲೆ ಆಯ್ಕೆ ಮಾಡುವುದು. ಪಿ.ಹೆಚ್.ಡಿ ಅಭ್ಯರ್ಥಿಗಳನ್ನು ಸ್ನಾತಕೋತ್ತರ ಪದವಿಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡುವುದು.
2. ಅಭ್ಯರ್ಥಿಯ ಆಯ್ಕೆಗೆ ಮೆರಿಟ್ ಅಂಕಗಳನ್ನು ಪರಿಗಣಿಸುವಾಗ ಅಭ್ಯರ್ಥಿಯು ಪದವಿ / ಸ್ನಾತಕೋತ್ತರ ಪದವಿಯಲ್ಲಿ ಅಧ್ಯಯನ ಮಾಡಿದ ಕ್ಷೇತ್ರದ (field) ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದು.
3. ನಿಗದಿತ ಕ್ಷೇತ್ರಕ್ಕೆ ಸ್ಥಾಪಿಸಿದ ಒಟ್ಟು ಗುರಿಗಿಂತ ಹೆಚ್ಚಿನ ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಿದರೆ, ಅಧ್ಯಯನ ಕ್ಷೇತ್ರದ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ವಿವೇಚನೆ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ರವರು ಹೊಂದಿರುತ್ತಾರೆ.
4. ಸಮಾನ ಅಂಕಗಳನ್ನು ಇಬ್ಬರು ಅಭ್ಯರ್ಥಿಗಳು ಹೊಂದಿದ್ದ ಸಂದರ್ಭದಲ್ಲಿ ಮಹಿಳಾ ಅಭ್ಯರ್ಥಿಗೆ ಮೊದಲ ಆದ್ಯತೆ ನೀಡುವುದು.
5. ಇಬ್ಬರೂ ಒಂದೇ ಲಿಂಗಕ್ಕೆ ಸೇರಿದ ಅಭ್ಯರ್ಥಿಗಳು ಬಂದಾಗ ಜನ್ಮ ದಿನಾಂಕವನ್ನು ಆಧಾರವಾಗಿಟ್ಟುಕೊಂಡು ಹಿರಿತನದ ಆಧಾರದ ಮೇಲೆ ಆಯ್ಕೆ ಮಾಡುವುದು, ದಿನಾಂಕದಲ್ಲೂ ಸಮಾನತೆ ಕಂಡು ಬಂದರೆ, ಅಭ್ಯರ್ಥಿಗಳ ಸಮ್ಮುಖದಲ್ಲಿ ಲಾಟರಿ ಎತ್ತಿ ಆಯ್ಕೆಯನ್ನು ಅಂತಿಮಗೊಳಿಸುವುದು.
6. ದಾಖಲೆ ಪರಿಶೀಲನೆ ಮುಕ್ತಾಯದ ನಂತರ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಸರ್ಕಾರದ ಅನುಮೋದನೆಗಾಗಿ ಕಳುಹಿಸತಕ್ಕದ್ದು.
7. ಸರ್ಕಾರದಿಂದ ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಅನುಮೋದನೆ ದೊರೆತ ನಂತರ ಅಭ್ಯರ್ಥಿಗಳ ಜಾತಿ ಮತ್ತು ಆದಾಯ ಪ್ರಮಾಣ ಪತ್ರದ ನೈಜತೆಯನ್ನು ಮರು ಪರಿಶೀಲಿಸಲು ತಹಶೀಲ್ದಾರರಿಗೆ ಮಾಹಿತಿ ಸಲ್ಲಿಸಿ ವರದಿಯನ್ನು ಪಡೆಯುವುದು.
8. ತಹಶೀಲ್ದಾರ್ ರವರ ವರದಿ ಬಂದ ನಂತರ ಅಭ್ಯರ್ಥಿಗೆ ಮಂಜೂರಾತಿ ಪತ್ರವನ್ನು ನೀಡುವುದು, ಒಂದೊಮ್ಮೆ ವ್ಯತಿರಿಕ್ತ ವರದಿ ಬಂದರೆ ಅಭ್ಯರ್ಥಿಗಳ ಆಯ್ಕೆಯನ್ನು ರದ್ದುಗೊಳಿಸುವುದು.
9. ಆಯ್ಕೆಯಾದ ಅಭ್ಯರ್ಥಿಯು ಮಂಜೂರಾತಿ ಪತ್ರ ಪಡೆದ ಒಂದು ವರ್ಷದೊಳಗೆ ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳಬೇಕು. ನಿಗದಿತ ಕಾಲಾವಧಿಯಲ್ಲಿ ಉನ್ನತ ವ್ಯಾಸಂಗಕ್ಕೆ ತೆರಳಲು ಅಭ್ಯರ್ಥಿಯು ವಿಫಲನಾದರೆ, ಅಭ್ಯರ್ಥಿಗೆ ನೀಡಿರುವ ಆಯ್ಕೆ ಪತ್ರ ತನ್ನಿಂದ ತಾನೇ ರದ್ದುಗೊಳ್ಳುತ್ತದೆ. ಅಭ್ಯರ್ಥಿಯು ಅವಧಿ ವಿಸ್ತರಣೆ ಬಯಸಿದರೆ ಕಡ್ಡಾಯವಾಗಿ ಸರ್ಕಾರದ ಅನುಮತಿ ಪಡೆಯುವುದು.

---------7

10. ಮಂಜೂರಾತಿ ಪತ್ರ ಪಡೆದ ಅಭ್ಯರ್ಥಿಯು, ತಮ್ಮ ಸ್ವಂತ ವೆಚ್ಚದಲ್ಲಿ ವೀಸಾ / ಪಾಸ್‌ಪೋರ್ಟ್ / ಪ್ರವೇಶ ಸೇರಿದಂತೆ ಎಲ್ಲಾ ಅಗತ್ಯ ದಾಖಲೆಗಳನ್ನು ಸಿದ್ಧ ಪಡಿಸಿಕೊಂಡು ವಿದೇಶಕ್ಕೆ ತೆರಳುವುದು. ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಪ್ರವೇಶ ಪಡೆಯುವುದು, ವೀಸಾ, ಪಾಸ್‌ಪೋರ್ಟ್ ಸೇರಿದಂತೆ ಯಾವುದೇ ರೀತಿಯ ದಾಖಲೆ ಸಂಗ್ರಹಣೆಗೆ ಇಲಾಖೆಯ ಸಹಾಯ ನಿರೀಕ್ಷಿಸಬಾರದು.
11. ಅಭ್ಯರ್ಥಿಯ ಆಯ್ಕೆ ಪ್ರಕ್ರಿಯೆಯಲ್ಲಿ ಸರ್ಕಾರ ಪೂರ್ಣ ಅಧಿಕಾರವನ್ನು ಹೊಂದಿರುತ್ತದೆ.

7. <u>ಆಯ್ಕೆಗೆ ಅವಕಾಶಗಳು:</u>

1. ಅಭ್ಯರ್ಥಿಯು ತನ್ನ ಜೀವಿತಾವಧಿಯಲ್ಲಿ ಒಂದು ಬಾರಿ ಮಾತ್ರ ಪ್ರಬುದ್ಧ ಯೋಜನೆಯಡಿ ಆಯ್ಕೆಯಾಗಲು ಅರ್ಹರಿರುತ್ತಾರೆ.
2. ಸ್ನಾತಕೋತ್ತರ ಅಥವಾ ಪಿ.ಹೆಚ್.ಡಿ ಎರಡರಲ್ಲಿ ಒಂದಕ್ಕೆ ಒಂದು ಬಾರಿ ಮಾತ್ರ ಇಲಾಖೆಯಿಂದ ಧನ ಸಹಾಯವನ್ನು ಪಡೆಯಲು ಅರ್ಹರಿರುತ್ತಾರೆ.
3. ಇಲಾಖೆಯಿಂದ ಸ್ನಾತಕೋತ್ತರ ಪದವಿಗೆ ಆಯ್ಕೆಯಾಗಿ ಧನಸಹಾಯ ಪಡೆದ ಅಭ್ಯರ್ಥಿಯು, ಮುಂದಿನ ದಿನಗಳಲ್ಲಿ ವಿದೇಶಿ ವಿಶ್ವವಿದ್ಯಾಲಯದಲ್ಲಿ ಪಿ.ಹೆಚ್.ಡಿ ಪ್ರವೇಶಕ್ಕೆ ಅವಕಾಶ ಹೊಂದಿದ್ದರೆ, ಅಂತಹ ಅಭ್ಯರ್ಥಿಗಳು, ಪ್ರಬುದ್ಧ ಯೋಜನೆಯಡಿ ಮತ್ತೊಮ್ಮೆ ಧನಸಹಾಯಕ್ಕೆ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ. ಆದರೆ, ಸ್ನಾತಕೋತ್ತರ ಪದವಿ ವ್ಯಾಸಂಗದ ಸಂದರ್ಭದಲ್ಲಿ ನೀಡಲಾಗಿದ್ದ ಧನಸಹಾಯದ ಮೊತ್ತವನ್ನು ಕಳೆತಗೊಳಿಸಿಕೊಂಡು ಉಳಿಕೆ ಧನಸಹಾಯನ್ನು ಮಾತ್ರ ಪಿ.ಹೆಚ್.ಡಿ ಅಧ್ಯಯನ ಸಂದರ್ಭದಲ್ಲಿ ಸೆಮಿಸ್ಟರ್‌ವಾರು ಲೆಕ್ಕಹಾಕಿ ಬಿಡುಗಡೆ ಮಾಡುವುದು.
4. ಅಭ್ಯರ್ಥಿಯು ಕೇಂದ್ರ ಅಥವಾ ರಾಜ್ಯ ಸರ್ಕಾರದ ಯಾವುದೇ ಇಲಾಖೆ, ನಿಗಮ, ಸೊಸೈಟಿ ಅಥವಾ ಸಂಸ್ಥೆಯಿಂದ ಸಹಾಯ ಧನ ಪಡೆದಿದ್ದರೆ, ಇಲಾಖೆಯ ಧನ ಸಹಾಯ ಪಡೆಯಲು ಅರ್ಹರಲ್ಲ.
5. ಖಾಸಗಿ ಸಂಸ್ಥೆ/ ಟ್ರಸ್ಟ್ /ಕಂಪನಿಯಿಂದ ಪೂರ್ಣ ಪ್ರಮಾಣದ ಧನ ಸಹಾಯ ಪಡೆದಿದ್ದರೂ, ಪ್ರಬುದ್ಧ ಯೋಜನೆಯಡಿ ಸಹಾಯ ಧನ ಪಡೆಯಲು ಅರ್ಹರಲ್ಲ. ಆದರೆ ಅಲ್ಪ ಪ್ರಮಾಣ ಅಥವಾ ಭಾಗಶ: ಧನ ಸಹಾಯಕ್ಕೆ ಆಯ್ಕೆಯಾಗಿದ್ದರೆ ಉಳಿಕೆ ಅನುದಾನವನ್ನು ಇಲಾಖೆಯಿಂದ ಪಡೆಯಬಹುದು.
6. ಆಯ್ಕೆ ಬಯಸುವ ಅಭ್ಯರ್ಥಿಗಳು ಈಗಾಗಲೇ ಸ್ನಾತಕೋತ್ತರ ಪದವಿ/ ಪಿ.ಹೆಚ್.ಡಿ. ವ್ಯಾಸಂಗವನ್ನು ಭಾರತದಲ್ಲಾಗಲಿ, ವಿದೇಶದಲ್ಲಾಗಲಿ ಪೂರ್ಣಗೊಳಿಸಿದ್ದಲ್ಲಿ ಮತ್ತೊಮ್ಮೆ ಸ್ನಾತಕೋತ್ತರ ಪದವಿ/ ಪಿ.ಹೆಚ್.ಡಿ. ವ್ಯಾಸಂಗಕ್ಕೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
7. ಆದರೆ ಸ್ನಾತಕೋತ್ತರ ಪದವಿ ಪೂರೈಸಿದವರು ಪಿ.ಹೆಚ್.ಡಿ. ಪದವಿ ಅರ್ಜಿ ಸಲ್ಲಿಸಬಹುದು.

-----------8

8. ವಿದೇಶ / ವಿದೇಶಿ ವಿಶ್ವ ವಿದ್ಯಾಲಯಗಳ ಸೇರ್ಪಡೆ: (Qs World Ranking /US news ಆಧಾರದ ಮೇಲೆ)

1. ಕಂಡಿಕೆ (1) ರಲ್ಲಿ ಸಮೂದಿಸಲಾದ ಅಧ್ಯಯನ ಕ್ಷೇತ್ರ (Field of Study) ಗಳಲ್ಲಿ QS world Ranking & US newsನಲ್ಲಿ ಪ್ರಕಟಿಸುವ ಗ್ಲೋಬಲ್ ರ್‍ಯಾಂಕಿಂಗ್ 100 (Global Ranking) ರೊಳಗೆ ಸ್ಥಾನ ಪಡೆದ ವಿದೇಶ/ವಿದೇಶಿ ವಿಶ್ವವಿದ್ಯಾಲಯ / ಸಂಸ್ಥೆಗಳಲ್ಲಿ ಮಾತ್ರ ಅಧ್ಯಯನಕ್ಕೆ ಅವಕಾಶವಿರುತ್ತದೆ.
2. 2021-22 ನೇ ಸಾಲಿಗೆ ಅಂದರೆ 2022 ಮಾರ್ಚ್-31 ರ ಅಂತ್ಯದವರೆಗೂ QS world Ranking & US Newsನಲ್ಲಿ 200 ರೊಳಗೆ ರ್‍ಯಾಂಕಿಂಗ್ ಪಡೆದ ವಿದೇಶ/ ವಿಶ್ವವಿದ್ಯಾಲಯಗಳಲ್ಲಿ ಅಥವಾ ಈಗಾಗಲೇ ಇಲಾಖೆಯಿಂದ ಪ್ರಕಟಿಸಿದ ವಿದೇಶ/ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ಪಡೆದ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಿ, 2022 ರ ಮಾರ್ಚ್-31 ರ ನಂತರದ ಆಯ್ಕೆಯನ್ನು QS world Ranking & US Newsನಲ್ಲಿ 100ರೊಳಗೆ ರ್‍ಯಾಂಕ್ ಪಡೆದ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ಪಡೆದ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸುವುದು.
3. ಇಲಾಖೆಯಿಂದ ಕಾಲಕಾಲಕ್ಕೆ ವಿದೇಶ/ವಿದೇಶಿ ವಿಶ್ವ ವಿದ್ಯಾಲಯಗಳ ಪಟ್ಟಿಯನ್ನು ಪ್ರಕಟಿಸುವುದು. ಇಲಾಖೆಯು ಪ್ರಕಟಿಸುವ ವಿದೇಶ/ವಿದೇಶಿ ವಿಶ್ವವಿದ್ಯಾಲಯ / ಸಂಸ್ಥೆಗಳಲ್ಲಿ ಪ್ರವೇಶ ಪಡೆದಿರುವ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಿರುತ್ತಾರೆ.
4. ವಿದೇಶ/ವಿದೇಶಿ ವಿಶ್ವವಿದ್ಯಾಲಯಗಳ ಪಟ್ಟಿಯನ್ನು ಕಾಲಕಾಲಕ್ಕೆ ಪರಿಷ್ಕರಿಸುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ.
5. ಪ್ರತಿ ವರ್ಷ ಏಪ್ರಿಲ್-ಮೇ ಮಾಹೆಯಲ್ಲಿ ವಿದೇಶ/ವಿದೇಶಿ ವಿಶ್ವವಿದ್ಯಾಲಯದ ಪಟ್ಟಿಯನ್ನು ಪರಿಷ್ಕರಿಸಲಾಗುತ್ತದೆ. ಪರಿಷ್ಕರಣೆ ಸಂದರ್ಭದಲ್ಲಿ ಅಭ್ಯರ್ಥಿ ಈಗಾಗಲೇ ಪ್ರವೇಶ ಪತ್ರ ಪಡೆದಿರುವ ವಿದೇಶ/ವಿದೇಶಿ ವಿಶ್ವವಿದ್ಯಾಲಯ ಕೈಬಿಟ್ಟು ಹೋದರೆ ಇದಕ್ಕೆ ಇಲಾಖೆ ಕಾರಣವಲ್ಲ.
6. ವಿದೇಶ/ವಿದೇಶಿ ವಿಶ್ವವಿದ್ಯಾಲಯಗಳ ಪಟ್ಟಿ ಪ್ರಕಟಣೆಯಲ್ಲಿ ಸರ್ಕಾರದ ನಿರ್ಧಾರ ಅಂತಿಮವಾಗಿರುತ್ತದೆ.
7. ಅರ್ಜಿಯನ್ನು ಸ್ಪ್ರಿಂಗ್ (Spring) ಮತ್ತು ಫಾಲ್ ಸೀಸನ್ (Fall)ಗೆ ವಿದ್ಯಾರ್ಥಿಗಳು ಪ್ರವೇಶ ಪಡೆಯಲು ಅನುಕೂಲವಾಗುವಂತೆ ವರ್ಷದಲ್ಲಿ ಎರಡು ಬಾರಿ ಅರ್ಜಿಯನ್ನು ಆಹ್ವಾನಿಸುವುದು. ಒಂದೊಮ್ಮೆ ಮೊದಲ ಬಾರಿಗೆ ಅರ್ಜಿ ಕರೆಯುವಾಗಲೇ ನಿಗಧಿತ ಗುರಿಗನುಗುಣವಾಗಿ ಅಭ್ಯರ್ಥಿಗಳು ಆಯ್ಕೆಯಾಗಿದ್ದರೆ ಮತ್ತೊಮ್ಮೆ ಅರ್ಜಿ ಕರೆಯುವ ಅಗತ್ಯವಿರುವುದಿಲ್ಲ.

9) ಇತರೆ ಕಡ್ಡಾಯ ಮಾನದಂಡಗಳು.

1) ಅಭ್ಯರ್ಥಿಗಳು ವಿದೇಶದಲ್ಲಿ ಉನ್ನತ ವ್ಯಾಸಂಗಕ್ಕೆ ತೆರಳುವ ಪೂರ್ವದಲ್ಲಿ ಪ್ರಬುದ್ಧ ಯೋಜನೆಯಡಿ ಧನಸಹಾಯ ಕೋರಿ ಅರ್ಜಿಯನ್ನು ಸಲ್ಲಿಸಬೇಕು.

-----------9

2) ಅಭ್ಯರ್ಥಿಯು ಆಯ್ಕೆ ಖಚಿತಗೊಂಡ ನಂತರವಷ್ಟೇ ಇಲಾಖೆಯ ಪೂರ್ವಾನುಮತಿಯೊಂದಿಗೆ ವಿದೇಶಕ್ಕೆ ತೆರಳಬೇಕು.

3) ಅರ್ಜಿ ಸಲ್ಲಿಸಿದ ತರುವಾಯ ಆಯ್ಕೆ ಪ್ರಕ್ರಿಯೆ ಪೂರ್ಣಗೊಳ್ಳುವಷ್ಟರಲ್ಲಿ ತರಗತಿಗಳು ಪ್ರಾರಂಭವಾದ ಹಿನ್ನೆಲೆಯಲ್ಲಿ ಅಭ್ಯರ್ಥಿಯು ವಿದೇಶಕ್ಕೆ ತೆರಳಿದ ಸಂದರ್ಭದಲ್ಲಿ ಪೋಷಕರು ಮೂಲ ದಾಖಲೆಗಳೊಂದಿಗೆ ದಾಖಲೆ ಪರಿಶೀಲನೆಗೆ ಹಾಜರಾಗಲು ಅವಕಾಶವಿರುತ್ತದೆ.

4) ಪ್ರಬುದ್ಧ ಯೋಜನೆಯ ಷರತ್ತುಗಳನ್ನುಯ ಎಲ್ಲಾ ಅರ್ಹತೆ ಹೊಂದಿದ್ದರೆ ಮಾತ್ರ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಲಾಗುವುದು.

5) ಅಭ್ಯರ್ಥಿಯು ವಿದೇಶಕ್ಕೆ ತೆರಳಿ ತರಗತಿಗಳು ಪ್ರಾರಂಭವಾದ ನಂತರ ಪ್ರಬುದ್ಧ ಯೋಜನೆಯಡಿ ಅರ್ಜಿ ಸಲ್ಲಿಸಲು ಅಥವಾ ಆಯ್ಕೆಯಾಗಲು ಅರ್ಹರಿರುವುದಿಲ್ಲ.

6) ವಿದೇಶ/ವಿದೇಶಿ ವಿಶ್ವವಿದ್ಯಾಲಯಗಳು ಪ್ರವೇಶ ಸಂದರ್ಭದಲ್ಲಿ ನಿರೀಕ್ಷಿಸುವ GRE/GMAT/ IELTS/TOEFL ಸೇರಿದಂತೆ ಇತರೆ ಅರ್ಹತಾ ಪರೀಕ್ಷೆಯನ್ನು ಅಭ್ಯರ್ಥಿಯು ತನ್ನ ಸ್ವಂತ ವೆಚ್ಚದಿಂದ ಪೂರ್ಣಗೊಳಿಸಬೇಕು.

7) ಅರ್ಜಿ ಸಲ್ಲಿಸಿದ ಮಾತ್ರಕ್ಕೆ ಅಭ್ಯರ್ಥಿಯು ಪ್ರಬುದ್ಧ ಯೋಜನೆಯಡಿ ಆಯ್ಕೆಯಾಗಿದ್ದಾರೆಂದು ಪರಿಗಣಿಸಲು ಅವಕಾಶವಿರುವುದಿಲ್ಲ.

8) ಅಭ್ಯರ್ಥಿಯು ಸುಳ್ಳು ದಾಖಲೆ ಸಲ್ಲಿಸಿರುವುದು ಅಥವಾ ಅನರ್ಹತೆಯು ಯಾವುದೇ ಹಂತ ಕಂಡುಬಂದರೆ ಅಂತಹ ಅಭ್ಯರ್ಥಿಗಳು ಯಾವುದೇ ಧನಸಹಾಯ ಪಡೆಯಲು ಅರ್ಹರಿರುವುದಿಲ್ಲ. ಅಂತಹ ಅಭ್ಯರ್ಥಿಯ ಆಯ್ಕೆ ತನ್ನಿಂದ ತಾನೇ ರದ್ದುಗೊಳ್ಳುತ್ತದೆ.

9) ಸುಳ್ಳು ದಾಖಲೆಗಳನ್ನು ನೀಡಿ ಇಲಾಖೆಯ ಧನ ಸಹಾಯ ಪಡೆದಿದ್ದರೆ, ಅಂತಹ ಅಭ್ಯರ್ಥಿಯು ಇಲಾಖೆಯಿಂದ ಪಡೆದ ಎಲ್ಲಾ ಧನ ಸಹಾಯವನ್ನು ಹಿಂತಿರುಗಿ ಇಲಾಖೆಗೆ ಪಾವತಿಸಬೇಕು. ಒಂದೊಮ್ಮೆ ಧನ ಸಹಾಯ ಹಿಂದಿರುಗಿಸಲು ವಿಫಲನಾದರೆ, ಭೂಕಂದಾಯ ರೂಪದಲ್ಲಿ ಅಭ್ಯರ್ಥಿಯಿಂದ ವಸೂಲಿ ಮಾಡುವುದು.

10) ಪ್ರಬುದ್ಧ ಯೋಜನೆಯಡಿ ಧನ ಸಹಾಯ ಪಡೆದು ವಿದೇಶದಲ್ಲಿ ಉನ್ನತ ವ್ಯಾಸಂಗ ಮಾಡಿದ ಅಭ್ಯರ್ಥಿಯು ಸ್ವದೇಶಕ್ಕೆ ಹಿಂದಿರುಗಿ ಕಾರ್ಯನಿರ್ವಹಿಸಲು ಮೊದಲ ಆದ್ಯತೆ ನೀಡುವುದು.

## 10. ಕೌಟುಂಬಿಕ ಮಿತಿ:

1. ಪ್ರಬುದ್ಧ ಯೋಜನೆಯ ಸೌಲಭ್ಯವನ್ನು ಒಂದು ಕುಟುಂಬದಿಂದ ಇಬ್ಬರು ಮಾತ್ರ ಪಡೆಯಬಹುದು. ಆದರೆ, ಎರಡನೇ ಆಯ್ಕೆ ಹೆಣ್ಣು ಮಗುವಾಗಿದ್ದ ಸಂದರ್ಭದಲ್ಲಿ ಆಯ್ಕೆಗೆ ಪರಿಗಣಿಸಬಹುದು.
2. ಅಂದರೆ, ಪ್ರಬುದ್ಧ ಯೋಜನೆಯಡಿ ಒಂದು ಕುಟುಂಬದಿಂದ ಒಬ್ಬ ಪುರುಷ ಅಭ್ಯರ್ಥಿ ಆಯ್ಕೆಯಾಗಿದ್ದರೆ, ಎರಡನೇ ಪುರುಷ ಅಭ್ಯರ್ಥಿಯ ಆಯ್ಕೆಗೆ ಅವಕಾಶವಿರುವುದಿಲ್ಲ.

--------------10

3. ಆದರೆ ಮೊದಲ ಆಯ್ಕೆಯಲ್ಲಿ ಪುರುಷ ಅಭ್ಯರ್ಥಿ ಆಯ್ಕೆಯಾಗಿ ಅದೇ ಕುಟುಂಬದ ಎರಡನೇ ಅಭ್ಯರ್ಥಿಯಾಗಿ ಮಹಿಳಾ ಅಭ್ಯರ್ಥಿ ಅರ್ಜಿ ಸಲ್ಲಿಸಿದರೆ, ಅಂತಹ ಮಹಿಳಾ ಅಭ್ಯರ್ಥಿಯನ್ನು ಆಯ್ಕೆಗೆ ಪರಿಗಣಿಸಬಹುದಾಗಿದೆ. ಅದೇ ರೀತಿ ಒಂದು ಕುಟುಂಬದಿಂದ ಈಗಾಗಲೇ ಒಂದು ಮಹಿಳಾ ಅಭ್ಯರ್ಥಿ ಆಯ್ಕೆಯಾಗಿದ್ದರೆ, ಎರಡನೇ ಆಯ್ಕೆ ಬಯಸಿ ಅದೇ ಕುಟುಂಬದ ಮಹಿಳಾ ಅಭ್ಯರ್ಥಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
4. ಕೌಟುಂಬಿಕ ಮಿತಿಯ ನಿರ್ಧಾರ ಸರ್ಕಾರದ ವ್ಯಾಪ್ತಿಗೆ ಒಳಪಟ್ಟಿರುತ್ತದೆ.

11. ಸರ್ಕಾರಿ ನೌಕರರಿಗೆ ಅವಕಾಶ:-

1) ವಿದೇಶಿ ಉನ್ನತ ವ್ಯಾಸಂಗ ಸಹಾಯ ಧನ ಪಡೆಯಲು ಸರ್ಕಾರಿ ನೌಕರರು ಅರ್ಜಿ ಸಲ್ಲಿಸಲು ಹಾಗೂ ಆಯ್ಕೆಯಾಗಲು ಅರ್ಹರಿರುತ್ತಾರೆ.

2) ಅಂತಹ ನೌಕರರು ಪ್ರಬುದ್ಧ ಯೋಜನೆಯಡಿ ನಿಗದಿಪಡಿಸಿದ ಜಾತಿ, ಆದಾಯಮಿತಿ, ವಿಶ್ವವಿದ್ಯಾಲಯ, ಮೊದಲಾದ ಎಲ್ಲಾ ಮಾನದಂಡಗಳನ್ನು ಪೂರೈಸಬೇಕು.

3) ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ಆಯ್ಕೆ ಪ್ರಾಧಿಕಾರದಿಂದ "No Objection Certificate" ಪಡೆದು ಸಲ್ಲಿಸಬೇಕು.

12. ಮುಂಗಡ ಪಾವತಿ:

1. ವಾರ್ಷಿಕ ಆದಾಯ ರೂ. 2.5 ಲಕ್ಷದ ಆದಾಯ ಮಿತಿಯೊಳಗೆ ಇರುವ ಅಭ್ಯರ್ಥಿಗಳ ವೀಸಾ ವೆಚ್ಚ ಹಾಗೂ ವಿಮಾನಯಾನ ವೆಚ್ಚವನ್ನು ಇಲಾಖೆಯಲ್ಲಿ ಎಂಪಾನಲ್ ಆಗಿರುವ ಕನ್ಸಲ್ಟೆಂಟ್ ಮೂಲಕ ಮುಂಗಡವಾಗಿ ಪಾವತಿಸುವುದು.
2. ಸಂಬಂಧಪಟ್ಟ ಕನ್ಸಲ್ಟೆನ್ಸಿಗೆ 5% ರಷ್ಟು ಸರ್ವೀಸ್ ಚಾರ್ಜಸ್‌ನೊಂದಿಗೆ ಅಗತ್ಯ ದಾಖಲೆಗಳನ್ನು ಪಡೆದು ಹಿಂದಿರುಗಿಸುವುದು.
3. ವೀಸಾ ಹಾಗೂ ವಿಮಾನಯಾನ ವೆಚ್ಚವನ್ನು ಬಿಡುಗಡೆ ಮಾಡುವ ಪೂರ್ವದಲ್ಲಿ ಅಭ್ಯರ್ಥಿಯಿಂದ ಸ್ವಯಂ ಘೋಷಿತ ಮುಚ್ಚಳಿಕೆಯನ್ನು ಪಡೆಯಬೇಕು.
4. ವೀಸಾ ಹಾಗೂ ವಿಮಾನಯಾನ ವೆಚ್ಚ ಬಿಡುಗಡೆಯಾದ ನಂತರ ಅಭ್ಯರ್ಥಿಯು ವಿದೇಶಕ್ಕೆ ತೆರಳಲು ವಿಫಲನಾದರೆ ಅಂತಹ ಅಭ್ಯರ್ಥಿಯಿಂದ ಪೂರ್ಣ ವೆಚ್ಚವನ್ನು ವಸೂಲಿ ಮಾಡುವುದು. ಅಭ್ಯರ್ಥಿಯು ಹಿಂದಿರುಗಿಸಲು ವಿಫಲನಾದರೆ ಸಂಬಂಧಪಟ್ಟ ಶ್ಯೂರಿಟಿ ಹಾಕಿದ ಸರ್ಕಾರಿ ನೌಕರರಿಂದ ವಸೂಲು ಮಾಡುವುದು.

13) ಪ್ರಯಾಣ ವೆಚ್ಚ:

1. ಅಭ್ಯರ್ಥಿಯು ತನ್ನ ಕೋರ್ಸಿನ ಪೂರ್ಣಾವಧಿಯಲ್ಲಿ ಒಂದು ಬಾರಿ ಮಾತ್ರ ಎಕಾನಾಮಿ ಕ್ಲಾಸಿನಲ್ಲಿ ವಿದೇಶಕ್ಕೆ ತೆರಳಲು ಹಾಗೂ ವಿದೇಶದಿಂದ ಹಿಂದಿರುಗಲು ಅವಕಾಶವಿದೆ.

----------11

2. ಅಭ್ಯರ್ಥಿಯು ಅತೀ ಸಮೀಪದ ಸ್ಥಳದಿಂದ ಎಕಾನಾಮಿ ಕ್ಲಾಸ್‌ನಲ್ಲಿ ಪ್ರಯಾಣಿಸಬೇಕು. ಅಭ್ಯರ್ಥಿಯು ತನ್ನೊಂದಿಗೆ ತೆಗೆದುಕೊಂಡು ಹೋಗುವ ಸರಕು ಸರಂಜಾಮುಗಳಿಗೆ ಇಲಾಖೆಯಿಂದ ಯಾವುದೇ ಧನಸಹಾಯವನ್ನು ನೀಡಲಾಗುವುದಿಲ್ಲ.
3. ಅಭ್ಯರ್ಥಿ ತನ್ನೊಂದಿಗೆ ಕರೆದುಕೊಂಡು ಹೋಗುವ ವ್ಯಕ್ತಿಗಳ ವೆಚ್ಚವನ್ನು ಸ್ವಂತ ಖರ್ಚಿನಲ್ಲಿ ಭರಿಸಬೇಕು.
4. ವ್ಯಾಸಂಗ ಮುಗಿದ 90 ದಿನಗಳೊಳಗೆ ಅಭ್ಯರ್ಥಿಯು ತನ್ನ ರಿಟರ್ನ್ ಟಿಕೆಟ್‌ನ ವೆಚ್ಚವನ್ನು ಪಡೆಯಲು ಅಗತ್ಯ ದಾಖಲೆಯನ್ನು ಸಲ್ಲಿಸಬೇಕು. 90 ದಿನದ ನಂತರ ಬರುವಂತಹ ಕೋರಿಕೆಯನ್ನು ಪರಿಗಣಿಸಲಾಗುವುದಿಲ್ಲ.
5. ಅಭ್ಯರ್ಥಿಯು ಕೋವಿಡ್-19 ಸೇರಿದಂತೆ ಬೇರಾವುದೇ ಅನಿವಾರ್ಯ ಕಾರಣಗಳಿಂದ ವ್ಯಾಸಂಗ ಪೂರ್ಣಗೊಳಿಸಿದ 90 ದಿನಗಳೊಳಗೆ ರಿಟರ್ನ್ ಟಿಕೆಟ್‌ನ ವೆಚ್ಚವನ್ನು ಪಡೆಯಲು ಅಗತ್ಯ ದಾಖಲೆಯನ್ನು ಸಲ್ಲಿಸಲು ಸಾಧ್ಯವಾಗದೇ ಇದ್ದಲ್ಲಿ ಸದರಿ ವಿಷಯವನ್ನು ಇಲಾಖೆಯ ಗಮನಕ್ಕೆ ತಂದು ವಿನಾಯಿತಿ ಪಡೆಯಬೇಕು.

## 14. ಇತರೆ ಕಡ್ಡಾಯ ನಿಬಂಧನೆಗಳು:

1) ಅಭ್ಯರ್ಥಿಯು ಸರ್ಕಾರದ ಎಲ್ಲಾ ಷರತ್ತುಗಳನ್ನು ಒಪ್ಪಿರುವ ಬಗ್ಗೆ ಸ್ವಯಂ ಘೋಷಿತ ಮುಚ್ಚಳಿಕೆಯನ್ನು ನೀಡಬೇಕು.
2) ಅಭ್ಯರ್ಥಿಯು ಯಾವುದೇ ರೂಪದಲ್ಲಿ ಹೆಚ್ಚುವರಿ ಧನಸಹಾಯವನ್ನು ಪಡೆದಿದ್ದರೆ, ಹೆಚ್ಚುವರಿಯಾಗಿ ಪಡೆದಿರುವ ಧನಸಹಾಯವನ್ನು ಕಡ್ಡಾಯವಾಗಿ ಇಲಾಖೆಗೆ ಹಿಂದಿರುಗಿಸುವುದು.
3) ಅಭ್ಯರ್ಥಿಯು ಯಾವುದಾದರೂ ಕಾರಣದಿಂದ ಉನ್ನತ ವ್ಯಾಸಂಗವನ್ನು ಅರ್ಧಕ್ಕೆ ಕೈಬಿಟ್ಟು ಬಂದರೆ, ಅದರ ಹೊಣೆಗಾರಿಕೆಯನ್ನು ಅಭ್ಯರ್ಥಿ ಹೊರಬೇಕು.
4) ವಿದೇಶಿ ಉನ್ನತ ವ್ಯಾಸಂಗಕ್ಕೆ ತೆರಳಿದ ನಂತರ ಉಂಟಾಗಬಹುದಾದ ಎಲ್ಲಾ ಆಗು - ಹೋಗುಗಳಿಗೆ ಅಭ್ಯರ್ಥಿಯು ಉತ್ತರದಾಯಿಯಾಗಿರಬೇಕು. ಇಲಾಖೆಯು ವ್ಯಾಸಂಗಕ್ಕೆ ಅಗತ್ಯವಾಗಿರುವ ಧನ ಸಹಾಯವನ್ನು ನೀಡುವುದನ್ನು ಹೊರತು ಪಡಿಸಿ ಉಳಿದ ಎಲ್ಲಾ ವ್ಯವಸ್ಥೆಗಳನ್ನು ಅಭ್ಯರ್ಥಿಯು ನಿರ್ವಹಿಸಿಕೊಳ್ಳಬೇಕು.
5) ಅಭ್ಯರ್ಥಿಯು ವಿದೇಶಕ್ಕೆ ತೆರಳಿದ ಬಳಿಕ ಉಂಟಾಗಬಹುದಾದ ಯಾವುದೇ ಅಪಘಾತ, ನ್ಯಾಯಾಂಗಿಕ ಪ್ರಕರಣಗಳಿಗೆ ಅಭ್ಯರ್ಥಿಯೇ ಜವಾಬ್ದಾರಿಯಾಗಿರುತ್ತಾರೆ ಹಾಗೂ ಸ್ವಂತ ವೆಚ್ಚದಲ್ಲಿ ಅವುಗಳನ್ನು ನಿರ್ವಹಿಸಿಕೊಳ್ಳಬೇಕೇ ವಿನಹ ಸಮಾಜ ಕಲ್ಯಾಣ ಇಲಾಖೆ ಇದಕ್ಕೆ ಉತ್ತರದಾಯಿಯಲ್ಲ. ಸಮಾಜ ಕಲ್ಯಾಣ ಇಲಾಖೆ ಕೇವಲ ಧನಸಹಾಯ ಮಂಜೂರು ಮಾಡುವ ಮೂಲಕ ಅಭ್ಯರ್ಥಿಗಳ ಉನ್ನತ ಶಿಕ್ಷಣಕ್ಕೆ ಸಹಾಯ ಮಾಡುತ್ತದೆ ಹೊರತು ಅಭ್ಯರ್ಥಿಯ ಶೈಕ್ಷಣಿಕ ಚಟುವಟಿಕೆಗಳನ್ನು ಹೊರತುಪಡಿಸಿ ಇನ್ಯಾವುದೇ ವೈಯಕ್ತಿಕ ಚಟುವಟಿಕೆಗಳಿಗೆ ಹೊಣೆಗಾರಿಕೆಯನ್ನು ಹೊಂದಿರುವುದಿಲ್ಲ.

---------------12

6) ಅಭ್ಯರ್ಥಿಯು ಉನ್ನತ ವ್ಯಾಸಂಗಕ್ಕೆ ತೆರಳುವ ಪೂರ್ವದಲ್ಲಿ ಭಾರತ ಸರ್ಕಾರ / ಕರ್ನಾಟಕ ಸರ್ಕಾರದ ರಾಯಭಾರಿ ಕಛೇರಿಯು ಮಾರ್ಗಸೂಚಿಯನ್ವಯ ನೋಂದಣಿ, ಪೂರ್ವಾನುಮತಿ ಸೇರಿದಂತೆ ಎಲ್ಲಾ ಮಾರ್ಗಸೂಚಿಯನ್ನು ಕಡ್ಡಾಯವಾಗಿ ಪಾಲಿಸುವುದು. ಕೇಂದ್ರ ಹಾಗೂ ರಾಜ್ಯ ಸರ್ಕಾರದ ಮಾರ್ಗಸೂಚಿ ಪಾಲನೆಯಲ್ಲಿ ಉಂಟಾಗುವಂತಹ ಲೋಪದೋಷಗಳಿಗೆ ಅಭ್ಯರ್ಥಿಯು ಉತ್ತರದಾಯಿಯಾಗಿರುತ್ತಾರೆ.

## 15. ಕೋರ್ಸ್‌ನ ಅವಧಿ:

1) ಸ್ನಾತಕೋತ್ತರ ಪದವಿ ಅಧ್ಯಯನ ಮಾಡುವ ಅಭ್ಯರ್ಥಿಗಳಿಗೆ ಗರಿಷ್ಠ 2 ವರ್ಷ ಧನ ಸಹಾಯ ಒದಗಿಸಲಾಗುತ್ತದೆ. ಎರಡು ಅಥವಾ ಮೂರು ಸೆಮಿಸ್ಟರ್ ನ ಸ್ನಾತಕೋತ್ತರ ಪದವಿಯಾಗಿದ್ದಲ್ಲಿ, ಎರಡು ಅಥವಾ ಮೂರು ಸೆಮಿಸ್ಟರ್‌ಗೆ ಮಾತ್ರ ಧನ ಸಹಾಯ ನೀಡುವುದು.

2) ಪಿ.ಹೆಚ್.ಡಿ. ಪದವಿ ಅಧ್ಯಯನ ಮಾಡುವ ಅಭ್ಯರ್ಥಿಗಳಿಗೆ ಗರಿಷ್ಠ 4 ವರ್ಷ ಧನ ಸಹಾಯ ನೀಡಲಾಗುವುದು. ಪಿ.ಹೆಚ್.ಡಿ. ಪದವಿ ಅದಕ್ಕಿಂತ ಕಡಿಮೆ ಅವಧಿಯಲ್ಲಿ ಮುಕ್ತಾಯಗೊಂಡರೆ ಆ ಅವಧಿಯ ಧನ ಸಹಾಯವನ್ನು ಮಾತ್ರ ನೀಡುವುದು.

## 16. ವಿದೇಶಿ ವಿಶ್ವ ವಿದ್ಯಾಲಯ ಬದಲಾವಣೆ:

1) ಅಭ್ಯರ್ಥಿಯು ವಿದೇಶಿ ಉನ್ನತ ವ್ಯಾಸಂಗ ಯೋಜನೆಯಡಿ ಆಯ್ಕೆಯಾಗಿ ಮಂಜೂರಾತಿ ಪತ್ರ ಪಡೆದ ನಂತರ ಅಭ್ಯರ್ಥಿಯು ತನ್ನ ಕೋರ್ಸ್ ಅಥವಾ ವಿಶ್ವವಿದ್ಯಾಲಯವನ್ನು ಬದಲಾಯಿಸಲು ಅವಕಾಶವಿರುವುದಿಲ್ಲ.

2) ಪಿಹೆಚ್‌ಡಿ ಅಧ್ಯಯನ ಮಾಡುತ್ತಿರುವ ಅಭ್ಯರ್ಥಿಯು ಗೈಡ್ ಸೇರಿದಂತೆ ವಿದೇಶ/ವಿದೇಶಿ ವಿಶ್ವವಿದ್ಯಾಲಯವನ್ನು/ಸಂಸ್ಥೆಯನ್ನು ಬದಲಾಯಿಸುವ ಅತೀ ಅಗತ್ಯವಿದ್ದಲ್ಲಿ, ವಿಶ್ವವಿದ್ಯಾಲಯವು ಅನುಮತಿ ನೀಡಿದರೆ, ಅಂತಹ ಸಂದರ್ಭದಲ್ಲಿ ಸರ್ಕಾರದ ಪೂರ್ವಾನುಮತಿಯೊಂದಿಗೆ ಪಿಎಚ್‌ಡಿ ಅಭ್ಯರ್ಥಿ ತನ್ನ ಗೈಡ್/ವಿದೇಶ/ವಿದೇಶ ವಿಶ್ವವಿದ್ಯಾಲಯ / ಶೈಕ್ಷಣಿಕ ಸಂಸ್ಥೆ ಬದಲಾಯಿಸಲು ಅವಕಾಶವಿರುತ್ತದೆ.

3) ಸ್ನಾತಕೋತ್ತರ ಪದವಿಗೆ ಆಯ್ಕೆಯಾದ ಅಭ್ಯರ್ಥಿಗಳು ನಿಗಧಿತ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ನಡೆಸಬೇಕು. ಆದರೆ ವಿಶೇಷ ಸಂದರ್ಭದಲ್ಲಿ ಸರ್ಕಾರದ ಪೂರ್ವಾನುಮತಿಯೊಂದಿಗೆ ವಿದೇಶ/ವಿಶ್ವ ವಿದ್ಯಾಲಯ / ಕೋರ್ಸ್ ಬದಲಾಯಿಸಲು ಅವಕಾಶವಿರುತ್ತದೆ.

-------------13

## 17) ತಪ್ಪು ಮಾಹಿತಿ:

ಯಾವುದೇ ಅಭ್ಯರ್ಥಿಯು ತಪ್ಪು/ ದೋಷಪೂರಿತ/ ಸುಳ್ಳು ಮಾಹಿತಿ ನೀಡಿ ಯೋಜನೆಯ ಸಹಾಯ ಧನವನ್ನು ಪಡೆದಿದ್ದರೆ, ಅಂತಹ ಅಭ್ಯರ್ಥಿಯು ತಾನು ಪಡೆದ ಧನ ಸಹಾಯ ಶೇ. 12%ರ ಬಡ್ಡಿಯೊಂದಿಗೆ ಇಲಾಖೆಗೆ ಹಿಂದಿರುಗಿಸಬೇಕು. ಒಂದೊಮ್ಮೆ ಅಭ್ಯರ್ಥಿಯು ತಾನು ಪಡೆದ ಧನ ಸಹಾಯವನ್ನು ಹಿಂದಿರುಗಿಸಲು ವಿಫಲನಾದರೆ ಕಾನೂನುರೀತ್ಯಾ ಕ್ರಮಕೈಗೊಂಡು ಭೂಕಂದಾಯ ರೂಪದಲ್ಲಿ ಅಭ್ಯರ್ಥಿಯಿಂದ ವಸೂಲು ಮಾಡುವುದು.

## 18) ನ್ಯಾಯಾಂಗ ವ್ಯಾಪ್ತಿ:

ಪ್ರಬುದ್ಧ ಯೋಜನೆಯು ವಿದ್ಯಾರ್ಥಿ ವೇತನ ರೂಪದ ಧನಸಹಾಯ ಯೋಜನೆಯಾಗಿದ್ದು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳ ಶೈಕ್ಷಣಿಕ ಶ್ರೇಯೋಭಿವೃದ್ಧಿಗಾಗಿ ಜಾರಿಗೆ ತರಲಾಗಿದೆ. ಯೋಜನೆಯಡಿ ಧನಸಹಾಯ ಪಡೆದ ಅಭ್ಯರ್ಥಿಗಳು ತಮ್ಮ ಸ್ವಂತ ಶ್ರಮ ಹಾಗೂ ನಡವಳಿಕೆಯಿಂದ ಉತ್ತಮ ಅಂಕ ಗಳಿಸಿ ಉನ್ನತ ಸ್ಥಾನವನ್ನು ಅಲಂಕರಿಸಬೇಕೆಂದು ಇಲಾಖೆ ಬಯಸುತ್ತದೆ. ಅಭ್ಯರ್ಥಿಯ ವೈಯಕ್ತಿಕ ಸಮಸ್ಯೆಗೆ ಉತ್ತರದಾಯಿಯಾಗಿರುವುದಿಲ್ಲ. ಅಭ್ಯರ್ಥಿಯ ಆಯ್ಕೆಯ ಪೂರ್ಣಾಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಸಂದರ್ಭಾನುಸಾರ ಮಾರ್ಗಸೂಚಿಯ ನಿಯಮಾವಳಿಯ ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಆದಾಗ್ಯೂ ಈ ಯೋಜನೆಗೆ ಸಂಬಂಧಿಸಿದಂತೆ ಕಾನೂನು ತೊಡಕಿನ ಸಮಸ್ಯೆ ಕಂಡುಬಂದರೆ, ಬೆಂಗಳೂರು ನಗರ ವ್ಯಾಪ್ತಿಯ ನ್ಯಾಯಾಲಯದಲ್ಲಿ ಮಾತ್ರ ಪ್ರಶ್ನಿಸಲು / ದಾಖಲಿಸಲು ಅವಕಾಶವಿರುತ್ತದೆ.

(ಎಲ್. ನರಸಿಂಹಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ-1
ಸಮಾಜ ಕಲ್ಯಾಣ ಇಲಾಖೆ.

ಕರ್ನಾಟಕ ಸರ್ಕಾರ

ಸಂಖ್ಯೆ: ಸಕಇ 468 ಪಕವಿ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸಸೌಧ,
ಬೆಂಗಳೂರು, ದಿನಾಂಕ: 10-08-2021.

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ,
ಬೆಂಗಳೂರು.

ಇವರಿಗೆ:

ಆಯುಕ್ತರು,
ಸಮಾಜ ಕಲ್ಯಾಣ ಇಲಾಖೆ,
ಬೆಂಗಳೂರು.

ಮಾನ್ಯರೇ,

ವಿಷಯ: "ಪ್ರಬುದ್ಧ" ಯೋಜನೆಯ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿ ವಿದೇಶಿ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆ ಮಾಡಿ ಧನಸಹಾಯ ಬಿಡುಗಡೆ ಮಾಡುವ ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ನಡೆದ ಸಭೆಯ ನಡವಳಿ.

ಉಲ್ಲೇಖ: ದಿನಾಂಕ: 30-07-2021ರಂದು ನಡೆದ ಸಭೆಯ ನಡವಳಿ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, "ಪ್ರಬುದ್ಧ" ಯೋಜನೆಯ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿ ವಿದೇಶಿ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆ ಮಾಡಿ ಧನಸಹಾಯ ಬಿಡುಗಡೆ ಮಾಡುವ ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ದಿನಾಂಕ: 30-07-2021ರಂದು ನಡೆದ ಸಭಾ ನಡವಳಿಯನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಲಾಗಿದೆ. ಅದರಂತೆ, ಪರಿಶೀಲಿಸಿ ಮುಂದಿನ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

(ಎಲ್. ನರಸಿಂಹಮೂರ್ತಿ)
ಸರ್ಕಾರದ ಅಧೀನ ಕಾರ್ಯದರ್ಶಿ-1,
ಸಮಾಜ ಕಲ್ಯಾಣ ಇಲಾಖೆ.

"ಪ್ರಬುದ್ಧ" ಯೋಜನೆಯ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿ ವಿದೇಶಿ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆ ಮಾಡಿ ಧನಸಹಾಯ ಬಿಡುಗಡೆ ಮಾಡುವ ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ಚರ್ಚಿಸುವ ಸಂಬಂಧ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 30.07.2021 ರಂದು ನಡೆದ ಸಭೆಯ ನಡವಳಿಗಳು.

ಹಾಜರಿದ್ದವರು:-

- ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ.
- ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ.
- ಮುಖ್ಯ ಆಡಳಿತಾಧಿಕಾರಿಗಳು, ಪರೀಕ್ಷಾ ಪೂರ್ವ ತರಬೇತಿ ಕೇಂದ್ರ.
- ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ.
- ಸಹಾಯಕ ನಿರ್ದೇಶಕರು, ನಿರ್ದೇಶಕರ ಪರವಾಗಿ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ.
- Kunal, Senior Consultant, Stencil Consulting, Bengaluru

*****

ಮುಖ್ಯ ಆಡಳಿತಾಧಿಕಾರಿಗಳು, ಪರೀಕ್ಷಾ ಪೂರ್ವ ತರಬೇತಿ ಕೇಂದ್ರ, ರವರು ಸಭೆಗೆ ಹಾಜರಿದ್ದ ಅಧ್ಯಕ್ಷರು ಹಾಗೂ ಅಧಿಕಾರಿಗಳನ್ನು ಅಭ್ಯಾಗಿಸುತ್ತಾ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳನ್ನು ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆಮಾಡಿ ಧನಸಹಾಯ ಬಿಡುಗಡೆ ಮಾಡುವ ಕಾರ್ಯಕ್ರಮವನ್ನು 2001-02ನೇ ಸಾಲಿನಿಂದ ಅನುಷ್ಠಾನಗೊಳಿಸಲಾಗುತ್ತಿದ್ದು, 2018-19ನೇ ಸಾಲಿನಲ್ಲಿ "ಪ್ರಬುದ್ಧ" ಎಂಬ ನೂತನ ಹೆಸರಿನೊಂದಿಗೆ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದ್ದು, ಸದರಿ ಯೋಜನೆಯ ಮಾರ್ಗಸೂಚಿಗಳನ್ನು ಪರಿಷ್ಕರಿಸಿ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿ ವಿದೇಶಿ ವಿಶ್ವವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆ ಮಾಡಿ ಧನಸಹಾಯ ಬಿಡುಗಡೆ ಮಾಡುವ ಕಾರ್ಯಕ್ರಮ ಅನುಷ್ಠಾನಗೊಳಿಸುವ ಕುರಿತು ಚರ್ಚಿಸುವ ಸಂಬಂಧ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ ರವರ ಅಧ್ಯಕ್ಷತೆಯಲ್ಲಿ ಈ ದಿನ ಸಭೆ ಕರೆಯಲಾಗಿದ್ದು ಸಭೆಯನ್ನು ನಡೆಸಿಕೊಡುವಂತೆ ಮಾನ್ಯ ಅಧ್ಯಕ್ಷರನ್ನು ಕೋರಿದರು.

ಮಾನ್ಯ ಅಧ್ಯಕ್ಷರು, ಸಭೆಯನ್ನು ಮುಂದುವರೆಸಲು ಸೂಚನೆ ನೀಡುತ್ತಾ, ಸದರಿ ಯೋಜನೆಯ ಬಗ್ಗೆ ಹೆಚ್ಚಿನ ಅರಿವು ಮೂಡಿಸುವ ಅಗತ್ಯವಿದ್ದು, ಈ ಸಂಬಂಧ ಸೂಕ್ತ ಕ್ರಮ ಕೈಗೊಳ್ಳಲು ಸೂಚಿಸುತ್ತಾ, ರಾಜ್ಯದಲ್ಲಿರುವ ವಿಶ್ವವಿದ್ಯಾಲಯಗಳಲ್ಲಿ ಮತ್ತು ಶೈಕ್ಷಣಿಕ ಚಟುವಟಿಕೆ ಹೆಚ್ಚಾಗಿರುವ ಜಿಲ್ಲೆಗಳಲ್ಲಿ ಯೋಜನೆಯ ಬಗ್ಗೆ ವ್ಯಾಪಕ ಪ್ರಚಾರ ನೀಡಿ ಹೆಚ್ಚಿನ ಅಭ್ಯರ್ಥಿಗಳು ಸದರಿ ಯೋಜನೆಯ ಉಪಯೋಗ ಪಡೆಯುವಂತೆ ಕ್ರಮ ಕೈಗೊಳ್ಳಲು ತಿಳಿಸಿದರು.

ಮುಂದುವರೆದು, ಪ್ರಸ್ತುತ ಇರುವ ಮಾರ್ಗಸೂಚಿಯ ಪ್ರತಿಯೊಂದು ಅಂಶಗಳನ್ನು ಪರಿಶೀಲಿಸುತ್ತಾ, ಸದರಿ ಅಂಶಗಳಲ್ಲಿ ಈ ಕೆಳಕಂಡಂತೆ ಕೆಲವೊಂದು ಮಾರ್ಪಾಡುಗಳನ್ನು ಪರಿಷ್ಕರಿಸಲು ಸೂಚಿಸಿದರು.

1. ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವಾಗ ಪ್ರಸ್ತುತ ಇರುವ ಮೀಸಲಾತಿಗನುಗುಣವಾಗಿ ಅಭ್ಯರ್ಥಿಗಳು ಸಿಗದೇ ಇದ್ದಲ್ಲಿ ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಹೆಚ್ಚಿನ ಪ್ರಾಮುಖ್ಯತೆ ನೀಡುವಂತೆ ಸೂಚಿಸಿದರು.
2. ಪದವಿ ವ್ಯಾಸಂಗವನ್ನು ಹೊರತುಪಡಿಸಿ ಸ್ನಾತಕೋತ್ತರ ಮತ್ತು ಪಿ.ಹೆಚ್.ಡಿ ವ್ಯಾಸಂಗಕ್ಕೆ ಅವಕಾಶ ಕಲ್ಪಿಸುವುದು.
3. ಪ್ರಬುದ್ಧ ಯೋಜನೆಯ ಷರತ್ತುಗಳನ್ವಯ ಎಲ್ಲಾ ಅರ್ಹತೆಯನ್ನು ಪೂರೈಸಿದ ಅಭ್ಯರ್ಥಿಗಳನ್ನು ಪದವಿಯಲ್ಲಿ ಗಳಿಸಿರುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡುವುದು.
4. ಸ್ನಾತಕೋತ್ತರ ಪದವಿಗೆ ಗರಿಷ್ಠ 35 ವರ್ಷಗಳು ಮತ್ತು ಪಿ.ಹೆಚ್.ಡಿ ವ್ಯಾಸಂಗಕ್ಕೆ ಗರಿಷ್ಠ 40 ವರ್ಷಗಳ ವಯೋಮಿತಿ ನಿಗಧಿಪಡಿಸುವುದು.
5. ಪಿ.ಹೆಚ್.ಡಿ ವ್ಯಾಸಂಗಕ್ಕೆ ಅರ್ಜಿ ಸಲ್ಲಿಸುವ ಎಲ್ಲಾ ಅಭ್ಯರ್ಥಿಗಳಿಗೆ ಮೊದಲು ಅವಕಾಶ ಕಲ್ಪಿಸುವುದು ನಂತರದ ಸ್ಥಾನಗಳನ್ನು ಸ್ನಾತಕೋತ್ತರ ಪದವಿ ವ್ಯಾಸಂಗಕ್ಕೆ ಅವಕಾಶ ಕಲ್ಪಿಸುವುದು.
6. ಪ್ರತಿ ವರ್ಷ ಹೆಚ್ಚಿನ ಅಭ್ಯರ್ಥಿಗಳಿಗೆ ಗುರಿ ನಿಗಧಿಪಡಿಸಿಕೊಳ್ಳುವುದು.
7. ಇಲಾಖಾವತಿಯಿಂದ ಪ್ರಬುದ್ಧ ಯೋಜನೆಯಡಿ ಆಯ್ಕೆಯಾಗಿ ಸ್ನಾತಕೋತ್ತರ ಪದವಿ ಪೂರ್ಣಗೊಳಿಸಿ ಪಿ.ಹೆಚ್.ಡಿ ವ್ಯಾಸಂಗಕ್ಕೆ ಪ್ರವೇಶ ಪಡೆದರೆ ಸ್ನಾತಕೋತ್ತರ ಪದವಿಗೆ ಭರಿಸಲಾದ ವೆಚ್ಚವನ್ನು ಕಡಿತಗೊಳಿಸಿ ಬಾಕಿ ವೆಚ್ಚವನ್ನು ಪಿ.ಹೆಚ್.ಡಿ ವ್ಯಾಸಂಗಕ್ಕೆ ಭರಿಸುವುದು.
8. ಪ್ರತಿ 03 ತಿಂಗಳಿಗೊಮ್ಮೆ ಅಭ್ಯರ್ಥಿಯ ವ್ಯಾಸಂಗದ ಬಗ್ಗೆ ಪ್ರಗತಿ ವರದಿಯನ್ನು ಪಡೆಯುವುದು.
9. ಒಂದು ಕುಟುಂಬದಿಂದ ಒಬ್ಬರಿಗೆ ಅವಕಾಶ ಕಲ್ಪಿಸುವುದು. ಮಹಿಳಾ ಅಭ್ಯರ್ಥಿಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡಬೇಕಾಗಿರುವುದರಿಂದ, ಅದೇ ಕುಟುಂಬದ ಮತ್ತೊಬ್ಬ ಮಹಿಳೆ ಅರ್ಜಿ ಸಲ್ಲಿಸಿದರೆ, ಅವಕಾಶ ಕಲ್ಪಿಸುವುದು.
10. ಉನ್ನತ ವ್ಯಾಸಂಗ ಯೋಜನೆಯ ಆಯ್ಕೆಗೆ ಪರಿಗಣಿಸಲಾಗುತ್ತಿದ್ದ GRE/GMAT/IELT/TOEFL ಮೊದಲಾದ ಪ್ರವೇಶ ಪರೀಕ್ಷೆಗೆ ಬದಲಾಗಿ ಜಾಗತಿಕ ವಿಶ್ವ ವಿದ್ಯಾಲಯ QS/US News ರ್‍ಯಾಂಕಿಂಗ್‌ನಲ್ಲಿ 100ನೇ ಸ್ಥಾನದೊಳಗಿನ ವಿಶ್ವ ವಿದ್ಯಾಲಯದಲ್ಲಿ ಪ್ರವೇಶ ಪಡೆದ ಅಭ್ಯರ್ಥಿಗಳಿಗೆ ಆಯ್ಕೆ ಪರಿಗಣಿಸಬೇಕೆಂದು ಸೂಚಿಸಿದರು. ಆದರೆ, ಪ್ರಸಕ್ತ ಸಾಲಿನಲ್ಲಿ ಈಗಾಗಲೇ ಇಲಾಖೆಯಿಂದ ಪ್ರಕಟಿಸಲಾಗಿರುವ QS/US-200 ರ್‍ಯಾಂಕ್‌ನಲ್ಲಿರುವ ವಿಶ್ವ ವಿದ್ಯಾಲಯಗಳಲ್ಲಿ ಅಭ್ಯರ್ಥಿಗಳು ಪ್ರವೇಶ ಪಡೆದಿರುವುದರಿಂದ 2021-22ನೇ ಸಾಲಿಗೆ ಮಾತ್ರ QS/US-200 ರ್‍ಯಾಂಕ್‌ನಲ್ಲಿರುವ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಬೇಕು.
11. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ವಿದೇಶದಲ್ಲಿ ಉನ್ನತ ವ್ಯಾಸಂಗಕ್ಕೆ ತೆರಳುವುದರಿಂದ ಬೌದ್ಧಿಕವಾಗಿ ಹೆಚ್ಚು ಪ್ರೌಢಿಮೆ ಬರುತ್ತದೆ. ದೇಶದ ಹಿತದೃಷ್ಟಿಯಿಂದ ಉತ್ತಮ ಬೆಳವಣಿಗೆಯಾಗಿರುತ್ತದೆ. ಆದ್ದರಿಂದ, ಹೆಚ್ಚಿನ ಪ್ರಚಾರ ಕೈಗೊಂಡು ಉತ್ತಮ ಪ್ರತಿಭಾವಂತ ಅಭ್ಯರ್ಥಿಗಳು ವಿದೇಶದಲ್ಲಿ ಉನ್ನತ ವ್ಯಾಸಂಗಕ್ಕೆ ತೆರಳಲು ಅಗತ್ಯ ಕ್ರಮ ಕೈಗೊಳ್ಳಬೇಕು.

12. ಕೋವಿಡ್-19 ಸಾಂಕ್ರಾಮಿಕ ರೋಗದಿಂದಾಗಿ ವಿದೇಶದ ಕೆಲವೊಂದು ವಿಶ್ವವಿದ್ಯಾಲಯಗಳು ಭೌತಿಕ ತರಗತಿ ( Physical Class)ಗೆ ಬದಲಾಗಿ ಆನ್-ಲೈನ್ (Online) ಕ್ಲಾಸ್ ನಡೆಸುತ್ತಿರುತ್ತವೆ. 2020-21ನೇ ಸಾಲಿನ ಪ್ರಬುದ್ಧ ಯೋಜನೆಯಡಿ ಆಯ್ಕೆಯಾಗಿ ಆನ್‌ಲೈನ್ ಕ್ಲಾಸ್ ತೆಗೆದುಕೊಳ್ಳುತ್ತಿರುವ ಅಭ್ಯರ್ಥಿಗಳಿಗೆ ವಿಶ್ವವಿದ್ಯಾನಿಲಯಗಳ ಶುಲ್ಕ ಮಾತ್ರ ಬಿಡುಗಡೆ ಮಾಡುವುದು.

13. ಪ್ರಸಕ್ತ ವರ್ಷ ಪ್ರಬುದ್ಧ ಯೋಜನೆಗೆ ನೀಡಲಾದ ಅನುದಾನದೊಂದಿಗೆ ಹೆಚ್ಚಿನ ಅನುದಾನವನ್ನು ಬಿಡುಗಡೆಗೆ ಅಗತ್ಯ ಕ್ರಮ ಕೈಗೊಳ್ಳಲಾಗುವುದು. ಅದ್ದರಿಂದ, ಪರಿಷ್ಕೃತ ಮಾರ್ಗಸೂಚಿ ಅನ್ವಯ ಅರ್ಹತೆ ಪಡೆದ ಎಲ್ಲಾ ಅಭ್ಯರ್ಥಿಗಳ ಪಟ್ಟಿಯನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸುವುದು.

14. 2021-22ನೇ ಸಾಲಿನಲ್ಲಿಯೂ ಕೋವಿಡ್-19 ಮುಂದುವರೆಯುವ ಲಕ್ಷಣ ಕಂಡು ಬರುತ್ತಿರುವುದರಿಂದ ಪ್ರಬುದ್ಧ ಯೋಜನೆಯಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಆನ್‌ಲೈನ್ ತರಬೇತಿ ಪಡೆಯಲು ಅವಕಾಶ ಕಲ್ಪಿಸುವುದು.

15. ವಿದೇಶಿ ವಿಶ್ವ ವಿದ್ಯಾಲಯದಲ್ಲಿ Regular Course ಗೆ ಪ್ರವೇಶ ಪಡೆದು, ಪ್ರಬುದ್ಧ ಯೋಜನೆಯಡಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾತ್ರ ಅವಕಾಶ ಕಲ್ಪಿಸುವುದು. ಆನ್-ಲೈನ್ ಮೂಲಕ Diploma Certificate Courese ದೂರ ಶಿಕ್ಷಣ ಕೋರ್ಸ್‌ಗೆ ಪ್ರವೇಶ ಪಡೆದ ಅಭ್ಯರ್ಥಿಗಳನ್ನು ಆಯ್ಕೆಗೆ ಪರಿಗಣಿಸಬಾರದೆಂದು ತಿಳಿಸಿದರು.

16. ಆನ್‌ಲೈನ್ ತರಗತಿಗಳನ್ನು ಪಡೆದ ಅಭ್ಯರ್ಥಿಗಳ ಕೋರ್ಸ್ ಶುಲ್ಕಗಳನ್ನು ಮಾತ್ರ ಬಿಡುಗಡೆ ಮಾಡುವುದು. ನಿರ್ವಹಣಾ ವೆಚ್ಚ ಸೇರಿದಂತೆ ಇತರೆ ಯಾವುದೇ ವೆಚ್ಚವನ್ನು ಬಿಡುಗಡೆ ಮಾಡಬಾರದು.

17. ಪ್ರಬುದ್ಧ ಯೋಜನೆಯ ಬಗ್ಗೆ ವಿಶ್ವವಿದ್ಯಾಲಯಗಳಲ್ಲಿ ಮತ್ತು ಶೈಕ್ಷಣಿಕ ಚಟುವಟಿಕೆ ಹೆಚ್ಚಾಗಿರುವ ಜಿಲ್ಲೆಗಳಲ್ಲಿ ಹೆಚ್ಚಿನ ಅರಿವು ಮೂಡಿಸಲು ಅಗತ್ಯ ಕ್ರಮ ಕೈಗೊಳ್ಳುವುದು.

ಮೇಲೆ ವಿವರಿಸಿರುವಂತೆ, ಅಗತ್ಯ ಕ್ರಮ ಕೈಗೊಳ್ಳಲು ಹಾಗೂ ಪರಿಷ್ಕೃತ ಮಾರ್ಗಸೂಚಿಗಳ ಕರಡನ್ನು ತಯಾರಿಸಿ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದರು.

ಮುಂದುವರೆದು, ಪರೀಕ್ಷಾ ಪೂರ್ವ ತರಬೇತಿ ಕೇಂದ್ರದವತಿಯಿಂದ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಿವಿಧ ಸ್ಪರ್ಧಾತ್ಮಕ ಪರೀಕ್ಷೆಗಳ ಪೂರ್ವಭಾವಿ ತರಬೇತಿಗೆ ನಿಯೋಜಿಸುವ ಕಾರ್ಯಕ್ರಮ ಅನುಷ್ಠಾನಕ್ಕೆ ಸಂಬಂಧಿಸಿದಂತೆ 2020-21ನೇ ಸಾಲಿನಲ್ಲಿ ಸುಮಾರು 60,000 ಅಭ್ಯರ್ಥಿಗಳು ಅರ್ಜಿ ಸಲ್ಲಿಸಿದ್ದು, ಅನುದಾನ ಕೊರತೆಯ ಹಿನ್ನೆಲೆಯಲ್ಲಿ ಕಾರ್ಯಕ್ರಮ ಅನುಷ್ಠಾನಗೊಳಿಸಿರುವುದಿಲ್ಲವೆಂದು ಸದರಿ ಕಾರ್ಯಕ್ರಮವನ್ನು 2021-22ನೇ ಸಾಲಿನಲ್ಲಿ ಅನುಷ್ಠಾನಗೊಳಿಸಲು ಅನುಮತಿ ನೀಡುವಂತೆ ಕೋರಿದರು.

ಮುಂದುವರೆದು, 2020-21 ಮತ್ತು 2021-22 ಸೇರಿ ಒಟ್ಟಾರೆ ತರಬೇತಿಗೆ 1.00 ಲಕ್ಷಕ್ಕಿಂತ ಹೆಚ್ಚು ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ನಿರೀಕ್ಷೆಯಿದ್ದು, ಕೋವಿಡ್-19ರ ಹಿನ್ನೆಲೆಯಲ್ಲಿ ಸದರಿ ಅಭ್ಯರ್ಥಿಗಳಿಗೆ ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಲು ಕೆ.ಇ.ಎ ಸೇರಿದಂತೆ ಇತರ ಏಜೆನ್ಸಿಗಳು ಮುಂದೆ ಬರುವ ಸಾಧ್ಯತೆ ಕಡಿಮೆ ಇರುವ ಬಗ್ಗೆ ಸಭೆಯ ಗಮನಕ್ಕೆ ತರಲಾಯಿತು.

2021-22ನೇ ಸಾಲಿಗೆ ಸೀಮಿತವಾಗಿ ಪದವಿಯಲ್ಲಿ ಗಳಿಸಿರುವ ಅಂಕಗಳ ಮೆರಿಟ್ ಆಧಾರದ ಮೇಲೆ ಕೋರ್ಸ್‌ವಾರು ಪ್ರತ್ಯೇಕ ಮೆರಿಟ್ ಪಟ್ಟಿ ತಯಾರಿಸಿ ಅಭ್ಯರ್ಥಿಗಳನ್ನು ತರಬೇತಿಗೆ ನಿಯೋಜಿಸುವಂತೆ ಸೂಚಿಸುತ್ತಾ, ಇದಕ್ಕೆ ತಗಲುವ ವೆಚ್ಚವನ್ನು 2021-22 ನೇ ಸಾಲಿನಲ್ಲಿ ರಾಜ್ಯವಲಯದಡಿ ಬಿಡುಗಡೆಯಾಗಿರುವ ಅನುದಾನದ ಜೊತೆಗೆ ಪರೀಕ್ಷಾ ಪೂರ್ವ ತರಬೇತಿ ಕೇಂದ್ರದ ಉಳಿತಾಯ ಖಾತೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಕಾರ್ಯಕ್ರಮವನ್ನು ಇ-ಟೆಂಡರ್ ಕರೆದು ಅನುಷ್ಠಾನಗೊಳಿಸುವಂತೆ ತಿಳಿಸಿದರು.

ಅಂತಿಮವಾಗಿ ಮೇಲ್ಕಂಡಂತೆ ಎಲ್ಲಾ ಅಂಶಗಳ ಬಗ್ಗೆ ಅಗತ್ಯ ಕ್ರಮ ಕೈಗೊಳ್ಳುವಂತೆ ಸೂಚಿಸಿದರು.

ವಂದನೆಗಳೊಂದಿಗೆ ಸಭೆಯನ್ನು ಮುಕ್ತಾಯಗೊಳಿಸಲಾಯಿತು.

ಡಾ|| ಎಸ್. ನಾಗಾಂಬಿಕಾ ದೇವಿ
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು,
ಸಮಾಜ ಕಲ್ಯಾಣ ಇಲಾಖೆ,
ಬೆಂಗಳೂರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 67 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಐಹೊಳೆ ಡಿ ಮಹಾಲಿಂಗಪ್ಪ |
| ಉತ್ತರಿಸುವ ದಿನಾಂಕ | : | 15-02-2023 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪರಿಶಿಷ್ಟ ಜಾತಿ ಮತ್ತು ಪಂಗಡದವರ ಸಮುದಾಯಗಳ ಅಭಿವೃದ್ಧಿ ಮತ್ತು ಅನುಕೂಲಕ್ಕಾಗಿ ಸರ್ಕಾರ ರೂಪಿಸಿ ಜಾರಿಗೊಳಿಸಿರುವ ಯೋಜನೆಗಳಾವುವು: (ಸಂಪೂರ್ಣ ವಿವರ ನೀಡುವುದು) | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ವಿವಿಧ ಇಲಾಖೆಗಳಿಂದ ಅನುಷ್ಠಾನ ಮಾಡುತ್ತಿರುವ ಕಾರ್ಯಕ್ರಮಗಳ ವಿವರವನ್ನು ಅನುಬಂಧ-1 ರಲ್ಲಿ ನೀಡಿದೆ. |
| ಆ) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ರಾಯಭಾಗ ಮತಕ್ಷೇತ್ರಕ್ಕೆ ಎಸ್.ಸಿ.ಪಿ/ಟಿ.ಎಸ್.ಪಿ ಯೋಜನೆಯಡಿ ಬಿಡುಗಡೆಯಾದ ಅನುದಾನದ ವಿವರಗಳೇನು; ಈ ಅನುದಾನದಡಿ ಕೈಗೊಂಡಿರುವ ಅಭಿವೃದ್ಧಿ ಕಾಮಗಾರಿಗಳಾವುವು: (ಸಂಪೂರ್ಣ ವಿವರ ನೀಡುವುದು) | ಕಳೆದ ಮೂರು ವರ್ಷಗಳ ಅವಧಿಯಲ್ಲಿ ರಾಯಭಾಗ ಮತಕ್ಷೇತ್ರಕ್ಕೆ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಯೋಜನೆಗಳಡಿ ವಿವಿಧ ಇಲಾಖೆಗಳಿಂದ ಬಿಡುಗಡೆಯಾದ ಅನುದಾನದ ವಿವರ ಮತ್ತು ಈ ಅನುದಾನದಡಿ ಕೈಗೊಂಡ ಅಭಿವೃದ್ಧಿ ಕಾಮಗಾರಿಗಳ ವಿವರವನ್ನು ಅನುಬಂಧ-2 ರಲ್ಲಿ ನೀಡಿದೆ. |
| ಇ) | ಈ ಯೋಜನೆಯಡಿ ರಾಯಭಾಗ ಮತಕ್ಷೇತ್ರದಲ್ಲಿ ಕಳೆದ ಮೂರು ವರ್ಷಗಳಲ್ಲಿ ಕೈಗೊಂಡ ಕಾಮಗಾರಿಗಳು ಪೂರ್ಣಗೊಂಡಿದ್ದರೂ ಸಹ ಈವರೆವಿಗೂ ಅನುದಾನ ಬಿಡುಗಡೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಗತಿ ಕಾಲೋನಿ ಯೋಜನೆಯಡಿ 2018-19ನೇ ಸಾಲಿನಿಂದ ಇದುವರೆವಿಗೂ ಸರ್ಕಾರದಿಂದ ಹೊರಡಿಸಲಾಗಿರುವ ಮಂಜೂರಾತಿ ಆದೇಶಗಳ ಒಟ್ಟು ಮೊತ್ತ ರೂ.1422.04 ಕೋಟಿಗಳಿಗೆ ಅನುಗುಣವಾಗಿ, ರೂ.755.55 ಕೋಟಿಗಳನ್ನು ಸಂಬಂಧಪಟ್ಟ ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿದ್ದು, ರೂ.666.49 ಕೋಟಿಗಳನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡುವುದು ಬಾಕಿ ಇರುತ್ತದೆ. |
| ಈ) | ಬಂದಿದ್ದಲ್ಲಿ, ಪೂರ್ಣಗೊಂಡ ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ; | ಮೇಲ್ಕಂಡಂತೆ ಮಂಜೂರಾತಿ ನೀಡಿ, ಬಿಡುಗಡೆ ಮಾಡಿದ ಮೊತ್ತಕ್ಕೆ ಅನುಗುಣವಾಗಿ ಕಾಮಗಾರಿಗಳನ್ನು ನಿರ್ವಹಿಸಿದ ನಂತರ ಬಾಕಿ ಅನುದಾನ ಬಿಡುಗಡೆ ಕೋರಿ ಸ್ಥಳ ಮಹಜರು ವರದಿ, ಹಣಬಳಕೆ ಪ್ರಮಾಣ ಪತ್ರ ಹಾಗೂ ಅಗತ್ಯ ದಾಖಲಾತಿಗಳೊಂದಿಗೆ ರೂ.185.04 ಕೋಟಿಗಳ ಬಾಕಿ ಅನುದಾನ ಬಿಡುಗಡೆ ಕೋರಿ ಜಿಲ್ಲೆಗಳಿಂದ ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ. |

| ಉ) | ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಅನುದಾನವನ್ನು ಬಿಡುಗಡೆ ಮಾಡಲಾಗುವುದು; | 2022-23ನೇ ಸಾಲಿನಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ಪ್ರಗತಿ ಕಾಲೋನಿ ಯೋಜನೆಯ ಅನುಷ್ಠಾನಕ್ಕಾಗಿ ರೂ.40.00 ಕೋಟಿಗಳನ್ನು ಒದಗಿಸಲಾಗಿದ್ದು, ಈ ಪೈಕಿ ಮೂರು ಕಂತುಗಳಲ್ಲಿ ಬಿಡುಗಡೆ ಮಾಡಿರುವ ರೂ.30.00 ಕೋಟಿಗಳನ್ನು ವೆಚ್ಚ ಮಾಡಲಾಗಿರುತ್ತದೆ. ನಾಲ್ಕನೇ ಕಂತಿನಲ್ಲಿ ಬಿಡುಗಡೆ ಮಾಡಿರುವ ರೂ.10.00 ಕೋಟಿಗಳನ್ನು, ಆದ್ಯತೆ ಮೇರೆಗೆ ವೆಚ್ಚ ಮಾಡಲು ಕ್ರಮವಹಿಸಲಾಗುತ್ತಿದೆ.<br><br>ಸರ್ಕಾರದ ಆದೇಶ ಸಂಖ್ಯೆ: ಸಕಇ 44 ಎಸ್ಎಲ್‌ಪಿ 2023, ದಿನಾಂಕ:09-02-2023ರಲ್ಲಿ ಪರಿಶಿಷ್ಟ ಜಾತಿಯವರಿಗೆ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳ ಬಂಡವಾಳ ಲೆಕ್ಕಶೀರ್ಷಿಕೆ 4225-01-796-0-01 ರಡಿ ರೂ.8500.00 ಲಕ್ಷಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಅನುದಾನದ ಪೈಕಿ ಪ್ರಗತಿ ಕಾಲೋನಿ ಯೋಜನೆಗೆ ಹಂಚಿಕೆ ಮಾಡುವ ಅನುದಾನ ಹಾಗೂ ಜಿಲ್ಲೆಗಳಿಂದ ಸ್ವೀಕೃತವಾಗಿರುವ ಬಾಕಿ ಅನುದಾನ ಬಿಡುಗಡೆ ಪ್ರಸ್ತಾವನೆಗಳನ್ನು ಆಧರಿಸಿ, ಬಾಕಿ ಅನುದಾನ ಬಿಡುಗಡೆ ಮಾಡಲು ನಿಯಮಾನುಸಾರ ಅಗತ್ಯ ಕ್ರಮವಹಿಸಲಾಗುವುದು. |
|---|---|---|
| ಊ) | ಇಲ್ಲದಿದ್ದಲ್ಲಿ, ಕಾರಣಗಳೇನು? (ವಿವರ ನೀಡುವುದು) | |

**ಸಕಇ 57 ಎಸ್‌ಎಲ್ ಪಿ 2023**

**(ಕೋಟ ಶ್ರೀನಿವಾಸ ಪೂಜಾರಿ)**
**ಸಮಾಜ ಕಲ್ಯಾಣ ಹಾಗೂ**
**ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು**

# ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 67ಕ್ಕೆ ಅನುಬಂಧ–1

## ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರ ಅಭಿವೃದ್ಧಿಗಾಗಿ ಅನುಷ್ಠಾನ ಮಾಡುತ್ತಿರುವ ಯೋಜನೆಗಳ ವಿವರ.

# ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ

## 1. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ

ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ 5 ರಿಂದ 10ನೇ ತರಗತಿಯವರೆಗೆ ಓದುತ್ತಿರುವ ಪರಿಶಿಷ್ಟ ಜಾತಿ/ ಪ.ವರ್ಗದ ಬಾಲಕ, ಬಾಲಕಿಯರು ತಮ್ಮ ಹೆಚ್ಚಿನ ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗುವಂತೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳನ್ನು ನಿರ್ವಹಿಸಲಾಗುತ್ತಿದೆ.

- ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ.1650.00 ಗಳ ಭೋಜನಾ ವೆಚ್ಚ ಹಾಗೂ ಪುಸ್ತಕ, ಲೇಖನ ಸಾಮಗ್ರಿ, ಸಮವಸ್ತ್ರ, ಹಾಸಿಗೆ, ಹೊದಿಕೆ, ಶುಚಿ ಸಂಭ್ರಮ ಕಿಟ್, ಶೂ, ಮತ್ತು ಇತರ ವೆಚ್ಚಗಳನ್ನು ಭರಿಸಲಾಗುತ್ತಿದೆ.

## 2. ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ

- ಗ್ರಾಮೀಣ ಪ್ರದೇಶಗಳಿಂದ ಕಾಲೇಜು ಶಿಕ್ಷಣ ಪಡೆಯಲು ಬರುವ ಪ.ಜಾತಿ/ಪ.ವರ್ಗದ ವಿದ್ಯಾರ್ಥಿಗಳಿಗೆ ತಮ್ಮ ಹೆಚ್ಚಿನ ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲವಾಗುವಂತೆ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ನೀಡಿ ಉಚಿತ ಊಟ ಮತ್ತು ವಸತಿ ಸೌಲಭ್ಯ ನೀಡಲಾಗುತ್ತದೆ.
- ಕುಟುಂಬದ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷದ ಒಳಗಿನ ವಿದ್ಯಾರ್ಥಿಗಳು ಆನ್‌ಲೈನ್ ಮೂಲಕ ಅರ್ಜಿಯನ್ನು ಸಲ್ಲಿಸತಕ್ಕದ್ದು.
- ಅರ್ಹ ಎಲ್ಲಾ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲಾಗುತ್ತದೆ.
- ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಮಾಹೆಯಾನ ರೂ.1750.00 ಗಳ ಭೋಜನಾ ವೆಚ್ಚ ಭರಿಸಲಾಗುತ್ತಿದೆ.

## 3. ಕ್ರೈಸ್ ವಸತಿ ಶಾಲೆಗಳಲ್ಲಿ ಪ್ರವೇಶ.

ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಗುಣಮಟ್ಟದ ಶಿಕ್ಷಣ ಒದಗಿಸುವ ದೃಷ್ಟಿಯಿಂದ ಗ್ರಾಮೀಣ ಪ್ರದೇಶದಲ್ಲಿ ಸರ್ಕಾರವು 826 ವಸತಿ ಶಾಲೆಗಳನ್ನು ಪ್ರಾರಂಭಿಸಿದ್ದು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಮೂಲಕ ನಿರ್ವಹಿಸಲಾಗುತ್ತದೆ. 503 ಪ.ಜಾತಿ, 156 ಪ.ವರ್ಗ (12 ಏಕಲವ್ಯ ಮಾದರಿ ಶಾಲೆ) ಮತ್ತು 167 ಹಿಂದುಳಿದ ವರ್ಗಗಳ ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ. ಅದರಲ್ಲಿ ಒಟ್ಟು 79 ಪದವಿ ಪೂರ್ವ ಕಾಲೇಜುಗಳು ಸಹ ಒಳಗೊಂಡಿವೆ.

- ಈ ವಸತಿ ಶಾಲೆಗಳಲ್ಲಿ 6ನೇ ತರಗತಿಯಿಂದ ಪ್ರವೇಶ ನೀಡಲಾಗುವುದು.
- ಕುಟುಂಬದ ವಾರ್ಷಿಕ ಆದಾಯದ ಮಿತಿ ರೂ.2.50 ಲಕ್ಷದೊಳಗೆ ಇರುವ ವಿದ್ಯಾರ್ಥಿಗಳು ಪ್ರವೇಶಕ್ಕೆ ಅರ್ಹರು.
- ಪ್ರತಿ ವಸತಿ ಶಾಲೆಗೆ ಪ್ರತಿ ತರಗತಿಗೆ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆ 50 ಇದ್ದು, 6 ರಿಂದ 10ನೇ ತರಗತಿಯವರೆಗೆ ಒಟ್ಟು 250 ವಿದ್ಯಾರ್ಥಿಗಳಿಗೆ ವ್ಯಾಸಂಗ ಮಾಡಲು ಅವಕಾಶ ಕಲ್ಪಿಸಲಾಗಿದೆ.
- ಸಾಮಾನ್ಯ ಪ್ರವೇಶ ಪರೀಕ್ಷೆ ಮೂಲಕ, ಪ್ರವೇಶ ಪರೀಕ್ಷೆಯಲ್ಲಿ ಪಡೆದ ಅಂಕಗಳ ಮೆರಿಟ್ ಆಧಾರದ ಮೇಲೆ ಮೀಸಲಾತಿ ಅನುಸರಿಸಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲಾಗುವುದು.
- 5 ನೇ ತರಗತಿ ವಿದ್ಯಾರ್ಥಿಗಳು ಪ್ರತಿ ವರ್ಷವೂ ಕ್ರೈಸ್‌ನಿಂದ ಹೊರಡಿಸುವ ಅಧಿಸೂಚನೆಯಂತೆ ಸಾಮಾನ್ಯ ಪ್ರವೇಶ ಪರೀಕ್ಷೆಗೆ ಅರ್ಜಿಗಳನ್ನು ಸಲ್ಲಿಸಬಹುದು ಮತ್ತು ಪ್ರವೇಶ ಪರೀಕ್ಷೆ ನಡೆಸಲು ನಿಗದಿಪಡಿಸಿದ ದಿನಾಂಕದಂದು ಪ್ರವೇಶ ಪರೀಕ್ಷೆ ಬರೆಯಬೇಕಾಗಿದೆ.
- ಆಯ್ಕೆ ಮಾಡಿಕೊಂಡ ಶಾಲೆಯಲ್ಲಿ ವಸತಿ ಶಾಲೆ ಪ್ರಾರಂಭವಾದ ದಿನದಿಂದ ವಿದ್ಯಾರ್ಥಿಗಳನ್ನು ದಾಖಲು ಮಾಡಿಕೊಳ್ಳಲಾಗುವುದು.
- ಹಿಂದುಳಿದ ವರ್ಗ/ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಶಾಲೆಗಳಲ್ಲಿ ಮೀಸಲಾತಿ ಈ ಕೆಳಗಿನಂತೆ ಇರುತ್ತದೆ.

| ಶಾಲೆಯ ವರ್ಗ | ಪ.ಜಾತಿಯ ವಿದ್ಯಾರ್ಥಿಗಳು | ಪ.ಪಂಗಡದ ವಿದ್ಯಾರ್ಥಿಗಳು | ಹಿಂದುಳಿದ ವರ್ಗದ ವಿದ್ಯಾರ್ಥಿಗಳು |
|---|---|---|---|
| ಪರಿಶಿಷ್ಟ ಜಾತಿ ಶಾಲೆ | 75% | 10% | 15% |
| ಪರಿಶಿಷ್ಟ ಪಂಗಡ/ಇ.ಎಂ.ಆರ್ ಶಾಲೆ | 10% | 75% | 15% |
| ಹಿಂದುಳಿದ ವರ್ಗಗಳ ಶಾಲೆ | 15% | 10% | 75% |

ಮೇಲ್ಕಂಡ ಪ್ರತಿಶತಗಳಲ್ಲಿ ಆಂತರಿಕ ಮೀಸಲಾತಿಯನ್ನು ಸಹ ಅನುಸರಿಸಲಾಗುವುದು.

- ಅಲೆಮಾರಿ, ಸಫಾಯಿಕರ್ಮಚಾರಿ, ಮಾಜಿ ಸೈನಿಕ, ಆಶ್ರಮ ಶಾಲೆ ವಿದ್ಯಾರ್ಥಿಗಳಿಗೆ ಸಹ ವಸತಿ ಶಾಲೆಗಳಲ್ಲಿ ಪ್ರವೇಶ ಪಡೆಯಲು ಮೀಸಲಾತಿಯನ್ನು ಕಲ್ಪಿಸಲಾಗಿದೆ.
- ಕೆಲವು ಶಾಲೆಗಳಲ್ಲಿ ಪಿ.ಯು.ಸಿ ಪ್ರವೇಶಕ್ಕೆ ಅವಕಾಶವಿದೆ. ಈ ಶಾಲೆ/ಕಾಲೇಜುಗಳಲ್ಲಿ ಪಿ.ಯು ಮೊದಲನೇ ವರ್ಷ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಮೆರಿಟ್ ಆಧಾರದ ಮೇಲೆ ಪ್ರವೇಶ ನೀಡಲಾಗುವುದು. ಪ್ರಸ್ತುತ ಎಂ.ಸಿ.ಸಿ./ಪಿ.ಸಿ.ಎಂ.ಬಿ ಕೋರ್ಸ್‌ಗಳಲ್ಲಿ ಪ್ರವೇಶ ನೀಡಲಾಗುವುದು. ಪ್ರತಿ ಕೋರ್ಸ್‌ಗೆ ಪಿ.ಯು ಮೊದಲನೇ ವರ್ಷ 40 ವಿದ್ಯಾರ್ಥಿಗಳಿಗೆ ಅವಕಾಶ ಮತ್ತು ಪಿ.ಯು ಎರಡನೇ ವರ್ಷ 40 ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ.
- ಕ್ರೈಸ್ ವಸತಿ ಶಾಲೆಗಳಲ್ಲಿ 25% ಸೀಟ್‌ಗಳನ್ನು ಆಯಾ ತಾಲ್ಲೂಕಿನ ವಿದ್ಯಾರ್ಥಿಗಳಿಗೆ ಮೀಸಲಿಡಲಾಗುವುದು.
- ವಸತಿ ಶಾಲೆ ವಿದ್ಯಾರ್ಥಿಗಳಿಗೆ ಭೋಜನ ವೆಚ್ಚಕ್ಕಾಗಿ ಪ್ರತಿ ತಿಂಗಳು ರೂ.1600/-ಗಳನ್ನು ನೀಡಲಾಗುವುದು ಮತ್ತು ಸಮವಸ್ತ್ರ, ಪಠ್ಯ ಪುಸ್ತಕ, ನೋಟ್ ಬುಕ್, ಸ್ಕೂಲ್ ಬ್ಯಾಗ್, ಶುಚಿ ಸಂಭ್ರಮ ಕಿಟ್ ಇತ್ಯಾದಿ ಉಚಿತವಾಗಿ ನೀಡಲಾಗುವುದು.
- ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳಿವೆ (ಕಿತ್ತೂರು ರಾಣಿ ಚೆನ್ನಮ್ಮ ಶಾಲೆಗಳು). ಆದರೆ, ಇತರೆ ಶಾಲೆಗಳಲ್ಲಿ ಬಾಲಕಿಯರಿಗೆ ಪ್ರವೇಶಾವಕಾಶವಿದೆ.
- ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಸ್ಯಾನಿಟರಿ ನ್ಯಾಪ್ಕಿನ್‌ಗಳನ್ನು ಬಾಲಕಿಯರಿಗೆ ಸರಬರಾಜು ಮಾಡಲಾಗುತ್ತಿದೆ.
- ಬಾಲಕ ಮತ್ತು ಬಾಲಕಿಯರಿಗೆ ಪ್ರತ್ಯೇಕ ಡಾರ್ಮೆಟರಿ ವ್ಯವಸ್ಥೆ ಇದೆ.
- ವಸತಿ ಶಾಲೆಗಳಲ್ಲಿ ಕ್ರೀಡಾ ಚಟುವಟಿಗಳಿಗೆ ವ್ಯವಸ್ಥೆ ಕಲ್ಪಿಸಲಾಗಿದೆ.

**4. ಪ್ರತಿಷ್ಠಿತ ಶಾಲೆಗಳಲ್ಲಿ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಪ್ರವೇಶ**

- ರಾಜ್ಯ ಮಟ್ಟದ ಸಮಿತಿಯಿಂದ ಆಯ್ಕೆ ಮಾಡಲಾದ ಖಾಸಗಿ ಪ್ರತಿಷ್ಠಿತ ಶಾಲೆಗಳಿಗೆ ಪ್ರತಿಭಾವಂತ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳನ್ನು ದಾಖಲಿಸಿ ಬೋಧನಾ ಶುಲ್ಕ ಮತ್ತು ವಸತಿ ಸೌಕರ್ಯ ವೆಚ್ಚವನ್ನು ಸರ್ಕಾರದಿಂದ ಭರಿಸಲಾಗುತ್ತಿದೆ.
- ಪ್ರತಿ ವಿದ್ಯಾರ್ಥಿಗೆ ಆಯ್ಕೆಯಾದ ಶಾಲೆ ಇರುವ ಪ್ರದೇಶದ ಆಧಾರದ ಮೇಲೆ ರೂ.50,000/- ದಿಂದ ರೂ.1.00 ಲಕ್ಷದ ವರೆಗೆ ವೆಚ್ಚವನ್ನು ಭರಿಸಲಾಗುವುದು.
- ಪ್ರತಿ ವರ್ಷ ಪ.ಜಾತಿ 1000 ಹಾಗೂ ಪ.ಪಂಗಡದ 500 ವಿದ್ಯಾರ್ಥಿಗಳಿಗೆ ಪ್ರವೇಶ ಕಲ್ಪಿಸಲಾಗುತ್ತಿದೆ.
- ಅರ್ಹತೆ-ವಿದ್ಯಾರ್ಥಿಗಳ ಕುಟುಂಬ ವಾರ್ಷಿಕ ಆದಾಯ ಮಿತಿ ರೂ.2.00 ಲಕ್ಷ.

**5. ಮೆಟ್ರಿಕ್ ಪೂರ್ವ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ (ಡೇ ಸ್ಕಾಲರ್‌ಶಿಪ್)**

ವಿದ್ಯಾರ್ಥಿನಿಲಯಗಳಲ್ಲಿ ಇಲ್ಲದೇ ಇರುವ ಪರಿಶಿಷ್ಟ ಜಾತಿಯ 1 ರಿಂದ 8ನೇ ತರಗತಿಯವರೆಗಿನ ವಿದ್ಯಾರ್ಥಿಗಳು ತಮ್ಮ ವ್ಯಾಸಂಗವನ್ನು ಮುಂದುವರೆಸುವಂತೆ ಪ್ರೋತ್ಸಾಹಿಸಲು ಹಾಗೂ ವಿದ್ಯಾಭ್ಯಾಸದ ನಡುವೆ ಶಾಲೆ ಬಿಡುವುದನ್ನು ತಪ್ಪಿಸಲು ಮತ್ತು ಪಾಲಕರು ಮಕ್ಕಳನ್ನು ಶಾಲೆಗೆ ಕಳುಹಿಸುವಂತೆ ಉತ್ತೇಜಿಸಲು ಮೆಟ್ರಿಕ್‌ಪೂರ್ವ ವಿದ್ಯಾರ್ಥಿವೇತನ ಮಂಜೂರು ಮಾಡಲಾಗುತ್ತಿದೆ.

- ಅರ್ಹತೆ-ವಿದ್ಯಾರ್ಥಿಗಳ ಕುಟುಂಬ ವಾರ್ಷಿಕ ಆದಾಯ ಮಿತಿ – ರೂ. 6.00 ಲಕ್ಷ

| ಕ್ರ.ಸಂ | ತರಗತಿ | ವಾರ್ಷಿಕ ವಿದ್ಯಾರ್ಥಿವೇತನ | |
|---|---|---|---|
| | | ಬಾಲಕರು | ಬಾಲಕಿಯರು |
| 1. | 1 ರಿಂದ 5 | 1000.00 | 1100.00 |
| 2. | 6 ರಿಂದ 7 | 1150.00 | 1250.00 |
| 3. | 8ನೇ ತರಗತಿ | 1250.00 | 1350.00 |

- ಸರ್ಕಾರಿ ಶಾಲೆಗಳಲ್ಲಿ ಮತ್ತು ಮಾನ್ಯತೆ ಪಡೆದ ಅನುದಾನಿತ/ಖಾಸಗಿ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳು ವಿದ್ಯಾರ್ಥಿವೇತನಕ್ಕೆ ಅರ್ಹರಾಗಿರುತ್ತಾರೆ.

ಎಸ್.ಎಸ್.ಪಿ ಪೋರ್ಟಲ್‌ನಲ್ಲಿ ಆನ್‌ಲೈನ್ ಮೂಲಕ ಸ್ವೀಕರಿಸುವ ಅರ್ಜಿಗಳನ್ನು ಪರಿಶೀಲಿಸಿ, ವಿದ್ಯಾರ್ಥಿವೇತನವನ್ನು ಮಂಜೂರು ಮಾಡಿ ವಿದ್ಯಾರ್ಥಿಗಳ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ಜಮೆ ಮಾಡಲಾಗುತ್ತದೆ.

**ಮೆಟ್ರಿಕ್ ಪೂರ್ವ 9 ಮತ್ತು 10 ನೇ ತರಗತಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ – ಕೇಂದ್ರ ಪುರಸ್ಕೃತ ಯೋಜನೆ**

| ತರಗತಿ | ಡೇ ಸ್ಕಾಲರ್ | ಹಾಸ್ಟೆಲರ್ | ಕುಟುಂಬದ ವಾರ್ಷಿಕ ಮಿತಿ |
|---|---|---|---|
| 9 – 10 | ರೂ. 3000/– ವಾರ್ಷಿಕ | ರೂ.6250/– ವಾರ್ಷಿಕ | ರೂ.2.50 ಲಕ್ಷದ ಒಳಗಿರಬೇಕು. |

**ಅನೈರ್ಮಲ್ಯ ವೃತ್ತಿಗಳಲ್ಲಿ ತೊಡಗಿರುವವರ ಮಕ್ಕಳಿಗೆ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ**

| ತರಗತಿ | ಡೇ ಸ್ಕಾಲರ್ | ಹಾಸ್ಟೆಲರ್ |
|---|---|---|
| 1 – 10 | ರೂ. 3000/– ವಾರ್ಷಿಕ | ರೂ.8000/– ವಾರ್ಷಿಕ |

**6. ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ**

- ಈ ವಿದ್ಯಾರ್ಥಿ ವೇತನದಲ್ಲಿ ಬೋಧನಾ ಶುಲ್ಕ ಮತ್ತು ಇತರೆ ಕಡ್ಡಾಯ ಶುಲ್ಕಗಳ ಪಾವತಿ, ಡೇ ಸ್ಕಾಲರ್ ವಿದ್ಯಾರ್ಥಿಗಳ ಮತ್ತು ಹಾಸ್ಟೆಲ್ ವಿದ್ಯಾರ್ಥಿಗಳ ಭೋಜನಾ ವೆಚ್ಚವು ಸ್ಥಿರಿರುತ್ತದೆ.
- ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷ ಮಿತಿಯೊಳಗಿನ ಕಾಲೇಜು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ನೀಡಲಾಗುತ್ತದೆ.
- ವಿದ್ಯಾರ್ಥಿ ವೇತನ ಪಡೆಯಲು State Scholarship Portal (SSP) ನಲ್ಲಿ ವಿದ್ಯಾರ್ಥಿಗಳು ಆನ್‌ಲೈನ್ ಅರ್ಜಿಯನ್ನು ಸಲ್ಲಿಸುವುದು.
- NRI, Management Quota ದಲ್ಲಿ On the spot ಪ್ರವೇಶ ಪಡೆದಿರುವ ವಿದ್ಯಾರ್ಥಿಗಳು ವಿದ್ಯಾರ್ಥಿವೇತನಕ್ಕೆ ಅರ್ಹರಲ್ಲ.

| ಕೋರ್ಸ್ | ಭಾರತ ಸರ್ಕಾರ ನಿಗದಿ ಪಡಿಸಿರುವ ದರ (10 ತಿಂಗಳ ಅವಧಿಗೆ) | |
|---|---|---|
| | ಡೇ ಸ್ಕಾಲರ್ಸ್ | ಹಾಸ್ಟೆಲರ್ಸ್ |
| ಗ್ರೂಪ್ –I ಇಂಜಿನಿಯರಿಂಗ್, ಮೆಡಿಕಲ್ ಇತ್ಯಾದಿ | ರೂ.7000/– | ರೂ.13500/– |
| ಗ್ರೂಪ್ – II ಸ್ನಾತಕೋತ್ತರ ಪದವಿ | ರೂ.6500/– | ರೂ.9500/– |
| ಗ್ರೂಪ್ – III ಪದವಿ | ರೂ.3000/– | ರೂ.6000/– |
| ಗ್ರೂಪ್ – IV ಪಿ.ಯು.ಸಿ & ಸಮಾನ ಕೋರ್ಸ್‌ಗಳು | ರೂ.2500/– | ರೂ.4000/– |

ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷಕ್ಕಿಂತ ಮೇಲ್ಪಟ್ಟು ರೂ.10.00 ಲಕ್ಷದ ಒಳಗೆ ಇರುವ ವೈದ್ಯಕೀಯ, ಇಂಜಿನಿಯರಿಂಗ್/ಪಾಲಿಟೆಕ್ನಿಕ್ ವಿದ್ಯಾರ್ಥಿಗಳಿಗೆ ವೈದ್ಯಕೀಯ ಶಿಕ್ಷಣ ಇಲಾಖೆ ಮತ್ತು ತಾಂತ್ರಿಕ ಶಿಕ್ಷಣ ಇಲಾಖೆಗಳಿಂದ ಸರ್ಕಾರ ನಿಗದಿಪಡಿಸಿದ 100% ಬೋಧನಾ ಶುಲ್ಕವನ್ನು ಮರುಪಾವತಿ ಮಾಡಲಾಗುತ್ತದೆ. ಇತರೆ ಕೋರ್ಸ್‌ಗಳಿಗೆ 50% ಬೋಧನಾ ಶುಲ್ಕವನ್ನು ಮರುಪಾವತಿ ಮಾಡಲಾಗುತ್ತದೆ.

7. **ರಾಷ್ಟ್ರ ಮಟ್ಟದ ಸಂಸ್ಥೆಗಳಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಧನಸಹಾಯ:**

- IIT/IIM/AIMS/IISc/NIT/IIIT/National Law University/college ಇತ್ಯಾದಿ ರಾಷ್ಟ್ರ ಮಟ್ಟದ ಸಂಸ್ಥೆಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳಿಗೆ ರೂ.2.00 ಲಕ್ಷ ಪ್ರೋತ್ಸಾಹಧನ ನೀಡಲಾಗುತ್ತಿದೆ.
- ಸಿ.ಎ / ಐ.ಸಿ.ಡಬ್ಲ್ಯೂಎ / ಕಂಪನಿ ಸೆಕ್ರೆಟರಿ ಪರೀಕ್ಷೆಗಳಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಕ್ರಮವಾಗಿ ಇಂಟರ್ ಕೋರ್ಸಿಗೆ ರೂ.1.00 ಲಕ್ಷ ಮತ್ತು ಫೈನಲ್ ಪರೀಕ್ಷೆಗೆ ರೂ.1.00 ಲಕ್ಷಗಳನ್ನು ಮಂಜೂರು ಮಾಡಲಾಗುತ್ತಿದೆ.
- ಆದಾಯ ಮಿತಿ ಇರುವುದಿಲ್ಲ.

8. **ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ**

ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ಪ.ಜಾತಿ/ಪ.ವರ್ಗದ ವಿದ್ಯಾರ್ಥಿಗಳಿಗೆ ಈ ಕೆಳಗಿನಂತೆ ಪ್ರೋತ್ಸಾಹಧನ ನೀಡಲಾಗುತ್ತದೆ.

| ಕೋರ್ಸ್ | | ಪ್ರೋತ್ಸಾಹಧನ (ರೂ.ಗಳಲ್ಲಿ) |
|---|---|---|
| ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ | 60–74.99% ಅಂಕ ಪಡೆದವರಿಗೆ | 7000/- |
| | 75%ಕ್ಕಿಂತ ಮೇಲ್ಪಟ್ಟು ಅಂಕ ಪಡೆದವರಿಗೆ | 15000/- |
| ದ್ವಿತೀಯ ಪಿ.ಯು.ಸಿ ಅಂತಿಮ ಪರೀಕ್ಷೆ | | 20,000/- |
| ಪದವಿ ಅಂತಿಮ ಪರೀಕ್ಷೆ | | 25,000/- |
| ಸ್ನಾತಕೋತ್ತರ ಪದವಿ ಅಂತಿಮ ಪರೀಕ್ಷೆ | | 30,000/- |
| ವೃತ್ತಿಪರ ಕೋರ್ಸ್ ಅಂತಿಮ ಪರೀಕ್ಷೆ – ವೈದ್ಯಕೀಯ, ಇಂಜಿನಿಯರಿಂಗ್ ಇತ್ಯಾದಿ | | 35,000/- |
| ಸ್ನಾತಕೋತ್ತರ ಪದವಿಯಲ್ಲಿ ವಿಶ್ವವಿದ್ಯಾಲಯದಲ್ಲಿ 1 ರಿಂದ 5 ರ್‍ಯಾಂಕ್ ವಿಜೇತರಿಗೆ | | 50,000/- |

- ಆದಾಯಮಿತಿ ಇರುವುದಿಲ್ಲ.
- ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವುದು.

9. **ಕಾನೂನು ಪದವೀಧರರಿಗೆ ಪ್ರಾಯೋಗಿಕ ತರಬೇತಿ ಅವಧಿಯಲ್ಲಿ ಶಿಷ್ಯವೇತನ**

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾನೂನು ಪದವೀಧರರು ಹಿರಿಯ ವಕೀಲರಿಂದ ಪ್ರಾಯೋಗಿಕ ತರಬೇತಿ ಪಡೆದು ಸ್ವತಂತ್ರವಾಗಿ ವಕೀಲ ವೃತ್ತಿ ನಡೆಸಲು ಅನುಕೂಲವಾಗುವಂತೆ ಶಿಷ್ಯ ವೇತನವನ್ನು ನೀಡಲಾಗುತ್ತದೆ. ಸದರಿ ಸೌಲಭ್ಯವನ್ನು ಪಡೆಯಲು ನಿಗದಿಪಡಿಸಿರುವ ಗರಿಷ್ಠ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ.

- ತರಬೇತಿ ಅವಧಿ – 2 ವರ್ಷ
- ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ.10,000/- ಶಿಷ್ಯವೇತನ ನೀಡಲಾಗುತ್ತದೆ.
- ಆನ್‌ಲೈನ್ ಮೂಲಕ ಸ್ವೀಕರಿಸಿದ ಅರ್ಜಿಗಳನ್ನು ಆಯ್ಕೆ ಸಮಿತಿಯ ಮೂಲಕ ಆಯ್ಕೆ ಮಾಡಲಾಗುತ್ತದೆ.
- ತರಬೇತಿಯ ಅವಧಿಯಲ್ಲಿ ಮಾಸಿಕ ವರದಿ ಮತ್ತು ಹಾಜರಾತಿ ಸಲ್ಲಿಸಬೇಕಾಗಿದ್ದು, ಅದರನ್ವಯ ಶಿಷ್ಯವೇತನವನ್ನು ಪಾವತಿಸಲಾಗುತ್ತದೆ.
- ತರಬೇತಿ ಪಡೆದ ಕಾನೂನು ಪದವೀಧರರಿಗೆ ಕಛೇರಿ ಸ್ಥಾಪನೆಗೆ ತಾಲ್ಲೂಕು ಮಟ್ಟದಲ್ಲಿ ರೂ.50000/-, ನಗರ ಪಾಲಿಕೆ/ ಮಹಾನಗರ ಪಾಲಿಕೆ/ಬಿ.ಬಿಎಂ.ಪಿ ವ್ಯಾಪ್ತಿಯಲ್ಲಿ ರೂ.1,00,000/- ಧನಸಹಾಯ ನೀಡಲಾಗುತ್ತದೆ.

10. "ಪ್ರಬುದ್ಧ" – ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಧನಸಹಾಯ:

ಈ ಯೋಜನೆಯಡಿ ಸರ್ಕಾರದಿಂದ ಅನುಮೋದಿಸಿರುವ ವಿದೇಶದಲ್ಲಿರುವ ವಿಶ್ವವಿದ್ಯಾಲಯಗಳು / ಶಿಕ್ಷಣ ಸಂಸ್ಥೆಗಳಲ್ಲಿ ಸ್ನಾತಕೋತ್ತರ ಪದವಿ ಮತ್ತು ಪಿ.ಹೆಚ್.ಡಿ ಪದವಿಗಳನ್ನು ಕೆಳಕಂಡ ನಿಗದಿತ ವಿಷಯಗಳಲ್ಲಿ ವ್ಯಾಸಂಗ ಮಾಡಲು ಆಯ್ಕೆಯಾದವರಿಗೆ ಆರ್ಥಿಕ ಸಹಾಯವನ್ನು ಒದಗಿಸಲಾಗುವುದು. ಈ ಯೋಜನೆಯಡಿ www.sw.kar.nic.in ರಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸತಕ್ಕದ್ದು.

**ವಿಷಯಗಳು**

- Engineering and Management
- Pure Sciences and Applied Sciences
- Agriculture Sciences & Medicine
- International Commerce, Economics, Accounting Finance
- Humanities, Social Science, Fine Arts and Law

**ವಾರ್ಷಿಕ ಆದಾಯ ಮಿತಿ**

- ರೂ.8.00 ಲಕ್ಷಗಳು – 100% ವೆಚ್ಚ ಭರಿಸುವುದು.
- ರೂ.8.00 ಲಕ್ಷಗಳಿಂದ ರೂ.15.00 ಲಕ್ಷಗಳು – 50% ವೆಚ್ಚ ಭರಿಸುವುದು
- ರೂ.15.00 ಲಕ್ಷಗಳಿಂದ ರೂ.25.00 ಲಕ್ಷಗಳು – 33% ವೆಚ್ಚ ಭರಿಸುವುದು

**ಧನ ಸಹಾಯದ ವಿವರ**

- ನಿರ್ವಹಣಾ ವೆಚ್ಚ – ವಾರ್ಷಿಕ ನಿರ್ವಹಣೆ, ಊಟ ಮತ್ತು ವಸತಿ ವೆಚ್ಚಕ್ಕಾಗಿ ಪ್ರತಿ ಅಭ್ಯರ್ಥಿಗೆ ರೂ. 8.00 ಲಕ್ಷಗಳು ಅಥವಾ ವಿಶ್ವವಿದ್ಯಾಲಯಗಳು ನೀಡುವ ಅಂದಾಜು ವೆಚ್ಚದ ಶೇ.75 ರಷ್ಟು, ಇವುಗಳೆರಡರಲ್ಲಿ ಯಾವುದೋ ಕಡಿಮೆಯೋ ಅದನ್ನು ಪ್ರತಿ ಒಂದು ವರ್ಷದ ಕೋರ್ಸಿಗೆ ನೀಡಲಾಗುವುದು.
- ಬೋಧನಾ ಶುಲ್ಕ-ನಿಗದಿಪಡಿಸಿದ ವಾಸ್ತವ ಶುಲ್ಕ(ಒಂದು ವೇಳೆ ಅಭ್ಯರ್ಥಿಗೆ ವಿದ್ಯಾರ್ಥಿವೇತನ ಮಂಜೂರಾಗಿದ್ದಲ್ಲಿ ವಾಸ್ತವ ಶುಲ್ಕದಲ್ಲಿ ವಿದ್ಯಾರ್ಥಿವೇತನದ ಮೊತ್ತವನ್ನು ಕಳೆದು ಬಾಕಿ ಉಳಿದ ಮೊತ್ತವನ್ನು ಪಾವತಿಸಲಾಗುವುದು).
- ಸ್ನಾತಕೋತ್ತರ ಪದವಿಗೆ – ಗರಿಷ್ಟ 2 ವರ್ಷ ಅವಧಿ
- ಪಿ.ಎಚ್.ಡಿ – ಗರಿಷ್ಟ 4 ವರ್ಷ
- ವೈದ್ಯಕೀಯ ವಿಮೆಗೆ–ನಿಗದಿಪಡಿಸಿದ ವಾಸ್ತವ ಶುಲ್ಕ
- ಪುಸ್ತಕಗಳು ಮತ್ತು ಇನ್ನಿತರ ವಿವಿಧ ಭತ್ಯೆಗಳಿಗೆ–ವಾರ್ಷಿಕ ರೂ.1.00 ಲಕ್ಷ
- ವೀಸಾ ಶುಲ್ಕ–ವಾಸ್ತವ ಶುಲ್ಕವನ್ನು Indian currency ಮೂಲಕ ಪಾವತಿಸಲಾಗುವುದು.
- ವಿಮಾನಯಾನ ಭತ್ಯೆ Economy class ticket by shortest route – ಭಾರತ ದೇಶದಿಂದ ವಿದೇಶಿ ವಿಶ್ವವಿದ್ಯಾಲಯದ (ಶಿಕ್ಷಣ ಸಂಸ್ಥೆ) ಹತ್ತಿರದ ವಿಮಾನ ನಿಲ್ದಾಣದ ಸ್ಥಳಕ್ಕೆ ಮತ್ತು ಭಾರತಕ್ಕೆ ಹಿಂದಿರುಗುವಾಗ ವಿಮಾನಯಾನ ಭತ್ಯೆ ನೀಡಲಾಗುವುದು.

**ಪ್ರಬುದ್ಧ – ಧನಸಹಾಯ ಪಡೆಯಲು ಅಭ್ಯರ್ಥಿಗಳು ಹೊಂದಿರಬೇಕಾಗಿರುವ ಅರ್ಹತೆಗಳು.**

- ಅಭ್ಯರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
- ಕರ್ನಾಟಕ ರಾಜ್ಯ ಪ್ರಕಟಿಸಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ಇಲಾಖೆಯಿಂದ ಪ್ರಕಟಿಸಲಾದ ವಿದೇಶಿ ವಿಶ್ವವಿದ್ಯಾಲಯದಿಂದ ಆಫರ್ ಲೆಟರ್ ಪಡೆದಿರಬೇಕು.
- ವಿದೇಶಿ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿ ಅಧ್ಯಯನ ಮಾಡಲು ಉದ್ದೇಶಿಸಿರುವ ಅಭ್ಯರ್ಥಿಯು ಯು.ಜಿ.ಸಿ ಮಾನ್ಯತೆ ಪಡೆದ ವಿಶ್ವ ವಿದ್ಯಾಲಯದಿಂದ ಪದವಿಯನ್ನು ಪಡೆದಿರಬೇಕು. ಪಿ.ಹೆಚ್.ಡಿ ಅಧ್ಯಯನಕ್ಕೆ ತೆರಳುವ ಅಭ್ಯರ್ಥಿಗಳು ಸ್ನಾತಕೋತ್ತರ ಪದವಿ ಪಡೆದಿರಬೇಕು.

11. **ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಪರೀಕ್ಷಾ ಪೂರ್ವ ತರಬೇತಿ (ಯು.ಪಿ.ಎಸ್.ಸಿ/ಕೆ.ಪಿ.ಎಸ್.ಸಿ ಮತ್ತು ಬ್ಯಾಂಕಿಂಗ್)**

- ಅಭ್ಯರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು ಮತ್ತು ಪದವೀಧರರಾಗಿಬೇಕು.
- ಕರ್ನಾಟಕ ರಾಜ್ಯ ಪ್ರಕಟಿಸಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ವಾರ್ಷಿಕ ಆದಾಯ ಮಿತಿ ರೂ. 5.00 ಲಕ್ಷ
- ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸಿ ಮೆರಿಟ್ ಆಧಾರದಲ್ಲಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುತ್ತಿದ್ದು, ತರಬೇತಿ ಸಂಸ್ಥೆಯನ್ನು ಅಭ್ಯರ್ಥಿಗಳೇ ಕೌನ್ಸಲಿಂಗ್ ಮೂಲಕ ಆಯ್ಕೆ ಮಾಡಿಕೊಳ್ಳಬಹುದಾಗಿದೆ.
- ದೆಹಲಿ, ಹೈದರಾಬಾದ್, ಬೆಂಗಳೂರಿನಲ್ಲಿರುವ ಪ್ರತಿಷ್ಠಿತ ತರಬೇತಿ ಸಂಸ್ಥೆಗಳ ಮೂಲಕ ಯು.ಪಿ.ಎಸ್.ಸಿ, ಕೆ.ಪಿ.ಎಸ್.ಸಿ. ಮತ್ತು ಬ್ಯಾಂಕಿಂಗ್ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಇಲಾಖೆಯಿಂದ ತರಬೇತಿಯನ್ನು ನೀಡಲಾಗುತ್ತಿದ್ದು, ತರಬೇತಿ ಶುಲ್ಕ ಮತ್ತು ತರಬೇತಿಯ ಅವಧಿಯಲ್ಲಿ ಶಿಷ್ಯವೇತನವನ್ನು ನೀಡಲಾಗುತ್ತದೆ. (ಮಾಸಿಕ ರೂ. 5000/- ದಿಂದ ರೂ. 10000/- ದವರೆಗೆ)
- ತರಬೇತಿ ಸಂಸ್ಥೆಗಳಿಗೆ ಕಾಲ ಕಾಲಕ್ಕೆ ನಿಗದಿ ಪಡಿಸಲಾದ ತರಬೇತಿ ಶುಲ್ಕವನ್ನು ನೀಡಲಾಗುತ್ತದೆ.

12. **ಅಂತರ್ ಜಾತಿ ವಿವಾಹಿತ ದಂಪತಿಗಳಿಗೆ ಪ್ರೋತ್ಸಾಹಧನ** : ಅಸ್ಪೃಶ್ಯತಾ ನಿವಾರಣೆ ಉದ್ದೇಶದಿಂದ ಅಂತರ್ ಜಾತಿ ವಿವಾಹಿತ ದಂಪತಿಗಳಿಗೆ ಪ್ರೋತ್ಸಾಹಧನ ನೀಡಲಾಗುತ್ತದೆ.

- ಪರಿಶಿಷ್ಟ ಜಾತಿ ಯುವಕರು ಇತರೆ ಜಾತಿಯ ಯುವತಿಯರನ್ನು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.2.50 ಲಕ್ಷಗಳ ಪ್ರೋತ್ಸಾಹಧನ
- ಪರಿಶಿಷ್ಟ ಜಾತಿ ಯುವತಿಯರು ಇತರೆ ಜಾತಿಯ ಯುವಕರನ್ನು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ.
- ಅಂತರ್‌ಜಾತಿ ವಿವಾಹವನ್ನು ನೊಂದಾಯಿಸತಕ್ಕದ್ದು.
- ಮದುವೆಯಾದ ನಂತರ 18 ತಿಂಗಳೊಳಗೆ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕು.
- ಯುವತಿಯ ವಯಸ್ಸು 18 ರಿಂದ 42 ವರ್ಷ.
- ಯುವಕನ ವಯಸ್ಸು 21 ರಿಂದ 45 ವರ್ಷ.
- ವಾರ್ಷಿಕ ಆದಾಯ ಮಿತಿ ರೂ.5.00 ಲಕ್ಷಗಳು.

13. **ವಿಧವಾ ಮರು ವಿವಾಹಕ್ಕೆ ಪ್ರೋತ್ಸಾಹಧನ:** ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ವಿಧವೆಯರು ಹೊಸ ಬದುಕನ್ನು ರೂಪಿಸಲು ಅನುಕೂಲವಾಗುವಂತೆ ಅವರು ಮರು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ ನೀಡಲಾಗುತ್ತದೆ.

- ವಿಧವೆಯ ವಯೋಮಿತಿ 18 ರಿಂದ ಗರಿಷ್ಠ 42 ವರ್ಷ
- ವಿವಾಹವಾಗುವ ವರನ ವಯೋಮಿತಿ 21 ರಿಂದ 45 ವರ್ಷ
- ಮರು ವಿವಾಹದ ಬಗ್ಗೆ ನೊಂದಾಯಿಸತಕ್ಕದ್ದು.
- ವಿವಾಹವಾದ 1 ವರ್ಷದೊಳಗೆ ಅರ್ಜಿ ಸಲ್ಲಿಸಬೇಕು.
- ಅಂತರ್‌ಜಾತಿ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.

14. **ಒಳ ಪಂಗಡಗಳ ಅಂತರ್‌ಜಾತಿ ವಿವಾಹ:** ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಯುವಕ/ಯುವತಿಯರು ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಉಪ ಜಾತಿಗಳ ಯುವತಿ/ಯುವಕರನ್ನು ವಿವಾಹವಾದಲ್ಲಿ ರೂ.2.00 ಲಕ್ಷ ಪ್ರೋತ್ಸಾಹಧನ ನೀಡಲಾಗುತ್ತಿದೆ.

- ವಯೋಮಿತಿ-ಯುವಕ 21 ರಿಂದ 45 ವರ್ಷ ಹಾಗೂ ಯುವತಿ 18 ರಿಂದ 42 ವರ್ಷ.
- ದಂಪತಿಗಳ ವಾರ್ಷಿಕ ಆದಾಯ ರೂ. 5.00 ಲಕ್ಷ ಮೀರಿರಬಾರದು
- ಅಂತರ್‌ಜಾತಿ ವಿವಾಹ/ವಿಧವಾ ಮರು ವಿವಾಹ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.
- ಮದುವೆಯಾದ ನಂತರ 18 ತಿಂಗಳೊಳಗೆ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕು.

15. **ಸರಳ ವಿವಾಹ** : ಸರ್ಕಾರದ ಆದೇಶ ಸಂಖ್ಯೆ:ಸಕಇ 262 ಎಸ್‌ಎಲ್‌ಪಿ 2015 ದಿನಾಂಕ:11.08.2015 ರನ್ವಯ ಈ ಕಾರ್ಯಕ್ರಮವನ್ನು ಜಾರಿಗೆ ತಂದಿರುತ್ತದೆ. ಈ ಯೋಜನೆಯನ್ವಯ ನೋಂದಾಯಿತ ಸಂಘ-ಸಂಸ್ಥೆಗಳು. ಧಾರ್ಮಿಕ ಸಂಸ್ಥೆಗಳು ವ್ಯವಸ್ಥೆ ಮಾಡುವ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ವಿವಾಹವಾಗುವ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ದಂಪತಿಗಳಿಗೆ ಆರ್ಥಿಕ ನೆರವು ನೀಡಲಾಗುತ್ತದೆ.
   - ಸಾಮೂಹಿಕ ವಿವಾಹ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡು ವಿವಾಹವಾಗಿರಬೇಕು, ವಿವಾಹವಾದ 1 ವರ್ಷದೊಳಿಗೆ ಅರ್ಜಿಸಲ್ಲಿಸಬೇಕು.
   - ಇಂತಹ ಸಾಮೂಹಿಕ ಕಾರ್ಯಕ್ರಮಗಳಲ್ಲಿ ಕನಿಷ್ಠ 10 ಜೋಡಿಗಳು ವಿವಾಹವಾಗಿರತಕ್ಕದ್ದು.
   - ಸರಳವಾಗಿ ವಿವಾಹದ ದಂಪತಿಗಳಿಗೆ ರೂ.50,000/- ಸಾವಿರ ಪ್ರೋತ್ಸಾಹಧನ ನೀಡಲಾಗುವುದು.
   - ಇಂತಹ ಕುಟುಂಬದ ವಾರ್ಷಿಕ ವರಮಾನ ರೂ.5.00 ಲಕ್ಷಗಳಿಗೆ ಮೀರಿಬಾರದು.
   - ಸರಳ ವಿವಾಹವಾಗುವ ದಂಪತಿಗಳಲ್ಲಿ ಯುವಕನ ವಯಸ್ಸು 21 ರಿಂದ 45 ವರ್ಷ ಯುವತಿಯ ವಯಸ್ಸು 18 ರಿಂದ 42 ವರ್ಷ
   - ಸಾಮೂಹಿಕ ವಿವಾಹ ಕಾರ್ಯಕ್ರಮಗಳನ್ನು ಏರ್ಪಡಿಸುವ ಆಯೋಜಕರುಗಳಿಗೆ ಪ್ರೋತ್ಸಾಹಧನ ಹಾಗೂ ವಿವಾಹದ ಖರ್ಚು-ವೆಚ್ಚಗಳಿಗಾಗಿ ಪ್ರತಿ ಜೋಡಿಗೆ ರೂ.2,000/- ಸಾವಿರಗಳನ್ನು ನೀಡಲಾಗುವುದು.
   - ಅಂತರ್‌ಜಾತಿ ಪ್ರೋತ್ಸಾಹಧನ ಪಡೆದವರು ಇದಕ್ಕೆ ಅರ್ಹರಲ್ಲ.

16. **ದೇವದಾಸಿಯರ ಮಕ್ಕಳ ಮದುವೆಗೆ ಪ್ರೋತ್ಸಾಹಧನ**
   - ಮಾಜಿ ದೇವದಾಸಿಯರ ಗಂಡು ಮಕ್ಕಳು ಇತರೆ ದೇವದಾಸಿಗಳಲ್ಲದ ಯಾವುದೇ ಜಾತಿಯ ಯುವತಿಯರನ್ನು ವಿವಾಹವಾದಲ್ಲಿ ಅಂತಹ ದಂಪತಿಗಳಿಗೆ ರೂ.3.00 ಲಕ್ಷಗಳ ಪ್ರೋತ್ಸಾಹಧನ. ಮಾಜಿ ದೇವದಾಸಿಯರ ಹೆಣ್ಣು ಮಕ್ಕಳು ಇತರೆ ದೇವದಾಸಿಗಳಲ್ಲದ ಯಾವುದೇ ಜಾತಿಯ ಯುವಕರನ್ನು ವಿವಾಹವಾದಲ್ಲಿ ಅಂತಹ ದಂಪತಿಗೆ ರೂ.5.00 ಲಕ್ಷ ಗಳ ಪ್ರೋತ್ಸಾಹಧನ.
   - ವಿವಾಹವಾದ 18 ತಿಂಗಳೊಳಗೆ ವಿವಾಹವಾದ ಬಗ್ಗೆ ನೊಂದಣಾಧಿಕಾರಿಗಳ ಕಛೇರಿಯಲ್ಲಿ ನೊಂದಾಯಿಸಿ ಅರ್ಜಿ ಸಲ್ಲಿಸಿರಬೇಕು.
   - ಯುವತಿಯ ವಯಸ್ಸು 18 ರಿಂದ 42 ವರ್ಷ.
   - ಯುವಕನ ವಯಸ್ಸು 21 ರಿಂದ 45 ವರ್ಷ.
   - ಆದಾಯ ಮಿತಿ ರೂ.5.00 ಲಕ್ಷಗಳು.
   - ಗುರ್ತಿಸಲ್ಪಟ್ಟ ದೇವದಾಸಿಯವರ ಮಕ್ಕಳನ್ನು ಗುರ್ತಿಸಲ್ಪಟ್ಟ ಇನ್ನೊಬ್ಬ ದೇವದಾಸಿಯವರ ಮಕ್ಕಳನ್ನು ಮದುವೆ ಮಾಡಿಕೊಂಡರೆ ಪ್ರೋತ್ಸಾಹಧನ ಪಡೆಯಲು ಅರ್ಹರಿರುವುದಿಲ್ಲ.

ಮೇಲ್ಕಂಡ ಎಲ್ಲಾ ವಿವಾಹ ಪ್ರೋತ್ಸಾಹಧನಗಳಿಗಾಗಿ ಆನ್‌ಲೈನ್‌ನಲ್ಲಿ ಅರ್ಜಿ ಸಲ್ಲಿಸಬೇಕಾಗಿದ್ದು, ವೆಬ್‌ಸೈಟ್ ವಿಳಾಸ www.sw.kar.nic.in.

17. **ದೌರ್ಜನ್ಯಕ್ಕೊಳಗಾದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗದ ಸಂತ್ರಸ್ತರಿಗೆ ಪರಿಹಾರ:**
   - ದೌರ್ಜನ್ಯ ಪ್ರತಿಬಂಧ ಅಧಿನಿಯಮ 1989 ಮತ್ತು ನಿಯಮಗಳು 1995 ಹಾಗೂ ಪರಿಷ್ಕೃತ ಅಧಿನಿಯಮ 2016 ರ ಅನ್ವಯ ಸರ್ಕಾರದ ಆದೇಶ ಸಂ:ಸಕಇ 37 ಎಸ್‌ಪಿಎ 2016, ಬೆಂಗಳೂರು ದಿನಾಂಕ: 20.06.2016 ರನ್ವಯ

ದೌರ್ಜನ್ಯಕ್ಕೆ ಒಳಗಾದ ಪರಿಶಿಷ್ಟ ಜಾತಿ/ ಪರಿಶಿಷ್ಟ ವರ್ಗದ ಸಂತ್ರಸ್ತರಿಗೆ ದೌರ್ಜನ್ಯದ ಸ್ವರೂಪ ಮತ್ತು ತೀವ್ರತೆ ಆಧರಿಸಿ ಕನಿಷ್ಠ ರೂ.85,000/- ಗಳಿಂದ ಗರಿಷ್ಟ ರೂ.8,25,000/- ಗಳವರೆಗೆ ಪರಿಹಾರಧನ ನೀಡಲಾಗುತ್ತದೆ.

- ದೌರ್ಜನ್ಯದಲ್ಲಿ ಕುಟುಂಬದ ದುಡಿಯುವ ವ್ಯಕ್ತಿ ಮೃತಪಟ್ಟಲ್ಲಿ ಅವರ ಅವಲಂಬಿತರಿಗೆ ಅನುಕಂಪ ಆಧಾರದಲ್ಲಿ ಸರ್ಕಾರಿ ನೌಕರಿ ನೀಡಲಾಗುತ್ತದೆ.
- ಪರಿಹಾರ ಧನವನ್ನು ಮತ್ತು ಪುನರ್ವಸತಿಗಳನ್ನು ಮೇಲ್ಕಂಡ ಕಾಯ್ದೆಯ ನಿಯಮ 12(ಎ) ಅಡಿ ಒದಗಿಸುವುದು.

18. **ಪ್ರಗತಿ ಕಾಲೋನಿ :** ಪ.ಜಾತಿ /ಪ.ಪಂಗಡದ ಕಾಲೋನಿಗಳಲ್ಲಿ ಮೂಲಭೂತ ಸೌಕರ್ಯಗಳಾದ ಸಿ.ಸಿ.ರಸ್ತೆ ಮತ್ತು ಚರಂಡಿ ಇತ್ಯಾದಿ ಸೌಲಭ್ಯಗಳನ್ನು ಒದಗಿಸುವುದು.

19. **ಸ್ಮಶಾನ ಅಭಿವೃದ್ಧಿ:**

- ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರಿಗೆ ಸ್ಮಶಾನ ಅಭಿವೃದ್ಧಿ.
- ಸರ್ಕಾರಿ ಜಾಗ ಇಲ್ಲದೇ ಇರುವ ಸ್ಥಳಗಳಲ್ಲಿ ಜಿಲ್ಲಾಧಿಕಾರಿಗಳ ಅನುಮೋದನೆಯೊಂದಿಗೆ ನಿವೇಶನ ಖರೀದಿಗೆ ಅವಕಾಶವಿದೆ.

20. **ಸಮುದಾಯ ಭವನ ನಿರ್ಮಾಣ :** ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರ ಕಾಲೋನಿಗಳಲ್ಲಿ ಸಮುದಾಯ ಭವನಗಳನ್ನು ನಿರ್ಮಿಸಲಾಗುತ್ತದೆ. ನಿಗದಿಪಡಿಸಿದ ಮೊತ್ತದ ವಿವರ.
ಗ್ರಾಮಮಟ್ಟದಲ್ಲಿ – ರೂ.20.00 ಲಕ್ಷ, ಹೋಬಳಿ – ರೂ.50.00 ಲಕ್ಷ,
ತಾಲ್ಲೂಕು ಮಟ್ಟದಲ್ಲಿ – ರೂ.1.00 ಕೋಟಿ, ಜಿಲ್ಲಾ ಮಟ್ಟದಲ್ಲಿ – ರೂ.3.00 ಕೋಟಿ

21. **ಮಹಿಳಾ ಸ್ವಸಹಾಯ ಸಂಘಗಳಿಗೆ ಕಿರು ಸಾಲ ಯೋಜನೆ :** ಆದಾಯ ಉತ್ಪನ್ನ ಚಟುವಟಿಕೆಗಳಿಗಾಗಿ ಸ್ವಸಹಾಯ ಸಂಘದ ಸದಸ್ಯರಿಗೆ ತಲಾ ರೂ.15,000/- ಸಹಾಯಧನ ಮತ್ತು ರೂ.10,000/- ಸಾಲದಂತೆ 10 ಸದಸ್ಯರಿರುವ ಸಂಘಕ್ಕೆ ರೂ.1.50 ಲಕ್ಷ ಸಹಾಯಧನ ಮತ್ತು ರೂ.1.00 ಲಕ್ಷ ಸಾಲವನ್ನು ಸಮಾಜ ಕಲ್ಯಾಣ ಇಲಾಖೆಯ ವಿವಿಧ ನಿಗಮಗಳ ಮೂಲಕ ನೀಡಲಾಗುತ್ತದೆ.

22. **4% ಬಡ್ಡಿ ಸಹಾಯಧನ ಕಾರ್ಯಕ್ರಮ.**

- ಪರಿಶಿಷ್ಟ ಜಾತಿ/ಪ.ಪಂಗಡದ ಉದ್ದಿಮೆದಾರರು ಎಂ.ಎಸ್.ಎಂ.ಇ ಘಟಕಗಳನ್ನು ಸ್ಥಾಪಿಸಲು ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ ಹಾಗೂ ರಾಷ್ಟ್ರೀಕೃತ / ಜಿಲ್ಲಾ ಸಹಕಾರಿ ಬ್ಯಾಂಕ್/ಅಪೆಕ್ಸ್ ಸಹಕಾರಿ ಬ್ಯಾಂಕ್‌ಗಳಿಂದ ಪಡೆಯುವ ಸಾಲಕ್ಕೆ 4% ಬಡ್ಡಿ ಸಹಾಯಧನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.
- ಸಾಲದ ಮಿತಿ – ಕನಿಷ್ಟ ರೂ.10.00 ಲಕ್ಷದಿಂದ ಗರಿಷ್ಟ ರೂ.10.00 ಕೋಟಿಗಳವರೆಗೆ ಈ ಯೋಜನೆಯಡಿ ಸಹಾಯಧನಕ್ಕೆ ಅವಕಾಶವಿದೆ. ಸಾಲದ ಮರು ಪಾವತಿ ಅವಧಿ 8 ವರ್ಷಗಳಾಗಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ SWD/158/SLP/2016, Dated: 12.07.2016.
- 2021-22ನೇ ಸಾಲಿನಿಂದ ವಾಣಿಜ್ಯ ಮತ್ತು ವ್ಯಾಪಾರ ಚಟುವಟಿಕೆಗಳಾದ ಮಳಿಗೆ/ಡೀಲರ್ ಶಿಪ್/ಫ್ರಾಂಚೈಸಿ ಮತ್ತು ಹೋಟೆಲ್ ಉದ್ಯಮಗಳನ್ನು ಪ್ರಾರಂಭಿಸಲು ಸಹ 4% ಬಡ್ಡಿ ಸಹಾಯಧನ ಯೋಜನೆಯನ್ನು ವಿಸ್ತರಿಸಿದ್ದು, ಈ ಯೋಜನೆಯಡಿ ಗರಿಷ್ಟ ರೂ.1.00 ಕೋಟಿವರೆಗೆ ರಾಷ್ಟ್ರೀಕೃತ ಮತ್ತು ವಾಣಿಜ್ಯ ಶೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಸಾಲ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ SWD/157/SLP/2021, Dated: 25.08.2021.

23. **ಪರಿಶಿಷ್ಟ ಜಾತಿ / ಪರಿಶಿಷ್ಟ ವರ್ಗದ ಉದ್ಯಮಿಗಳಿಗೆ ಕೆ.ಎಸ್.ಎಫ್.ಸಿ ಯಿಂದ ಸಾಲ ಮಂಜೂರಾತಿಗೆ Collateral Security ಒದಗಿಸುವುದು.**

- ಕೆ.ಎಸ್.ಎಫ್.ಸಿ ಯಿಂದ ಪ.ಜಾತಿ / ಪ.ವರ್ಗದವರಿಗೆ ಮಂಜೂರು ಮಾಡುವ ಸಾಲಕ್ಕೆ ಗರಿಷ್ಠ ರೂ.2.00 ಕೋಟಿಗಳವರೆಗೆ Collateral Security ಯನ್ನು ಸರ್ಕಾರದಿಂದ ಒದಗಿಸಲಾಗುತ್ತಿದೆ. ಉಳಿದ ಮೊತ್ತಕ್ಕೆ ಫಲಾನುಭವಿಗಳು ಸಮಾನಾಂತರ ಖಾತ್ರಿಯನ್ನು ಒದಗಿಸಬೇಕಾಗುತ್ತದೆ.

- ರಾಷ್ಟ್ರೀಕೃತ ಬ್ಯಾಂಕ್‌ಗಳಿಂದ ಸಾಲ ಪಡೆಯುವವರಿಗೆ ಭಾರತ ಸರ್ಕಾರದ ನಿಯಮಗಳಂತೆ Collateral Security ಒದಗಿಸಲು ವಿನಾಯಿತಿ ನೀಡಲಾಗಿದೆ.

24. ಸ್ವಯಂ ಉದ್ಯೋಗ

ಅ) ನೇರ ಸಾಲ/ಸಹಾಯಧನ ಯೋಜನೆ: ತರಕಾರಿ, ಹಣ್ಣು–ಹಂಪಲು, ಮೀನು, ಮಾಂಸ ಮಾರಾಟ, ಕುರಿ/ಹಂದಿ/ ಮೊಲ ಸಾಕಾಣಿಕೆ ಮುಂತಾದ ಕಿರು ಆರ್ಥಿಕ ಚಟುವಟಿಕೆಗಳಿಗಾಗಿ ಮಳಿಗೆ/ ತಳ್ಳುಗಾಡಿ ದುಡಿಮೆ ಬಂಡವಾಳ ಸೇರಿದಂತೆ ಗರಿಷ್ಟ ಘಟಕ ವೆಚ್ಚ ರೂ.1.00 ಲಕ್ಷದಲ್ಲಿ 50% ಸಾಲ ಮತ್ತು 50% ಸಹಾಯಧನ ನೀಡಲಾಗುವುದು.

ಆ) ಇತರೆ ಬ್ಯಾಂಕ್ ಲಿಂಕ್ಡ್ ಸ್ವಯಂ ಉದ್ಯೋಗ ಕಾರ್ಯಕ್ರಮಗಳಿಗೆ ಐ.ಎಸ್.ಬಿ ಮಾರ್ಗಸೂಚಿಗಳಂತೆ ಘಟಕ ವೆಚ್ಚದಲ್ಲಿ ಸಹಾಯಧನವನ್ನು ಗರಿಷ್ಠ ರೂ.2.00 ಲಕ್ಷಕ್ಕೆ ಮಿತಿಗೊಳಿಸಿ ಬ್ಯಾಂಕ್ ಸಾಲದೊಂದಿಗೆ ಯೋಜನೆಯನ್ನು ಅನುಷ್ಠಾನಗೊಳಿಸುವುದು.

ಇ) ಸರಕು ವಾಹನಗಳಿಗೆ ಗರಿಷ್ಟ ರೂ.3.50 ಲಕ್ಷ ಸಹಾಯಧನ (ಬ್ಯಾಂಕ್ ಲಿಂಕ್ಡ್ ಸಾಲದೊಂದಿಗೆ) ಸಮಾಜ ಕಲ್ಯಾಣ ಇಲಾಖೆಯ ನಿಗಮಗಳ ಮೂಲಕ ಆನ್‌ಲೈನ್ ಅರ್ಜಿ ಸ್ವೀಕರಿಸಿ ಸದರಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.

ಈ) ದ್ವಿಚಕ್ರ ವಾಹನಗಳಿಗೆ ರೂ.70,000/– ಘಟಕ ವೆಚ್ಚದಲ್ಲಿ ರೂ.50,000/- ಸಹಾಯಧನ ಮತ್ತು ರೂ.20,000/– ಸಾಲ ನೀಡಲಾಗುತ್ತಿದೆ.

25. ಗಂಗಾ ಕಲ್ಯಾಣ ಯೋಜನೆ :

- ಪರಿಶಿಷ್ಟ ಜಾತಿ/ಪಂಗಡದ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಕೊಳವೆಬಾವಿ/ತೆರೆದಬಾವಿ ಕೊರೆದು ಪಂಪ್‌ಸೆಟ್ ಸೌಲಭ್ಯದೊಂದಿಗೆ ವಿದ್ಯುದ್ದೀಕರಣಗೊಳಿಸಿ ನೀರಾವರಿ ಸೌಲಭ್ಯ ಒದಗಿಸುವುದು. ಘಟಕ ವೆಚ್ಚ ರೂ.3.50 ಲಕ್ಷಗಳಲ್ಲಿ ರೂ.3.00 ಲಕ್ಷ ಸಹಾಯಧನ ನೀಡಲಾಗುತ್ತದೆ. (ರೂ.50,000/– ಇಂಧನ ಇಲಾಖೆಗೆ ವಿದ್ಯುತ್ ಸಂಪರ್ಕಕ್ಕಾಗಿ)
- ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ, ರಾಮನಗರ ಮತ್ತು ತುಮಕೂರು ಈ 6 ಜಿಲ್ಲೆಗಳಲ್ಲಿ ಘಟಕ ವೆಚ್ಚ ರೂ.4.50 ಲಕ್ಷಗಳಲ್ಲಿ ರೂ.4.00 ಲಕ್ಷ ಸಹಾಯಧನ ನೀಡಲಾಗುತ್ತದೆ. (ರೂ.50,000/– ಇಂಧನ ಇಲಾಖೆಗೆ ವಿದ್ಯುತ್ ಸಂಪರ್ಕಕ್ಕಾಗಿ)
- ಅವಧಿ ಸಾಲ ರೂ.50,000/– ವನ್ನು ನಿಗಮಗಳಿಂದ 6% ರ ಬಡ್ಡಿದರದಲ್ಲಿ ನೀಡಲಾಗುವುದು. 10 ಅರ್ಧವಾರ್ಷಿಕ ಕಂತುಗಳಲ್ಲಿ ಸಾಲ ಮರುಪಾವತಿಸಬೇಕು.

26. ಭೂ ಒಡೆತನ ಯೋಜನೆ :

- ಭೂ ರಹಿತ ಕೃಷಿ ಕಾರ್ಮಿಕ ಕುಟುಂಬದ ಮಹಿಳೆಯರಿಗೆ 2 ಎಕರೆ ಖುಷ್ಕಿ ಅಥವಾ 1 ಎಕರೆ ತರಿ ಜಮೀನನ್ನು ಖರೀದಿಸಿ ನೋಂದಣಿ ಮಾಡಲಾಗುತ್ತದೆ. ಸದರಿ ಯೋಜನೆಯಡಿ ಘಟಕ ವೆಚ್ಚ ರೂ.20.00 ಲಕ್ಷಗಳಲ್ಲಿ 50% ಸಾಲ, 50% ಸಹಾಯಧನವನ್ನು ನಿಗಮಗಳಿಂದ ನೀಡಲಾಗುತ್ತದೆ.
- ಬೆಂಗಳೂರು ವಿಭಾಗದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಚಿಕ್ಕಬಳ್ಳಾಪುರ ಮತ್ತು ರಾಮನಗರ ಜಿಲ್ಲೆಗಳಿಗೆ ಘಟಕ ವೆಚ್ಚ ರೂ.25.00 ಲಕ್ಷಗಳಲ್ಲಿ 50% ಸಾಲ, 50% ಸಹಾಯಧನವನ್ನು ನಿಗಮಗಳಿಂದ ನೀಡಲಾಗುತ್ತದೆ.
- ಸಾಲವನ್ನು 6% ರ ಬಡ್ಡಿದರದಲ್ಲಿ 20 ಅರ್ಧವಾರ್ಷಿಕ ಕಂತುಗಳಲ್ಲಿ ಮರುಪಾವತಿಸಬೇಕು.

# ಕೃಷಿ ಇಲಾಖೆ

1. ಪ್ರಧಾನ ಮಂತ್ರಿ ಕಿಸಾನ್ ಸಮ್ಮಾನ್ ಯೋಜನೆ

   ರೈತರಿಗೆ ವಾರ್ಷಿಕ ರೂ. 6000/- + ರೂ. 4000/- ಪ್ರೋತ್ಸಾಹಧನ (ಕೇಂದ್ರ ಮತ್ತು ರಾಜ್ಯದ ಪಾಲು ಸೇರಿಸಿ) ರೂ 2000/- ದಂತೆ 5 ಸಮಾನ ಕಂತುಗಳಲ್ಲಿ ನೀಡುವುದು.

2. ಸಾವಯವ ಕೃಷಿ ಮತ್ತು ಸಿರಿಧಾನ್ಯಗಳ ಕಾರ್ಯಕ್ರಮಗಳು

   ರೈತಸಿರಿ ಯೋಜನೆಯಡಿ ಸಿರಿಧಾನ್ಯ ಬೆಳೆಗಾರರಿಗೆ ಪ್ರತಿ ಹೆಕ್ಟೇರ್‌ಗೆ ರೂ.10,000/- ನಗದು ಪ್ರೋತ್ಸಾಹಧನ ನೀಡಲಾಗುತ್ತದೆ. (ಗರಿಷ್ಠ 2 ಹೆಕ್ಟೇರ್)

3. ಸೂಕ್ಷ್ಮ ನೀರಾವರಿ ಯೋಜನೆ

   ರೈತರಿಗೆ ಹನಿ ನೀರಾವರಿ ಮತ್ತು ತುಂತುರು ನೀರಾವರಿ ಘಟಕಗಳ ಅಳವಡಿಕೆಗೆ ಸಹಾಯಧನ

   - ಎರಡು ಹೆಕ್ಟೇರ್ ಪ್ರದೇಶದವರೆಗೆ – 90% ರಷ್ಟು ಸಹಾಯಧನ.
   - 2.00 ಹೆಕ್ಟೇರ್ ಗಿಂತ ಮೇಲ್ಪಟ್ಟು 5.00 ಹೆಕ್ಟೇರ್ ಗರಿಷ್ಠ ಮಿತಿಯೊಳಗೆ-45% ರಷ್ಟು ಸಹಾಯಧನ.

4. ಬೆಳೆ ವಿಮಾ ಯೋಜನೆ

   - Revamped PMFBY ಬೆಳೆ ವಿಮಾ ಯೋಜನೆಯಡಿ ಅಧಿಸೂಚನೆಯಲ್ಲಿ ನಿಗದಿಪಡಿಸಿದ ವಿವಿಧ ಬೆಳೆಗಳಿಗೆ ವಿಮೆ ಮಾಡಲಾಗುತ್ತದೆ.
   - ಬ್ಯಾಂಕ್‌ಗಳಿಂದ ಮತ್ತು ಸಹಕಾರಿ ಬ್ಯಾಂಕ್‌ಗಳಿಂದ ಸಾಲ ಪಡೆದವರು ಈ ಯೋಜನೆಯಡಿಯಲ್ಲಿ ವಿಮೆಗೆ ಅರ್ಹರಾಗಿರುತ್ತಾರೆ. ಅದರಂತೆ, ಸಾಲ ಪಡೆಯದೇ ಇರುವ ರೈತರಿಗೂ ಇದು ಅನ್ವಯಿಸುತ್ತದೆ.
   - ಅಧಿಸೂಚನೆಯಂತೆ ವಿಮಾ ಮೊತ್ತವನ್ನು (Insurance Premium) ರಾಜ್ಯ ಸರ್ಕಾರ, ಕೇಂದ್ರ ಸರ್ಕಾರ ಮತ್ತು ಫಲಾನುಭವಿಗಳಿಂದ ಭರಿಸಲಾಗುತ್ತದೆ.

5. **ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ-ಜಲಾನಯನ ಅಭಿವೃದ್ಧಿ**

   - ಈ ಯೋಜನೆಯನ್ನು ಜಲಾನಯನ ಅಭಿವೃದ್ಧಿ ಇಲಾಖೆಯಿಂದ ಅನುಷ್ಠಾನಗೊಳಿಸಲಾಗುತ್ತದೆ.
   - ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ಹೊಂದಿರುವ ಜಮೀನುಗಳಲ್ಲಿ ನೀರು ಸಂಗ್ರಹಣಾ ವಿನ್ಯಾಸಗಳಾದ ತಡೆ ಅಣೆ / ಕಿಂಡಿ ಅಣೆ, ನಾಲಾಬದು, ಜಿನುಗುಕೆರೆ, ಗೋಕಟ್ಟೆ ಇತ್ಯಾದಿಗಳನ್ನು ಅನುಷ್ಠಾನ ಮಾಡಿ ಜಮೀನು ಅಭಿವೃದ್ಧಿ ಪಡಿಸಲಾಗುತ್ತದೆ.
   - ಸದರಿ ಸೌಲಭ್ಯವನ್ನು ಉಚಿತವಾಗಿ ಒದಗಿಸಲಾಗುತ್ತದೆ.

6. **ರಾಷ್ಟ್ರೀಯ ಆಹಾರ ಸುರಕ್ಷಾ ಅಭಿಯಾನ ಇತ್ಯಾದಿ ಯೋಜನೆಗಳಲ್ಲಿ – ಕೃಷಿ ಪರಿಕರಗಳ ವಿತರಣೆ ಮತ್ತು ಗುಣಮಟ್ಟ ನಿಯಂತ್ರಣ, ಕೃಷಿ ಯಾಂತ್ರಿಕತೆ ಅಭಿಯಾನ, ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ.**

- ಬೀಜಗಳ ಪೂರೈಕೆ: ಪ.ಜಾತಿ/ಪ.ಪಂಗಡದ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ 75% ಅಥವಾ ನಿಗದಿಪಡಿಸಿದ ರಿಯಾಯಿತಿ ದರದಲ್ಲಿ ಪ್ರಮಾಣಿತ/ ಗುಣಮಟ್ಟದ ಬಿತ್ತನೆ ಬೀಜಗಳ ವಿತರಣೆ.
- ಪವರ್ ಟಿಲ್ಲರ್, ಭೂಮಿ ಸಿದ್ದತೆ ಉಪಕರಣಗಳು, ಸಸ್ಯ ಸಂರಕ್ಷಣ ಉಪಕರಣ, ಅಂತರ್ ಬೇಸಾಯ ಉಪಕರಣ, ಡೀಸೆಲ್ ಪಂಪ್ ಸೆಟ್, ಕಬ್ಬು / ಮೇವು ಕಟಾವು ಯಂತ್ರ, ಕೊಯ್ಲು ಮತ್ತು ಸಂಸ್ಕರಣ ಘಟಕಗಳಿಗೆ 90% ಅಥವಾ ಗರಿಷ್ಠ ರೂ.1.00 ಲಕ್ಷ ಸಹಾಯಧನ ನೀಡುವುದು.
- ಟ್ರಾಕ್ಟರ್‌ಗಳಿಗೆ ಗರಿಷ್ಠ ಸಹಾಯಧನ ರೂ.3.00 ಲಕ್ಷ.

**ಮಣ್ಣಿನ ಸತ್ವ ಹೆಚ್ಚಿಸುವಿಕೆ ಯೋಜನೆ:** ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸುವ ಸಲುವಾಗಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ರೈತರಿಗೆ ಶೇ.75ರ ರಿಯಾಯತಿ ದರದಲ್ಲಿ ಎರೆಹುಳು ಗೊಬ್ಬರ, ಸಿಟಿ ಕಾಂಪೋಸ್ಟ್, ಸಾವಯವ ಗೊಬ್ಬರ, ರಂಜಕಯುಕ್ತ ಸಾವಯವ ಗೊಬ್ಬರ ಹಾಗೂ ಎಣ್ಣೆ ರಹಿತ ಹಿಂಡಿ ಗೊಬ್ಬರಗಳ ವಿತರಣೆ.

- ಕೃಷಿ ಉತ್ಪನ್ನಗಳ ಸಂಸ್ಕರಣೆ, ಮೌಲ್ಯವರ್ಧನೆ ಮಾಡಲು ಕೃಷಿ ಸಂಸ್ಕರಣಾ ಘಟಕಗಳ ಸ್ಥಾಪನೆಗೆ 90% ಅಥವಾ ಗರಿಷ್ಠ ರೂ.1.00 ಲಕ್ಷ ಸಹಾಯಧನ.
- ಕೃಷಿ ಉತ್ಪನ್ನಗಳನ್ನು ಮಳೆಯಿಂದ ರಕ್ಷಿಸಲು ಮತ್ತು ಒಣಗಿಸಲು ಟಾರ್ಪಾಲಿನ್‌ಗಳನ್ನು ವಿತರಿಸುವುದು (250 GSM ಕಪ್ಪು ಬಣ್ಣದ HDPE 8 x 6 mtr ಅಳತೆ) ಮತ್ತು ರೈತರಿಗೆ ಶುದ್ಧ ಖಾದ್ಯ ತೈಲ ಲಭ್ಯವಾಗುವಂತೆ ಮಾಡಲು ಸಣ್ಣ ಯಂತ್ರಚಾಲಿತ ಎಣ್ಣೆ ಗಾಣಗಳಿಗೆ ಸಹಾಯಧನ. (ಶೇ.90 ಅಥವಾ ಗರಿಷ್ಠ ರೂ.1.00 ಲಕ್ಷವರೆಗೆ ಸಹಾಯಧನ ನೀಡುವುದು)
- ಬಾಡಿಗೆ ಆಧಾರಿತ ಸೇವಾ ಕೇಂದ್ರಗಳಿಂದ ರೈತರು ಉಪಯೋಗಿಸಿದ ಯಂತ್ರೋಪಕರಣಗಳಿಗೆ ನೇರ ಸೌಲಭ್ಯ ನಗದು ವರ್ಗಾವಣೆ (DBT).
- ಪ.ಜಾತಿ/ಪ.ಪಂಗಡದ ರೈತರ ಜಮೀನುಗಳಲ್ಲಿ ಬೆಳೆ ಪ್ರಾತ್ಯಕ್ಷಿಕೆ.
- ಪ.ಜಾತಿ/ಪ.ಪಂಗಡದ ರೈತರಿಗೆ ಕೃಷಿ ಕಾರ್ಯಕ್ರಮಗಳ ಬಗ್ಗೆ ತರಬೇತಿ.
- ರೈತರ ಬೆಳೆ ಸಂರಕ್ಷಣೆಗೆ ಕೀಟನಾಶಕ ಔಷಧಗಳ ಖರೀದಿಗೆ ಮತ್ತು ರಾಸಾಯನಿಕ/ ಜೈವಿಕ ಗೊಬ್ಬರ ಖರೀದಿಗೆ ಸಹಾಯಧನ.
- ಕೃಷಿ ಕಣಗಳ ನಿರ್ಮಾಣಕ್ಕೆ ಸಹಾಯಧನ.

7. **ಕೃಷಿ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/- ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ತೋಟಗಾರಿಕೆ ಇಲಾಖೆ

1. **ಪಿ.ಎಂ.ಕೆ.ಎಸ್.ವೈ-ರಾಷ್ಟ್ರಿಯ ಸುಸ್ಥಿರ ಕೃಷಿ ಅಭಿಯಾನ, ಸಮಗ್ರ ತೋಟಗಾರಿಕೆ ಅಭಿವೃದ್ಧಿ, ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರದ ಪಾಲು ಸೇರಿಸಿ ಸಹಾಯಧನ ನೀಡಲಾಗುತ್ತದೆ.**

- ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ ಮತ್ತು ಸಮಗ್ರ ತೋಟಗಾರಿಕೆ ಅಭಿವೃದ್ಧಿ ಯೋಜನೆಯಡಿ ಹನಿ /ತುಂತುರು ನೀರಾವರಿ ಘಟಕಗಳನ್ನು ಅಳವಡಿಸಿದ ಪ್ರತಿ ರೈತ ಕುಟುಂಬಕ್ಕೆ ಮೊದಲ 2 ಹೆಕ್ಟೇರ್ ಪ್ರದೇಶದವರೆಗೆ ಶೇ.90 ಮತ್ತು 2 ಹೆಕ್ಟೇರ್ ಮೇಲ್ಪಟ್ಟು 5 ಹೆಕ್ಟೇರ್ ವರೆಗೆ (ಒಟ್ಟು ಗರಿಷ್ಠ 5 ಹೆಕ್ಟೇರ್) ಶೇ.45 ರಷ್ಟು ಮಿತಿಯೊಳಗೆ ಸಹಾಯಧನ ನೀಡಲಾಗುವುದು.
- ಪ್ರತಿ ಫಲಾನುಭವಿಗೆ ಗರಿಷ್ಠ 5 ಹೆಕ್ಟೇರ್ ಪ್ರದೇಶಕ್ಕೆ ಹಾಗೂ ತರಕಾರಿ ಮತ್ತು ಹೂ ಬೆಳೆಗಳಿಗೆ ಗರಿಷ್ಠ 2 ಹೆಕ್ಟೇರ್ ಪ್ರದೇಶಕ್ಕೆ ಸಹಾಯಧನ ನೀಡಲಾಗುವುದು.

- ಕೃಷಿ ಯಂತ್ರೋಪಕರಣಗಳಿಗೆ ಟಿಲ್ಲರ್ ಇತ್ಯಾದಿಗಳಿಗೆ ಶೇ.90 ಅಥವಾ ಗರಿಷ್ಠ ರೂ.1.00 ಲಕ್ಷ ಸಹಾಯಧನ ನೀಡಲಾಗುವುದು.
- ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಶೇ.90 ಸಹಾಯಧನವನ್ನು ಈ ಕೆಳಕಂಡ ಚಟುವಟಿಕೆಗಳಿಗೆ ನೀಡಲಾಗುತ್ತದೆ.
    * ತೋಟಗಾರಿಕೆ ಬೆಳೆಗಳ ಪ್ರದೇಶ ವಿಸ್ತರಣೆ / ನಿರ್ವಹಣೆ/ ಪುನಶ್ಚೇತನ
    * ನೀರು ಸಂಗ್ರಹಣಾ ಘಟಕ/ ಸಂರಕ್ಷಿತ ಬೇಸಾಯ/ ಜೇನು ಸಾಕಾಣಿಕೆ
    * ಯಾಂತ್ರೀಕರಣ / ಸಮಗ್ರ ಪೋಷಕಾಂಶ / ಕೀಟ ನಾಶಕ
    * ಕೊಯ್ಲೋತ್ತರ ನಿರ್ವಹಣೆ ಮತ್ತು ಮಾರುಕಟ್ಟೆ ಅಭಿವೃದ್ಧಿ
- ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ – ತೋಟಗಾರಿಕೆ ಬೆಳೆಗಳಿಗೆ ತಗಲುವ ರೋಗ ಮತ್ತು ಕೀಟ ಬಾಧೆಯ ನಿಯಂತ್ರಣಕ್ಕಾಗಿ ಸಸ್ಯ ಸಂರಕ್ಷಣಾ ಔಷಧಿಗಳ ಖರೀದಿಗಾಗಿ ಶೇ.90 ರಂತೆ ಪ್ರತಿ ಹೆಕ್ಟೇರ್‌ಗೆ ಗರಿಷ್ಠ ರೂ.9,000/– ರಂತೆ ಗರಿಷ್ಠ 2 ಹೆಕ್ಟೇರ್‌ಗಳವರೆಗೆ ಸಹಾಯಧನ ನೀಡಲಾಗುವುದು.

**2. ತೋಟಗಾರಿಕೆ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/– ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ರೇಷ್ಮೆ ಇಲಾಖೆ

**1. ರೇಷ್ಮೆ ಇಲಾಖೆಯಿಂದ ಪ.ಜಾತಿ/ಪ.ಪಂಗಡದ ರೈತರಿಗೆ ಈ ಕೆಳಗಿನ ಸೌಲಭ್ಯಗಳಡಿ ಶೇ.90 ರಷ್ಟು ಸಹಾಯಧನ ಒದಗಿಸಲಾಗುವುದು.**

(ರೂ. ಲಕ್ಷಗಳಲ್ಲಿ)

| ಕ್ರಸಂ | ಸೌಲಭ್ಯದ ವಿವರ | ಘಟಕ ವೆಚ್ಚ | ಗರಿಷ್ಠ ಸಹಾಯಧನ. |
|---|---|---|---|
| 1 | ಹುಳು ಸಾಕಾಣಿಕೆ ಸಲಕರಣೆ / ಹಿಪ್ಪುನೇರಳೆ ತೋಟ ನಿರ್ವಹಣಾ ಸಲಕರಣೆ | 0.75 | 0.675 |
| 2 | ರೇಷ್ಮೆ ಹುಳು ಸಾಕಾಣಿಕೆ ಮನೆ ನಿರ್ಮಾಣ (ಕನಿಷ್ಠ 225 ಚ.ಅಡಿಯಿಂದ 1000 ಚ.ಅಡಿಯವರೆಗೆ) | 0.90–4.00 | 0.81–3.60 |
| 3 | ಮೌಂಟಿಂಗ್ ಹಾಲ್ ನಿರ್ಮಾಣ (ಕನಿಷ್ಠ 600 ಚ.ಅಡಿಯಿಂದ 1800 ಚ.ಅಡಿಯವರೆಗೆ) | 0.26–0.83 | 0.24–0.75 |
| 4 | ಚಾಕಿ ಸಾಕಾಣಿಕೆ ಕೇಂದ್ರ ನಿರ್ಮಾಣ | 12.00 | 10.80 |
| 5 | ರೀಲಿಂಗ್ ಶೆಡ್ ನಿರ್ಮಾಣ | | |
| | • 10 ಬೇಸಿನ್ ಮಲ್ಟಿಎಂಡ್ ರೀಲಿಂಗ್ ಘಟಕ (1200 ಚ.ಅಡಿ) | 7.20 | 6.48 |
| | • 06 ಬೇಸಿನ್ ಮಲ್ಟಿಎಂಡ್ ರೀಲಿಂಗ್ ಘಟಕ (900 ಚ.ಅಡಿ) | 5.40 | 4.86 |
| | • 48 ಕೊನೆಗಳ ಸುಧಾರಿತ ಕಾಟೇಜ್ ಬೇಸಿನ್ (900 ಚ.ಅಡಿ) | 5.40 | 4.86 |
| | • 36 ಕೊನೆಗಳ ಸುಧಾರಿತ ಕಾಟೇಜ್ ಬೇಸಿನ್(900 ಚ.ಅಡಿ) | 5.40 | 4.86 |
| | • ಇಟಾಲಿಯನ್ ಮಾದರಿ ಕಾಟೇಜ್ ಬೇಸಿನ್ – ಕನಿಷ್ಠ 02 ಟೇಬಲ್ ಇರುವ (600 ಚ.ಅಡಿ) | 3.60 | 3.24 |

| ಕ್ರ.ಸಂ | ಸೌಲಭ್ಯದ ವಿವರ | ಘಟಕ ವೆಚ್ಚ | ಗರಿಷ್ಠ ಸಹಾಯಧನ. |
|---|---|---|---|
| 6 | ಸೋಲಾರ್ ವಾಟರ್ ಹೀಟರ್ (200 ಲೀ. – 1000 ಲೀ.) | 0.54–2.42 | 0.48–2.17 |
| 7 | ಹೀಟ್ ರಿಕವರಿ ಯುನಿಟ್ | 0.25 | 0.22 |

## ಪಶುಸಂಗೋಪನೆ ಇಲಾಖೆ

1. ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ :

- ಕುರಿ ಮತ್ತು ಮೇಕೆ 6+1 ಘಟಕಗಳಿಗೆ ಘಟಕ ವೆಚ್ಚದ ಶೇ.90 ರಷ್ಟು ಸಹಾಯಧನ. ರೂ.45,000/– ಘಟಕ ವೆಚ್ಚದಲ್ಲಿ ರೂ.40,500/– ಬ್ಯಾಂಕ್ ಸಾಲ ಮತ್ತು ರೂ.4,500/– ಫಲಾನುಭವಿಗಳ ವಂತಿಕೆ.
- ಕುರಿ ಮತ್ತು ಮೇಕೆಗಳ ಆಕಸ್ಮಿಕ ಮರಣಕ್ಕೆ ಆರು ತಿಂಗಳ ಮೇಲಿನ ಕುರಿ/ಮೇಕೆಗೆ ರೂ.5,000/– ಹಾಗೂ ಆರು ತಿಂಗಳ ಒಳಗಿನ ಕುರಿ/ಮೇಕೆಗೆ ರೂ.2,500/– ಪರಿಹಾರ.
- ಪ.ಜಾತಿ /ಪ.ಪಂಗಡದ ಫಲಾನುಭವಿಗಳು ಕುರಿ ಮತ್ತು ಉಣ್ಣೆ ಅಭಿವೃದ್ಧಿ ಸಹಕಾರ ಸಂಘದ ಸದಸ್ಯರಾಗಿರಬೇಕು.

2. ಜಾನುವಾರು ರೋಗಗಳ ನಿಯಂತ್ರಣ : ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರ ಜಾನುವಾರುಗಳಿಗೆ ಸಮೂಹ ಲಸಿಕೆ ಹಾಕುವುದು.

3. ಹಾಲು ಉತ್ಪಾದಕರಿಗೆ ಉತ್ತೇಜನ :
   - ಹಾಲು ಉತ್ಪಾದಕರಿಗೆ ಪ್ರತಿ ಲೀಟರ್ ಹಾಲಿಗೆ ರೂ.5/– ರಂತೆ ಪ್ರೋತ್ಸಾಹಧನ.
   - ಹಾಲು ಉತ್ಪಾದಕರ ಸಂಘಗಳಲ್ಲಿ ಪ.ಜಾತಿ/ಪ.ಪಂಗಡದ ರೈತರನ್ನು ಸದಸ್ಯರನ್ನಾಗಿ ನೋಂದಾಯಿಸುವುದು.
   - ಹೈನುಗಾರಿಕೆಗೆ 75% ಸಹಾಯಧನ.

4. ರಾಷ್ಟ್ರೀಯ ಜಾನುವಾರು ಮಿಷನ್: ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡದವರ ಜಾನುವಾರುಗಳಿಗೆ ಉಚಿತ ವಿಮಾ ಯೋಜನೆ.

5. **ಪಶುಸಂಗೋಪನೆ ಇಲಾಖೆ ವ್ಯಾಪ್ತಿಯ ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/– ಶಿಷ್ಯವೇತನ.
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

## ಮೀನುಗಾರಿಕೆ ಇಲಾಖೆ

1. **ಪ್ರಧಾನ ಮಂತ್ರಿ ಮತ್ಸ್ಯ ಸಂಪದ ಯೋಜನೆ:** ನೀಲಿ ಕ್ರಾಂತಿ/ ಮೀನುಗಾರಿಕೆಯ ಸಮಗ್ರ ಅಭಿವೃದ್ಧಿ ಮತ್ತು ನಿರ್ವಹಣೆಯಡಿ ಮೀನು ಕೃಷಿ/ ಮೀನು ಮಾರಾಟ/ ಮೀನು ಸಂಸ್ಕರಣೆ ಮುಂತಾದ ಮೀನುಗಾರಿಕೆ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವವರಿಗೆ ವಿವಿಧ ಕಾರ್ಯಕ್ರಮಗಳಿಗೆ ಶೇ.60 ರಂತೆ ಗರಿಷ್ಠ ರೂ.6.00 ಲಕ್ಷ ಸಹಾಯಧನ ಮತ್ತು ಶೇ.40 ರಂತೆ ಫಲಾನುಭವಿಗಳ ವಂತಿಕೆ / ಬ್ಯಾಂಕ್ ಸಾಲ ನೀಡಲಾಗುತ್ತದೆ.

2. ಮೀನುಮರಿಗಳ ಖರೀದಿಗೆ ಸಹಾಯಧನ :

1) ಮೀನು ಮರಿಗಳನ್ನು ಖರೀದಿಸಲು ಒಬ್ಬ ವ್ಯಕ್ತಿಗೆ ರೂ 5000/- ಸಹಾಯಧನ ನೀಡಲಾಗುತ್ತದೆ.
2) ಮೀನುಗಾರಿಕಾ ಸಹಕಾರ ಸಂಘಕ್ಕೆ ರೂ 20000/- ಸಹಾಯಧನ ನೀಡಲಾಗುತ್ತದೆ.
3) ನೋಂದಾಯಿತ ಮೀನು ಮರಿಗಳ ಸಾಕಣೆ ಕೇಂದ್ರಗಳಿಗೆ ರೂ 25,000/- ಸಬ್ಸಿಡಿ ನೀಡಲಾಗುತ್ತದೆ.

3. **ಒಳನಾಡು ಮೀನುಗಾರರಿಗೆ ಫೈಬರ್ ಗ್ಲಾಸ್ ದೋಣಿ ವಿತರಣೆ :** ಒಳನಾಡು ಜಲಸಂಪನ್ಮೂಲಗಳಾದ ಕೆರೆಗಳು, ಜಲಾಶಯಗಳು ಮತ್ತು ನದಿ ತೀರಗಳಲ್ಲಿ ಮೀನುಗಾರಿಕೆ ಚಟುವಟಿಕೆಯಲ್ಲಿ ತೊಡಗಿರುವ ಮೀನುಗಾರರಿಗೆ ಮೀನುಗಾರಿಕೆ ಇಲಾಖೆಯಿಂದ ಫೈಬರ್ ಗ್ಲಾಸ್ ಕೊರಾಕಲ್ ಅನ್ನು ವಿತರಿಸಲಾಗುತ್ತದೆ. ಈ ಯೋಜನೆಯಡಿ ಒಳನಾಡು ಮೀನುಗಾರರಿಗೆ ರೂ.10,000/- ಮೌಲ್ಯದ ಫೈಬರ್ ಗ್ಲಾಸ್ ಕೊರಾಕಲ್ (ಫೈಬರ್ ಗ್ಲಾಸ್ ದೋಣಿ) ಮತ್ತು ಎರಡು ಹುಟ್ಟುಗಳನ್ನು ಉಚಿತವಾಗಿ ನೀಡಲಾಗುತ್ತದೆ.

4. **ಮೀನುಗಾರಿಕೆ ಸಲಕರಣೆ ವಿತರಣೆ :**

- ಒಳನಾಡು ಮೀನುಗಾರರಿಗೆ ಮೀನುಗಾರಿಕೆ ಬಲೆ ಮತ್ತು ಪರಿಕರಗಳ ಕಿಟ್ ವಿತರಿಸಲಾಗುತ್ತದೆ.
- ಮೀನುಗಾರಿಕೆ ಬಲೆ ಮತ್ತು ಪರಿಕರಗಳ ಒಟ್ಟು ಮೌಲ್ಯ ರೂ 10,000/- ದ ಕಿಟ್ ಅನ್ನು ಒಳನಾಡು ಮೀನುಗಾರರಿಗೆ ಉಚಿತವಾಗಿ ನೀಡಲಾಗುತ್ತದೆ.

5. **ಸಾಮೂಹಿಕ ವಿಮಾ ಯೋಜನೆ (ಗುಂಪು ವಿಮಾ ಯೋಜನೆ) :**

- ನೈಸರ್ಗಿಕ ವಿಕೋಪಗಳಿಂದ ಮೀನುಗಾರರನ್ನು ರಕ್ಷಿಸಲು, ಮೀನುಗಾರ ಅಥವಾ ಮೀನುಗಾರರ ಸಂಬಂಧಿಕರಿಗೆ ವಿಮಾ ಸೌಲಭ್ಯವನ್ನು ನೀಡಲಾಗುತ್ತದೆ.
- ಮರಣ/ಶಾಶ್ವತ ಅಂಗವಿಕಲತೆಯ ಪ್ರಕರಣಗಳಲ್ಲಿ ರೂ 2.00 ಲಕ್ಷ ಮತ್ತು ಭಾಗಶಃ ಅಂಗವಿಕಲತೆಯ ಪ್ರಕರಣಗಳಲ್ಲಿ ರೂ 1.00 ಲಕ್ಷ ವಿಮೆ ನೀಡಲಾಗುತ್ತದೆ.

6. **ಮೀನುಗಾರಿಕೆ ದೋಣಿಗಳಿಗೆ ಡೀಸೆಲ್ ಮಾರಾಟ ತೆರಿಗೆ ಮರುಪಾವತಿ :**

- ಮೀನುಗಾರಿಕಾ ದೋಣಿಯ ಎಂಜಿನ್ ಹಾರ್ಸ್ ಪವರ್ (HP) ಆಧಾರದ ಮೇಲೆ, ವಿತರಣಾ ಹಂತದಲ್ಲಿ ರಾಜ್ಯ ಮಾರಾಟ ತೆರಿಗೆ ವಿನಾಯಿತಿ ಡೀಸೆಲ್ ನೀಡಲಾಗುತ್ತದೆ.

7. **ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ನೆರವು :**

- ಮೀನು ಸಾಕಾಣಿಕೆ ಕೊಳಗಳ ನಿರ್ಮಾಣಕ್ಕಾಗಿ ಪ್ರತಿ ಹೆಕ್ಟೇರ್‌ಗೆ ರೂ.7.00 ಲಕ್ಷಗಳಿಗೆ ಶೇ.60 ರಷ್ಟು.
- ಹೂಡಿಕೆ ವೆಚ್ಚ ರೂ.4.00 ಲಕ್ಷಕ್ಕೆ ಶೇ.60 ರಷ್ಟು ಸಹಾಯಧನ (ಕೊಳದ ಕನಿಷ್ಠ ವಿಸ್ತೀರ್ಣ ಅರ್ಧ ಎಕರೆ)
- ಫಲಾನುಭವಿಗಳ ವಂತಿಕೆ/ಬ್ಯಾಂಕ್ ಸಾಲ - 40% (ಗರಿಷ್ಠ ರೂ.3.50 ಲಕ್ಷ).

6. **ಮೀನುಗಾರರ ಕಲ್ಯಾಣ ಕಾರ್ಯಕ್ರಮ :**

- ಮೀನುಗಾರಿಕೆ ರಜೆ ಅವಧಿಯಲ್ಲಿ ಕರಾವಳಿಯ ಮೀನುಗಾರರಿಗೆ ನೆರವು ನೀಡಲಾಗುತ್ತದೆ.
- ಈ ಯೋಜನೆಯಡಿ ಮೀನುಗಾರಿಕೆ ಅವಧಿಯಲ್ಲಿ ಪ್ರತಿ ಮೀನುಗಾರರಿಂದ ಒಟ್ಟು ರೂ.1500/- ಸಂಗ್ರಹಿಸಲಾಗುತ್ತದೆ ಮತ್ತು ಇದಕ್ಕೆ ಹೊಂದಾಣಿಕೆಯ ಕೊಡುಗೆಯಾಗಿ ರಾಜ್ಯ ಮತ್ತು ಕೇಂದ್ರ ಸರಕಾರದಿಂದ ತಲಾ ರೂ.1500/- ಗಳನ್ನು ನೀಡಲಾಗುತ್ತದೆ. ಹೀಗೆ ಸಂಗ್ರಹಿಸಿದ ರೂ.4500/- ಅನ್ನು ಮೀನುಗಾರಿಕೆ ನಿಷೇಧದ 3 ತಿಂಗಳ ಅವಧಿಯಲ್ಲಿ ಫಲಾನುಭವಿಗಳಿಗೆ ಸಮಾನವಾಗಿ ಒಂದು ತಿಂಗಳಿಗೆ ರೂ.1500/- ರಂತೆ ನೀಡಲಾಗುತ್ತದೆ.

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ

1. **ಗ್ಯಾಸ್ ಸಿಲಿಂಡರ್‌ಗಳಿಗೆ ರೀ–ಫಿಲ್ಲಿಂಗ್ ಸೌಲಭ್ಯ :** ಅರಣ್ಯ ಮತ್ತು ಅರಣ್ಯದಂಚಿನಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಾಂಗದವರಿಗೆ ಈ ಹಿಂದೆ ಎಲ್.ಪಿ.ಜಿ ಸೌಲಭ್ಯವನ್ನು ಕಲ್ಪಿಸಲಾಗಿದ್ದು, ಅಂತಹ ಫಲಾನುಭವಿಗಳಿಗೆ 2 ಸಿಲಿಂಡರ್‌ಗಳನ್ನು ರೀ–ಫಿಲ್ಲಿಂಗ್ ಮಾಡಲಾಗುವುದು.

2. **ರಾಷ್ಟ್ರೀಯ ಬಿದಿರು ಅಭಿಯಾನ :** ಪ.ಜಾತಿ/ಪ.ಪಂಗಡದ ರೈತರ ಜಮೀನಿನಲ್ಲಿ ಬಿದಿರು ಬೆಳೆಯಲು ಪ್ರೋತ್ಸಾಹ ನೀಡುವುದು. ಬುಟ್ಟಿ ಹೆಣೆಯುವವರಿಗೆ ಪ್ರತೀ ಫಲಾನುಭವಿಗಳಿಗೆ 50 ಬೊಂಬುಗಳನ್ನು ಉಚಿತವಾಗಿ ನೀಡುವುದು.

## ಸಹಕಾರ ಇಲಾಖೆ

1. **ಬೆಳೆ ಸಾಲಕ್ಕಾಗಿ ಹಾಗೂ ಸ್ವಸಹಾಯ ಸಂಘಗಳಿಗೆ ಬಡ್ಡಿ ಸಹಾಯಧನ.**

   **ಬೆಳೆ ಸಾಲಕ್ಕಾಗಿ ಬಡ್ಡಿ ಸಹಾಯಧನ :** ರೈತರಿಗೆ 0% ಬಡ್ಡಿದರದಲ್ಲಿ ರೂ.3.00 ಲಕ್ಷಗಳವರೆಗಿನ ಅಲ್ಪಾವಧಿ ಹಾಗೂ 3% ಬಡ್ಡಿದರದಲ್ಲಿ ರೂ.10.00 ಲಕ್ಷದವರೆಗಿನ ದೀರ್ಘಾವಧಿ ಕೃಷಿ ಸಾಲವನ್ನು ಸಹಕಾರ ಸಂಘಗಳ ಮೂಲಕ ವಿತರಿಸುವುದು.

   **ಅಡಮಾನ ಸಾಲಕ್ಕೆ ಬಡ್ಡಿ ಸಹಾಯಧನ :** ಸಣ್ಣ ರೈತರು ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಂದ ಮತ್ತು ತಾಲ್ಲೂಕು ಕೃಷಿ ಉತ್ಪಾದನೆ ಮತ್ತು ಸಹಕಾರಿ ಮಾರುಕಟ್ಟೆ ಸಂಸ್ಥೆಗಳಿಂದ ಗೋದಾಮುಗಳಲ್ಲಿ ಸಂಗ್ರಹಿಸುವ ಕೃಷಿ ಉತ್ಪನ್ನಗಳ ಮೇಲೆ 7% ಬಡ್ಡಿದರದಂತೆ ರೂ.2.00 ಲಕ್ಷದವರೆಗೆ ಸಾಲ ನೀಡುವುದು.

   **ಸ್ವಸಹಾಯ ಗುಂಪುಗಳ ಮೂಲಕ ಬಡ್ಡಿ ಸಹಾಯಧನ :**

   - **ಮಹಿಳಾ ಸ್ವಸಹಾಯ ಸಂಘಗಳಿಗೆ :** ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಶೂನ್ಯಬಡ್ಡಿ ದರದಂತೆ ರೂ.5.00 ಲಕ್ಷಗಳವರೆಗೆ ಮತ್ತು ಶೇ.4ರ ಬಡ್ಡಿ ದರದಂತೆ ರೂ.5.00 ಲಕ್ಷದಿಂದ ರೂ.10.00 ಲಕ್ಷಗಳವರೆಗೆ ಸಾಲ ಸೌಲಭ್ಯ.
   - **ಪುರುಷರ ಸ್ವಸಹಾಯ ಸಂಘಗಳಿಗೆ :** ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಶೇ.4ರ ಬಡ್ಡಿದರದಂತೆ ರೂ.5.00 ಲಕ್ಷಗಳವರೆಗೆ ಸಾಲ ಸೌಲಭ್ಯ.

2. **ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರನ್ನು ವಿವಿಧ ಸಹಕಾರಿ ಸಂಸ್ಥೆಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸುವುದು.**
   - ಕಬ್ಬು/ಸಕ್ಕರೆ ಸಹಕಾರಿ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಗರಿಷ್ಠ ರೂ.2500/– ಗಳನ್ನು ಭರಿಸುವುದು.
   - ಇತರೆ ಸಹಕಾರಿ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು ಗರಿಷ್ಠ ರೂ.1000/–ಗಳನ್ನು ಭರಿಸುವುದು.

3. **ಗೋದಾಮುಗಳಲ್ಲಿ ಕೃಷಿ ಉತ್ಪನ್ನಗಳ ಶೇಖರಣೆಗೆ ಬಾಡಿಗೆ ವೆಚ್ಚ ಭರಿಸಲು ಸಹಾಯಧನ.**
   ರೈತರು ಕೃಷಿ ಉತ್ಪನ್ನವನ್ನು ಗೋದಾಮುಗಳಲ್ಲಿ ಶೇಖರಿಸಲು ತಗಲುವ ಬಾಡಿಗೆ ವೆಚ್ಚದಲ್ಲಿ ಪ.ಜಾತಿ/ಪ.ಪಂಗಡದ ರೈತರಿಗೆ 50% ರಷ್ಟು ಸಹಾಯಧನ/ ರಿಯಾಯಿತಿ ನೀಡಲಾಗುವುದು. (ಸಾಮಾನ್ಯ ರೈತರಿಗೆ 25%)

4. **ಲ್ಯಾಂಪ್ಸ್ ಸಂಯುಕ್ತ ಸಂಘಗಳಿಗೆ ಮಾರುಕಟ್ಟೆ ಮೂಲ ಸೌಕರ್ಯಗಳ ಸ್ಥಾಪನೆ.**
   ಪರಿಶಿಷ್ಟ ಪಂಗಡಕ್ಕೆ ಸೇರಿದ ಲ್ಯಾಂಪ್ಸ್ ಸಂಘಗಳಿಗೆ ಮೂಲಭೂತ ಸೌಕರ್ಯವನ್ನು ಸ್ಥಾಪಿಸಲು ಸರ್ಕಾರದಿಂದ ಅನುದಾನ ಒದಗಿಸಲಾಗುವುದು.

## ಸಾರಿಗೆ ಇಲಾಖೆ

1. ಪ.ಜಾತಿ / ಪ.ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್‌ಪಾಸ್:
   - ವಿದ್ಯಾರ್ಥಿಗಳು ನಿಯಮಿತ ಶಾಲೆ/ಕಾಲೇಜುಗಳು/ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಯಾಗಿರಬೇಕು.
   - ಸೇವಾ ಸಿಂಧುವಿನಲ್ಲಿ ಆನ್‌ಲೈನ್ ಮೂಲಕ ಅರ್ಜಿ ಸಲ್ಲಿಸುವುದು.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

1. ಕೃಷಿ, ತೋಟಗಾರಿಕೆ, ಪಶುಸಂಗೋಪನೆ ಮತ್ತು ಆರ್.ಡಿ.ಪಿ.ಆರ್ ಇಲಾಖೆಗಳ ವ್ಯಾಪ್ತಿಯ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಕೆಳಗಿನ ಸೌಲಭ್ಯವನ್ನು ಒದಗಿಸಲಾಗುತ್ತಿದೆ.
   - ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/- ಶಿಷ್ಯವೇತನ.
   - ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
   - ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.
   - ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

2. ಕುಡಿಯುವ ನೀರಿನ ಸಂಪರ್ಕ :

ಜಲಜೀವನ್ ಮಿಷನ್ ಯೋಜನೆಯಡಿ ಗ್ರಾಮೀಣ ಪ್ರದೇಶದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಸಾಮೂಹಿಕ ಮತ್ತು ವೈಯಕ್ತಿಕ ಕುಡಿಯುವ ನೀರಿನ ಸಂಪರ್ಕ ಒದಗಿಸಲಾಗುತ್ತಿದೆ.

3. ಗ್ರಾಮೀಣ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯ :

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ಪ.ಜಾತಿ/ಪ.ಪಂಗಡದ ಹೆಚ್ಚಿನ ಜನಸಂಖ್ಯೆ ಇರುವ ಗ್ರಾಮಗಳಿಗೆ ಸಂಪರ್ಕ ರಸ್ತೆ ನಿರ್ಮಿಸುವುದು.

ನಮ್ಮ ಗ್ರಾಮ ನಮ್ಮ ರಸ್ತೆ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ ಮತ್ತು ಚರಂಡಿ ಸೌಲಭ್ಯ ಒದಗಿಸಲಾಗುತ್ತದೆ.

4. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ :
   - ಸದರಿ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕೂಲಿ ಕಾರ್ಮಿಕರಿಗೆ ಜಾಬ್ ಕಾರ್ಡ್ ನೀಡಿ ಕನಿಷ್ಠ 100 ದಿನಗಳ (ಸರ್ಕಾರ ಅಧಿಸೂಚಿಸಿದ ಬರಪೀಡಿತ ಮತ್ತು ಪ್ರವಾಹಪೀಡಿತ ತಾಲ್ಲೂಕುಗಳಲ್ಲಿ 150 ದಿನಗಳು) ಕೆಲಸವನ್ನು ಒದಗಿಸಲಾಗುತ್ತದೆ. ದಿನದ ಕೂಲಿ ವೆಚ್ಚ ರೂ.289/-.
   - ಎಸ್.ಸಿ/ಎಸ್.ಟಿ ರೈತರು ತಮ್ಮ ಜಮೀನುಗಳ ಅಭಿವೃದ್ಧಿ ಕೆಲಸಗಳನ್ನು ತೆಗೆದುಕೊಳ್ಳಲು ಕೂಲಿ ವೆಚ್ಚವನ್ನು ಈ ಯೋಜನೆಯಡಿ ಭರಿಸಲು ಅವಕಾಶವಿದೆ.
   - ಪ.ಜಾತಿ/ಪ.ಪಂಗಡದವರಿಗೆ ಸ್ಮಶಾನ ನಿರ್ಮಾಣ, ಶಾಲೆಯ ಆವರಣ ಗೋಡೆ, ಅಂಗನವಾಡಿ ನಿರ್ಮಾಣ ಇತ್ಯಾದಿಗಳಿಗೆ ನಿಯಮಾನುಸಾರ ವೆಚ್ಚ ಭರಿಸಲು ಅವಕಾಶವಿದೆ.

5. ಸ್ವಚ್ಛ ಭಾರತ ಅಭಿಯಾನ :

ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ವೈಯಕ್ತಿಕ ಶೌಚಾಲಯ ಮತ್ತು ಸ್ನಾನಗೃಹ ನಿರ್ಮಾಣಕ್ಕಾಗಿ 2021-22ನೇ ಸಾಲಿನಿಂದ ರೂ.20,000/- ಸಹಾಯಧನ ನೀಡಲಾಗುತ್ತದೆ.

# ವಸತಿ ಇಲಾಖೆ

1. **ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆ:**

**ಪ್ರತಿ ಮನೆಗೆ ಸಹಾಯಧನ**

- ಗ್ರಾಮೀಣ ಪ್ರದೇಶ – ಪ್ರಸಕ್ತ ಸಾಲಿನಿಂದ ಮಂಜೂರಾಗುವ ಮನೆಗಳಿಗೆ ಘಟಕ ಸಹಾಯಧನವನ್ನು ರೂ.2.00 ಲಕ್ಷಕ್ಕೆ ಹೆಚ್ಚಿಸಲಾಗಿದೆ.
- ನಗರ ಪ್ರದೇಶ – ರೂ.2,00,000/- ಮತ್ತು ಇದರೊಂದಿಗೆ ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) ಅಡಿಯಲ್ಲಿ ರೂ.1,50,000/-ಗಳ ಸಹಾಯಧನವನ್ನು ಸೇರಿಸಿ ಒಟ್ಟು ರೂ.3.50 ಲಕ್ಷ ಸಹಾಯಧನ ನೀಡಲಾಗುವುದು. ಫಲಾನುಭವಿಗಳ ವಂತಿಕೆ ರೂ.1.50 ಲಕ್ಷ ಒಟ್ಟು ಘಟಕ ವೆಚ್ಚ ರೂ.5.00 ಲಕ್ಷ.
- ಪ್ರಧಾನ ಮಂತ್ರಿ ಆವಾಸ್ ಯೋಜನೆ (ಗ್ರಾಮೀಣ) – ಸಹಾಯಧನ ರೂ.1.50 ಲಕ್ಷ (ಕೇಂದ್ರ ಸರ್ಕಾರದಿಂದ ರೂ.72,000/- ಮತ್ತು ರಾಜ್ಯ ಸರ್ಕಾರದಿಂದ ರೂ.78,000/-), ಆದರೆ ಡಾ.ಬಿ.ಆರ್.ಅಂಬೇಡ್ಕರ್ ನಿವಾಸ್ ಯೋಜನೆಯಡಿ ರೂ.50,000/- ನೀಡಿ ಒಟ್ಟು ಸಹಾಯಧನ ರೂ.2.00 ಲಕ್ಷಗಳನ್ನು ನೀಡಲಾಗುತ್ತದೆ. ( ಈ ಹಿಂದೆ ರೂ.1.75 ಲಕ್ಷ ನೀಡುತ್ತಿದ್ದು, ಪ್ರಸಕ್ತ ಸಾಲಿನಿಂದ ರೂ.2.00 ಲಕ್ಷಕ್ಕೆ ಹೆಚ್ಚಿಸಲಾಗಿದೆ)

**ಅರ್ಹತೆ – ವಾರ್ಷಿಕ ಆದಾಯ ಮಿತಿ**

- ಗ್ರಾಮೀಣ ಪ್ರದೇಶ- ರೂ. 32,000/-
- ನಗರ ಪ್ರದೇಶ – ರೂ. 87,600/-

**ಯೋಜನೆಯ ಪ್ರಮುಖ ಅಂಶಗಳು**

- ಸ್ವತಃ ಫಲಾನುಭವಿಗಳೇ ಮನೆಗಳನ್ನು ನಿರ್ಮಿಸಿಕೊಳ್ಳಲು ಮೊದಲ ಆದ್ಯತೆ.
- ಆನ್‌ಲೈನ್‌ನಲ್ಲಿ ಕಾಮಗಾರಿ ಆದೇಶ ನೀಡುವಿಕೆ.
- ಜಿಪಿಎಸ್ ಆಧಾರಿತ ಭೌತಿಕ ಪ್ರಗತಿ ಪರಿಶೀಲನೆ.
- ಫಲಾನುಭವಿಗಳ ಖಾತೆಗೆ ನೇರವಾಗಿ ಸಹಾಯಧನ ಬಿಡುಗಡೆ.
- ಸಹಾಯಧನ ಬಿಡುಗಡೆ ವಿವರಗಳನ್ನು ಎಸ್.ಎಂ.ಎಸ್ ಮೂಲಕ ಫಲಾನುಭವಿಗಳಿಗೆ ತಿಳಿಸಲಾಗುವುದು.

2. **ಪ್ರಧಾನ ಮಂತ್ರಿ ಆವಾಸ್ ಯೋಜನೆ (ನಗರ) – AHP-Affortable housing Programme.**

| ವರ್ಗ | ವಾರ್ಷಿಕ ಆದಾಯ | ಮನೆಯ ವಿಸ್ತೀರ್ಣ |
|---|---|---|
| ಬಿ.ಪಿ.ಎಲ್ | 87600/- ವರೆಗೆ | 30 sqmt |
| ಆರ್ಥಿಕ ಹಿಂದುಳಿದವರು | ರೂ 87600/- ರಿಂದ ರೂ 3 ಲಕ್ಷದವರೆಗೆ | 60 sqmt |
| ಎಲ್.ಐ.ಜಿ | ರೂ 3 ಲಕ್ಷ ದಿಂದ 6 ಲಕ್ಷದವರೆಗೆ | 60 sqmt |
| ಎಂ.ಐ.ಜಿ-1 | ರೂ 6 ಲಕ್ಷದಿಂದ 12 ಲಕ್ಷದವರೆಗೆ | 160 sqmt |
| ಎಂ.ಐ.ಜಿ-2 | ರೂ 12 ಲಕ್ಷದಿಂದ 18 ಲಕ್ಷದವರೆಗೆ | 200 sqmt |

ಮೇಲ್ಕಂಡ ಯೋಜನೆಯಡಿ ಸಹಾಯಧನ ರೂ.3.50 ಲಕ್ಷ ಮಾತ್ರ ನೀಡಲಾಗುತ್ತದೆ. (ಡಾ.ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆಯಡಿ ರೂ.2.00 ಲಕ್ಷ ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ರೂ.1.50 ಲಕ್ಷ ಸೇರಿಸಿ)

3. ಕೊಳಚೆ ಪ್ರದೇಶಾಭಿವೃದ್ಧಿ ಮಂಡಳಿ :

ನಗರ ಪ್ರದೇಶಗಳಲ್ಲಿ ಕೊಳಚೆ ಅಭಿವೃದ್ಧಿ ಮಂಡಳಿಯಿಂದ ಘೋಷಿಸಲಾದ ಕೊಳಚೆ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣ. ಒಟ್ಟು ಸಹಾಯಧನ ರೂ.3.50 ಲಕ್ಷ. (ಡಾ.ಬಿ.ಆರ್.ಅಂಬೇಡ್ಕರ್ ವಸತಿ ಯೋಜನೆಯಡಿ ರೂ.2.00 ಲಕ್ಷ ಮತ್ತು ಪ್ರಧಾನ ಮಂತ್ರಿ ಆವಾಸ್ ಯೋಜನೆಯಡಿ ರೂ.1.50 ಲಕ್ಷ ಸೇರಿಸಿ) ಫಲಾನುಭವಿಗಳ ವಂತಿಕೆಯಲ್ಲಿ 50% ಗರಿಷ್ಟ ರೂ.75,000/- ವನ್ನು ಎಸ್.ಸಿ.ಎಸ್.ಪಿ/ ಟಿ.ಎಸ್.ಪಿ ಅಡಿ ಭರಿಸಲು ತಿಳಿಸಲಾಗಿದೆ.

## ನಗರಾಭಿವೃದ್ಧಿ ಇಲಾಖೆ

1.ಖಾಯಂ ಪೌರ ಕಾರ್ಮಿಕರ ವಸತಿ ಯೋಜನೆ :

- ವಸತಿ ಸೌಲಭ್ಯವನ್ನು ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳ ಶಾಸ್ವತ ವಸತಿ ರಹಿತ ಪೌರಕಾರ್ಮಿಕರು, ಲೋಡರ್‌ಗಳು, ಸಹಾಯಕರು, ಯು.ಜಿ.ಡಿ ಕೆಲಸಗಾರರು ಮತ್ತು ಕ್ಲೀನರ್‌ಗಳಿಗೆ ನೀಡಲಾಗುವುದು.
- ಘಟಕ ಸಹಾಯಧನ ರೂ. 6.00 ಲಕ್ಷ.

2. ಸ್ವಚ್ಛಭಾರತ ಮಿಷನ್ :
ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರಿಗೆ ವೈಯಕ್ತಿಕ ಶೌಚಾಲಯಗಳ ನಿರ್ಮಾಣಕ್ಕಾಗಿ ರೂ. 15000/- ಗಳ ಸಹಾಯಧನ ನೀಡಲಾಗುವುದು.

3. ನಗರಸಭೆ ಮತ್ತು ಪುರಸಭೆಗಳಿಗೆ ಮುಖ್ಯ ಮಂತ್ರಿಗಳ ನಗರೋತ್ಥಾನ ಯೋಜನೆ :
ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರ ವಾಸಸ್ಥಳಗಳಲ್ಲಿ ಕುಡಿಯುವ ನೀರು, ರಸ್ತೆ, ಚರಂಡಿ, ಯುಜಿಡಿ ಮತ್ತು ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತದೆ.

4. ಕುಡಿಯುವ ನೀರಿನ ಸರಬರಾಜು
ಬೆಂಗಳೂರು ಮಹಾನಗರ ಪಾಲಿಕೆ ಮತ್ತು ಇತರ ನಗರ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದವರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳಲ್ಲಿ ಬಿ.ಡಬ್ಲ್ಯೂ.ಎಸ್.ಎಸ್.ಬಿ ಮತ್ತು ಕೆ.ಯು.ಡಬ್ಲ್ಯೂ.ಎಸ್.ಎಸ್.ಬಿ ಮೂಲಕ ಕುಡಿಯುವ ನೀರಿನ ಸರಬರಾಜು ವ್ಯವಸ್ಥೆ ಕಲ್ಪಿಸಲಾಗುತ್ತದೆ.

5. ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ವಿಶೇಷ ಮೂಲಭೂತ ಸೌಕರ್ಯ
ಬೆಂಗಳೂರು ಮಹಾನಗರ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳಲ್ಲಿ ಕುಡಿಯುವ ನೀರು, ರಸ್ತೆ, ಚರಂಡಿ, ಯುಜಿಡಿ ಮತ್ತು ಇತರೆ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗುತ್ತದೆ.

## ಲೋಕೋಪಯೋಗಿ ಇಲಾಖೆ

- ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಸಿ.ಸಿ.ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು. ಹತ್ತಿರದ ಮುಖ್ಯ ರಸ್ತೆಯಿಂದ ಕಾಲೋನಿಗೆ ಸಂಪರ್ಕ ರಸ್ತೆ ನಿರ್ಮಿಸುವುದು.

## ಇಂಧನ ಇಲಾಖೆ

1) ಪ.ಜಾತಿ/ಪ.ಪಂಗಡದ ರೈತರ 10 ಹೆಚ್.ಪಿ ವರೆಗಿನ ಕೃಷಿ ನೀರಾವರಿ ಪಂಪು ಸೆಟ್‌ಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಒದಗಿಸುವುದು.
2) ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವುದು.

3) ಪ್ರಧಾನ ಮಂತ್ರಿ ಕುಸುಮ್ ಯೋಜನೆಯ ಮಾರ್ಗಸೂಚಿಯಂತೆ ಪ.ಜಾತಿ/ಪ.ಪಂಗಡದ ರೈತರ ತೆರೆದ ಬಾವಿ/ಕೊಳವೆ ಬಾವಿಗಳಿಗೆ ಗರಿಷ್ಠ 7.5 ಹೆಚ್.ಪಿ ಸಾಮರ್ಥ್ಯವರೆಗಿನ ಸೌರಶಕ್ತಿ ಆಧಾರಿತ ನೀರಾವರಿ ಪಂಪು ಸೆಟ್‌ಗಳಿಗೆ 80% ಸಹಾಯಧನ ನೀಡುವುದು.
4) ಪ.ಜಾತಿ/ಪ.ಪಂಗಡದವರ ವಾಸಸ್ಥಳಗಳಿಗೆ / ಕಾಲೋನಿಗಳಿಗೆ ವಿದ್ಯುತ್ ಸಂಪರ್ಕ ಒದಗಿಸುವುದು.
5) ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಯೋಜನೆಯಡಿ ವಿದ್ಯುತ್ ಸಂಪರ್ಕ.

## ಭಾರೀ ನೀರಾವರಿ ಇಲಾಖೆ

ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅನುದಾನವನ್ನು ಆಯಾ ನಿಗಮಗಳ ವ್ಯಾಪ್ತಿಯ ಅಚ್ಚುಕಟ್ಟು ಪ್ರದೇಶದಲ್ಲಿ ಪ.ಜಾತಿ/ಪ.ಪಂಗಡದ ರೈತರ ಜಮೀನಿನ ವಿಸ್ತೀರ್ಣದ ಆಧಾರದ ಮೇಲೆ ನಿಗಮ ಇತ್ಯಾದಿಗಳಿಗೆ ಹಂಚಿಕೆ ಮಾಡುವುದು.

ಸಾಮಾನ್ಯ ನೀರಾವರಿ ಕಾಮಗಾರಿ :
ಸಾಮಾನ್ಯ ನೀರಾವರಿ ಯೋಜನೆಗಳಿಗೆ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ವಿಸ್ತೀರ್ಣದ ಆಧಾರದ ಅನುಪಾತದಲ್ಲಿ ಎಸ್.ಸಿ.ಎಸ್.ಪಿ/ ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.

ಸಾಮೂಹಿಕ ನೀರಾವರಿ :

- ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿ 50% ಮೇಲ್ಪಟ್ಟು ಪ.ಜಾತಿ/ ಪ.ಪಂಗಡದ ರೈತರ ಜಮೀನು ಇದ್ದಲ್ಲಿ 100% ವೆಚ್ಚವನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ಭರಿಸುವುದು.
- 50% ಕ್ಕಿಂತ ಕಡಿಮೆ ಇದ್ದಲ್ಲಿ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ಅನುಪಾತಕ್ಕೆ ಅನುಗುಣವಾಗಿ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.

ವೈಯಕ್ತಿಕ ನೀರಾವರಿ ಸೌಲಭ್ಯ :

- ಅಚ್ಚುಕಟ್ಟು ಪ್ರದೇಶದಲ್ಲಿ ಕಾಲುವೆಗಳ ಮೂಲಕ ನೀರು ಸರಬರಾಜು ಆಗದೇ ಇರುವ ಪ್ರದೇಶಗಳಲ್ಲಿ ಆದ್ಯತೆ ಮೇಲೆ ಗಂಗಾ ಕಲ್ಯಾಣ ಯೋಜನೆಯ ಮಾದರಿಯಲ್ಲಿ ಕೊಳವೆ ಬಾವಿ ಮತ್ತು ತೆರೆದ ಬಾವಿ ಸೌಲಭ್ಯವನ್ನು ಕಲ್ಪಿಸುವುದು.

## ಸಣ್ಣ ನೀರಾವರಿ ಇಲಾಖೆ

**ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಜಮೀನಿನಲ್ಲಿ ವೈಯಕ್ತಿಕ ನೀರಾವರಿ ಮತ್ತು ಸಾಮೂಹಿಕ ನೀರಾವರಿ ಸೌಲಭ್ಯ ಒದಗಿಸಲಾಗುವುದು.(ಏತ ನೀರಾವರಿ/ ಕೊಳವೆಬಾವಿ/ತೆರೆದ ಬಾವಿ/ಚೆಕ್ ಡ್ಯಾಮ್)**

ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅನುದಾನವನ್ನು ಜನಸಂಖ್ಯೆಯ ಆಧಾರದ ಮೇಲೆ ಜಿಲ್ಲೆಗಳಿಗೆ ಹಂಚಿಕೆ ಮಾಡುವುದು.

ಸಾಮೂಹಿಕ ನೀರಾವರಿ :

- ಏತ ನೀರಾವರಿ ಯೋಜನೆಯ ವ್ಯಾಪ್ತಿಯಲ್ಲಿ 50% ಮೇಲ್ಪಟ್ಟು ಪ.ಜಾತಿ/ ಪ.ಪಂಗಡದ ರೈತರ ಜಮೀನು ಇದ್ದಲ್ಲಿ 100% ವೆಚ್ಚವನ್ನು ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ಭರಿಸುವುದು.
- 50% ಕ್ಕಿಂತ ಕಡಿಮೆ ಇದ್ದಲ್ಲಿ ಪ.ಜಾತಿ/ ಪ.ಪಂಗಡದ ರೈತರ ಜಮೀನಿನ ಅನುಪಾತಕ್ಕೆ ಅನುಗುಣವಾಗಿ ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಡಿ ವೆಚ್ಚ ಭರಿಸುವುದು.
- ನದಿ ನಾಲೆಗಳಿಗೆ ಸಣ್ಣ ಮಟ್ಟದ ಬ್ಯಾರೇಜ್‌ಗಳ ನಿರ್ಮಾಣ – ಏತ ನೀರಾವರಿಗೆ ನಿಗದಿಪಡಿಸಿರುವ ಮೇಲ್ಕಂಡ ಷರತ್ತುಗಳಂತೆ ನಿರ್ಮಿಸುವುದು.

ವೈಯಕ್ತಿಕ ನೀರಾವರಿ ಸೌಲಭ್ಯ :

- ಕೊಳವೆ ಬಾವಿ ಮತ್ತು ತೆರೆದ ಬಾವಿ ಸೌಲಭ್ಯವನ್ನು ಗಂಗಾ ಕಲ್ಯಾಣ ಯೋಜನೆಯ ಮಾದರಿಯಲ್ಲಿ ನೀಡಲಾಗುವುದು.

- ಫಲಾನುಭವಿ ಕನಿಷ್ಠ ಒಂದು ಎಕರೆ ಜಮೀನು ಹೊಂದಿರಬೇಕು ಆದರೆ ಕರಾವಳಿ ಹಾಗೂ ಮಲೆನಾಡು ಪ್ರದೇಶಗಳಾದ ದಕ್ಷಿಣ ಕನ್ನಡ, ಉತ್ತರ ಕನ್ನಡ, ಉಡುಪಿ, ಕೊಡಗು ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಫಲಾನುಭವಿಗಳು ಕನಿಷ್ಠ ಅರ್ಧ ಎಕರೆ ಜಮೀನು ಹೊಂದಿರಬೇಕು.
- ಸಮಾಜ ಕಲ್ಯಾಣ ಇಲಾಖೆಯ ನಿಗಮಗಳಿಂದ ಗಂಗಾ ಕಲ್ಯಾಣ ಯೋಜನೆಯಡಿ ಸೌಲಭ್ಯ ಪಡೆದ ಫಲಾನುಭವಿಗಳು ಸಣ್ಣ ನೀರಾವರಿ ಇಲಾಖೆಯಿಂದ ಸೌಲಭ್ಯ ಪಡೆಯಲು ಅರ್ಹರಲ್ಲ.
- ಫಲಾನುಭವಿಗಳನ್ನು ಪಾರದರ್ಶಕವಾಗಿ ಪ್ರಕಟಣೆಗಳ ಮೂಲಕ ಅರ್ಜಿಗಳನ್ನು ಆಹ್ವಾನಿಸಿ ಆಯ್ಕೆ ಮಾಡುವುದು. (ಎಸ್.ಸಿ.ಎಸ್.ಪಿ/ಟಿ.ಎಸ್.ಪಿ ಅಧಿನಿಯಮದಂತೆ)

**ಚೆಕ್ ಡ್ಯಾಂಗಳ ನಿರ್ಮಾಣ (ಮಣ್ಣಿನ ತೇವಾಂಶವನ್ನು ಮತ್ತು ಅಂತರ್ಜಲ ಮಟ್ಟವನ್ನು ಹೆಚ್ಚಿಸಲು)** : ಪ.ಜಾತಿ/ಪ.ಪಂಗಡದ ರೈತರ ಜಮೀನುಗಳ ಅಭಿವೃದ್ಧಿಗಾಗಿ ಪೂರಕವಾಗುವಂತೆ ಜಮೀನಿನ ಅಕ್ಕ-ಪಕ್ಕದಲ್ಲಿ ಚೆಕ್ ಡ್ಯಾಂಗಳನ್ನು ನಿರ್ಮಿಸತಕ್ಕದ್ದು.

## ಯೋಜನಾ ಇಲಾಖೆ

1. **ಶಾಸಕರ ಕ್ಷೇತ್ರಾಭಿವೃದ್ಧಿ ನಿಧಿ:** ವಿಧಾನಸಭಾ ಕ್ಷೇತ್ರವಾರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾಲೋನಿಗಳಿಗೆ ಮೂಲಭೂತ ಸೌಕರ್ಯ - ಸಿ.ಸಿ ರಸ್ತೆ, ಚರಂಡಿ, ಅಂಗನವಾಡಿ ಕಟ್ಟಡ/ ಕಂಪೌಂಡ್ ವಾಲ್, ಸಮುದಾಯ ಭವನ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಯೋಜನಾ ಇಲಾಖೆಗಳಿಂದ ಅನುಷ್ಠಾನ ಮಾಡಲಾಗುತ್ತದೆ.
2. **ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ (ಕಲಬುರಗಿ)** : ಮಂಡಳಿಯ ವ್ಯಾಪ್ತಿಗೆ ಬರುವ ಎಲ್ಲಾ ಜಿಲ್ಲೆಗಳಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

   1) ಪ.ಜಾತಿ/ಪಂಗಡದ ಕಾಲೋನಿಗಳಿಗೆ ಸಂಪರ್ಕ ರಸ್ತೆ, ಬೀದಿ ದೀಪ, ಶುದ್ಧ ಕುಡಿಯುವ ನೀರಿನ ಘಟಕ, ಒಳಚರಂಡಿ ಇತ್ಯಾದಿ ಸೌಕರ್ಯ ಕಲ್ಪಿಸುವುದು.

   2) ಪ.ಜಾತಿ/ಪಂಗಡದ ವಿದ್ಯಾರ್ಥಿಗಳು ಹೆಚ್ಚಿಗೆ ಇರುವ ಶಾಲೆಗಳಲ್ಲಿ ಹೆಚ್ಚುವರಿ ಕೊಠಡಿ, ಶೌಚಾಲಯ, ಕುಡಿಯುವ ನೀರಿನ ವ್ಯವಸ್ಥೆ ಮತ್ತು ಅಂಗನವಾಡಿ ಕಟ್ಟಡ ನಿರ್ಮಾಣ/ಕಂಪೌಂಡ್ ವಾಲ್.

   3) ಪ.ಜಾತಿ/ಪಂಗಡದ ಜನರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶದಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರ/ಉಪಕೇಂದ್ರಗಳನ್ನು ಅಭಿವೃದ್ಧಿ ಪಡಿಸುವುದು.

3. **ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ (ಚಿತ್ರದುರ್ಗ):** ಮಂಡಳಿಯ ವ್ಯಾಪ್ತಿಗೆ ಒಳಪಡುವ ಜಿಲ್ಲೆಗಳಲ್ಲಿ ಅಂಗನವಾಡಿ ಮತ್ತು ಶಾಲೆಗಳಿಗೆ ಹೆಚ್ಚುವರಿ ಕೊಠಡಿ ಹಾಗೂ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಕಾಂಕ್ರೀಟ್ ರಸ್ತೆ ಮತ್ತು ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಅನುಷ್ಠಾನ ಮಾಡಲಾಗುತ್ತದೆ.
4. **ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ (ಶಿವಮೊಗ್ಗ):** ಮಂಡಳಿಯ ವ್ಯಾಪ್ತಿಗೆ ಒಳಪಡುವ ಜಿಲ್ಲೆಗಳಲ್ಲಿ ಪ.ಜಾತಿ/ಪ.ಪಂಗಡದ ಜನವಸತಿ ಪ್ರದೇಶಗಳಲ್ಲಿ ರಸ್ತೆ ಮತ್ತು ಸೇತುವೆ, ಬಾಕ್ಸ್ ಚರಂಡಿ, ತೂಗು ಸೇತುವೆ, ಕಾಲು ಸಂಕಗಳ ನಿರ್ಮಾಣ ಕಾಮಗಾರಿಗಳನ್ನು ಅನುಷ್ಠಾನ ಮಾಡಲಾಗುತ್ತದೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

1. **ಸರ್ಕಾರಿ ಖಾಸಗಿ ಸಹಭಾಗಿತ್ವದಲ್ಲಿ ರೋಗ ಪತ್ತೆ ಪರೀಕ್ಷೆ ಹಾಗೂ ಡಯಾಲಿಸೀಸ್ ಚಿಕಿತ್ಸೆಗಳು.**
   ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ವ್ಯಾಪ್ತಿಯ ಸರ್ಕಾರಿ ಆಸ್ಪತ್ರೆಗಳಲ್ಲಿ ಕೊನೆಯ ಹಂತದ ಮೂತ್ರಪಿಂಡ ವೈಫಲ್ಯದ ರೋಗಿಗಳಿಗೆ ಡಯಾಲಿಸಿಸ್ ಸೇವೆಗಳನ್ನು ಉಚಿತವಾಗಿ ನೀಡಲಾಗುತ್ತದೆ.

2. ರಾಷ್ಟ್ರೀಯ ಆರೋಗ್ಯ ಅಭಿಯಾನ ಯೋಜನೆ.
ಸರ್ಕಾರಿ ಆಸ್ಪತ್ರೆಗಳಲ್ಲಿ ಜನನಿ ಸುರಕ್ಷಾ ಯೋಜನೆ, ಜನನಿ ಶಿಶು ಸುರಕ್ಷಾ ಕಾರ್ಯಕ್ರಮ, ರೋಗ ನಿರೋಧಕ ಲಸಿಕಾ ಕಾರ್ಯಕ್ರಮ, ರಾಷ್ಟ್ರೀಯ ಬಾಲ ಸುರಕ್ಷಾ ಕಾರ್ಯಕ್ರಮ, ರಾಷ್ಟ್ರೀಯ ನಗರ ಆರೋಗ್ಯ ಕಾರ್ಯಕ್ರಮ, ಸುವರ್ಣ ಆರೋಗ್ಯ ಚೈತನ್ಯ, ಆರೋಗ್ಯ ಕವಚ ಮತ್ತು ಆರೋಗ್ಯ ಘಟಕಗಳ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತದೆ.

3. ಇ.ಎಂ.ಆರ್.ಐ. (Establishment of EMRI) ಸ್ಥಾಪನೆ (ಆರೋಗ್ಯ ಕವಚ) ಯೋಜನೆ.
ಎಲ್ಲಾ ರೀತಿಯ ವೈದ್ಯಕೀಯ ತುರ್ತು ಪರಿಸ್ಥಿತಿಗಳಲ್ಲಿ ಹಾಗೂ ರಸ್ತೆ ಸಂಚಾರ ಅಪಘಾತಕ್ಕೀಡಾದ ಸಂತ್ರಸ್ತರನ್ನು ಆಸ್ಪತ್ರೆಗೆ ಕರೆದೊಯ್ಯಲು ಟೋಲ್ ಫ್ರೀ '108' ಸಂಖ್ಯೆಯ ಸಾರಿಗೆ ಸೌಲಭ್ಯವನ್ನು ಉಚಿತವಾಗಿ ನೀಡಲಾಗುತ್ತದೆ.

4. ಆಯುಷ್ಮಾನ್ ಭಾರತ – ಪ್ರಧಾನ ಮಂತ್ರಿ ಜನ ಆರೋಗ್ಯ ಯೋಜನೆ
ಬಿ.ಪಿ.ಎಲ್ ಕಾರ್ಡ್ ಹೊಂದಿರುವ ಪ್ರತಿ ಕುಟುಂಬಕ್ಕೆ ವರ್ಷಕ್ಕೆ ರೂ.5.00 ಲಕ್ಷಗಳು ಮತ್ತು ಎ.ಪಿ.ಎಲ್ ಕಾರ್ಡ್ ಹೊಂದಿರುವ ಪ್ರತಿ ಕುಟುಂಬಕ್ಕೆ ಕಾರ್ಯವಿಧಾನದ ದರಗಳ ಮಿತಿಯನ್ವಯ 30% ನಂತೆ ವರ್ಷಕ್ಕೆ ರೂ.1.50 ಲಕ್ಷಗಳ ಆರ್ಥಿಕ ನೆರವು ನೀಡಲಾಗುವುದು.

5. ಶುಚಿ ಯೋಜನೆ
ಎಸ್.ಸಿ/ಎಸ್.ಟಿ ಸೇರಿದಂತೆ ಎಲ್ಲಾ ವರ್ಗಗಳ ಹದಿಹರೆಯದ ಹೆಣ್ಣು ಮಕ್ಕಳು ಋತು ಕಾಲದ ಸಮಯದಲ್ಲಿ ಉತ್ತಮ ಶುಚಿತ್ವ ಹಾಗೂ ಆರೋಗ್ಯವನ್ನು ಕಾಪಾಡಿಕೊಳ್ಳುವ ಸ್ಯಾನಿಟರಿ ನ್ಯಾಪ್ಕಿನ್ಸ್‌ಗಳನ್ನು ಉಚಿತವಾಗಿ ಪೂರೈಸುವುದು.

6. ಉಚಿತ ಕಾಕ್ಲಿಯರ್ ಇಂಪ್ಲಾಂಟ್ ಶಸ್ತ್ರ ಚಿಕಿತ್ಸೆ.
ಕಿವುಡು ನಿವಾರಣೆಗೆ ಸಂಬಂಧಿಸಿದಂತೆ ಉಚಿತ ಕಾಕ್ಲಿಯರ್ ಇಂಪ್ಲಾಂಟ್ ಶಸ್ತ್ರ ಚಿಕಿತ್ಸೆ ಮಾಡಲಾಗುವುದು.

## ವೈದ್ಯಕೀಯ ಶಿಕ್ಷಣ ಇಲಾಖೆ

1. **ವೈದ್ಯಕೀಯ ಶಿಕ್ಷಣ ಇಲಾಖೆ**
ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ವೈದ್ಯಕೀಯ ಕಾಲೇಜುಗಳಲ್ಲಿ ಮತ್ತು ಸೂಪರ್ ಸ್ಪೆಷಾಲಿಟಿ ಆಸ್ಪತ್ರೆಗಳಲ್ಲಿ ಪ.ಜಾತಿ/ಪ.ಪಂಗಡದ ರೋಗಿಗಳಿಗೆ ಉಚಿತ ಚಿಕಿತ್ಸೆಯನ್ನು ನೀಡಲಾಗುವುದು.

2. **ಎಂ.ಬಿ.ಬಿ.ಎಸ್/ಎಂ.ಡಿ/ಎಂ.ಎಸ್ ವೈದ್ಯಕೀಯ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳು:**
   - ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿನ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ ಮೇಲ್ಪಟ್ಟು ರೂ.10.00 ಲಕ್ಷದೊಳಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 100% ಶುಲ್ಕ ಮರುಪಾವತಿ.
   - ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವಾರ್ಷಿಕ ಕುಟುಂಬ ಆದಾಯ ರೂ.5.00 ಲಕ್ಷದೊಳಗಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳ ವಿತರಣೆ.
   - ವೈದ್ಯಕೀಯ ಉಪಕರಣ (Stethoscope, apron, emergency light, BP apparetus, mask, gloves) ಮತ್ತು ವೈದ್ಯಕೀಯ ಪುಸ್ತಕಗಳ ವಿತರಣೆ.
   - ವಿದ್ಯಾರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
   - ಬೇರೆ ರಾಜ್ಯಗಳಿಂದ ಕರ್ನಾಟಕದಲ್ಲಿನ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಪಡೆದವರು ಮೇಲ್ಕಂಡ ಸೌಲಭ್ಯಗಳಿಗೆ ಅರ್ಹರಲ್ಲ. ಅಂತಹ ವಿದ್ಯಾರ್ಥಿಗಳು ಆಯಾ ರಾಜ್ಯಗಳಿಂದ ವಿದ್ಯಾರ್ಥಿವೇತನ ಸೌಲಭ್ಯ ಪಡೆಯಬಹುದಾಗಿದೆ.

3. **ಆಯುಷ್ ಕೋರ್ಸ್‌ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ನೀಡಲಾಗುತ್ತಿರುವ ಸೌಲಭ್ಯಗಳು (ಆಯುರ್ವೇದ, ಹೋಮಿಯೋಪತಿ, ಯುನಾನಿ, ಸಿದ್ಧ)**

- ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿನ ವಾರ್ಷಿಕ ಆದಾಯ ಮಿತಿ ರೂ.2.50 ಲಕ್ಷ ಮೇಲ್ಪಟ್ಟು ರೂ.10.00 ಲಕ್ಷದೊಳಗಿನ ವಿದ್ಯಾರ್ಥಿಗಳಿಗೆ 100% ಶುಲ್ಕ ಮರುಪಾವತಿ.
- ಸರ್ಕಾರಿ ಮತ್ತು ಖಾಸಗಿ ವೈದ್ಯಕೀಯ ಕಾಲೇಜುಗಳಲ್ಲಿ ವಾರ್ಷಿಕ ಕುಟುಂಬ ಆದಾಯ ರೂ.5.00 ಲಕ್ಷದೊಳಗಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್‌ಗಳನ್ನು ವಿತರಿಸಲಾಗುವುದು.
- ವೈದ್ಯಕೀಯ ಉಪಕರಣ ಮತ್ತು ವೈದ್ಯಕೀಯ ಪುಸ್ತಕಗಳ ವಿತರಣೆ.
- ವಿದ್ಯಾರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು.
- ಬೇರೆ ರಾಜ್ಯಗಳಿಂದ ಕರ್ನಾಟಕದಲ್ಲಿನ ವೈದ್ಯಕೀಯ ಕಾಲೇಜುಗಳಲ್ಲಿ ಪ್ರವೇಶ ಪಡೆದವರು ಮೇಲ್ಕಂಡ ಸೌಲಭ್ಯಗಳಿಗೆ ಅರ್ಹರಲ್ಲ. ಅಂತಹ ವಿದ್ಯಾರ್ಥಿಗಳು ಆಯಾ ರಾಜ್ಯಗಳಿಂದ ವಿದ್ಯಾರ್ಥಿವೇತನ ಸೌಲಭ್ಯ ಪಡೆಯಬಹುದಾಗಿದೆ.

## ಉನ್ನತ ಶಿಕ್ಷಣ ಇಲಾಖೆ

1. **ವಿಶ್ವವಿದ್ಯಾಲಯಗಳಲ್ಲಿ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಒದಗಿಸುತ್ತಿರುವ ಸೌಲಭ್ಯಗಳು.**

- ಪಿ.ಹೆಚ್.ಡಿ ವಿದ್ಯಾರ್ಥಿಗಳಿಗೆ ಮಾಸಿಕ ಗರಿಷ್ಠ ರೂ.10,000/- ಶಿಷ್ಯವೇತನ ನೀಡುವುದು (ವಿಶ್ವವಿದ್ಯಾಲಯ / ಸ್ನಾತಕೋತ್ತರ ಕೇಂದ್ರ / ಸಂಯೋಜಿತ ಇತ್ಯಾದಿ ಕಾಲೇಜುಗಳಲ್ಲಿ ಪಿ.ಹೆಚ್.ಡಿ ಗೆ ಆಯ್ಕೆ ಮಾಡಿದ ವಿದ್ಯಾರ್ಥಿಗಳಿಗೆ)
- ಶುಲ್ಕ ಮರುಪಾವತಿ (ಕುಟುಂಬದ ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ವಿದ್ಯಾರ್ಥಿಗಳಿಗೆ ಸರ್ಕಾರ ನಿಗದಿಪಡಿಸಿದ 50% ರಷ್ಟು ಶುಲ್ಕ ಮರುಪಾವತಿ ಮಾಡುವುದು)
- ಕುಟುಂಬದ ವಾರ್ಷಿಕ ಅದಾಯ ರೂ.5.00 ಲಕ್ಷದೊಳಗೆ ಇರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ನೀಡುವುದು.
- ವಿಶ್ವವಿದ್ಯಾಲಯದ ವಿದ್ಯಾರ್ಥಿನಿಲಯಗಳಲ್ಲಿನ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಊಟದ ವೆಚ್ಚ ಭರಿಸುವುದು.

2. **ವಿದ್ಯಾರ್ಥಿನಿಯರಿಗೆ ಪೂರ್ಣ ಶುಲ್ಕ ಮರುಪಾವತಿ.**

- ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪದವಿ ಮತ್ತು ಸ್ನಾತಕೋತ್ತರ ಪದವಿ ವಿದ್ಯಾರ್ಥಿನಿಯರಿಗೆ ಪೂರ್ಣ ಶುಲ್ಕ ಮರುಪಾವತಿಸುವುದು.
- ಉನ್ನತ ಶಿಕ್ಷಣ ಇಲಾಖೆಯಿಂದ ಶುಲ್ಕ ವಿನಾಯಿತಿ ಪಡೆಯುತ್ತಿರುವ ವಿದ್ಯಾರ್ಥಿನಿಯರು ಸಮಾಜ ಕಲ್ಯಾಣ ಇಲಾಖೆಯಡಿ ಶುಲ್ಕ ಮರುಪಾವತಿಗೆ ಅರ್ಹರಿರುವುದಿಲ್ಲ.

3. **ಇಂಜಿನಿಯರಿಂಗ್ ಮತ್ತು ಪಾಲಿಟೆಕ್ನಿಕ್ ಕಾಲೇಜಿನ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ.**

- ವಾರ್ಷಿಕ ಆದಾಯ ರೂ.2.50 ಲಕ್ಷದಿಂದ ಮೇಲ್ಪಟ್ಟು ರೂ.10.00 ಲಕ್ಷದವರೆಗಿನ ಎಸ್.ಸಿ./ಎಸ್.ಟಿ ವಿದ್ಯಾರ್ಥಿಗಳಿಗೆ ಇಂಜಿನಿಯರಿಂಗ್ (UG & PG) ಮತ್ತು ಪಾಲಿಟೆಕ್ನಿಕ್ ಕೋರ್ಸ್‌ಗಳಲ್ಲಿ ಸರ್ಕಾರ ನಿಗದಿಪಡಿಸಿದ 100% ಶುಲ್ಕ ಮರುಪಾವತಿ (ಸಿ.ಇ.ಟಿ & ಕಾಮೆಡ್-ಕೆ ಯಿಂದ ಆಯ್ಕೆಯಾದವರಿಗೆ).

## ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಇಲಾಖೆ

1. **ಆರ್.ಟಿ.ಇ (Right to Education Act.) ಕಾಯ್ದೆ ಅಡಿ ವಿದ್ಯಾರ್ಥಿಗಳಿಗೆ ಖಾಸಗಿ ಶಾಲೆಗಳ ಶುಲ್ಕ ಮರುಪಾವತಿ:** ಪ್ರಾಥಮಿಕ/ಪ್ರೌಢ ಶಾಲೆಗಳಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕಾಗಿ 1 ರಿಂದ 8ನೇ ತರಗತಿವರೆಗೆ ತಗಲುವ ಬೋಧನಾ ಶುಲ್ಕವನ್ನು ಸರ್ಕಾರದಿಂದ ಭರಿಸಲಾಗುವುದು. (ಸರ್ಕಾರಿ ಶಾಲೆಗಳು ಇಲ್ಲದೇ ಇರುವ ಪ್ರದೇಶಗಳಲ್ಲಿ ಮಾತ್ರ)

2. **ವಿದ್ಯಾ ವಿಕಾಸ ಯೋಜನೆ :** ಪಠ್ಯ-ಪುಸ್ತಕ ಮತ್ತು ಸಮವಸ್ತ್ರ ವಿತರಣೆ – ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ಈ ಯೋಜನೆಗೆ ಒಳಪಡುತ್ತಾರೆ.

3. **ಮಧ್ಯಾಹ್ನದ ಬಿಸಿ ಊಟ ಮತ್ತು ಕ್ಷೀರ ಭಾಗ್ಯ ಯೋಜನೆ :** ಈ ಯೋಜನೆಯು ಸರ್ಕಾರಿ ಮತ್ತು ಅನುದಾನಿತ ಶಾಲೆಯ 1 ರಿಂದ 10ನೇ ತರಗತಿಯ ಮಕ್ಕಳಿಗೆ ಎಲ್ಲಾ ಕೆಲಸದ ದಿನಗಳಲ್ಲಿ ಮಧ್ಯಾಹ್ನದ ಬಿಸಿ ಊಟವನ್ನು ಹಾಗೂ ಕ್ಷೀರ ಭಾಗ್ಯ ಯೋಜನೆಯಡಿ ವಾರದಲ್ಲಿ ಐದು ದಿನಗಳವರೆಗೆ ವಿದ್ಯಾರ್ಥಿಗಳಿಗೆ ಹಾಲನ್ನು ಸಹ ನೀಡಲಾಗುವುದು.

4. **ವಿದ್ಯಾರ್ಥಿಗಳಿಗೆ ಶುಲ್ಕ ಮರುಪಾವತಿ :** ಈ ಯೋಜನೆಯಡಿಯಲ್ಲಿ ಸರ್ಕಾರಿ ಮತ್ತು ಸರ್ಕಾರೇತರ ಶಾಲೆಗಳಲ್ಲಿ 6 ರಿಂದ 10ನೇ ತರಗತಿಯಲ್ಲಿ ಓದುತ್ತಿರುವ ಎಸ್.ಸಿ/ಎಸ್.ಟಿ ಬಾಲಕರು ಮತ್ತು ಬಾಲಕಿಯರಿಗೆ ಶುಲ್ಕವನ್ನು (ಪರೀಕ್ಷಾ ಶುಲ್ಕ ಸೇರಿ) ಮರುಪಾವತಿಸಲಾಗುತ್ತದೆ.

5. **ಪದವಿ ಪೂರ್ವ ಶಿಕ್ಷಣ :** ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಓದುತ್ತಿರುವ ದ್ವಿತೀಯ ಪಿ.ಯು.ಸಿ ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ವಿಶ್ವಾಸ ಕಿರಣ ಕಾರ್ಯಕ್ರಮದಡಿ ಇಂಗ್ಲಿಷ್ ಗ್ರಾಮರ್/ ಸಂವಹನ ತರಗತಿಗಳನ್ನು ನಡೆಸುವುದು.

   ದ್ವಿತೀಯ ಪದವಿ ಪೂರ್ವ ವಾರ್ಷಿಕ ಪರೀಕ್ಷೆಯಲ್ಲಿ ಕಲಾ, ವಾಣಿಜ್ಯ ಮತ್ತು ವಿಜ್ಞಾನ ವಿಭಾಗದಲ್ಲಿ ಅತಿ ಹೆಚ್ಚಿನ ಅಂಕಗಳಿಸುವ ತಲಾ 5 ಎಸ್.ಸಿ/ಎಸ್.ಟಿ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

### ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

1. **ಭಾಗ್ಯಲಕ್ಷ್ಮಿ ಯೋಜನೆ :** ಭಾಗ್ಯಲಕ್ಷ್ಮಿ– ಸುಕನ್ಯಾ ಸಮೃದ್ಧಿ ಖಾತೆ ಯೋಜನೆಯಡಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕುಟುಂಬದ ಎರಡು ಹೆಣ್ಣು ಮಕ್ಕಳಿಗೆ ಸೀಮಿತಗೊಳಿಸಿ ವಾರ್ಷಿಕ ತಲಾ ರೂ.3,000/– ದಂತೆ 15 ವರ್ಷಗಳವರೆಗೆ ಪ್ರೀಮಿಯಂ ತುಂಬುವುದು. (ಮರುಪಾವತಿಯ ಮೊತ್ತ ರೂ.1.27 ಲಕ್ಷ).

2. **ಪ್ರಧಾನ ಮಂತ್ರಿ ಮಾತೃ ವಂದನಾ ಯೋಜನೆ :** ಗರ್ಭಿಣಿ /ಬಾಣಂತಿ ಮಹಿಳೆಯರಿಗೆ ರೂ.5000/– ಗಳ ಸಹಾಯಧನವನ್ನು ಮೂರು ಕಂತುಗಳಲ್ಲಿ ನೇರ ನಗದು ವರ್ಗಾವಣೆ ಮೂಲಕ ಫಲಾನುಭವಿಯ ಖಾತೆಗೆ ವರ್ಗಾಯಿಸಲಾಗುತ್ತದೆ

3. **ಸ್ತ್ರೀ ಶಕ್ತಿ ಯೋಜನೆ :**
   - ಅರ್ಹ ಸ್ತ್ರೀ ಶಕ್ತಿ ಗುಂಪಿಗೆ ಪ್ರತೀ ವರ್ಷ ರೂ.5,000/– ದಂತೆ 5 ವರ್ಷಗಳಿಗೆ ರೂ. 25,000/– ಸುತ್ತು ನಿಧಿ.
   - ಸ್ತ್ರೀ ಶಕ್ತಿ ಗುಂಪುಗಳಿಗೆ ಆದಾಯ ಹೆಚ್ಚಿಸುವ ಚಟುವಟಿಕೆಗಾಗಿ ಉಳಿತಾಯ ರೂ. 75,000/– ದಿಂದ 1.00 ಲಕ್ಷ ಇದ್ದಲ್ಲಿ ರೂ. 15,000/– ಪ್ರೋತ್ಸಾಹಧನ.
   - ರೂ. 1.00 ಲಕ್ಷಕ್ಕಿಂತ ಹೆಚ್ಚು ಉಳಿತಾಯ ಇದ್ದಲ್ಲಿ ರೂ. 20,000/– ಪ್ರೋತ್ಸಾಹಧನ.

4. **ಐ.ಸಿ.ಡಿ.ಎಸ್.– ರಾಷ್ಟ್ರೀಯ ಪೌಷ್ಟಿಕ ಆಹಾರ ಯೋಜನೆ**
   - 6 ತಿಂಗಳಿಂದ 6 ವರ್ಷದ ಮಕ್ಕಳಿಗೆ ಸಾಮಾನ್ಯ ಮಕ್ಕಳು: ಪ್ರತಿ ಮಗುವಿಗೆ ದಿನಕ್ಕೆ ರೂ.8.00 ಘಟಕ ವೆಚ್ಚದಲ್ಲಿ 300 ದಿನ ಪೌಷ್ಟಿಕ ಆಹಾರ.
   - ಗರ್ಭಿಣಿ/ಬಾಣಂತಿ/ಅಂಗನವಾಡಿ ಕಾರ್ಯಕರ್ತೆ/ ಅಂಗನವಾಡಿ ಸಹಾಯಕಿಯರು – ಪ್ರತಿ ಫಲಾನುಭವಿಗೆ ರೂ.9.50 ರಂತೆ 300 ದಿನಗಳಿಗೆ ಪೌಷ್ಟಿಕ ಆಹಾರ
   - 6 ತಿಂಗಳಿಂದ 6 ವರ್ಷದ ತೀವ್ರ ಅಪೌಷ್ಟಿಕ ಮಕ್ಕಳು – ಪ್ರತಿ ಫಲಾನುಭವಿಗೆ ರೂ.12 ರಂತೆ 300 ದಿನಗಳಿಗೆ

- 6 ತಿಂಗಳಿಂದ ರಿಂದ 3 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳು/6 ಜಿಲ್ಲೆಗಳ (ರಾಯಚೂರು, ಬೀದರ್, ಕಲಬುರಗಿ, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ) ಸಾಧಾರಣ ಅಪೌಷ್ಠಿಕ ಮಕ್ಕಳು : ಪ್ರತಿ ಮಗುವಿಗೆ ವಾರದಲ್ಲಿ 5 ದಿನ ಹಾಲು ಮತ್ತು 3 ದಿನ ಮೊಟ್ಟೆ ವಿತರಣೆ (150 ದಿನ)
- 3 ವರ್ಷದಿಂದ 6 ವರ್ಷದ ತೀವ್ರ/6 ಜಿಲ್ಲೆಗಳ (ರಾಯಚೂರು, ಬೀದರ್, ಕಲಬುರಗಿ, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ) ಸಾಧಾರಣ ಅಪೌಷ್ಠಿಕ ಮಕ್ಕಳು: ಪ್ರತಿ ಮಗುವಿಗೆ ವಾರದಲ್ಲಿ 5 ದಿನ ಮೊಟ್ಟೆ ಮತ್ತು 5 ದಿನ ಹಾಲು ವಿತರಣೆ (250 ದಿನ)
- 6 ತಿಂಗಳಿಂದ 6 ವರ್ಷದ ಎಲ್ಲಾ ಪ.ಜಾತಿ/ಪ.ಪಂಗಡದ ಮಕ್ಕಳಿಗೆ ವಾರದಲ್ಲಿ 5 ದಿನ ಹಾಲು (250 ದಿನ)
- 3 ವರ್ಷಗಳಿಂದ 6 ವರ್ಷದ ಎಲ್ಲಾ ಪ.ಜಾತಿ/ಪ.ಪಂಗಡದ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆ (100 ದಿನ)
- ಮಾತೃ ಪೂರ್ಣ ಯೋಜನೆಯಡಿ ಗರ್ಭಿಣಿ/ಬಾಣಂತಿ/ ಅಂಗನವಾಡಿ ಕಾರ್ಯಕರ್ತೆ/ ಅಂಗನವಾಡಿ ಸಹಾಯಕಿಯರು:
- ರಾಜ್ಯ ಸರ್ಕಾರದ ಹೆಚ್ಚುವರಿ ಅನುದಾನ – ಪ್ರತಿ ಫಲಾನುಭವಿಗೆ ರೂ.11.50 ರಂತೆ 300 ದಿನಗಳಿಗೆ.

## ಮಹಿಳಾ ಅಭಿವೃದ್ಧಿ ನಿಗಮ :

**1. ಚೇತನ (ಲೈಂಗಿಕ ಕಾರ್ಯಕರ್ತೆಯರಿಗೆ ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮ) :**

- ವಯೋಮಿತಿ – 18 ವರ್ಷ.
- ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅನುಮೋದಿತ ಯಾವುದಾದರೂ ಸಮುದಾಯ ಸಂಸ್ಥೆಗಳಲ್ಲಿ ಅರ್ಜಿದಾರರು ಹೆಸರನ್ನು ನೋಂದಾಯಿಸಿರಬೇಕು.
- ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು.
- ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು.
- ಸಹಾಯಧನದ ಮೊತ್ತ – ರೂ 30,000/–

**2. ದೇವದಾಸಿಯರಿಗೆ ಆರ್ಥಿಕ ಚಟುವಟಿಕೆಗಳಿಗೆ ಸಹಾಯಧನ:**

- 1993–94 ಮತ್ತು 2007–08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು.
- ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು.
- ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು
- ಸಹಾಯಧನದ ಮೊತ್ತ – ರೂ. 30,000/–

**3. ಉದ್ಯಮಶೀಲತಾ ತರಬೇತಿ ಕಾರ್ಯಕ್ರಮ :**

- ವಯೋಮಿತಿ – 18 ರಿಂದ 45 ವರ್ಷ.
- ಆರ್ಥಿಕವಾಗಿ ಹಿಂದುಳಿದ, ವಿಧವೆ, ನಿರಾಶ್ರಿತ, ವಿಕಲ ಚೇತನ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಉದ್ಯಮಶೀಲತಾ ತರಬೇತಿ ನೀಡಲಾಗುವುದು.
- ಕೌಶಲ್ಯಾಭಿವೃದ್ಧಿ ತರಬೇತಿ ಇಲಾಖೆಯಿಂದ ಮಾನ್ಯತೆ ಹೊಂದಿರುವ ತರಬೇತಿ ಸಂಸ್ಥೆಗಳ ಮೂಲಕ ತರಬೇತಿ ನೀಡಲಾಗುವುದು.

**4. ಉದ್ಯೋಗಿನಿ :**

- ವಯೋಮಿತಿ – 18 ರಿಂದ 55 ವರ್ಷ
- ವಾರ್ಷಿಕ ಆದಾಯ ಮಿತಿ – ರೂ 2.00 ಲಕ್ಷ
- ರಾಷ್ಟ್ರೀಕೃತ / ಸಹಕಾರಿ ಬ್ಯಾಂಕುಗಳಲ್ಲಿ ಖಾತೆಯನ್ನು ಹೊಂದಿರಬೇಕು
- ಶಾಸಕರ ಅಧ್ಯಕ್ಷತೆಯ ಆಯ್ಕೆ ಸಮಿತಿಯಲ್ಲಿ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು

- ಸಹಾಯಧನ ಮತ್ತು ಸಾಲ ಬಿಡುಗಡೆಯ ಪೂರ್ವದಲ್ಲಿ ಉದ್ಯಮಶೀಲತಾ ತರಬೇತಿಯನ್ನು ಪಡೆದಿರಬೇಕು
- ನಿಗಮದಿಂದ 50% ಸಹಾಯಧನ ಮತ್ತು ಬ್ಯಾಂಕ್‌ಗಳ ಮೂಲಕ 50% ಸಾಲ

5. ದೇವದಾಸಿಯರಿಗೆ ವಸತಿ ಸೌಲಭ್ಯ :
   - ವಯೋಮಿತಿ – 45 ಮತ್ತು 45ಕ್ಕಿಂತ ಹೆಚ್ಚು
   - ~~1993–94 ಮತ್ತು 2007–08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು~~
   - ನಿವೇಶನ ಹೊಂದಿರುವ ವಸತಿ ರಹಿತ ದೇವದಾಸಿಯರಿಗೆ ರಾಜೀವ್ ಗಾಂಧಿ ವಸತಿ ನಿಗಮದ ಮೂಲಕ ವಸತಿ ಸೌಲಭ್ಯ ಒದಗಿಸಲಾಗುತ್ತದೆ.
   - ಘಟಕ ಸಹಾಯಧನ ಗ್ರಾಮೀಣ ಪ್ರದೇಶದಲ್ಲಿ ರೂ.1.75 ಲಕ್ಷ ಮತ್ತು ನಗರ ಪ್ರದೇಶದಲ್ಲಿ ರೂ.2.00 ಲಕ್ಷ.

6. **ಸ್ವಸಹಾಯ ಸಂಘಗಳಿಗೆ ಕಿರು ಸಾಲ ಯೋಜನೆ**
   - ಸ್ತ್ರೀ ಶಕ್ತಿ / ಸ್ವಸಹಾಯ ಗುಂಪುಗಳು ಸಣ್ಣ ಉದ್ದಿಮೆ ಅಥವಾ ಉತ್ಪಾದನಾ ಘಟಕಗಳನ್ನು ಸ್ಥಾಪಿಸಿ ಆರ್ಥಿಕ ಮತ್ತು ಸಾಮಾಜಿಕ ಸುಧಾರಣೆ ಹೊಂದಲು ಬಡ್ಡಿರಹಿತ ಸಾಲ.
   - ಸಾಲದ ಮೊತ್ತ ರೂ.1.00 ಲಕ್ಷ ರಿಂದ ರೂ.3.00 ಲಕ್ಷವನ್ನು ಒದಗಿಸಲಾಗುವುದು.

## ವಿಕಲಚೇತನರ ಕಲ್ಯಾಣ ಇಲಾಖೆ

1. **ದೈಹಿಕ ಮತ್ತು ಮಾನಸಿಕವಾಗಿ ಸವಾಲಿಗೊಳಗಾದವರ ಕಲ್ಯಾಣ**
   ಆಧಾರ ಯೋಜನೆ, ವಿವಾಹ ಪ್ರೋತ್ಸಾಹಧನ ಯೋಜನೆ, ನಿರಾಮಯ, ಶುಲ್ಕ ಮರುಪಾವತಿ, ವೈದ್ಯಕೀಯ ಪರಿಹಾರ ನಿಧಿ ಯೋಜನೆ, ಪ್ರತಿಭೆ, ಶಿಶು ಪಾಲನಾ ಭತ್ಯೆ ಯೋಜನೆಗಳಡಿ ಧನಸಹಾಯ ಮಾಡುವುದು.

2. **ವಿಕಲಚೇತನರಿಗೆ ಸಾಧನ ಮತ್ತು ಸಲಕರಣೆಗಳು**
   ವಿಕಲಚೇತನರಿಗೆ ಸಾಧನ ಸಲಕರಣೆ, ಎಸ್.ಎಸ್.ಎಲ್.ಸಿ ಹಾಗೂ ನಂತರ ವ್ಯಾಸಂಗ ಮಾಡುತ್ತಿರುವ ಅಂಧ ವಿದ್ಯಾರ್ಥಿಗಳಿಗೆ ಟಾಕಿಂಗ್ ಲ್ಯಾಪ್‌ಟಾಪ್ ಹಾಗೂ ತೀವ್ರತೆರನಾದ ದೈಹಿಕ ವಿಕಲಚೇತನರಿಗೆ ಯಂತ್ರಚಾಲಿತ ದ್ವಿಚಕ್ರ ವಾಹನ ನೀಡುವುದು.

3. **ಹಿರಿಯ ನಾಗರಿಕರ ನೀತಿ**
   ಪ.ಜಾತಿ / ಪ.ಪಂಗಡದ ಹಿರಿಯ ನಾಗರಿಕರ ಸಹಾಯವಾಣಿ ಹಾಗೂ ಹಗಲು ಯೋಗಕ್ಷೇಮ ಕೇಂದ್ರಗಳ ಅನುಷ್ಠಾನ.

4. **ವಿಶೇಷ ಶಾಲೆಗಳಿಗೆ ಆರ್ಥಿಕ ನೆರವು**
   ಪ.ಜಾತಿ/ಪ.ಪಂಗಡದ ವಿಕಲಚೇತನರ ಮಕ್ಕಳಿಗೆ ವಿಶೇಷ ಶಾಲೆ ನಡೆಸುವ ಸ್ವಯಂ ಸೇವಾ ಸಂಸ್ಥೆಗಳಿಗೆ ಸಹಾಯಧನ.

## ಕೌಶಲ್ಯಾಭಿವೃದ್ಧಿ ಇಲಾಖೆ

**1) ಕೌಶಲ್ಯಾಭಿವೃದ್ಧಿ ಮಿಷನ್ :**
ಮುಖ್ಯಮಂತ್ರಿ ಕೌಶಲ್ಯ ಕರ್ನಾಟಕ ಯೋಜನೆಯಡಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ನಿರುದ್ಯೋಗಿಗಳಿಗೆ ಉಚಿತವಾಗಿ ಕೌಶಲ್ಯ ಅಭಿವೃದ್ಧಿ ತರಬೇತಿ ನೀಡಲಾಗುವುದು.

**2) ಐ.ಟಿ.ಐ ವಿದ್ಯಾರ್ಥಿಗಳಿಗೆ ಟೂಲ್‌ಕಿಟ್ ವಿತರಣೆ :**
ಐ.ಟಿ.ಐ ಗಳಲ್ಲಿ ವ್ಯಾಸಂಗ ಮಾಡುತ್ತಿರುವ ಪ.ಜಾತಿ/ ಪ.ಪಂಗಡದ ವಿದ್ಯಾರ್ಥಿಗಳಿಗೆ ಟೂಲ್‌ಕಿಟ್, ಲೇಖನ ಸಾಮಗ್ರಿ ವಿತರಣೆ.

**3) ಇ.ಡಿ.ಪಿ ತರಬೇತಿ :**
ಪ.ಜಾತಿ/ ಪ.ಪಂಗಡದ ಅಭ್ಯರ್ಥಿಗಳಿಗೆ ಉದ್ಯಮಶೀಲತಾ ತರಬೇತಿ ನೀಡಲಾಗುತ್ತದೆ. (ಇ.ಡಿ.ಪಿ)

ಅರ್ಹತೆಗಳು :

18 ರಿಂದ 35 ವಯೋಮಿತಿಯ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ನಿರುದ್ಯೋಗಿಗಳು ಆನ್‌ಲೈನ್ ಮುಖಾಂತರ ಸದರಿ ಇಲಾಖೆಯ ಅಧಿಸೂಚನೆಯಂತೆ ಅರ್ಜಿ ಸಲ್ಲಿಸಿ ವಿವಿಧ ತರಬೇತಿ ಕಾರ್ಯಕ್ರಮಗಳಲ್ಲಿ ತರಬೇತಿ ಪಡೆಯಬಹುದು.

4) ರಾಷ್ಟ್ರೀಯ ನಗರ ಜೀವನೋಪಾಯ ಅಭಿಯಾನ

- ನಗರ ಪ್ರದೇಶಗಳಲ್ಲಿ ಪ.ಜಾತಿ/ಪ.ಪಂಗಡದ ಅಭ್ಯರ್ಥಿಗಳಿಗೆ
- Social Mobilization & Institution Development (SM&ID),
- Employment through Skill Training and Placement (EST&P),
- Capacity Building and Training (CB&T)
- Scheme of shelter for Urban Homeless (SUH)
- Support to Urban Street Vendors (SUSV)
- Self Employment Programme(SEP, )
- Information, Education and Communication (IEC) ರಡಿ ಸ್ವ-ಸಹಾಯ ಯೋಜನೆಯನ್ನು ರೂಪಿಸಿ ಅನುಷ್ಠಾನ ಮಾಡಲಾಗುವುದು.
- ಸಾಲದ ಮೊತ್ತ – ಬ್ಯಾಂಕ್‌ಗಳಿಂದ ಪ್ರತಿ ಸ್ವಸಹಾಯ ಸಂಘಕ್ಕೆ ರೂ.1.00 ಲಕ್ಷದವರೆಗೆ ಸಾಲ ಪಡೆಯಲು ಅವಕಾಶವಿದೆ.
- ಬಡ್ಡಿ ಸಹಾಯಧನ – ಸ್ವಸಹಾಯ ಗುಂಪುಗಳು ಬಡ್ಡಿದರದಲ್ಲಿ 7% ವರೆಗೆ ಭರಿಸಬೇಕಾಗಿದೆ. 7% ಕ್ಕಿಂತ ಮೇಲ್ಪಟ್ಟ ಬಡ್ಡಿದರದ ಮೊತ್ತಕ್ಕೆ ಸಹಾಯಧನ ನೀಡಲಾಗುವುದು. ನಿಯಮಿತವಾಗಿ ಸಾಲವನ್ನು ಮರುಪಾವತಿಸುವ ಸ್ವಸಹಾಯ ಸಂಘಗಳಿಗೆ 3% ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನವನ್ನು ನೀಡಲಾಗುವುದು.
- ಸುತ್ತು ನಿಧಿ – ಪ್ರತಿ ಸ್ವಸಹಾಯ ಸಂಘಕ್ಕೆ ರಚನೆಯಾದ 3 ತಿಂಗಳ ನಂತರ ರೂ.10,000/- ಆವರ್ತಕ ನಿಧಿಯನ್ನು ನೀಡಲಾಗುತ್ತಿದೆ.
- ಸಂಘಗಳು ಬ್ಯಾಂಕಿನಿಂದ ಸಾಲ ಸೌಲಭ್ಯ ಈ ಕೆಳಕಂಡಂತಿದೆ.
  - ➢ ವೈಯಕ್ತಿಕ ಕಿರು ಉದ್ದಿಮೆ – ರೂ. 2.00 ಲಕ್ಷದವರೆಗೆ
  - ➢ ಗುಂಪು ಕಿರು ಉದ್ದಿಮೆ – ರೂ. 10.00 ಲಕ್ಷದವರೆಗೆ
  - ➢ ಬಡ್ಡಿ ಸಹಾಯಧನ – ಸ್ವಸಹಾಯ ಗುಂಪುಗಳು ಬಡ್ಡಿದರದಲ್ಲಿ 7% ವರೆಗೆ ಭರಿಸಬೇಕಾಗಿದೆ. 7% ಕ್ಕಿಂತ ಮೇಲ್ಪಟ್ಟ ಬಡ್ಡಿದರದ ಮೊತ್ತಕ್ಕೆ ಸಹಾಯಧನ ನೀಡಲಾಗುವುದು. ನಿಯಮಿತವಾಗಿ ಸಾಲವನ್ನು ಮರುಪಾವತಿಸುವ ಸ್ವಸಹಾಯ ಸಂಘಗಳಿಗೆ 3% ರಷ್ಟು ಹೆಚ್ಚುವರಿ ಬಡ್ಡಿ ಸಹಾಯಧನವನ್ನು ನೀಡಲಾಗುವುದು.

5) ರಾಷ್ಟ್ರೀಯ ಗ್ರಾಮೀಣ ಜೀವನೋಪಾಯ ಅಭಿಯಾನ:

- ಗ್ರಾಮೀಣ ಭಾಗದ ಸ್ವಸಹಾಯ ಗುಂಪುಗಳಿಗೆ ಕಮ್ಯುನಿಟಿ ಇನ್‌ವೆಸ್ಟ್‌ಮೆಂಟ್ ಫಂಡ್ ಹಾಗೂ ರಿವಾಲ್‌ವಿಂಗ್ ಫಂಡ್ ಒದಗಿಸುವುದು.
- ಸ್ವಸಹಾಯ ಗುಂಪುಗಳಿಗೆ ರೂ.1.25 ಲಕ್ಷ ಸಾಲ, ರೂ.15000/- ಸಹಾಯಧನ, ರೂ. 15000/- ಸುತ್ತು ನಿಧಿಯನ್ನು ಒದಗಿಸಲಾಗುತ್ತದೆ.

## ಕೈಮಗ್ಗ ಮತ್ತು ಜವಳಿ ಇಲಾಖೆ

1) ನೇಕಾರರ ಪ್ಯಾಕೇಜ್

ಅ) ಕೈಮಗ್ಗ /ವಿದ್ಯುತ್ ಮಗ್ಗ ಮತ್ತು ಎಲೆಕ್ಟ್ರಾನಿಕ್ ಜಕಾರ್ಡ್‌ಗಳ ಖರೀದಿಗೆ ಸಹಾಯಧನ :

- ಕೈಮಗ್ಗ /ವಿದ್ಯುತ್ ಮಗ್ಗದ ತರಬೇತಿ ಹೊಂದಿದವರು / ಸಾಂಪ್ರದಾಯಿಕ ನೇಕಾರರಾಗಿರಬೇಕು
- ವೈಯಕ್ತಿಕ ಫಲಾನುಭವಿಗಳಿಗೆ ಸಹಾಯಧನ ಸೌಲಭ್ಯ ಒದಗಿಸಲಾಗುವುದು.
- ಮಗ್ಗಗಳನ್ನು ಸ್ಥಾಪಿಸಲು ಸ್ಥಳಾವಕಾಶ ಹೊಂದಿರಬೇಕು.
- ಸಹಾಯಧನದ ಮೊತ್ತ.

| | |
|---|---|
| ಕೈಮಗ್ಗಗಳಿಗೆ | – 90% ಅಥವಾ ಗರಿಷ್ಟ ರೂ 27,000/– ಸಹಾಯಧನ |
| ವಿದ್ಯುತ್ ಮಗ್ಗಗಳಿಗೆ (2 ಮಗ್ಗಗಳಿಗೆ ಮಾತ್ರ) | – 90% ಅಥವಾ ಗರಿಷ್ಟ ರೂ 2,70,000/– ಸಹಾಯಧನ |
| ಎಲೆಕ್ಟ್ರಾನಿಕ್ ಜಕಾರ್ಡ್‌ಗಳಿಗೆ | – 90% ಅಥವಾ ಗರಿಷ್ಟ ರೂ 4,05,000/– ಸಹಾಯಧನ |

ಆ) **ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನೇಕಾರರ ಸಂಘಗಳಿಗೆ ಮಗ್ಗ ಪೂರ್ವ ಸೌಲಭ್ಯ** : ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ನೇಕಾರರ ಸಂಘಗಳಿಗೆ ಮಗ್ಗಗಳ ಸ್ಥಾಪನೆಗೆ ಬೇಕಾದ ವೈಂಡಿಂಗ್, ವಾರ್ಪಿಂಗ್, ಟ್ವಿಸ್ಟಿಂಗ್ ಮತ್ತು ಡೈಯಿಂಗ್ ಉಪಕರಣಗಳ ಖರೀದಿಗೆ ಗರಿಷ್ಟ ರೂ.6,00,000/– ಸಹಾಯಧನ ನೀಡಲಾಗುವುದು.

**2) ಸಣ್ಣ ಮತ್ತು ಅತೀ ಸಣ್ಣ ಜವಳಿ ಘಟಕಗಳ ಸ್ಥಾಪನೆಗೆ ಸಹಾಯಧನ.**

- ಬಂಡವಾಳ ಸಹಾಯಧನ – 75%
- ಬಡ್ಡಿ ಸಹಾಯಧನ – 15%
- ಎಸ್.ಎಂ.ಇ ಜವಳಿ/ಸಿದ್ಧ ಉಡುಪು ಘಟಕಗಳಿಗೆ ಬಂಡವಾಳ (ಸ್ಥಿರಾಸ್ಥಿ) ಹೂಡಿಕೆ ಮೊತ್ತದಲ್ಲಿ (ನಿವೇಶನ ವೆಚ್ಚ ಹೊರತುಪಡಿಸಿ) 75% ರಂತೆ ಬಂಡವಾಳ ಸಹಾಯಧನ ಅಥವಾ ಗರಿಷ್ಠ ರೂ.2.00 ಕೋಟಿವರೆಗೆ ಯಾವುದು ಕಡಿಮೆ ಅದನ್ನು ನೀಡುವುದು.
- ಕೆ.ಎಸ್.ಎಫ್.ಸಿ. ಮತ್ತು ಬ್ಯಾಂಕ್‌ಗಳಿಂದ 4% ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಸಾಲ ಪಡೆದ ಘಟಕಗಳಿಗೆ ಕೈಮಗ್ಗ ಮತ್ತು ಜವಳಿ ಇಲಾಖೆಯಿಂದ ಬಡ್ಡಿ ಸಹಾಯಧನ ನೀಡತಕ್ಕದ್ದಲ್ಲ. ಇತರೆ ಪ್ರಕರಣಗಳಲ್ಲಿ ಬಡ್ಡಿ ಸಹಾಯಧನ ನೀಡಬಹುದು.

**3) ತರಬೇತಿ ಕಾರ್ಯಕ್ರಮಗಳು**

| ವಿವರ | **ಅಡ್ವಾನ್ಸ್‌ಡ್ ಸೀವಿಂಗ್ ಮೆಷಿನ್ ಆಪರೇಟರ್ ತರಬೇತಿ / ಕೈಮಗ್ಗ ಮತ್ತು ವಿದ್ಯುತ್ ತರಬೇತಿಗಳ ನೇಯ್ಗೆ ತರಬೇತಿ** | **ಬೊಟಿಕ್ ತರಬೇತಿ** |
|---|---|---|
| ವಿದ್ಯಾರ್ಹತೆ | 5ನೇ ತರಗತಿ ಉತ್ತೀರ್ಣ | 10ನೇ ತರಗತಿ ಉತ್ತೀರ್ಣ |
| **ವಯೋಮಿತಿ** | 18 ರಿಂದ 35 ವರ್ಷ | 18 ರಿಂದ 35 ವರ್ಷ |
| **ತರಬೇತಿ ಅವಧಿ** | 45 ದಿನ | 45 ದಿನಗಳು |
| **ಶಿಷ್ಯ ವೇತನ** | ರೂ 3,500/– | ರೂ 3,500/– |
| **ಕಚ್ಚಾ ಮಾಲು ವೆಚ್ಚ** | ರೂ 1,000/– | ರೂ. 4,500/– |
| **ಸಂಸ್ಥೆಯ ನಿರ್ವಹಣೆ ವೆಚ್ಚ** | ರೂ 5,000/– (ಎಸ್‌ಡಿಸಿ) ರೂ 6,500/– ಖಾಸಗಿ | ರೂ. 7,500/– (ಎಸ್‌ಡಿಸಿ) |
| **ಒಟ್ಟು ಒಬ್ಬ ಅಭ್ಯರ್ಥಿಗೆ ತಗಲುವ ವೆಚ್ಚ** | ರೂ 9500/– (ಎಸ್‌ಡಿಸಿ) ರೂ 11,000/– ಖಾಸಗಿ | ರೂ.15,500/– |

# ಸಣ್ಣ ಕೈಗಾರಿಕೆ ಇಲಾಖೆ

**1. ಕೈಗಾರಿಕಾ ನಿವೇಶನಗಳು ಮತ್ತು ಶೆಡ್‌ಗಳಿಗೆ 75% ಸಹಾಯಧನ**

ಕೆ.ಐ.ಎ.ಡಿ.ಬಿ ಮತ್ತು ಕೆ.ಎಸ್.ಎಸ್.ಐ.ಡಿ.ಸಿ ಯಿಂದ ಹಂಚಿಕೆ ಮಾಡುವ ಕೈಗಾರಿಕಾ ನಿವೇಶನ ಮತ್ತು ಶೆಡ್‌ಗಳಿಗೆ ಶೇ.75 ರಷ್ಟು ಸಹಾಯಧನ ನೀಡಲಾಗುತ್ತದೆ.

ಷರತ್ತುಗಳು:

- ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆಯಾಗುವ ಕೈಗಾರಿಕಾ ನಿವೇಶನಗಳನ್ನು ಮೂಲಭೂತ ಸೌಕರ್ಯ ಕಲ್ಪಿಸಿ ಪೂರ್ಣ ಪ್ರಮಾಣದಲ್ಲಿ ಉದ್ದಿಮೆ ಸ್ಥಾಪನೆಗೆ ಗರಿಷ್ಟ 3 ವರ್ಷಗಳ ಕಾಲಾವಕಾಶ ನೀಡುವುದು.
- ಉದ್ದಿಮೆಯ ಎಲ್ಲಾ ಸ್ಥಾಪಕರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು.
- ಹಂಚಿಕೆ ಪತ್ರದಲ್ಲಿನ ಮೊತ್ತದ ಶೇ.10ರಷ್ಟು ಮೊತ್ತವನ್ನು ಮಾತ್ರ ಪಾವತಿಸಿದ ನಂತರ ನಿವೇಶನವನ್ನು ಫಲಾನುಭವಿಗೆ ಸ್ವಾಧೀನ ಪತ್ರದ ಮೂಲಕ ನೀಡಿ ಉಳಿದ ಶೇ. 15 ರಷ್ಟು ಮೊತ್ತವನ್ನು ಸ್ವಾಧೀನ ಪತ್ರ ವಿತರಿಸಿದ ದಿನಾಂಕದಿಂದ 08 ತ್ರೈಮಾಸಿಕ ಸಮ ಕಂತುಗಳಲ್ಲಿ ನಿಗಮ ಹಾಗೂ ಮಂಡಳಿಯ ಫಲಾನುಭವಿಯಿಂದ ವಸೂಲಾತಿ ಮಾಡಿಕೊಳ್ಳತಕ್ಕದ್ದು.
- ಕೈಗಾರಿಕಾ ನಿವೇಶನವನ್ನು 10 ವರ್ಷಗಳ ಅವಧಿಗೆ ಲೀಸ್ ಕಂ ಸೇಲ್ ಆಧಾರದ ಮೇಲೆ ಹಂಚಿಕೆ ಮಾಡಲಾಗುತ್ತಿದೆ. ಈ ಅವಧಿಯಲ್ಲಿ ಮಾರಾಟ ಮಾಡಲು ಅವಕಾಶವಿಲ್ಲ.
- ಒಬ್ಬ ಉದ್ದಿಮೆದಾರರಿಗೆ/ಸಂಸ್ಥೆಗೆ ಗರಿಷ್ಟ 2 ಎಕರೆ ಕೈಗಾರಿಕಾ ನಿವೇಶನಕ್ಕೆ ಶೇ.75 ರಂತೆ ರಿಯಾಯಿತಿ ದರದಲ್ಲಿ ಹಂಚಿಕೆ ಮಾಡುವುದು. ಒಬ್ಬರೇ ಉದ್ಯಮಿಯು ಹಲವು ಕಂಪನಿಗಳಿಗೆ ಪ್ರವರ್ತಕರಾಗಿದ್ದಲ್ಲಿ, ಒಮ್ಮೆ ಮಾತ್ರ ಈ ಸೌಲಭ್ಯ ನೀಡುವುದು.
- ಎಲ್ಲಾ ಉದ್ದಿಮೆದಾರರು ಒಂದು ಬಾರಿ ಮಾತ್ರ ಸಹಾಯಧನ ಪಡೆಯಲು ಅರ್ಹರಿರುತ್ತಾರೆ.
- ಬಂಡವಾಳ ಸಹಾಯಧನವನ್ನು ಮತ್ತು ಇತರೆ ಸೌಲಭ್ಯಗಳನ್ನು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಇಂಡಸ್ಟ್ರಿಯಲ್ ಪಾಲಿಸಿ 2020-25 ರಂತೆ ಸೌಲಭ್ಯ ಪಡೆಯಲು ಅರ್ಹರಿರುತ್ತಾರೆ.

**2. ಸಣ್ಣ ಮತ್ತು ಅತಿಸಣ್ಣ ಕೈಗಾರಿಕಾ ಘಟಕಗಳಿಗೆ ಶೇ.60 ರಂತೆ ಗರಿಷ್ಟ ರೂ.5.00 ಲಕ್ಷ ಸಹಾಯಧನ (ಜಿಲ್ಲಾ ಕೈಗಾರಿಕಾ ಕೇಂದ್ರಗಳಿಂದ)**

- ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ಕನಿಷ್ಠ ವಯೋಮಿತಿ 18 ವರ್ಷ
- ಯೋಜನಾ ವೆಚ್ಚ ರೂ 10 ಲಕ್ಷಕ್ಕಿಂತ ಕಡಿಮೆ ಇರಬೇಕು
- ಯಾವುದೇ ಹಣಕಾಸು ಸಂಸ್ಥೆಯಲ್ಲಿ ಸುಸ್ತಿದಾರ ಆಗಿರಕೂಡದು.

**3. ವೃತ್ತಿ ಪರ ಕುಶಲಕರ್ಮಿಗಳಿಗೆ ಟೂಲ್ ಕಿಟ್ ವಿತರಣೆ**

- ವೃತ್ತಿಪರ ಕುಶಲಕರ್ಮಿಗಳಾಗಿರಬೇಕು
- ರೂ.5000/- ವೆಚ್ಚದಲ್ಲಿ ಟೂಲ್ ಕಿಟ್ ವಿತರಿಸಲಾಗುವುದು.

**4. ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಶುಲ್ಕದಲ್ಲಿ ಸಹಾಯಧನ**

- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರ ಮಾಲೀಕತ್ವಕ್ಕೆ ಒಳಪಟ್ಟ ಉದ್ದಿಮೆಗಳಾಗಿರಬೇಕು
- ಪ್ರತಿ ಯೂನಿಟ್‌ಗೆ ರೂ.2 ರಂತೆ 5 ವರ್ಷಗಳ ಕಾಲ ಸಹಾಯಧನ ನೀಡಲಾಗುವುದು.
- ದಿನಾಂಕ:01.04.2017ರ ನಂತರ ಪ್ರಾರಂಭಗೊಂಡ ಘಟಕಗಳು ಸಹಾಯಧನ ಪಡೆಯಲು ಅರ್ಹತೆ ಹೊಂದಿರುತ್ತವೆ.

**5. ಸಾಫ್ಟ್ ಸೀಡ್ ಕ್ಯಾಪಿಟಲ್ (ಬೀಜ ಧನ)**

- ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
- ಪ್ರಥಮ ಪೀಳಿಗೆಯ ಉದ್ಯಮಿಯಾಗಿರಬೇಕು
- ಯೋಜನಾ ವೆಚ್ಚವು ರೂ.2.00 ಕೋಟಿಯ ಒಳಗಿರಬೇಕು

- 50% ಅಥವಾ ಗರಿಷ್ಠ ರೂ.75.00 ಲಕ್ಷ ಬಡ್ಡಿ ರಹಿತ ಬಂಡವಾಳ ಸಾಲವನ್ನು ನೀಡಲಾಗುವುದು.

6. **ಖಾದಿ ಚರಕಗಳ ವಿತರಣೆ**
   - ಫಲಾನುಭವಿಗಳು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿರಬೇಕು.
   - ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಿಂದ ಗುರುತಿಸಲ್ಪಟ್ಟ ಖಾದಿ ಕೆಲಸಗಾರರಾಗಿರಬೇಕು.
   - ರೂ 13,000/- ವೆಚ್ಚದಲ್ಲಿ ಖಾದಿ ಚರಕವನ್ನು ನೀಡಲಾಗುವುದು

---

7. **ಖಾಸಗಿ ಕೈಗಾರಿಕಾ ಎಸ್ಟೇಟ್‌ಗಳ ಸ್ಥಾಪನೆಗೆ ನೆರವು**
   - ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಸಂಘ-ಸಂಸ್ಥೆ/ಟ್ರಸ್ಟ್‌ಗಳಿಗೆ ಖಾಸಗಿ ಕೈಗಾರಿಕಾ ಎಸ್ಟೇಟ್‌ಗಳ ಸ್ಥಾಪನೆಗೆ 50% ಗರಿಷ್ಠ ರೂ 5 ಕೋಟಿ ಧನಸಹಾಯ ನೀಡಲಾಗುವುದು.
   - ಕನಿಷ್ಠ 10 ಎಕರೆ ಪ್ರದೇಶದ ಕೈಗಾರಿಕಾ ಎಸ್ಟೇಟ್‌ಗಳನ್ನು ಸ್ಥಾಪಿಸಬೇಕು.

8. **ಹಣಕಾಸು ಸಂಸ್ಥೆಗಳಿಂದ ಪಡೆದಿರುವ ಸಾಲದ ಪ್ರೋಸೆಸಿಂಗ್ ಶುಲ್ಕದ ಮರುಪಾವತಿ**

ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕಾ ಘಟಕಗಳ ಸ್ಥಾಪನೆಗೆ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರು ಕೆಎಸ್‌ಎಫ್‌ಸಿ ಮತ್ತು ಬ್ಯಾಂಕ್ ಗಳ ಮೂಲಕ ಪಡೆದಿರುವ ಸಾಲದ ಪ್ರೋಸೆಸಿಂಗ್ ಶುಲ್ಕ, ಲೀಗಲ್ ಶುಲ್ಕ, ಸಾಲ ವಿತರಣಾ ಶುಲ್ಕವನ್ನು ಮರುಪಾವತಿಸಲಾಗುವುದು.

9. **ವಸತಿ ಕಾರ್ಯಾಗಾರ ಯೋಜನೆ**

- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ ಕುಶಲಕರ್ಮಿಗಳಾಗಿರಬೇಕು
- ಕನಿಷ್ಠ 399 ಚ.ಅಡಿಯ ಮನೆ/ಕಾರ್ಯಾಗಾರವನ್ನು ನಿರ್ಮಿಸಬೇಕು
- ಘಟಕ ಸಹಾಯಧನ – ರೂ 2,50,000/-
- ಫಲಾನುಭವಿಯ ವಂತಿಕೆ – ರೂ 25,000/-

10. **ಕೌಶಲ್ಯ ತರಬೇತಿ ಕೇಂದ್ರಗಳ ಸ್ಥಾಪನೆಗೆ ಧನಸಹಾಯ**

**ಷರತ್ತುಗಳು**

- ಸೌಲಭ್ಯ ಪಡೆಯುವ ಕೈಗಾರಿಕಾ ಸಂಘ-ಸಂಸ್ಥೆಗಳು/ಟ್ರಸ್ಟ್‌ಗಳಲ್ಲಿ 51% ಅಥವಾ ಅದಕ್ಕಿಂತ ಹೆಚ್ಚಿನ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಸದಸ್ಯರಾಗಿರಬೇಕು.
- ಸಂಸ್ಥೆಯ ಹೆಸರಿನಲ್ಲಿ ಸ್ವಂತ ನಿವೇಶನ ಹೊಂದಿರಬೇಕು.
- ಸಂಸ್ಥೆಯ ಬೈಲಾದಲ್ಲಿ ಕೈಗಾರಿಕಾ ತರಬೇತಿ ನೀಡಲು ಅವಕಾಶವಿರಬೇಕು.
- ಸಂಸ್ಥೆಯು ಸ್ಥಾಪನೆಗೊಂಡು 2 ವರ್ಷಗಳಾಗಿರಬೇಕು.
- ಸಂಸ್ಥೆಯು ಕೈಗಾರಿಕಾ ಸಂಬಂಧಿತ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರಬೇಕು.
- ಕೈಗಾರಿಕಾ ಘಟಕಗಳಿಗೆ ಅಗತ್ಯವಿರುವ ಯಂತ್ರೋಪಕರಣಗಳ ಖರೀದಿಗೂ ಸಹಾಯಧನ ನೀಡಲಾಗುವುದು.

**ಸೌಲಭ್ಯಗಳು**

- ತರಬೇತಿ ಕೇಂದ್ರಗಳ ಸ್ಥಾಪನೆಗೆ 60% ಗರಿಷ್ಠ ರೂ.12.00 ಲಕ್ಷ ಧನಸಹಾಯ
- ಯಂತ್ರೋಪಕರಣಗಳ ಖರೀದಿಗೆ 60% ಗರಿಷ್ಠ ರೂ.8.00 ಲಕ್ಷ ಧನಸಹಾಯ
- ಉಳಿಕೆ ಅನುದಾನವನ್ನು ಸಂಸ್ಥೆಯೇ ಭರಿಸಬೇಕು

## ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ

ಅನ್ನಭಾಗ್ಯ ಯೋಜನೆ :

ಬಿ.ಪಿ.ಎಲ್ ಕಾರ್ಡ್ ಹೊಂದಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಕುಟುಂಬಗಳಿಗೆ ಆಹಾರ ಧಾನ್ಯಗಳಾದ ರಾಗಿ, ಅಕ್ಕಿ, ಗೋಧಿ ಇತ್ಯಾದಿ ಸರ್ಕಾರದಿಂದ ನಿಗದಿಪಡಿಸಿದ ಪ್ರಮಾಣದಲ್ಲಿ ವಿತರಣೆ. (ಉಚಿತ)

## ಕಂದಾಯ ಇಲಾಖೆ

1. ವೃದ್ಧಾಪ್ಯ ವೇತನ ಮತ್ತು ಸಂಧ್ಯಾ ಸುರಕ್ಷಾ ವೇತನ
   - 60 ರಿಂದ 64 ವರ್ಷದೊಳಗಿರುವ ಹಿರಿಯ ನಾಗರಿಕರು ಮಾಸಿಕ ರೂ.600/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - 65 ವರ್ಷ ಮೇಲ್ಪಟ್ಟ ಹಿರಿಯ ನಾಗರಿಕರು ಮಾಸಿಕ ರೂ.1200/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.

2. ವಿಧವಾ ವೇತನ
   - 18 ವರ್ಷ ಮೇಲ್ಪಟ್ಟ ವಿಧವೆಯರು ಮಾಸಿಕ ರೂ.800/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.

3. ವಿಕಲಚೇತನರ ಪಿಂಚಣಿ
   - ಶೇ.40 ಅಂಗವಿಕಲತೆ ಹೊಂದಿರುವವರು ಮಾಸಿಕ ರೂ. 800/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಶೇ.75 ಕ್ಕಿಂತ ಹೆಚ್ಚಿನ ಅಂಗವಿಕಲತೆ ಹೊಂದಿರುವವರು ಮಾಸಿಕ ರೂ.1400/- ರಂತೆ ಪಿಂಚಣಿ ಪಡೆಯಲು ಅರ್ಹರಿರುತ್ತಾರೆ.
   - ಶೇ.75 ಕ್ಕಿಂತ ಹೆಚ್ಚಿನ ಮನೋವೈಕಲ್ಯತೆ ಹೊಂದಿರುವವರಿಗೆ ರೂ.2,000/- ಮಾಸಿಕ ಪಿಂಚಣಿ.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ.32,000/-ಗಳಿಗಿಂತ ಕಡಿಮೆ ಇರಬೇಕು.

4. ಮನಸ್ವಿನಿ: ಬಡತನ ರೇಖೆಗಿಂತ ಕೆಳಗಿರುವ 40 ರಿಂದ 60 ವರ್ಷದೊಳಗಿನ ಅವಿವಾಹಿತ / ವಿಚ್ಛೇದಿತ / ಪರಿತ್ಯಕ್ತ ಮಹಿಳೆಯರಿಗೆ ಮಾಸಿಕ ಪಿಂಚಣಿ ರೂ.800/-

5. ರೈತರ ಆತ್ಮಹತ್ಯೆ ಪ್ರಕರಣಗಳಲ್ಲಿ ವಿಧವೆಯರಿಗೆ ಮಾಸಿಕ ಪಿಂಚಣಿ ರೂ.2,000/-

6 **ದೇವದಾಸಿಯರ ಪಿಂಚಣಿ ಯೋಜನೆ :**
   - ವಯೋಮಿತಿ – 45 ಮತ್ತು 45ಕ್ಕಿಂತ ಹೆಚ್ಚು
   - 1993-94 ಮತ್ತು 2007-08 ರ ಸಮೀಕ್ಷೆಯಲ್ಲಿ ಗುರುತಿಸಲ್ಪಟ್ಟ ದೇವದಾಸಿಯರಾಗಿರಬೇಕು
   - ಮಾಸಿಕ ಪಿಂಚಣಿಯ ಮೊತ್ತ – ರೂ 1,500/-

7 **ರಾಷ್ಟ್ರೀಯ ಕುಟುಂಬ ನೆರವು ಯೋಜನೆ**
   - ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ದುಡಿಯುವ ಮುಖ್ಯ ವ್ಯಕ್ತಿಯ ಮರಣವಾದಲ್ಲಿ ಕುಟುಂಬಕ್ಕೆ ರೂ.20000/- ದಂತೆ ಆರ್ಥಿಕ ನೆರವು ನೀಡುವುದು
   - ಮೃತ ವ್ಯಕ್ತಿಯ ವಯೋಮಿತಿ 18 ಕ್ಕಿಂತ ಹೆಚ್ಚಿಗೆ ಮತ್ತು 59 ರವರೆಗಿರಬೇಕು.
   - ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿ ಕುಟುಂಬದ ಆದಾಯ ರೂ. 32,000/-ಗಳಿಗಿಂತ ಕಡಿಮೆ ಇರಬೇಕು.

8 **ಆರಾಧನಾ ಯೋಜನೆ :** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಕಾಲೋನಿಗಳಲ್ಲಿ ಹಳೆಯ ದೇವಾಲಯ, ಪ್ರಾರ್ಥನಾ ಮಂದಿರಗಳ ದುರಸ್ಥಿ ಮತ್ತು ಉನ್ನತೀಕರಣಕ್ಕಾಗಿ ಅನುದಾನ ನೀಡಲಾಗುವುದು.

## ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ

ಕಾರ್ಯಕ್ರಮಗಳ ವಿವರ.

1. ಜಿಲ್ಲಾ ಕಛೇರಿಗಳಲ್ಲಿ ಕ್ಷೇತ್ರ ಪ್ರಚಾರ ಕಾರ್ಯಕ್ರಮ ಹಾಗೂ ಮಾಧ್ಯಮ ಕ್ಷೇತ್ರದ ಬಗ್ಗೆ ತರಬೇತಿ. ಒಬ್ಬರಿಗೆ ಪ್ರತಿ ಮಾಹೆಗೆ ರೂ.15,000/- ರಂತೆ ತರಬೇತಿ ಭತ್ಯೆ ನೀಡುವುದು.
2. ಪರಿಶಿಷ್ಟ ಜಾತಿ/ಪಂಗಡದ ಯುವತಿ/ಯುವಕರಿಗೆ ಚಲನಚಿತ್ರ ನಿರ್ದೇಶನ, ಛಾಯಾಗ್ರಹಣ, ವೀಡಿಯೋ ಸಂಕಲನ, ಸ್ಕ್ರಿಪ್ಟ್ ತಯಾರಿಕೆ ಇತ್ಯಾದಿಗಳ ಬಗ್ಗೆ ಕರ್ನಾಟಕ ಚಲನಚಿತ್ರ ಅಕಾಡೆಮಿ ಮೂಲಕ ತರಬೇತಿ.
3. ಪ.ಜಾತಿ ಮತ್ತು ಪ.ಪಂಗಡದ ಮಾಲಿಕತ್ವದ ಪತ್ರಿಕೆಗಳಿಗೆ ಎಸ್.ಸಿ/ಎಸ್.ಟಿ ಜನರಿಗೆ ವಿವಿಧ ಇಲಾಖೆಗಳಿಂದ ಅನುಷ್ಠಾನ ಮಾಡುವ ಕಾರ್ಯಕ್ರಮಗಳ ಬಗ್ಗೆ ಪ್ರಚಾರ ನೀಡಲು ಜಾಹೀರಾತು ನೀಡಿ ಧನ ಸಹಾಯ ಒದಗಿಸಲಾಗುತ್ತದೆ.

## ಪ್ರವಾಸೋದ್ಯಮ ಇಲಾಖೆ

ಕರ್ನಾಟಕ ದರ್ಶನ : ಸರ್ಕಾರಿ ಶಾಲೆಯಲ್ಲಿ 8 ರಿಂದ 10ನೇ ತರಗತಿ ಓದುತ್ತಿರುವ ಪ.ಜಾತಿ/ಪ.ಪಂಗಡದ ವಿದ್ಯಾರ್ಥಿಗಳಿಗೆ ಕರ್ನಾಟಕ ದರ್ಶನ ಕಾರ್ಯಕ್ರಮದಡಿ ವಿವಿಧ ಪ್ರೇಕ್ಷಣೀಯ ಸ್ಥಳಗಳಿಗೆ ಶೈಕ್ಷಣಿಕ ಪ್ರವಾಸವನ್ನು ಏರ್ಪಡಿಸಲಾಗುತ್ತದೆ.

## ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ

ಕಾರ್ಯಕ್ರಮಗಳ ವಿವರ.

1) ಅಂತರರಾಷ್ಟ್ರೀಯ, ರಾಷ್ಟ್ರೀಯ ಮತ್ತು ರಾಜ್ಯ ಮಟ್ಟದ ಅಧಿಕೃತ ಕ್ರೀಡೆಗಳಲ್ಲಿ ಪದಕ ವಿಜೇತರಾದ ಪರಿಶಿಷ್ಟ ಜಾತಿ / ಪಂಗಡದ ಕ್ರೀಡಾಪಟುಗಳಿಗೆ ತಲಾ ಕ್ರಮವಾಗಿ ರೂ. 5.00 ಲಕ್ಷ, ರೂ. 3.00 ಲಕ್ಷ ಮತ್ತು ರೂ. 1.00 ಲಕ್ಷ ದಂತೆ ಪ್ರೋತ್ಸಾಹಧನ ನೀಡುವುದು.

2) ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯ ಕ್ರೀಡಾ ಶಾಲೆ/ನಿಲಯಗಳ ಪ.ಜಾತಿ/ಪ.ಪಂಗಡದ ಕ್ರೀಡಾ ಪಟುಗಳಿಗೆ ಪೌಷ್ಠಿಕ ಆಹಾರ ಕ್ರೀಡಾ ಗಂಟು, ಸಮವಸ್ತ್ರ, ಕ್ರೀಡಾ ಕಲರ್ಸ್, ಫಿಟ್‌ನೆಸ್ ಸಾಮಗ್ರಿಗಳು ಇತ್ಯಾದಿಗಳನ್ನು ನೀಡುವುದು.

3) ಚಾಮರಾಜನಗರ ಜಿಲ್ಲೆಯ ಸಂತೇಮರಹಳ್ಳಿ ಆರ್ಚರಿ ಮತ್ತು ಫೆನ್ಸಿಂಗ್ ಕ್ರೀಡಾ ವಸತಿ ನಿಲಯ ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಿದ್ದಿ ಕ್ರೀಡಾ ವಸತಿ ನಿಲಯದ ವಿದ್ಯಾರ್ಥಿಗಳ ಊಟೋಪಚಾರ, ಕ್ರೀಡಾಪಟುಗಳಿಗೆ ಕ್ರೀಡಾ ಸಮವಸ್ತ್ರ ಮತ್ತು ಕ್ರೀಡೋಪಕರಣ, ದಿನಭತ್ಯೆ, ಪ್ರಯಾಣ ಭತ್ಯೆ ನೀಡುವುದು ಹಾಗೂ ವಿದ್ಯಾರ್ಥಿಗಳಿಗೆ ಅವಶ್ಯಕವಿರುವ ಸಾಮಗ್ರಿಗಳ ವಿತರಣೆ.

4) ಅಂತರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದ ಅಧಿಕೃತ ಕ್ರೀಡಾ ಕೂಟಗಳಲ್ಲಿ ಪದಕ ವಿಜೇತರಾದ ಪರಿಶಿಷ್ಟ ಜಾತಿ/ಪಂಗಡದ ಕ್ರೀಡಾ ಪಟುಗಳಿಗೆ ಸ್ವಯಂ ಉದ್ಯೋಗ ಹೊಂದಲು ಜಿಮ್ ಸ್ಥಾಪನೆಗಾಗಿ ಒಟ್ಟು ರೂ.15.00 ಲಕ್ಷಗಳ ಸಹಾಯಧನ.

5) ಕ್ರೀಡಾರೋಹಣ (Climbing) ಮತ್ತು ಜಲಸಾಹಸ ಕ್ರೀಡಾ (Water sports) ಕೇಂದ್ರಗಳ ಸ್ಥಾಪನೆಗೆ ಜನರಲ್ ತಿಮ್ಮಯ್ಯ ರಾಷ್ಟ್ರೀಯ ಸಾಹಸ ಅಕಾಡೆಮಿಯಿಂದ ತರಬೇತಿ ಪಡೆದು ಪ್ರಮಾಣ ಪತ್ರ ಹೊಂದಿರುವ ಮತ್ತು ಜಲಸಾಹಸ ಕ್ರೀಡೆಗಳಲ್ಲಿ ತರಬೇತಿ ಹೊಂದಿ ಪ್ರಮಾಣಪತ್ರ ಪಡೆದಿರುವ ಪ.ಜಾತಿ/ಪ.ಪಂಗಡದ ಕ್ರೀಡಾಪಟುಗಳಿಗೆ ಸ್ವಯಂ ಉದ್ಯೋಗ ಹೊಂದಲು ಗರಿಷ್ಟ ರೂ.15.00 ಲಕ್ಷ ಸಹಾಯಧನ.

6) ರಾಜ್ಯ ಮಟ್ಟದ ಯುವಜನ ಮೇಳ/ಯುವ ಜನೋತ್ಸವದ ವೈಯಕ್ತಿಕ ವಿಭಾಗದಲ್ಲಿ ಪ್ರಥಮ, ದ್ವಿತಿಯ ಮತ್ತು ತೃತೀಯ ಸ್ಥಾನ ಪಡೆದ ಪ.ಜಾತಿ / ಪ.ಪಂಗಡದವರಿಗೆ ಕ್ರಮವಾಗಿ ತಲಾ ರೂ.25,000/-, ರೂ.15,000/- ಮತ್ತು ರೂ.10,000/- ನಗದು ಪ್ರೋತ್ಸಾಹಧನ ಮತ್ತು ಪದಕ ವಿಜೇತ ತಂಡದ ಪ್ರತಿ ಯುವಕ/ಯುವತಿಯರಿಗೆ ತಲಾ ರೂ.5,000/-, ರೂ.3,000/- & ರೂ.2,000/- ಗಳ ನಗದು ಪ್ರೋತ್ಸಾಹಧನ ನೀಡುವುದು.

7) ವಿವಿಧ ಪ್ರಕಾರಗಳಿಗೆ ಸಂಬಂಧಿಸಿದಂತೆ, ಪ್ರತಿ ವಿಭಾಗದ ಜಿಲ್ಲೆಗೆ ಎರಡು ಯುವಕ/ಯುವತಿ ಸಂಘ-ಸಂಸ್ಥೆಗಳಿಗೆ 50 ಜನರಂತೆ ಇಲಾಖೆಯ ತರಬೇತಿ ಕೇಂದ್ರಗಳಲ್ಲಿ ತರಬೇತಿ ನೀಡುವುದು.

8) ಪ್ರತಿ ತಾಲ್ಲೂಕಿನಲ್ಲಿ ಪ.ಜಾತಿ-2 ಮತ್ತು ಪ.ಪಂ 1, ಯುವಕ/ ಯುವತಿ ಸಂಘಗಳಿಗೆ ಹೊಸದಾಗಿ ನೊಂದಣಿ ಮಾಡಲು ಹಾಗೂ ಇಲಾಖಾ ಕಾರ್ಯಕ್ರಮಗಳಿಗೆ ಸಕ್ರಿಯವಾಗಿ ಪಾಲ್ಗೊಳ್ಳಲು ತಲಾ ರೂ. 5,000/- ಪ್ರೋತ್ಸಾಹಧನ.

9) ಪ.ಜಾತಿ/ಪ.ಪಂಗಡದ ಯುವಜನರಿಗೆ ಈಜುಕೊಳಗಳಲ್ಲಿ ಜೀವರಕ್ಷಕ (Life Guard), ಜಿಮ್ ತರಬೇತುದಾರರು, ಫಿಟ್‌ನೆಸ್ ತರಬೇತುದಾರರು, ಮಾರ್ಕರ್ ತರಬೇತಿ ನೀಡುವುದು.

10) ಟಿ.ಎಸ್.ಪಿ ಯಡಿ ಕೊರಗ, ಕಾಡು ಕುರುಬ, ಸಿದ್ಧಿ, ಜೇನು ಕುರುಬ, ಸೋಲಿಗ ಇತ್ಯಾದಿ ಪರಿಶಿಷ್ಟ ಪಂಗಡದವರಿಗೆ ವಿಶೇಷ ಕ್ರೀಡಾ ತರಬೇತಿ ಹಾಗೂ ಕ್ರೀಡಾ ಕೂಟವನ್ನು ಆಯೋಜಿಸುವುದು.

## ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ

**ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರ ಸ್ಟಾರ್ಟ್ ಅಪ್ ಘಟಕಗಳಿಗೆ ಧನಸಹಾಯ ನೀಡುವುದು.**

1. ತಜ್ಞರ ಸಮಿತಿಯಿಂದ ಆಯ್ಕೆಯಾದ ನವೋದ್ಯಮ/ಆವಿಷ್ಕರಣ ಸ್ಟಾರ್ಟ್ ಅಪ್‌ಗಳಿಗೆ ಗರಿಷ್ಟ ರೂ.50.00 ಲಕ್ಷ ಸಹಾಯಧನ ನೀಡುವುದು.
2. Firm/ Company ಗಳಲ್ಲಿ ಕನಿಷ್ಠ 70% ಪ.ಜಾತಿ/ಪ.ಪಂಗಡದವರು ಷೇರುದಾರರಾಗಿರಬೇಕು

## ಕಾರ್ಮಿಕ ಇಲಾಖೆ

1. **ಬಾಲ ಕಾರ್ಮಿಕರ ಪುನರ್ವಸತಿ ಯೋಜನೆ**
   - ಎಸ್.ಸಿ/ಎಸ್.ಟಿ ಕಾಲೋನಿಗಳಲ್ಲಿ ಬಾಲಕಾರ್ಮಿಕ ನಿರ್ಮೂಲನೆ ಕುರಿತು ಜಾಗೃತಿ ಕಾರ್ಯಕ್ರಮವನ್ನು ಮೂಡಿಸುವುದು.
   - ಗುರುತಿಸಲ್ಪಟ್ಟ ಬಾಲ ಕಾರ್ಮಿಕರಿಗೆ ವಿಶೇಷ ಶಾಲೆಯಲ್ಲಿ ದಾಖಲಿಸಿ ವಿದ್ಯಾಭ್ಯಾಸ ಕಲ್ಪಿಸುವುದು.

## ಕನ್ನಡ ಮತ್ತು ಸಂಸ್ಕೃತಿ ಇಲಾಖೆ

**ಕಾರ್ಯಕ್ರಮಗಳ ವಿವರ.**

1. ಸಾಂಸ್ಕೃತಿಕ ಸಂಘ ಸಂಸ್ಥೆಗಳಿಗೆ ಧನಸಹಾಯ/ ವಾದ್ಯ ಪರಿಕರ/ ವೇಷಭೂಷಣ ಖರೀದಿಗೆ/ಚಿತ್ರಶಿಲ್ಪಾ ಕಲಾಕೃತಿಗಳ ಪ್ರದರ್ಶನಕ್ಕೆ ಧನಸಹಾಯ.
2. 30 ಜಿಲ್ಲೆಗಳಲ್ಲಿ ಸಂಘ ಸಂಸ್ಥೆಗಳು ಏರ್ಪಡಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಪ್ರಾಯೋಜಿಸಿರುವ ಕಲಾ ತಂಡದ ಕಲಾವಿದರಿಗೆ ಪಾವತಿಸುವ ಸಂಭಾವನೆ.
3. ಯಾವುದೇ ಕಲೆಗಳಲ್ಲಿ ಪ್ರತಿಭಾವಂತ ಪರಿಶಿಷ್ಟ ಜಾತಿ/ಪ.ಪಂಗಡದ ಯುವ ಕಲಾವಿದರಿಗೆ ಅವರಲ್ಲಿ ನೈಪುಣ್ಯತೆಯನ್ನು ಹೆಚ್ಚಿಸಲು ಪ್ರತಿಷ್ಠಿತ ಸಂಸ್ಥೆಗಳಲ್ಲಿ ತರಬೇತಿಗಾಗಿ ಪ್ರವೇಶ ಕಲ್ಪಿಸಲು ಧನಸಹಾಯ.
4. ಪ.ಜಾತಿ/ಪ.ಪಂಗಡ ಜನಪರ ಉತ್ಸವಗಳು (ಜಿಲ್ಲೆಗೆ ರೂ.5.00 ಲಕ್ಷದಂತೆ).
5. ವಿದ್ಯಾರ್ಥಿಗಳಿಗೆ ಡಾ.ಬಿ.ಆರ್.ಅಂಬೇಡ್ಕರ್ ರವರ ಕುರಿತು "ಡಾ.ಅಂಬೇಡ್ಕರ್ ಓದು" ಎಂಬ ಯೋಜನೆ.
   - ಡಾ. ಅಂಬೇಡ್ಕರ್ ರವರನ್ನು ಕುರಿತು ರಸಪ್ರಶ್ನೆ, ಪ್ರಬಂಧ ಸ್ಪರ್ಧೆ, ಆಶುಭಾಷಣ ಮತ್ತು ಕವನ ವಾಚನ ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಎರಡು ವಿಷಯಗಳನ್ನು ಆಯ್ಕೆ ಮಾಡಿ ವಿದ್ಯಾರ್ಥಿಗಳಿಗೆ ಸ್ಪರ್ಧೆಗಳನ್ನು ಏರ್ಪಡಿಸುವುದು.
6. ಸಾಮಾಜಿಕ ಅರಿವು ಸಾಂಸ್ಕೃತಿಕ ಕಾರ್ಯಕ್ರಮದ (ಅಸ್ಪೃಶ್ಯತಾ ನಿವಾರಣೆ ಅರಿವು ಕಾರ್ಯಕ್ರಮ)
7. ಪ.ಜಾತಿ/ಪ.ಪಂಗಡದ ಕಲಾವಿದರಿಗೆ ಪಿಂಚಣಿ.

** * **

## ಶ್ರೀ ಐಹೊಳೆ ಡಿ. ಮಹಾಲಿಂಗಪ್ಪ (ರಾಯಭಾಗ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 67 ಕ್ಕೆ ಅನುಬಂಧ–2
## ವಿವಿಧ ಇಲಾಖೆಗಳಿಂದ ರಾಯಭಾಗ ವಿಧಾನಸಭಾ ಕ್ಷೇತ್ರಕ್ಕೆ ಬಿಡುಗಡೆ ಮಾಡಿರುವ ಅನುದಾನದ ವಿವರ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ | ವರ್ಷ | ಜಿಲ್ಲೆ | ತಾಲ್ಲೂಕು | ಗ್ರಾಮ | ಎಸ್ ಸಿ ಎಸ್ ಪಿ ಟಿ ಎಸ್ | ಕಾಮಗಾರಿಯ ವಿವರ | ಕಾಮಗಾರಿಯ ಹೆಸರು | ಬಿಡುಗಡೆ | ವೆಚ್ಚ |
|---|---|---|---|---|---|---|---|---|---|
| ಲೋಕೋಪಯೋಗಿ ಇಲಾಖೆ | | | | | | | | | |
| 1 | 2019-20 | ಬೆಳಗಾವಿ | ಚಿಕ್ಕೋಡಿ | ಮುಗಳಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರುದ ಮುಗಳಿ ಗ್ರಾಮದ ಪ ಜಾ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 26.14 | 26.14 |
| 2 | 2019-20 | ಬೆಳಗಾವಿ | ಚಿಕ್ಕೋಡಿ | ವಡ್ರಾಳ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರುದ ವಡ್ರಾಳ ಗ್ರಾಮದ ಪ ಜಾ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 26.18 | 26.18 |
| 3 | 2019-20 | ಬೆಳಗಾವಿ | ಚಿಕ್ಕೋಡಿ | ಬೆಳಕೂಡ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರುದ ಬೆಳಕೂಡ ಗ್ರಾಮದ ಎಸ್ ಸಿ ಕಾಲೋನಿಯಿಂದ ಸಿಮಿ ಕೊಡಿಯವರೆಗೆ ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 23.73 | 23.73 |
| 4 | 2019-20 | ಬೆಳಗಾವಿ | ಚಿಕ್ಕೋಡಿ | ಹತ್ತರವಾಟ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರುದ ಹತ್ತರವಾಟ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 26.2 | 26.2 |
| 5 | 2019-20 | ಬೆಳಗಾವಿ | ಚಿಕ್ಕೋಡಿ | ಇಟ್ನಾಳ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರುದ ಇಟ್ನಾಳ ಗ್ರಾಮದ ಪ ಜಾ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 23.93 | 23.93 |
| 6 | 2019-20 | ಬೆಳಗಾವಿ | ಚಿಕ್ಕೋಡಿ | ಕಂಕಣವಾಡಿ ರಾಯಬಾಗ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ಕಂಕಣವಾಡಿ ರಾಯಬಾಗ ರಸ್ತೆಯಿಂದ ಪ ಜಾ ದೊಡ್ಡಮನಿ ತೋಟದ ರಸ್ತೆ ಡಾಂಬರೀಕರಣ ಹಾಗೂ ಪೆವರ ಬ್ಲಾಕ್ ಅಳವಡಿಸುವುದು | 38.6 | 38.6 |

| ಕ್ರ. ಸಂ | ವರ್ಷ | ಜಿಲ್ಲೆ | ತಾಲ್ಲೂಕು | ಗ್ರಾಮ | ಎಸ್ ಸಿ ಎಸ್ ಪಿ ಟಿ ಎಸ್ | ಕಾಮಗಾರಿಯ ವಿವರ | ಕಾಮಗಾರಿಯ ಹೆಸರು | ಬಿಡುಗಡೆ | ವೆಚ್ಚ |
|---|---|---|---|---|---|---|---|---|---|
| 7 | 2019-20 | ಬೆಳಗಾವಿ | ಚಿಕ್ಕೋಡಿ | ಯಡ್ರಾವ | ಎಸ್.ಸಿ.ಎಸ್.ಪಿ | ರಸ್ತೆಸುಧಾರಣೆ | ರಾಯಬಾಗ ತಾಲೂಕಿನ ಯಡ್ರಾವ ಗ್ರಾಮದ ಪ ಜಾ ಕಾಲೋನಿಗೆ ಕೂಡುವ ರಸ್ತೆ ಸುಧಾರಣೆ ಮಾಡುವದು | 41.26 | 41.26 |
| 8 | 2019-20 | ಬೆಳಗಾವಿ | ಚಿಕ್ಕೋಡಿ | ಮೆಖಳಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ರಾಯಬಾಗ ಮತಕ್ಷೇತ್ರದ ಮೆಖಳಿ ಗ್ರಾಮದಿಂದ ಭಜಂತ್ರಿ ತೋಟದ ವರೆಗೆ ಡಾಂಬರೀಕರಣ ಹಾಗೂ ಮಾಂಗ ಮನೆ ಹತ್ತೀರ ಪೇವರ್ ಬ್ಲಾಕ್ ಅಳವಡಿಸುವುದು | 31.35 | 31.35 |
| 9 | 2019-20 | ಬೆಳಗಾವಿ | ಚಿಕ್ಕೋಡಿ | ಮಂಟೂರ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ಮಂಟೂರ ಗ್ರಾಮದ ಪ ಜಾ ಕಾಲೋನಿಗಳಲ್ಲಿ ಪೆವರ್ ಬ್ಲಾಕ್ ಅಳವಡಿಸುವುದು | 31.29 | 31.29 |
| 10 | 2019-20 | ಬೆಳಗಾವಿ | ಚಿಕ್ಕೋಡಿ | ನಾಗರಾಳ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ರಾಯಬಾಗ ಮತಕ್ಷೇತ್ರದ ನಾಗರಾಳ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿ ಸಿ ರಸ್ತೆ ಹಾಗೂ ಡಾಂಬರ ರಸ್ತೆ ನಿರ್ಮಾಣ ಮಾಡುವುದು | 20.92 | 20.92 |
| 11 | 2019-20 | ಬೆಳಗಾವಿ | ಚಿಕ್ಕೋಡಿ | ಚಿಂಚಲಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ರಾಯಬಾಗ ಮತಕ್ಷೇತ್ರದ ಚಿಂಚಲಿ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಪೆವರ್ ಬ್ಲಾಕ್ ಅಳವಡಿಸುವುದು | 31.3 | 31.3 |
| 12 | 2019-20 | ಬೆಳಗಾವಿ | ಚಿಕ್ಕೋಡಿ | ಜಲಾಲಪುರ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ರಾಯಬಾಗ ಮತಕ್ಷೇತ್ರದ ಜಲಾಲಪುರ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿ ಸಿ ರಸ್ತೆ ಹಾಗೂ ಡಾಂಬರ ರಸ್ತೆ ನಿರ್ಮಾಣ ಮಾಡುವುದು | 20.94 | 20.94 |
| 13 | 2019-20 | ಬೆಳಗಾವಿ | ಚಿಕ್ಕೋಡಿ | ದಿಗ್ಗಿವಾಡಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ರಾಯಬಾಗ ಮತಕ್ಷೇತ್ರದ ದಿಗ್ಗಿವಾಡಿ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೆವರ್ ಬ್ಲಾಕ್ ಚರಂಡಿ ಸಿ ಸಿ ರಸ್ತೆ ಹಾಗೂ ಡಾಂಬರ ರಸ್ತೆ ನಿರ್ಮಾಣ ಮಾಡುವುದು | 20.71 | 20.71 |
| 14 | 2019-20 | ಬೆಳಗಾವಿ | ಚಿಕ್ಕೋಡಿ | ಚಿಂಚಲಿ | ಎಸ್.ಸಿ.ಎಸ್.ಪಿ | ಸಿಸಿ ರಸ್ತೆ ಗಟಾರ ಮತ್ತು ಪೇರ್ಸ್ ಬ್ಲಾಕ್ ಅಳವಡಿಸುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ಚಿಂಚಲಿ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರ್ಸ್ ಬ್ಲಾಕ್ ಅಳವಡಿಸುವುದು | 95.72 | 95.72 |

| ಕ್ರ. ಸಂ | ವರ್ಷ | ಜಿಲ್ಲೆ | ತಾಲ್ಲೂಕು | ಗ್ರಾಮ | ಎಸ್ ಸಿ ಎಸ್ ಪಿ ಟಿ ಎಸ್ | ಕಾಮಗಾರಿಯ ವಿವರ | ಕಾಮಗಾರಿಯ ಹೆಸರು | ಬಿಡುಗಡೆ | ವೆಚ್ಚ |
|---|---|---|---|---|---|---|---|---|---|
| 15 | 2019-20 | ಬೆಳಗಾವಿ | ಚಿಕ್ಕೋಡಿ | ಕಂಕಣವಾಡಿ | ಎಸ್.ಸಿ.ಎಸ್.ಪಿ | ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ಕಂಕಣವಾಡಿ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | 104.43 | 104.43 |
| 16 | 2019-20 | ಬೆಳಗಾವಿ | ಚಿಕ್ಕೋಡಿ | ರಾಯಬಾಗ | ಎಸ್.ಸಿ.ಎಸ್.ಪಿ | ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ರಾಯಬಾಗ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | 55.37 | 55.37 |
| 17 | 2019-20 | ಬೆಳಗಾವಿ | ಚಿಕ್ಕೋಡಿ | 1 ಮೇಖಳಿ 2 ನಂದಿಕುರಳಿ 3 ನಸಲಾಪೂರ | ಎಸ್.ಸಿ.ಎಸ್.ಪಿ | ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲ್ಲೂಕಿನ 1 ಮೇಖಳಿ 2 ನಂದಿಕುರಳಿ 3 ನಸಲಾಪೂರ ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಸಿ ಸಿ ರಸ್ತೆ ಗಟಾರ ಮತ್ತು ಪೇವರ್‌ಬ್ಲಾಕ್ಸ್ ಮೂಲಭೂತ ಸೌಲಭ್ಯಗಳನ್ನು ಅಳವಡಿಸುವುದು | 104.68 | 104.68 |
| 18 | 2019-20 | ಬೆಳಗಾವಿ | ಚಿಕ್ಕೋಡಿ | ತೋರನಹಳ್ಳಿ, ಹತ್ತರವಾಟ ಹಾಗೂ ಮಜಲಟ್ಟಿ | ಎಸ್.ಸಿ.ಎಸ್.ಪಿ | ಸುಧಾರಣೆ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರದ ತೋರನಹಳ್ಳಿ, ಹತ್ತರವಾಟ ಹಾಗೂ ಮಜಲಟ್ಟಿ ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಗಳು ಹಾಗೂ ಕಾಲೋನಿ ಕೂಡು ರಸ್ತೆಗಳ ಸುಧಾರಣೆ ಮಾಡುವುದು | 121.14 | 121.14 |
| 19 | 2019-20 | ಬೆಳಗಾವಿ | ಚಿಕ್ಕೋಡಿ | ಕುಡಚಿ | ಎಸ್.ಸಿ.ಎಸ್.ಪಿ | ರಸ್ತೆ ಹಾಗೂ ಚರಂಡಿ ನಿರ್ಮಾಣ ಮಾಡುವುದು | ರಾಯಬಾಗ ತಾಲೂಕಿನ ಕುಡಚಿ ಗ್ರಾಮದ ಮುರಾರ್ಜಿ ದೇಸಾಯಿ ವಸತಿ ಶಾಲೆಗೆ ರಸ್ತೆ ಹಾಗೂ ಚರಂಡಿ ನಿರ್ಮಾಣ | 59.55 | 59.55 |
| 20 | 2019-20 | ಬೆಳಗಾವಿ | ಚಿಕ್ಕೋಡಿ | ಹಾರೂಗೇರಿ | ಎಸ್.ಸಿ.ಎಸ್.ಪಿ | ರಸ್ತೆ ಹಾಗೂ ಚರಂಡಿ ನಿರ್ಮಾಣ ಮಾಡುವುದು | ರಾಯಬಾಗ ತಾಲೂಕಿನ ಹಾರೂಗೇರಿ ಅಳಗವಾಡಿ ಗ್ರಾಮದ ಮುರಾರ್ಜಿ ದೇಸಾಯಿ ವಸತಿ ಶಾಲೆಗೆ ರಸ್ತೆ ಹಾಗೂ ಚರಂಡಿ ನಿರ್ಮಾಣ | 46.95 | 46.95 |
| 21 | 2019-20 | ಬೆಳಗಾವಿ | ಚಿಕ್ಕೋಡಿ | ಭಿರಡಿ ಸೌಂದತ್ತಿ | ಎಸ್.ಸಿ.ಎಸ್.ಪಿ | ರಸ್ತೆಗಳ ಸುಧಾರಣೆ | ರಾಯಬಾಗ ತಾಲೂಕಿನ ಭಿರಡಿ ಸೌಂದತ್ತಿ ರಸ್ತೆ ಪರಿಶಿಷ್ಟ ಜಾತಿ ಕಾಲೋನಿಗೆ ಕೂಡು ರಸ್ತೆ ಭಿರಡಿ ಗ್ರಾಮ ವ್ಯಾಪ್ತಿ ಸುಧಾರಣೆ ಮಾಡುವದು | 60.49 | 60.49 |

| ಕ್ರ. ಸಂ | ವರ್ಷ | ಜಿಲ್ಲೆ | ತಾಲ್ಲೂಕು | ಗ್ರಾಮ | ಎಸ್ ಸಿ ಎಸ್ ಪಿ ಟಿ ಎಸ್ | ಕಾಮಗಾರಿಯ ವಿವರ | ಕಾಮಗಾರಿಯ ಹೆಸರು | ಬಿಡುಗಡೆ | ವೆಚ್ಚ |
|---|---|---|---|---|---|---|---|---|---|
| 22 | 2019-20 | ಬೆಳಗಾವಿ | ಚಿಕ್ಕೋಡಿ | ತೋರಣಹಳ್ಳಿ ಜೈನಾಪೂರ | ಎಸ್.ಸಿ.ಎಸ್.ಪಿ | ರಸ್ತೆಗಳ ಸುಧಾರಣೆ | ರಾಯಬಾಗ ಮತಕ್ಷೇತ್ರದ ಚಿಕ್ಕೋಡಿ ತಾಲೂಕಿನ ತೋರಣಹಳ್ಳಿ, ಜೈನಾಪೂರ ಗ್ರಾಮಗಳ ಪ ಜಾ ಕಾಲೋನಿಗಳಲ್ಲಿ ಸಿ ಸಿ ರಸ್ತೆ ಗಟಾರ ನಿರ್ಮಾಣ ಹಾಗೂ ಪೇವರ್ ಬ್ಲಾಕ್ ಅಳವಡಿಸುವುದು | 31.96 | 31.96 |
| 23 | 2019-20 | ಬೆಳಗಾವಿ | ಚಿಕ್ಕೋಡಿ | ನಿಪನಾಳ | ಟಿ ಎಸ್ ಪಿ | ರಸ್ತೆ | ರಾಯಬಾಗ ತಾಲೂಕಿನ ನಿಪನಾಳ ಗ್ರಾಮದಿಂದ ಹಳಬರ ತೋಟದವರೆಗೆ ಡಾಂಬರೀಕರಣ ಮಾಡುವುದು ಎಸ್‌ಟಿ ಕಾಲೋನಿ | 22.38 | 22.38 |
| 24 | 2019-20 | ಬೆಳಗಾವಿ | ಚಿಕ್ಕೋಡಿ | 1 ನಿಪನಾಳ 2 ಜೋಡಟ್ಟಿ 3 ಬಿರನಾಳ | ಟಿ ಎಸ್ ಪಿ | ಸಿ ಸಿ ರಸ್ತೆ ಗಟಾರ ಮತ್ತು ಪೇವರ್ ಬ್ಲಾಕ್ಸ | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲ್ಲೂಕಿನ 1 ನಿಪನಾಳ 2 ಜೋಡಟ್ಟಿ 3 ಬಿರನಾಳ ಗ್ರಾಮಗಳ ಪರಿಶಿಷ್ಟ ಪಂಗಡ ಕಾಲೋನಿಗಳಲ್ಲಿ ಸಿ ಸಿ ರಸ್ತೆ ಗಟಾರ ಮತ್ತು ಪೇವರ್ ಬ್ಲಾಕ್ಸ ಮೂಲಭೂತ ಸೌಲಭ್ಯಗಳನ್ನು ಅಳವಡಿಸುವುದು | 49.39 | 49.39 |
| 25 | 2020-21 | ಬೆಳಗಾವಿ | ಚಿಕ್ಕೋಡಿ | ಉಮರಾಣಿ | ಎಸ್.ಸಿ.ಎಸ್.ಪಿ | ಪೇವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರದ ಉಮರಾಣಿ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೇವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 26.19 | 26.19 |
| 26 | 2020-21 | ಬೆಳಗಾವಿ | ಚಿಕ್ಕೋಡಿ | ಡೋನವಾಡ | ಎಸ್.ಸಿ.ಎಸ್.ಪಿ | ಪೇವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರದ ಡೋನವಾಡ ಗ್ರಾಮದ ಎಸ್ ಸಿ ಕಾಲೋನಿಯಲ್ಲಿ ಪೇವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | 26.08 | 26.08 |
| 27 | 2020-21 | ಬೆಳಗಾವಿ | ಚಿಕ್ಕೋಡಿ | ಕಂಕಣವಾಡಿ ರಾಯಬಾಗ | ಎಸ್.ಸಿ.ಎಸ್.ಪಿ | ಪೇವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ತಾಲೂಕಿನ ಕಂಕಣವಾಡಿ ರಾಯಬಾಗ ರಸ್ತೆಯಿಂದ ಪ ಜಾ ದೂಡ್ನಮನಿ ತೋಟದ ರಸ್ತೆ ಡಾಂಬರೀಕರಣ ಹಾಗೂ ಪೇವರ ಬ್ಲಾಕ್ ಅಳವಡಿಸುವುದು | 23.68 | 23.68 |
| 28 | 2020-21 | ಬೆಳಗಾವಿ | ಚಿಕ್ಕೋಡಿ | ಭಿರಡಿ | ಎಸ್.ಸಿ.ಎಸ್.ಪಿ | ಕೂಡು ರಸ್ತೆ | ರಾಯಬಾಗ ತಾಲೂಕಿನ ಭಿರಡಿ ಗ್ರಾಮದ ಪ ಜಾ ಕಾಲೋನಿಗೆ ಕೂಡುವ ರಸ್ತೆ ಸುಧಾರಣೆ ಮಾಡುವದು | 20.83 | 20.83 |
| 29 | 2020-21 | ಬೆಳಗಾವಿ | ಚಿಕ್ಕೋಡಿ | ಯಡ್ರಾವ | ಎಸ್.ಸಿ.ಎಸ್.ಪಿ | ಕೂಡು ರಸ್ತೆ | ರಾಯಬಾಗ ತಾಲೂಕಿನ ಯಡ್ರಾವ ಗ್ರಾಮದ ಪ ಜಾ ಕಾಲೋನಿಗೆ ಕೂಡುವ ರಸ್ತೆ ಸುಧಾರಣೆ ಮಾಡುವದು | 3.64 | 3.64 |

| ಕ್ರ. ಸಂ | ವರ್ಷ | ಜಿಲ್ಲೆ | ತಾಲ್ಲೂಕು | ಗ್ರಾಮ | ಎಸ್ ಸಿ ಎಸ್ ಪಿ ಟಿ ಎಸ್ | ಕಾಮಗಾರಿಯ ವಿವರ | ಕಾಮಗಾರಿಯ ಹೆಸರು | ಬಿಡುಗಡೆ | ವೆಚ್ಚ |
|---|---|---|---|---|---|---|---|---|---|
| 30 | 2020-21 | ಬೆಳಗಾವಿ | ಚಿಕ್ಕೋಡಿ | ಚಿಂಚಲಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ಚಿಂಚಲಿ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರ್ಸ್ ಬ್ಲಾಕ್ ಅಳವಡಿಸುವುದು | 8.87 | 8.87 |
| 31 | 2020-21 | ಬೆಳಗಾವಿ | ಚಿಕ್ಕೋಡಿ | ರಾಯಬಾಗ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ರಾಯಬಾಗ ಪಟ್ಟಣದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರರ್ಸ್ ಬ್ಲಾಕ್ ಅಳವಡಿಸುವುದು | 49.23 | 49.23 |
| 32 | 2020-21 | ಬೆಳಗಾವಿ | ಚಿಕ್ಕೋಡಿ | 1 ಮಾಡಲಗಿ 2 ಬಾವಚಿ 3 ಬಿರಡಿ 4 ಜಲಾಲಪೂರ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲ್ಲೂಕಿನ 1 ಮಾಡಲಗಿ 2 ಬಾವಚಿ 3 ಬಿರಡಿ 4 ಜಲಾಲಪೂರ ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಸಿ ಸಿ ರಸ್ತೆ ಗಟಾರ ಮತ್ತು ಪೇವರ್ ಬ್ಲಾಕ್ಸ್ ಮೂಲಭೂತ ಸೌಲಭ್ಯಗಳನ್ನು ಅಳವಡಿಸುವುದು | 50 | 50 |
| 33 | 2020-21 | ಬೆಳಗಾವಿ | ಚಿಕ್ಕೋಡಿ | ತೋರನಹಳ್ಳಿ ಹತ್ತರವಾಟ ಹಾಗೂ ಮಜಲಟ್ಟಿ | ಎಸ್.ಸಿ.ಎಸ್.ಪಿ | ಕೂಡು ರಸ್ತೆ | ಚಿಕ್ಕೋಡಿ ತಾಲೂಕಿನ ರಾಯಬಾಗ ಮತಕ್ಷೇತ್ರದ ತೋರನಹಳ್ಳಿ, ಹತ್ತರವಾಟ ಹಾಗೂ ಮಜಲಟ್ಟಿ ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಗಳು ಹಾಗೂ ಕಾಲೋನಿ ಕೂಡು ರಸ್ತೆಗಳ ಸುಧಾರಣೆ ಮಾಡುವುದು | 81.57 | 81.57 |
| 34 | 2020-21 | ಬೆಳಗಾವಿ | ಚಿಕ್ಕೋಡಿ | 1 ನಾಗರಮುನ್ನೋಳ್ಳಿ 2 ಕರೋಶಿ 3 ಕುಂಗಟೋಳ್ಳಿ 4 ಮುಗಳಿ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ಮತಕ್ಷೇತ್ರದ ಚಿಕ್ಕೋಡಿ ತಾಲೂಕಿನ 1 ನಾಗರಮುನ್ನೋಳ್ಳಿ 2 ಕರೋಶಿ 3 ಕುಂಗಟೋಳ್ಳಿ 4 ಮುಗಳಿ ಗ್ರಾಮಗಳ ಪರಿಶಿಷ್ಟ ಜಾತಿ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಪೇವರ ಬ್ಲಾಕ ಅಳವಡಿಸುವುದು | 104.47 | 104.47 |
| 35 | 2020-21 | ಬೆಳಗಾವಿ | ಚಿಕ್ಕೋಡಿ | ತೋರಣಹಳ್ಳಿ ಜೈನಾಪೂರ | ಎಸ್.ಸಿ.ಎಸ್.ಪಿ | ಪೆವರ್ ಬ್ಲಾಕ್ ಚರಂಡಿ ಸಿಸಿ ರಸ್ತೆ ನಿರ್ಮಾಣ ಹಾಗೂ ಡಾಂಬರೀಕರಣ ಮಾಡುವುದು | ರಾಯಬಾಗ ಮತಕ್ಷೇತ್ರದ ಚಿಕ್ಕೋಡಿ ತಾಲೂಕಿನ ತೋರಣಹಳ್ಳಿ, ಜೈನಾಪೂರ ಗ್ರಾಮಗಳ ಪ ಜಾ ಕಾಲೋನಿಗಳಲ್ಲಿ ಸಿ ಸಿ ರಸ್ತೆ ಗಟಾರ ನಿರ್ಮಾಣ ಹಾಗೂ ಪೆವರ್ ಬ್ಲಾಕ್ ಅಳವಡಿಸುವುದು | 6.77 | 6.77 |
| 36 | 2020-21 | ಬೆಳಗಾವಿ | ಚಿಕ್ಕೋಡಿ | ನಂದಿಕುರಳಿ | ಎಸ್.ಸಿ.ಎಸ್.ಪಿ | ಸಿಸಿ ರಸ್ತೆ ಗಟಾರ ಮತ್ತು ಪೇರ್ಸ್ ಅಳವಡಿಸುವದು ಹಾಗೂ ಕೂಡು ರಸ್ತೆ ಸುಧಾರಣೆ | ರಾಯಬಾಗ ಮತಕ್ಷೇತ್ರದ ರಾಯಬಾಗ ತಾಲೂಕಿನ ನಂದಿಕುರಳಿ ಗ್ರಾಮದ ಪ ಜಾ ಕಾಲೋನಿಗಳಲ್ಲಿ ಸಿಸಿ ರಸ್ತೆ ಗಟಾರ ಮತ್ತು ಪೇರ್ಸ್ ಅಳವಡಿಸುವದು ಹಾಗೂ ಕೂಡು ರಸ್ತೆ ಸುಧಾರಣೆ | 24.16 | 24.16 |

